॥ ಪೂರ್ಣ ಪರಮಾತ್ಮನೇ ನಮಃ ॥



# ಜ್ಞಾನ ಗಂಗಾ



—:ಪ್ರಚಾರ ಪ್ರಸಾರ ಸಮಿತಿ:—

ಸತ್ಯಲೋಕ ಆಶ್ರಮ, ಹಿಸಾರ್–ಟೋಹಾನಾ ರೋಡ್

ಬರವಾಲಾ, ಜಿಲ್ಲೆ–ಹಿಸಾರ್, ಹರಿಯಾಣಾ ರಾಜ್ಯ, ಭಾರತ.



ಜಗದ್ಗುರು ತತ್ವದರ್ಶಿ ಸಂತ ರಾಮ್‌ಪಾಲ್
ಮಹಾರಾಜ್ ರವರ ಸತ್ಸಂಗದಿಂದ ಸಂಗ್ರಹವಾದ ಅಮೂಲ್ಯ ಪುಸ್ತಕ

# "ಜ್ಞಾನ ಗಂಗಾ"

ಧರ್ಮಾರ್ಥ ಬೆಲೆ. 20/–

ಪೂರ್ಣ ಸಂತ ರಾಮ್‌ಪಾಲ್ ಮಹಾರಾಜ ರವರ ಮಂಗಳ–ಪ್ರವಚನಗಳನ್ನು
ಸುಪ್ರಸಿದ್ಧ ಈ ಕೆಳಗಿನ ಟಿ.ವಿ. ಚಾನಲ್‌ಗಳಲ್ಲಿ ನೋಡಬಹುದು

1. ಬೆಳಿಗ್ಗೆ 6:00–7:00, ಹರಿಯಾಣಾ ನ್ಯೂಸ್.




2. ಮಧ್ಯಾಹ್ನ 2:00–3:00, MH ONE ಶ್ರದ್ಧಾ.




3. ರಾತ್ರಿ 7:30–8:30, ಸಾಧನಾ ಟಿ.ವಿ




4. ರಾತ್ರಿ 8:00–9:00, ಕಾತ್ಯಾಯಿನಿ ಟಿ.ವಿ



5. ರಾತ್ರಿ 8:30–9:30, ಈಶ್ವರ್ ಟಿ.ವಿ




–: ಪ್ರಕಾಶಕರು :–
–: ಪ್ರಚಾರ ಪ್ರಸಾರ ಸಮಿತಿ :–

## ಸತ್ಯಲೋಕ ಆಶ್ರಮ

ಸತ್ಯಲೋಕ ಆಶ್ರಮ, ಹಿಸಾರ್–ಟೋಹಾನಾ ರೋಡ್, ಬರವಾಲಾ, ಜಿಲ್ಲೆ ಹಿಸಾರ್,
ಹರಿಯಾಣಾ (ಭಾರತ)
8222880541,8222880542,8222880543,8222880544,8222880545

ಸತ್ಯಲೋಕ ನಾಮೋಪದೇಶ ಕೇಂದ್ರ, ಬೆಂಗಳೂರು (ಕರ್ನಾಟಕ)
ದೂರವಾಣಿ ಸಂ. 8510001146, 8884445281, 7026200360

**Visit us at: www.jagatgururampalji.org**
**e-mail: jagatgururampalji@yahoo.com**

# -: ವಿಷಯ ಸೂಚಿ :-

# ಪೀಠಿಕೆ

ಅನಾದಿಕಾಲದಿಂದಲೇ ಮಾನವನು ಪರಮಶಾಂತಿ, ಸುಖ ಹಾಗೂ ಅಮರತೆಯ ಹುಡುಕಾಟದಲ್ಲಿ ತೊಡಗಿಕೊಂಡಿದ್ದಾನೆ. ಅವನು ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಪ್ರಯತ್ನ ಮಾಡುತ್ತಲೇ ಬಂದಿದ್ದಾನೆ. ಆದರೆ ಅವನ ಅಪೇಕ್ಷೆಯು ಪೂರ್ಣವಾಗಿಲ್ಲ. ಏಕೆಂದರೆ ಅವನಿಗೆ ಅವನ ಬಯಕೆಯ ಪ್ರಾಪ್ತಿ ಮಾರ್ಗದ ಪೂರ್ಣ ಜ್ಞಾನವಿಲ್ಲ. ಎಲ್ಲ ಪ್ರಾಣಿಗಳು ಬಯಸುವುದೇನೆಂದರೆ ಕೆಲಸ ಮಾಡದೆ ರುಚಿಕರ ಭೋಜನ ಸಿಗಲಿ, ಧರಿಸಲು ಸುಂದರ ವಸ್ತ್ರಗಳು ಸಿಗಲಿ, ವಾಸಿಸಲು ವೈಭವದ ಭವನವಿರಲಿ, ಸುತ್ತಾಡಲು ಸುಂದರ ಉದ್ಯಾನ ವಿರಲಿ, ಮನರಂಜನೆಗಾಗಿ ಮಧುರ ಸಂಗೀತ, ನೃತ್ಯ, ಗಾಯನ, ಆಟೋಟಗಳು, ಹಾಸ್ಯ ವಿನೋದಗಳು ಇರಲಿ ಮತ್ತು ಖಾಯಿಲೆಯೇ ಇರದೆ, ಮುದುಕರೇ ಆಗದೆ, ಸಾವೂ ಬರದಂತಿರಲಿ ಮುಂತಾದವುಗಳು. ಆದರೆ ನಾವು ಯಾವ ಪ್ರಪಂಚದಲ್ಲಿರುವೆವೋ, ಇಲ್ಲಿ ಇದು ಕಂಡುಬರುತ್ತಿಲ್ಲ ಹಾಗೂ ಅಸಂಭವಕೂಡ, ಏಕೆಂದರೆ ಈ ಲೋಕ ನಶ್ವರವಾದದ್ದು ಈ ಲೋಕದ ಸಕಲ ವಸ್ತುಗಳೂ ನಾಶ ಹೊಂದುತ್ತವೆ. ಈ ಲೋಕದ ರಾಜನೇ ಕಾಲ ಬ್ರಹ್ಮನಾಗಿದ್ದಾನೆ. ಇವನು ಒಂದು ಲಕ್ಷ ಮಾನವನ ಸೂಕ್ಷ್ಮ ಶರೀರದ ಕೊಳೆಯನ್ನು ಭಕ್ಷಿಸುತ್ತಾನೆ. ಈ ಬ್ರಹ್ಮನು ಎಲ್ಲ ಪ್ರಾಣಿಗಳನ್ನೂ ಅವರವರ ಕರ್ಮ ಹಾಗೂ ಪಾಪ ಪುಣ್ಯಗಳ ಬಲೆಯೊಳಗೆ ಸಿಲುಕಿಸಿ ಮೂರು ಲೋಕದ ಪಂಜರದಲ್ಲಿ ಬಂಧಿಸಿದ್ದಾನೆ. ಕಬೀರ್ ಪರಮೇಶ್ವರರು ಹೀಗೆ ಹೇಳಿದ್ದಾರೆ. ಲೋಕ ಮೂರು ಪಂಜರವಾಗಿದೆ, ಪಾಪ–ಪುಣ್ಯಗಳೇ ಎರಡು ಜಾಲಗಳಾಗಿವೆ. ಸಕಲ ಜೀವಿಗಳು ಭೋಜನವಾಗಿವೆ. ಏಕಮಾತ್ರ ಕಾಲನು ಅವುಗಳನ್ನು ತಿನ್ನುತ್ತಾನೆ. ಬಡವನಿರಲಿ, ಪಾಪಿ ಇರಲಿ, ಪುಣ್ಯವಂತನಿರಲಿ, ಜಿಪುಣನಿರಲಿ, ಭಕ್ತಿ ಮಾಡದೆ ಮುಕ್ತಿ ಪಡೆಯಲಾರರು. ಕಬೀರ್ ಪರಮೇಶ್ವರರು ಹೇಳುತ್ತಾರೆ,

ಕಬೀರ್, ತೀನ ಲೋಕ ಪಿಂಜರಾ ಭಯಾ, ಪಾಪ ಪುಣ್ಯ ದೊ ಜಾಲ್ ।
ಸಭಿ ಜೀವ್ ಭೋಜನ ಭಯೆ, ಏಕ ಖಾನೇವಾಲಾ ಕಾಲ್ ॥

ಗರೀಬ್, ಏಕಪಾಪಿ ಏಕಪುಣ್ಯೆ ಆಯಾ, ಏಕ್ ಹೈ ಸೂಮ್ ದಲೇಲ್ ರೇ ।
ಬಿನಾ ಭಜನ್ ಕೋಯೀ ಕಾಮ ನಹಿ ಆವ್ಯೆ, ಸಬ್‌ಹೈ ಜಮ ಕೀ ಜೇಲ ರೇ ॥

ಯಾವುದೇ ಪ್ರಾಣಿಯು ಈ ಪಂಜರ ರೂಪದ ಬಂಧನದಿಂದ ಹೊರಬರಲು ಇಚ್ಛಿಸುವುದಿಲ್ಲ. ಜೀವಾತ್ಮನಿಗೆ ತನ್ನ ನಿಜಮನೆಯಾದ ಸತ್ಯಲೋಕದ ದಾರಿ ತಿಳಿಯಲು ಅಪೇಕ್ಷೆಯಿಲ್ಲ. ಇದಕ್ಕಾಗಿ ಬ್ರಹ್ಮನು ತನ್ನ ತ್ರಿಗುಣ ಮಾಯೆಯಾದ ರಜಗುಣ, ಸತ್‌ಗುಣ, ತಮಗುಣದಿಂದ ಜೀವವನ್ನು ಭ್ರಮೆಯಲ್ಲಿ ಇರಿಸಿದ್ದಾನೆ. ಮಾನವನಿಗೆ ಈ ಭ್ರಮೆ ಎಲ್ಲಿಂದ ಹುಟ್ಟಿತು? ಇಲ್ಲಿ ಅಂತಹದೇನೂ ಇಲ್ಲ. ನಾವೆಲ್ಲ ಸಾವು, ದುಃಖ, ಅಶಾಂತಿಗಳಿಂದ ಕೂಡಿದ್ದೇವೆ. ನಾವು ಇಲ್ಲಿ ಯಾವ ಸ್ಥಿತಿಯಲ್ಲಿರಬೇಕೆಂದು ಬಯಸುತ್ತೇವೆಯೋ, ಅಂತಹ ಸ್ಥಿತಿ ನಮ್ಮ ನಿಜಮನೆಯಾದ ಸತ್ಯಲೋಕದಲ್ಲಿದೆ. ಕಾಲಬ್ರಹ್ಮನ ಲೋಕದಲ್ಲಿ ಸ್ವಂತ ಇಚ್ಛೆಯಿಂದ ಬಂದು ಬಂಧಿಯಾಗಿದ್ದೇವೆ ಮತ್ತು ನಮ್ಮ ನಿಜಮನೆಯ ಮಾರ್ಗವನ್ನೇ ಮರೆತಿದ್ದೇವೆ. ಕಬೀರರು ಹೇಳುತ್ತಾರೆ –

ಇಚ್ಛಾರೂಪಿ ಖೇಲನ್ ಆಯಾ, ತಾತ್ಯೆ ಸುಖ ಸಾಗರ್ ನಹಿ ಪಾಯಾ ।

ಈ ಕಾಲಬ್ರಹ್ಮನ ಲೋಕದಲ್ಲಿ ಶಾಂತಿ ಹಾಗೂ ಸುಖದ ಹೆಸರೂ ಇಲ್ಲ. ಎಲ್ಲ ಜೀವಿಗಳನ್ನು ತ್ರಿಗುಣಗಳ ಮಾಯೆಯಿಂದ ಹುಟ್ಟಿದ, ಕಾಮ, ಕ್ರೋಧ, ಲೋಭ, ಮೋಹ, ಅಹಂಕಾರ, ರಾಗ

ದ್ವೇಷ, ಹರ್ಷ–ಶೋಕ, ಲಾಭ–ನಷ್ಟ, ಕೀರ್ತಿಗಳಿಕೆ ರೂಪದ, ಅವಗುಣಗಳು ಅಶಾಂತಿಗೊಳಿಸಿವೆ. ಇಲ್ಲಿ ಒಂದು ಜೀವವು ಮತ್ತೊಂದು ಜೀವವನ್ನು ಸಾಯಿಸಿ ತಿನ್ನುತ್ತದೆ, ಶೋಷಣೆ ಮಾಡುತ್ತದೆ, ಶೀಲ ಹರಣಮಾಡುತ್ತದೆ, ಧನ ಲೂಟಿಮಾಡುತ್ತದೆ ಹಾಗೂ ಶಾಂತಿಯನ್ನು ಕಿತ್ತುಕೊಳ್ಳುತ್ತವೆ. ಇಲ್ಲಿ ನಾಲ್ಕೂ ದಿಕ್ಕಿನಿಂದ ಬೆಂಕಿ ಹತ್ತ ತೊಡಗಿದೆ. ಒಂದು ವೇಳೆ ನಾವು ಶಾಂತಿಯಿಂದ ಇರಬಯಸಿದರೂ ಸಹ, ಬೇರೆಯವರು ನಮ್ಮನ್ನು ಹಾಗೆ ಇರಲು ಬಿಡುವುದಿಲ್ಲ. ನಮಗೆ ಇಚ್ಛೆ ಇಲ್ಲದಿದ್ದರೂ ಸಹ, ಕಳ್ಳ ಕಳ್ಳತನ, ಮಾಡುತ್ತಾನೆ, ದುರ್ಘಟನೆಗಳು ಘಟಿಸುತ್ತವೆ, ಢಾಕು ಡಕಾಯಿತಿ ಮಾಡುತ್ತಾನೆ, ರೈತನ ಬೆಳೆಗಳು ನಷ್ಟವಾಗುತ್ತವೆ. ವ್ಯಾಪಾರಿಗಳ ವ್ಯಾಪಾರ ಕುಸಿಯುತ್ತದೆ. ರಾಜನಿಂದ ಅವನ ಪದವಿ ಕಿತ್ತುಕೊಳ್ಳಲಾಗುತ್ತದೆ. ಆರೋಗ್ಯವಾದ ಶರೀರವು ರೋಗಕ್ಕೆ ಒಳಗಾಗುತ್ತದೆ. ಅಂದರೆ ಇಲ್ಲಿ ಯಾವುದೇ ವಸ್ತುವು ಸುರಕ್ಷಿತವಿಲ್ಲ, ರಾಜನ ರಾಜ್ಯವು, ಮರ್ಯಾದಸ್ಥನ ಮಾರ್ಯಾದೆಯೂ, ಹಣವಂತನ ಹಣವೂ, ಬಲಶಾಲಿಯ ಬಲವೂ ಮತ್ತು ಈ ಶರೀರವು, ಇದ್ದಕ್ಕಿದ್ದಂತೆ ನಾಶವಾಗುತ್ತದೆ. ತಂದೆ ತಾಯಿಯರ ಎದುರೇ ಪ್ರಾಯಕ್ಕೆ ಬಂದ ಮಕ್ಕಳು ಮರಣ ಹೊಂದುತ್ತಾರೆ. ಹಾಲು ಕುಡಿಯುವ ಹಸುಳೆಯನ್ನು ಬಿಟ್ಟು ತಂದೆ ತಾಯಿಯರು ಮರಣ ಹೊಂದುತ್ತಾರೆ. ಚಿಕ್ಕ ಪ್ರಾಯದ ಸೋದರಿಯರು ವಿಧವೆಯಾಗುತ್ತಾರೆ. ಹೀಗೆ ದುಃಖದ ಪರ್ವತವನ್ನೇ ಅನುಭವಿಸಬೇಕಾಗುತ್ತದೆ. ಇವುಗಳನ್ನು ವಿಚಾರ ಮಾಡಿದಾಗ, ಈ ಸ್ಥಾನ ವಾಸಕ್ಕೆ ಯೋಗ್ಯವೇ? ಎಂದು ಅನಿಸುತ್ತದೆ. ಆದರೆ ನಾವು ವಿಧಿಯಿಲ್ಲದೆ ಇಲ್ಲಿ ಇದ್ದೇವೆ. ಏಕೆಂದರೆ ಈ ಕಾಲನ ಪಂಜರದಿಂದ ಹೊರಬರಲು ಮಾರ್ಗ ಕಾಣುತ್ತಿಲ್ಲ. ನಾವು ಬೇರೆಯವರ ದುಃಖವನ್ನು ನೋಡಿ ಸಹಿಸಿಕೊಳ್ಳುವುದು ಅಭ್ಯಾಸವೇ ಆಗಿಬಿಟ್ಟಿದೆ. ನಾವು ಈ ಲೋಕದಲ್ಲಿ ದುಃಖದಿಂದ ಪಾರಾಗಬೇಕಾದರೆ, ಪರಮಶಕ್ತಿಯುಕ್ತ ಪರಮೇಶ್ವರನಲ್ಲಿ ಶರಣು ಹೋಗಬೇಕಾಗುತ್ತದೆ. (ಪರಮ ಅಕ್ಷರ ಬ್ರಹ್ಮನಲ್ಲಿ) ಕಾಲನಿಗೂ ಪರಮಶಕ್ತಿಯುತ ಪರಮೇಶ್ವರನ ಭಯವಿದೆ. ಯಾರು ಸಂಪೂರ್ಣವಾಗಿ ಪರಮ ಅಕ್ಷರ ಬ್ರಹ್ಮನ ಶರಣು ಹೋಗಿ, ಸಂತರು ತಿಳಿಸಿದ ಮಾರ್ಗದಲ್ಲಿ ನಡೆಯುವರೋ, ಅವರಿಗೆ ಮೇಲೆ ಹೇಳಿದ ಕಷ್ಟಗಳು ಬರುವುದಿಲ್ಲ. ಯಾರು ಈ ಪ್ರಪಂಚದಲ್ಲಿ ಭಕ್ತಿ ಮಾರ್ಗದಲ್ಲಿ ನಡೆಯುವರೋ, ಅವರಿಗೆ ಮೇಲೆ ಹೇಳಿದ ಕಷ್ಟಗಳು ಜೀವನ ಪರ್ಯಂತ ಬರಲಾರವು. ಜ್ಞಾನ ಗಂಗಾ ಎಂಬ ಈ ಪುಸ್ತಕವನ್ನು ಓದಿದವರಿಗೆ ತಾವು ತಮ್ಮ ನಿಜ ಮನೆಯನ್ನು ಮರೆತ ಅರಿವಾಗುವುದು. ನಿಜ ಸತ್ಯಲೋಕದ ಮನೆಯಲ್ಲಿ ಜನನ, ಮರಣ, ವೃದ್ಧಾಪ್ಯ ದುಃಖ, ಜಗಳ–ಕದನ, ರೋಗರುಜಿನ, ಲೇವಾದೇವಿ, ಮನರಂಜನಾ ಸಾಧನಗಳನ್ನು ಕೊಳ್ಳುವಿಕೆ ಯಾವುದೂ ಇರದು. ಸತ್ಯಲೋಕದಲ್ಲಿ ಎಲ್ಲವೂ ಉಚಿತವಾಗಿ ದೊರೆಯುವುದು. ಗರೀಬ್ ದಾಸ್ ಮಹಾರಾಜರ ವಾಣಿಯಲ್ಲಿ ಪ್ರಮಾಣವಿದೆ, ಹೀಗೆ ವ್ಯಕ್ತವಾಗಿದೆ.

ಬಿನ ಹಿ ಮುಖ ಸಾರಂಗ ರಾಗ ಸುನ, ಬಿನಹಿ ತಂತೀ ತಾರ್ ।
ಬಿನಾ ಸುರ ಅಲಗೋಜೆ ಭಜ್ಜೈ, ನಗರ ನಾಚ್ ಘುಮಾರ್ ॥

ಘಂಟಾ ಬಾಜ್ಜೈ ತಾಲ ನಗ್, ಮಂಜೀರೇ ಢಫ್ ಝಾಂಝ್ ।
ಮುರಲೀ ಮಧುರ ಸುಹಾವನಿ, ನಿಸಬಾಸರ ಔರ್ ಸಾಂಝ್ ॥

ಬೀನ ಬಿಹಂಗಮ ಬಾಜಹಿ, ತರಕ ತಂಬೂರೇ ತೀರ ।
ರಾಗ ಖಂಡ ನಹಿ ಹೋತ ಹೈ, ಬಂಧ್ಯಾ ರಹತ ಸಮೀರ್ ॥

ತರಕ ನಹಿ ತೋರಾ ನಹಿ, ನಾಹಿ ಕಶೀಶ್ ಕಬಾಬ್ ।
ಅಮೃತ ಪ್ಯಾಲೆ ಮಧ ಪೀವೆ, ಜೊ ಭಾಟಿ ಚವ್ವೈ ಶರಾಬ್ ॥

ಮತವಾಲೆ ಮಸ್ತಾನಪುರ, ಗಲೀಗಲೀ ಗುಲಜಾರ ।
ಸಂಖ ಶರಾಬಿ ಫಿರತ್ ಹೈ, ಚಲೋ ತಾಸ ಬಜಾರ್ ॥

ಸಂಖ ಸಂಖ ಪತ್ನಿ ನಾಚೈ, ಗಾವೈ ಶಬ್ದ ಸುಭಾನ್ ।
ಚಂದ್ರಬದನ ಸೂರಜಮುಖಿ, ನಾಹಿ ಮಾನ್ ಗುಮಾನ್ ॥

ಸಂಖ ಹಿಂಡೋಲೆ ನೂರ ನಗ, ಝೂಲೈ ಸಂತ ಹಜೂರ್ ।
ತಃಖ್ತ ಧನಿ ಕೆ ಪಾಸ್ ಕರ್, ಐಸಾ ಮುಲಕ್ ಜಹೂರ್ ॥

ನದೀ ನಾವ್ ನಾಲೆ ಬಗೈ, ಛೂಟೈ ಘುಹಾರೆ ಸುನ್ನ ।
ಭರೆ ಹೋದ್ ಸರವರ್ ಸದಾ, ನಹೀ ಪಾಪ್ ನಹೀ ಪುಣ್ಯ ॥

ನಾ ಕೋಯಿ ಭಿಕ್ಷುಕ್ ದಾನ್‌ದೆ, ನಾ ಕೋಯಿ ಹಾರ್ ವ್ಯವಹಾರ್ ।
ನಾ ಕೋಯಿ ಜನ್ಮೆ ಮರೆ, ಐಸಾ ದೇಶ್ ಹಮಾರ್ ॥

ಜಹಾ ಸಂಖೋ ಲಹರ್ ಮೆಹರ್ ಕೀ ಉಪಜೈ, ಕಹರ್ ಜಹಾ ನಹೀ ಕೋಯಿ ।
ದಾಸ್ ಗರೀಬ್ ಅಚಲ್ ಅವಿನಾಶಿ, ಸುಖ ಕಾ ಸಾಗರ್ ಸೋಯಿ ॥

ಸತ್ಯಲೋಕದಲ್ಲಿ ಶಾಂತಿ ಪರಮಸುಖಗಳು ಮಾತ್ರವೇ ಇವೆ. ನಾವು ಸತ್ಯಲೋಕಕ್ಕೆ ಹೋಗದೆ ಪರಮಶಾಂತಿ, ಸುಖ, ಅಮರತೆಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಪೂರ್ಣ ಸಂತರ ಉಪದೇಶವನ್ನು ಪಡೆದು ಪರಮಾತ್ಮನಲ್ಲಿ ಭಕ್ತಿಯನ್ನು ಹೊಂದಿದಲ್ಲಿ, ನಾವು ಸತ್ಯಲೋಕಕ್ಕೆ ಹೋಗಲು ಸಾಧ್ಯ. ಈ "ಜ್ಞಾನ ಗಂಗಾ" ಪುಸ್ತಕದ ಮೂಲಕ ನಾವು ಈ ಸಂದೇಶ ಕೊಡಬಯಸುತ್ತೇವೆ. ಯಾವುದೇ ದೇವರನ್ನು ದೂಷಿಸಬಾರದು. ಯಾವ ಧರ್ಮವನ್ನೂ ನಿಂದಿಸದೆ ಎಲ್ಲಾ ಪವಿತ್ರ ಧರ್ಮ ಗ್ರಂಥಗಳಲ್ಲಿನ ಗೂಢರಹಸ್ಯವನ್ನು ಬೆಳಕಿಗೆ ತರಬೇಕು. ವರ್ತಮಾನದ ಈ ದಿನಗಳಲ್ಲಿ ಎಲ್ಲಾ ಸಂತ ಮಹಾತ್ಮರು ಈ ಎಲ್ಲಾ ರಹಸ್ಯಗಳನ್ನು ತಿಳಿಯಲು ಸಾಧ್ಯವಾಗಿಲ್ಲ. ಪರಮ ಪೂಜ್ಯರಾದ ಕಬೀರ್ ಪರಮೇಶ್ವರರು ಹೇಳುತ್ತಾರೆ.

"ವೇದ್ ಕತೇಬ್ ಝೂಟೆ ನಾ ಭಾಯಿ, ಝೂಟೆ ಹೈ ಸೋ ಸಮಝೆ ನಾಹೀ" ।

ಈ ಕಾರಣದಿಂದಾಗಿ ಭಕ್ತ ಸಮಾಜಕ್ಕೆ ಅಪಾರ ನಷ್ಟವಾಗುತ್ತಿದೆ. ಎಲ್ಲರೂ ತಪ್ಪಾಗಿ ಹೇಳಿರುವ, ಸತ್ಯವಲ್ಲದ ವಿಚಾರಗಳನ್ನು ಕೇಳಿ, ಶಾಸ್ತ್ರ ವಿರುದ್ಧವಾದ ಆಚರಣೆ ಮಾಡುತ್ತಾರೆ. ಇದರಿಂದ ಮಾನಸಿಕ ಶಾಂತಿಯಾಗಲೀ, ಶಾರೀರಿಕ ಸುಖವಾಗಲೀ ಸಿಗುತ್ತಿಲ್ಲ, ವ್ಯವಹಾರದಿಂದ ಮನೆಯಲ್ಲಿ ಲಾಭವಾಗುತ್ತಿಲ್ಲ, ಪರಮೇಶ್ವರನ ಸಾಕ್ಷಾತ್ಕಾರವಾಗುತ್ತಿಲ್ಲ, ಮೋಕ್ಷ ಪ್ರಾಪ್ತಿಯಾಗುತ್ತಿಲ್ಲ ಈ ಎಲ್ಲ ಸುಖಗಳು ಹೇಗೆ ದೊರೆಯುತ್ತವೆ? ಎಂಬುದನ್ನು ಅರಿಯಲು ಮೊದಲು ನಾನು ಯಾರು? ಎಲ್ಲಿಂದ ಬಂದಿರುವೆ? ಏತಕ್ಕಾಗಿ ಜನ್ಮ ತಾಳಿರುವೆ? ಏಕೆ ಮರಣ ಹೊಂದುವೆ? ಏಕೆ ದುಃಖ ಪಡುವೆ? ಈ ಎಲ್ಲವನ್ನೂ ಮಾಡುತ್ತಿರುವವನಾದರೂ ಯಾರು? ಅವನೆಲ್ಲಿದ್ದಾನೆ? ಹೇಗೆ ಸಿಗುತ್ತಾನೆ? ಬ್ರಹ್ಮಾ–ವಿಷ್ಣು–ಮಹೇಶ್ವರರ ತಾಯಿ–ತಂದೆ ಯಾರು? ಹೇಗೆ ನಾವು ಈ ಕಾಲಬ್ರಹ್ಮನ ಸೆರೆಯಿಂದ ಬಿಡುಗಡೆ ಹೊಂದುವುದು? ಹೇಗೆ ನಮ್ಮ ನಿಜ ಮನೆಯಾದ ಸತ್ಯಲೋಕಕ್ಕೆ ಪುನಃ ಹೋಗುವುದು? ಈ ಎಲ್ಲಾ ವಿಚಾರಗಳನ್ನು ಈ ಪುಸ್ತಕದ ಮೂಲಕ ತೋರಿಸಲಾಗಿದೆ. ಈ ಪುಸ್ತಕವನ್ನು ಓದುವುದರಿಂದ ಶ್ರೀ ಸಾಮಾನ್ಯ ಭಕ್ತಗಣಕ್ಕೆ ಕಲ್ಯಾಣ ಸಾಧ್ಯವಾಗುತ್ತದೆ. ಈ ಪುಸ್ತಕವು ತತ್ವದರ್ಶಿ ಸಂತ ರಾಮ್‌ಪಾಲ್ ಮಹಾರಾಜರವರ ಪ್ರವಚನಗಳ ಸಂಗ್ರಹವಾಗಿದೆ. ಇದು ಸದ್‌ಗ್ರಂಥಗಳಲ್ಲಿನ ತತ್ವಗಳ ಆಧಾರಸಹಿತ ವರ್ಣಿಸಿದೆ. ವಾಚಕರು ಈ ಪುಸ್ತಕವನ್ನು ನಿಷ್ಪಕ್ಷಭಾವ ಹಾಗೂ ಆಸಕ್ತಿಯಿಂದ ಓದುವರೆಂಬ ಪೂರ್ಣ ವಿಶ್ವಾಸ ನಮಗೆ ಇದೆ. ಅವರಿಗೆ ಶುಭವಾಗುತ್ತದೆ.

ಆತ್ಮ ಪ್ರಾಣ ಉದ್ಧಾರ್ ಹೀ, ಐಸಾ ಧರ್ಮ್ ನಹೀ ಔರ್ ।
ಕೋಟಿ ಅಶ್ವಮೇಘ ಯಜ್ಞ, ಸಕಲ ಸಮಾನಾ ಭೌರ್ ॥

ಜೀವ ಉದ್ಧಾರ್ ಪರಮ ಪುಣ್ಯ್, ಐಸಾ ಕರ್ಮ್‌ನಹೀ ಔರ್ ।
ಮರುಸ್ಥಲ್ ಕೇ ಮೃಗ್ ಜ್ಯೋ, ಸಬ್ ಮರ್ ಗಯೆ ದೌರ್-ದೌರ್ ॥

ಭಾವಾರ್ಥ : ಒಂದು ಆತ್ಮವನ್ನು ಸದ್ಭಕ್ತಿ ಮಾರ್ಗದಲ್ಲಿ ತೊಡಗಿಸಿ, ಅದರ ಉದ್ಧಾರ ಅಂದರೆ ಆತ್ಮ ಕಲ್ಯಾಣ ಮಾಡಿದರೆ, ಕೋಟಿ ಅಶ್ವಮೇಧ ಯಜ್ಞದ ಫಲ ದೊರೆಯುತ್ತದೆ. ಇದಕ್ಕೆ ಸಮನಾದ ಬೇರೆ ಧರ್ಮವಿಲ್ಲ, ಜೀವಾತ್ಮನ ಉದ್ಧಾರಕ್ಕಾಗಿ ಮಾಡುವ ಕಾರ್ಯಕ್ಕಿಂತ ಶ್ರೇಷ್ಠವಾದ ಸೇವೆ ಬೇರೊಂದಿಲ್ಲ. ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಪಶುಪಕ್ಷಿಗಳೂ ಸಹ ದಿನವಿಡೀ ಅಲೆದಾಡುತ್ತವೆ. ಅದೇ ರೀತಿ ಪರಮಾರ್ಥಕ್ಕಾಗಿ ಕರ್ಮಮಾಡದವನು ಸಹ, ಜೀವಿಗಳ ಕಲ್ಯಾಣಕ್ಕಾಗಿ ಮಾಡುವ ಕೆಲಸವೇ ಸರ್ವ ಶ್ರೇಷ್ಠ ಕರ್ಮ. ಪರಮಾರ್ಥಕ್ಕಾಗಿ ಕರ್ಮ ಮಾಡದ ಮನುಜರು, ಸ್ವಲ್ಪ ದೂರದಲ್ಲಿ ನೀರನ್ನು ಕಂಡಂತೆ ಭ್ರಮೆಯಾಗಿ ಮರುಭೂಮಿಯಲ್ಲಿನ ಜಿಂಕೆಗಳಂತೆ ಓಡುತ್ತಾ-ಓಡುತ್ತಾ ನೀರನ್ನು ಕಾಣದೆ ಕೊನೆಗೆ ತಮ್ಮ ಬಾಯಾರಿಕೆಯಿಂದಲೇ ಸಾಯುತ್ತವೆ. ಇದೇ ರೀತಿ ಈ ಕಾಲಬ್ರಹ್ಮನ ಲೋಕದಲ್ಲಿ ಅವರು ಸಹ ಜಿಂಕೆಯಂತೆ ಸುಖ ಬಯಸುತ್ತಾರೆ. ಈ ಭೂಮಿಯಲ್ಲಿ ಮಕ್ಕಳಿಲ್ಲದವರು ಮಕ್ಕಳಾದರೆ ಸುಖವೆಂದು ಭಾವಿಸುತ್ತಾರೆ. ಆದರೆ ಮಕ್ಕಳಿರುವವರು ಸಹ ಅನೇಕ ಸಮಸ್ಯೆಗಳನ್ನು ಹೇಳುತ್ತಾರೆ. ಹಣವಿಲ್ಲದವರು ಹಣ ದೊರೆತರೆ ಸುಖವೆಂದು ಭಾವಿಸುತ್ತಾರೆ. ಆದರೆ ಹಣವಂತರನ್ನು ಅವರ ಕ್ಷೇಮ ತಿಳಿಯಲು ಪ್ರಶ್ನೆ ಕೇಳಿದರೆ ಅವರು ಸಾಕಷ್ಟು ತೊಂದರೆಗಳನ್ನು ಹೇಳುತ್ತಾರೆ. ಯಾರಾದರು ರಾಜ್ಯ ಪ್ರಾಪ್ತಿಯಿಂದ ಸುಖವೆಂದು ತಿಳಿದಿದ್ದರೆ ಅದು ಅವನ ದೊಡ್ಡ ತಪ್ಪು. ರಾಜನಿಗೆ ಸ್ವಪ್ನದಲ್ಲಿಯೂ ಸುಖ ಲಭ್ಯವಿರದು. ನಾಲ್ಕೈದು ಸದಸ್ಯರಿರುವ ಕುಟುಂಬದ ಯಜಮಾನನಿಗೆ ಆ ಕುಟುಂಬದ ವ್ಯವಸ್ಥೆ ಮಾಡುವುದೇ ಗೊಂದಲ ಆಗುತ್ತದೆ. ಅವನಿಗೆ ಸುಖವೆಂಬುದು ಸ್ವಪ್ನದಲ್ಲೂ ಇರುವುದಿಲ್ಲ. ರಾಜನು ಒಂದು ಕ್ಷೇತ್ರದ ಮುಖಂಡನಾಗಿರುತ್ತಾನೆ ಅದರ ವ್ಯವಸ್ಥೆಯಲ್ಲಿ ಅವನಿಗೆ ಸ್ವಪ್ನದಲ್ಲೂ ಸುಖವಿಲ್ಲ. ರಾಜರು ಮದ್ಯಪಾನ ಮಾಡಿ ದುಃಖವನ್ನು ಸ್ವಲ್ಪ ಮರೆಯುವ ಪ್ರಯತ್ನ ಮಾಡುತ್ತಾರೆ. ಯಾರು ಉತ್ತಮ ಗುರುವಿನಿಂದ ಉಪದೇಶ ಪಡೆಯದೆ, ಸುಳ್ಳು ಗುರುಗಳಲ್ಲಿ ದೀಕ್ಷೆ ಪಡೆದು ತಪ್ಪಾದ ಮಾರ್ಗದಲ್ಲಿ ನಡೆಯುತ್ತಾರೆಯೋ, ಅವರು ತಮಗೆ ಸುಖ ಸಿಗುತ್ತದೆ, ಶಾಂತಿ ಸಿಗುತ್ತದೆ ಎಂದು ಭಾವಿಸಿರುತ್ತಾರೆ. ಆದರೆ ಯಾವ ರಾಜನು ಜನರಿಂದ ಅಕ್ರಮವಾಗಿ ಹಣ ವಸೂಲಿ ಮಾಡುತ್ತಾನೆ ಅವನು ಮುಂದಿನ ಜನ್ಮದಲ್ಲಿ ಪಶುವಾಗಿ ಹುಟ್ಟಿ ಹಿಂದಿನ ಜನ್ಮದ ಹಣವನ್ನು ಪ್ರತಿ ವ್ಯಕ್ತಿಗೂ ತೀರಿಸುತ್ತಾನೆ. ಹೀಗಾಗಿ ಇಲ್ಲಿ ಸಿಗುವುದು ಬರಿ ದುಃಖ ಮಾತ್ರ. ಕಬೀರ್ ಪರಮೇಶ್ವರರು ಹೇಳುತ್ತಾರೆ. ಈ ನನ್ನ ಜ್ಞಾನವನ್ನು ಜ್ಞಾನಿ ಪುರುಷನು ಹೃದಯದಲ್ಲಿ ಇರಿಸಿಕೊಳ್ಳುತ್ತಾನೆ. ಅಜ್ಞಾನಿಗೆ ನನ್ನ ಜ್ಞಾನದ ಅರಿವು ಆಗದು.''

"ಕಬೀರ್, ಜ್ಞಾನೀ ಹೋ ತೋ ಹೃದಯ್ ಲಗಾಯಿ,
ಮೂರ್ಖ ಹೋತೋ ಗಮ್ ನಾ ಪಾಯಿ"

ಹೆಚ್ಚಿನ ಮಾಹಿತಿಗಾಗಿ ದಯವಿಟ್ಟು ಈ ಪುಸ್ತಕವನ್ನು ಓದಿರಿ. ಈ ಪುಸ್ತಕವನ್ನು ಓದಿದ ಸುಪ್ರೀಂ ಕೋರ್ಟಿನ ಹಿರಿಯ ವಕೀಲರಾದ ಶ್ರೀ ಸುರೇಶಚಂದ್ರರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. ಈ ಪುಸ್ತಕದ ಹೆಸರು "ಜ್ಞಾನ ಗಂಗಾ' ಬದಲು "ಜ್ಞಾನ ಸಾಗರ" ಎಂದಿರಬೇಕಿತ್ತು.

## "ಕಲಿಯುಗದಲ್ಲಿ ಸತ್ಯಯುಗ"

(ಸಂತ ರಾಮ್‌ಪಾಲ್ ಮಹಾರಾಜ್‌ರವರ ಸತ್ಸಂಗದ ವಚನಗಳ ಸಂಗ್ರಹ)

ಯಾವ ಯುಗದಲ್ಲಿ ಅಧರ್ಮವಿರುವುದಿಲ್ಲವೋ, ಅದೇ ಸತ್ಯಯುಗ ಅಲ್ಲಿ ಶಾಂತಿ ಇರುತ್ತದೆ. ತಂದೆಗೂ ಮೊದಲೇ ಮಗ ಮರಣ ಹೊಂದುವುದಿಲ್ಲ. ಸ್ತ್ರೀಯರು ವಿಧವೆಯರಾಗುವುದಿಲ್ಲ,

ರೋಗವಿಲ್ಲದ ಶರೀರವಿರುತ್ತದೆ ಎಲ್ಲರೂ ಭಕ್ತರಾಗಿರುತ್ತಾರೆ ಪರಮಾತ್ಮನಿಗೆ ಹೆದರುತ್ತಾರೆ ಆಧ್ಯಾತ್ಮಿಕ ಜ್ಞಾನವನ್ನು ಪಡೆದು ಭಗವಂತನಲ್ಲಿ ಭಯ–ಭಕ್ತಿ ಇರುತ್ತದೆ. ಕಾಯಾ–ವಾಚಾ–ಮನಸಾ ಯಾರಿಗೂ ಹಿಂಸೆ ಮಾಡುವುದಿಲ್ಲ ಹಾಗೂ ದುರಾಚಾರಿಗಳು ಆಗಿರುವುದಿಲ್ಲ. ಹೆಣ್ಣು–ಗಂಡು ಎಂಬ ಎರಡೇ ಜಾತಿ ಇರುತ್ತದೆ. ವೃಕ್ಷಗಳು ಹೆಚ್ಚಾಗಿರುತ್ತದೆ. ಮನುಜರೆಲ್ಲಾ ವೇದದ ಆಧಾರದಂತೆ ಭಕ್ತರಾಗಿರುತ್ತಾರೆ. ಈ ಯುಗ ಕಲಿಯುಗ ಇದರಲ್ಲಿ ಅಧರ್ಮವು ಹೆಚ್ಚಾಗಿದೆ. ಕಲಿಯುಗದಲ್ಲಿ ಮಾನವನಿಗೆ ದೇವರ ಭಕ್ತಿಯಲ್ಲಿ ಆಸಕ್ತಿ ಕಡಿಮೆಯಾಗಿದೆ. ಭಕ್ತಿ ಇದ್ದರೂ ಶಾಸ್ತ್ರ ನಿಯಮಗಳಿಗೆ ಹೊರತಾಗಿ ಮನಬಂದಂತೆ ಭಕ್ತಿ ಮಾಡುತ್ತಾರೆ. ಭಗವದ್ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳಲ್ಲಿ ಹೇಳಿರುವಂತೆ, ಹೇಗೆ ಮಾಡಬಾರದೋ ಅದನ್ನೇ ಮಾಡುತ್ತಾರೆ. ಇದರಿಂದಾಗಿ ದೇವರಿಂದ ಅಪೇಕ್ಷೆ ಪಡುವ ಫಲದಿಂದ ವಂಚಿತರಾಗುತ್ತಾರೆ. ಇದರಿಂದ ಹೆಚ್ಚಿನವರು ನಾಸ್ತಿಕರಾಗುತ್ತಾರೆ. ಹಣವಂತರಾಗಲು ಲಂಚ, ಕಳ್ಳತನ, ಸುಳ್ಳು  ಮಾರ್ಗವನ್ನು ಹಿಡಿಯುತ್ತಾರೆ. ಆದರೆ ಇದು ಹಣಸಂಪಾದನೆಯ ನಿಯಮಕ್ಕೆ ಹೊರತಾದ್ದರಿಂದ, ದೇವರ ದೃಷ್ಟಿಯಲ್ಲಿ ದೋಷಿಗಳಾಗುತ್ತಾರೆ ಅನೇಕ ಕಷ್ಟಗಳನ್ನು ಅನುಭವಿಸುತ್ತಾರೆ. ಪರಮಾತ್ಮನ ನಿಯಮವನ್ನು ಮಾನವರು ಮರೆಯುತ್ತಾರೆ.  ಆದ್ದರಿಂದ ಅವರಿಗೆ ಹೆಚ್ಚಿನ ಅದೃಷ್ಟ ಪ್ರಾಪ್ತಿಯಾಗುವುದಿಲ್ಲ. ಅಧರ್ಮ ಮಾರ್ಗದಲ್ಲಿ ಸಂಪಾದನೆ ಮಾಡಿದರೆ ಅದು ಉಳಿಯುವುದಿಲ್ಲ. ಉದಾಹರಣೆಗೆ ಒಬ್ಬ ವ್ಯಕ್ತಿ ತನ್ನ ಮಗನಿಗೆ ಸುಖ–ಸಮೃದ್ಧಿ ಬಯಸಿ, ಅಧರ್ಮ ಮಾರ್ಗದಲ್ಲಿ ಹಣ ಸಂಪಾದಿಸಿದ ಆದರೆ ಅವನ ಮಗನ ಎರಡೂ ಮೂತ್ರ ಪಿಂಡಗಳು ಕೆಟ್ಟು ಹೋದವು. ಮೂತ್ರಪಿಂಡದ ಚಿಕಿತ್ಸೆಗೆ ಇದ್ದ ಹಣವೆಲ್ಲಾ ಖರ್ಚಾಯಿತು. ಜೊತೆಗೆ ಹಣದ ಕೊರತೆಯಾಗಿ ಸಾಲವೂ ಆಯಿತು. ನಂತರ ಮಗನಿಗೆ ಮದುವೆ ಮಾಡಿದ. ಆರು ತಿಂಗಳ ನಂತರ ಅಪಘಾತದಲ್ಲಿ ಆ ಮಗನ ಸಾವಾಯಿತು. ಈಗ ಸಂಪಾದಿಸಿದ ಹಣವೂ ಇಲ್ಲ, ಮಗನೂ ಇಲ್ಲ. ಅಧರ್ಮ ಮಾರ್ಗದ ಹಣ ಸಂಪಾದನೆಯ ಪಾಪ ಮಾತ್ರ ಉಳಿದಿದೆ. ಈ ಪಾಪವನ್ನು ಅವನು ಕಳೆದುಕೊಳ್ಳಲು ಪಶುಗಳ ಯೋನಿಯಲ್ಲಿ  ಹುಟ್ಟಬೇಕಾಗುವುದು. ಆದರೆ ಆ ಶಾಶ್ವತ ಪರಮ ಅಕ್ಷರ ಬ್ರಹ್ಮನು ತಿಳಿಸಿರುವ ಶಾಸ್ತ್ರಮಾರ್ಗದಲ್ಲಿ ಸಾಧನೆ ಮಾಡಿದರೆ, ಅಂತಹ ಭಕ್ತರ ಅದೃಷ್ಟವೇ ಬದಲಾಗುವುದು. ಧನಹೀನನಾಗಿದ್ದರೆ, ಭಗವಂತ ಅವನಿಗೆ ಧನವನ್ನು ನೀಡುವನು. ಹಣವಂತನನ್ನಾಗಿ ಮಾಡುವನು. ಸತ್ಯಯುಗದಲ್ಲಿ ಯಾವುದೇ ಪ್ರಾಣಿ ಮಾಂಸ, ತಂಬಾಕು, ಸಾರಾಯಿ ಸೇವನೆ ಮಾಡುವುದಿಲ್ಲ. ಏಕೆಂದರೆ ಇವುಗಳಿಂದ ಉಂಟಾಗುವ ಪಾಪಗಳು ಅವರಿಗೆ ತಿಳಿದಿರುತ್ತದೆ.

♦ ಮಾಂಸ ತಿನ್ನುವುದು ಪಾಪ :– ಒಮ್ಮೆ ಒಬ್ಬ ಸಂತನು, ತನ್ನ ಶಿಷ್ಯನ ಜೊತೆ ಎಲ್ಲಿಗೋ ಹೋಗುತ್ತಿದ್ದ. ಕೆರೆಯೊಂದರಲ್ಲಿ ಒಬ್ಬ ಬೆಸ್ತನು ತನ್ನ ಬಲೆ ಬೀಸಿ ಮೀನು ಹಿಡಿಯುತ್ತಲಿದ್ದ. ಮೀನುಗಳು ನೀರಿನಿಂದ ಈಚೆ ಬಂದು ಒದ್ದಾಡಿ–ಒದ್ದಾಡಿ ಸಾಯುತ್ತಿದ್ದವು. ಶಿಷ್ಯನು ಕೇಳಿದ "ಗುರುಗಳೇ ಈ ಅಪರಾಧಿ ಜೀವಕ್ಕೆ ಯಾವ ಶಿಕ್ಷೆ ದೊರೆಯುವುದು? 'ಸಮಯ ಬಂದಾಗ ಹೇಳುತ್ತೇನೆ' ಎಂದು ಗುರುಗಳು ನುಡಿದರು. 4–5 ವರ್ಷಗಳ ನಂತರ ಅದೇ ಗುರು–ಶಿಷ್ಯರು ಒಂದು ಕಾಡಿನ ಮಾರ್ಗದಲ್ಲಿ ಎಲ್ಲಿಗೋ ಹೋಗುತ್ತಿದ್ದರು. ಅಲ್ಲೊಂದು ಆನೆಯ ಮರಿಯು ಚೀರಾಡುತ್ತಿತ್ತು. ಕುಣಿತ–ಜಿಗಿತ ಮಾಡುತ್ತಿದ್ದಾಗ ಆ ಆನೆ ಮರಿಯು ಎರಡು ಅಕ್ಕ–ಪಕ್ಕದಲ್ಲಿದ್ದ ಮರಗಳ ನಡುವೆ ಸಿಕ್ಕಿ ಹಾಕಿ ಕೊಂಡಿತ್ತು. ಅದು ಪ್ರಯತ್ನಪಟ್ಟು ಸಿಕ್ಕಿನಿಂದ ಪಾರಾಗಿತ್ತು. ಆದರೆ ಉಜ್ಜಾಟದಲ್ಲಿ ಚರ್ಮ ಕಿತ್ತು ಗಾಯವಾಗಿತ್ತು. ಗಾಯಗಳ ಮೇಲೆ ನೊಣಗಳು ಕೂರುತ್ತಿತ್ತು. ಗಾಯವು ಹುಳುವಾಗಿ ಕೊಳೆಯುತ್ತಿತ್ತು. ಕಡಿತ ತಾಳಲಾರದೆ ಉಜ್ಜುತ್ತಲಿತ್ತು. ಉರಿಯಿಂದಾಗಿ ಕಿರುಚುತ್ತಲಿತ್ತು. ಶಿಷ್ಯನು ಗುರುಗಳನ್ನು ಕೇಳಿದ "ಗುರುಗಳೇ, ಈ ಪ್ರಾಣಿ ಯಾವ ಪಾಪಕ್ಕಾಗಿ ಈ ಶಿಕ್ಷೆ ಅನುಭವಿಸುತ್ತಿದೆ? ಗುರುಗಳು ಹೇಳಿದರು ಇದು ಆ ಬೆಸ್ತನೇ, ಹಿಂದೆ ಮೀನನ್ನು ಹಿಡಿದು–ಹಿಡಿದು ನೀರಿನಿಂದ ಹೊರ ಹಾಕುತ್ತಿದ್ದನಲ್ಲ ಅವನೇ.

♦ ಸಾರಾಯಿ ಕುಡಿಯುವುದು ಎಂತಹ ಪಾಪವಾಗಿದೆ :–

ಸಾರಾಯಿ ಕುಡಿಯುವವರು 70 ಜನುಮಗಳಲ್ಲಿ ನಾಯಿಯಾಗಿ ಹುಟ್ಟುತ್ತಾರೆ. ಮಲ–ಮೂತ್ರ ತಿನ್ನುತ್ತಾ ತಿರುಗುತ್ತಾರೆ. ಬೇರೆ ಅನೇಕ ಕಷ್ಟಗಳನ್ನೂ ಅನುಭವಿಸಬೇಕಾಗುತ್ತದೆ. ಸಾರಾಯಿ ಕುಡಿಯುವುದರಿಂದ ಶರೀರವೂ ಅನೇಕ ಹಾನಿಗಳಿಗೆ ಒಳಗಾಗುತ್ತದೆ. ಶರೀರದಲ್ಲಿ 4 ಮಹತ್ವಪೂರ್ಣ ಅಂಗಗಳಿವೆ. ಶ್ವಾಸಕೋಶ, ಲಿವರ್, ಕಿಡ್ನಿ ಮತ್ತು ಹೃದಯ. ಸಾರಾಯಿ ಈ ನಾಲ್ಕಕ್ಕೂ ಹಾನಿಯುಂಟು ಮಾಡುತ್ತದೆ. ಸಾರಾಯಿ ಕುಡಿಯುವುದರಿಂದ ಮನುಷ್ಯ ಮನುಷ್ಯನಾಗಿರದೆ, ಪಶುಗಳ ಸಮಾನವಾಗಿ ವರ್ತಿಸುತ್ತಾನೆ. ಕೊಚ್ಚೆಯಲ್ಲಿ ಬೀಳುವುದು, ಬಟ್ಟೆಯಲ್ಲಿ ಮಲ–ಮೂತ್ರ ವಿಸರ್ಜನೆ ಮಾಡಿಕೊಳ್ಳುವುದು, ವಾಂತಿ ಮಾಡಿಕೊಳ್ಳುವುದು. ಧನಹಾನಿ, ಮಾನಹಾನಿ, ಮನೆಯಲ್ಲಿ ಅಶಾಂತಿ ಮುಂತಾದವು ಸಾರಾಯಿ ಕುಡಿಯುವುದರಿಂದ ಆಗುತ್ತದೆ. ಸತ್ಯಯುಗದಲ್ಲಿ ಸಾರಾಯಿ ಕುಡಿಯುತ್ತಿರಲಿಲ್ಲ. ಸತ್ಯಯುಗದಲ್ಲಿ ಎಲ್ಲ ಮಾನವರು ಪರಮಾತ್ಮನ ವಿಧಾನಗಳಿಂದ ಪರಿಚಿತರಾಗಿದ್ದರು. ಈ ಕಾರಣದಿಂದಲೇ ಸುಖವಾಗಿ ಜೀವನ ಮಾಡುತ್ತಿದ್ದರು.

ಗರೀಬ್, ಮದಿರಾ ಪೀವೈ ಕಡವಾ ಪಾನೀ, ಸತ್ತರ ಜನ್ಮ ಸ್ವಾನಕೆ ಜಾನೀ ।

♦ ದುರಾಚಾರ ಮಾಡುವುದು ಎಷ್ಟು ಪಾಪ :–

ಪರದ್ವಾರಾ ಸ್ತ್ರೀ ಕಾ ಖೋಲೈ, ಸತ್ತರ್ ಜನ್ಮ ಅಂಧಾ ಹೋ ಡೋಲೈ ।

ಪೂಜ್ಯ ಕಬೀರ್ ಪರಮೇಶ್ವರರು ಹೇಳಿದ್ದಾರೆ. "ಯಾವ ವ್ಯಕ್ತಿಯು ಪರಸ್ತ್ರೀಯೊಂದಿಗೆ ಅತ್ಯಾಚಾರ ಮಾಡುತ್ತಾನೋ, ಅವನು 70 ಜನ್ಮಗಳಲ್ಲಿ ಕುರುಡನಾಗಿ ಹುಟ್ಟಬೇಕಾಗುತ್ತದೆ." ಬುದ್ಧಿವಂತನು ಇಂತಹ ಆಪತ್ತನ್ನು ತಂದುಕೊಳ್ಳುವುದಿಲ್ಲ. ಮೂರ್ಖರೇ ಇಂತಹ ಕೆಲಸ ಮಾಡುತ್ತಾರೆ. ಬೇರೆಯವರ ಹೊಲದಲ್ಲಿ ಬೀಜಬಿತ್ತಿದರೆ, ಅವನನ್ನು ಮೂರ್ಖ ಎಂದೇ ಹೇಳಬೇಕು. ಬುದ್ಧಿವಂತ ಹೀಗೆ ಅನ್ಯಸ್ತ್ರೀಯೊಂದಿಗೆ ಅತ್ಯಾಚಾರ ಮಾಡುವುದಿಲ್ಲ. ಅನ್ಯಸ್ತ್ರೀ ಸಂಗವು ಬಹುಮೂಲ್ಯವಾದ ಗೋಧಿ ಬೀಜವನ್ನು ತಿಪ್ಪೆಯ ಮೇಲೆ ಸುರಿದು ಬಂದಂತೆ. ಮೂರ್ಖ, ಕುಡುಕ, ನಿರ್ಲಜ್ಜ ವ್ಯಕ್ತಿ ಹೀಗೆ ಮಾಡುತ್ತಾನೆ. ವಿಚಾರ ಮಾಡಬೇಕಾದ ವಿಷಯವೆಂದರೆ, ಯಾವುದನ್ನು ಶರೀರದಿಂದ ಕಳೆದುಕೊಳ್ಳುವುದರಿಂದ ಆನಂದದ ಅನುಭವವಾಗುತ್ತದೋ, ಅದು ಶರೀರದಲ್ಲೇ ಇದ್ದರೆ, ಎಷ್ಟು ಆನಂದವನ್ನು ನೀಡಬಲ್ಲದು? ದೀರ್ಘಾಯು, ಆರೋಗ್ಯ, ಮಾನಸಿಕ ನೆಮ್ಮದಿ, ಬಲ, ಸ್ಫೂರ್ತಿಗಳನ್ನು ನೀಡಬಲ್ಲದು. ಯಾವ ಪದಾರ್ಥದಿಂದ ಅಮೂಲ್ಯ ಶಿಶುವನ್ನು ಪಡೆಯಬಹುದೋ, ಅದನ್ನೇ ನಾಶಮಾಡಿದರೆ ಅದು ಶಿಶುಹತ್ಯೆಗೆ ಸಮ. ಆದ್ದರಿಂದ ದುರಾಚಾರ ಹಾಗೂ ಅನಾವಶ್ಯಕ ಭೋಗ ವಿಲಾಸವನ್ನು ತ್ಯಜಿಸಬೇಕು.

♦ ತಂಬಾಕು ಸೇವನೆ ಎಷ್ಟು ಪಾಪ ? ಪರಮೇಶ್ವರ ಕಬೀರರು ಹೇಳಿದ್ದಾರೆ :–

ಸುರಾಪಾನ್ ಮದ್ಯ ಮಾಂಸಾಹಾರೀ, ಗಮನ್ ಕರೈ ಭೋಗೈ ಪರ ನಾರೀ ।
ಸತ್ತರ ಜನ್ಮ ಕಟತ್ ಹೈ ಶಿಶಮ್, ಸಾಕ್ಷೀ ಸಾಹಿಬ್ ಹೈ ಜಗದೀಶಮ್ ॥
ಪರ ದ್ವಾರಾ ಸ್ತ್ರೀ ಕಾ ಖೋಲೈ, ಸತ್ತರ್ ಜನ್ಮ ಅಂಧಾ ಹೋ ಡೋಲೈ ।
ಸೌ ನಾರಿ ಜಾರೀ ಕರೈ, ಸುರಪಾನ್ ಸೌ ಬಾರ್ ।ಏಕ್ ಚಿಲಮ್ ಹುಕ್ಕಾ ಭರೆ, ಡೂಬೈ ಕಾಲಿ ಧಾರ್॥

ಮೇಲೆ ಹೇಳಿರುವಂತೆ, ಒಮ್ಮೆ ಸಾರಾಯಿ ಕುಡಿದರೆ 70 ಜನ್ಮದಲ್ಲಿ ನಾಯಿಯಾಗಿ ಹುಟ್ಟಬೇಕು. ಮಲ–ಮೂತ್ರ ತಿನ್ನುತ್ತಾ ಅಲೆಯುವನು. ಪರಸ್ತ್ರೀ ಭೋಗಿಸುವವನು 70 ಜನ್ಮದಲ್ಲಿ ಕುರುಡನಾಗಿ

ಹುಟ್ಟಬೇಕು. ಮಾಂಸಾಹಾರಿಯು ಬಹಳ ಕಷ್ಟಗಳಿಗೆ ಗುರಿಯಾಗಬೇಕು. ಮೇಲಿನ ಎಲ್ಲಾ ಪಾಪಗಳನ್ನು ನೂರುಬಾರಿ ಮಾಡಿದವನಿಗೆ ಯಾವ ಪಾಪ ಬರುವುದೋ, ಅದೆ ರಿತಿ ಒಮ್ಮೆ ಹುಕ್ಕಾ ಸಿಗರೇಟು, ಬೀಡಿ, ಇಂತಹದೇ ಬೇರೆ ಮಾದಕ ವಸ್ತುಗಳ ಸೇವನೆಗೆ ಸಹಕಾರ ಕೊಡುವವನಿಗೆ ಉಂಟಾಗುವುದು. ಎಲ್ಲರೂ ಘೋರ ಪಾಪಕ್ಕೆ ಒಳಗಾಗುವರು. ಒಬ್ಬ ವ್ಯಕ್ತಿ ಹುಕ್ಕಾ–ಬೀಡಿ–ಸಿಗರೇಟುಗಳ ಹೊಗೆಯನ್ನು ಬಿಡುತ್ತಿದ್ದಾಗ ಅವನ ಬೆಳೆಯುವ ಚಿಕ್ಕ–ಚಿಕ್ಕ ಮಕ್ಕಳ ಶರೀರದಲ್ಲಿ ಪ್ರವೇಶಿಸಿ ಅವರ ಆರೋಗ್ಯಕ್ಕೆ ಬಹಳ ಹಾನಿಯುಂಟಾಗುವುದು. ಆ ಮಕ್ಕಳು ಬೇಗ ಕೆಟ್ಟದ್ದನ್ನು ಕಲಿಯುತ್ತಾರೆ.

## “ಅವತಾರದ ಅರ್ಥವಿವರಣೆ”

ಅವತಾರವೆಂದರೆ ಉನ್ನತ ಸ್ಥಾನದಿಂದ ಅವನತಿಯ ಸ್ಥಾನಕ್ಕೆ ಇಳಿಯುವುದು ಈ ಶಬ್ದವನ್ನು ಉತ್ತಮ ಆತ್ಮಗಳ ಹುಟ್ಟಿನೊಂದಿಗೆ ಪ್ರಯೋಗ ಮಾಡುತ್ತಾರೆ. ಈ ಉತ್ತಮ ಆತ್ಮಗಳು ಭೂಮಿಯಲ್ಲಿ ಕೆಲವು ಅದ್ಭುತ ಕಾರ್ಯಗಳನ್ನು ನಿರ್ವಹಿಸುತ್ತವೆ. ಅಂತಹವರನ್ನು, ಪರಮಾತ್ಮನೇ ಕಳುಹಿಸಿದರೆಂದು ನಂಬುತ್ತೇವೆ. ಸ್ವಯಂ ಪರಮಾತ್ಮನೇ, ಭೂಮಿಯ ಮೇಲೆ ಆಗಮಿಸಿರುವನೆಂದು ನಂಬಲಾಗುತ್ತದೆ. ಶ್ರೀಮದ್ ಭಗವದ್ಗೀತೆಯ **15**ನೇ ಅಧ್ಯಾಯದ **1** ರಿಂದ **4**ನೇ ಶ್ಲೋಕ ಹಾಗೂ **16–17**ನೇ ಶ್ಲೋಕಗಳಲ್ಲಿ, ಮೂರು ಪುರುಷರ, ಜ್ಞಾನಗಳ ಬಗ್ಗೆ ಹೇಳಲಾಗಿದೆ.

1) ಕ್ಷರ ಪುರುಷ : ಇವನನ್ನು ಬ್ರಹ್ಮನೆಂದು ಹೇಳುತ್ತಾರೆ. ಇವನ ಸಾಧನೆಯ ಮಂತ್ರ "ಓಂ' ಆಗಿದೆ. ಇದಕ್ಕೆ ಗೀತೆಯ **8**ನೇ ಅಧ್ಯಾಯದ **13**ನೇ ಶ್ಲೋಕದಲ್ಲಿ ಪ್ರಮಾಣವಿದೆ.

2) ಅಕ್ಷರ ಪುರುಷ : ಇವನನ್ನು ಪರಬ್ರಹ್ಮನೆಂದು ಹೇಳುತ್ತಾರೆ. ಇವನ ಸಾಧನೆಯ ಮಂತ್ರ "ತತ್' ಎಂಬುದು ಸಾಂಕೇತಿಕವಾಗಿದೆ ಇದಕ್ಕೆ ಪ್ರಮಾಣ ಗೀತೆಯ **17**ನೇ ಅಧ್ಯಾಯದ **23**ನೇ ಶ್ಲೋಕದಲ್ಲಿದೆ.

3) ಉತ್ತಮ ಪುರುಷ : (ಕ್ಷರ ಪುರುಷ ಹಾಗೂ ಅಕ್ಷರ ಪುರುಷರಿಗಿಂತ ಬೇರೆಯಾದವನು) ಅವನು ಪರಮ ಅಕ್ಷರ ಪುರುಷ. ಗೀತೆಯ **8**ನೇ ಅಧ್ಯಾಯದ **1**ನೇ ಶ್ಲೋಕಕ್ಕೆ ಉತ್ತರವಾಗಿ, **8**ನೇ ಅಧ್ಯಾಯದ **3**ನೇ ಶ್ಲೋಕದಲ್ಲಿ ಅವನನ್ನು "ಪರಮಅಕ್ಷರ ಬ್ರಹ್ಮ' ಎಂದೇ ಹೇಳಲಾಗಿದೆ. ಇವರ ಸಾಧನೆಯ ಮಂತ್ರ "ಸತ್' ಇದು ಸಾಂಕೇತಿಕವಾಗಿದೆ. ಈ ಪರಮೇಶ್ವರನ ಪ್ರಾಪ್ತಿಯಿಂದ ಸಾಧಕರಿಗೆ ಪರಮಶಾಂತಿ ಹಾಗೂ ಸನಾತನ ಪರಮ್‌ಧಾಮವು ಪ್ರಾಪ್ತವಾಗುವುದು. ಇದಕ್ಕೆ ಪ್ರಮಾಣ ಗೀತೆಯ **18**ನೇ ಅಧ್ಯಾಯದ **62**ನೇ ಶ್ಲೋಕದಲ್ಲಿದೆ.

ಹೆಚ್ಚಿನ ಜ್ಞಾನಕ್ಕಾಗಿ ಹಿಂದಿಯಲ್ಲಿ "ಧರತೀ ಪರ್ ಅವತಾರ್' ಎನ್ನುವ ಪುಸ್ತಕವನ್ನು "ಸತ್ಯಲೋಕ ಆಶ್ರಮ' ಬರವಾಲಾ ದಿಂದ ಪಡೆದುಕೊಳ್ಳಿರಿ.

ಅವತಾರವು ಎರಡು ಪ್ರಕಾರಗಳಲ್ಲಿವೆ ಮೇಲೆ ಹೇಳಿರುವಂತೆ ಈಗ ನಿಮಗೆ ಗೊತ್ತಾಗಿದೆ. ಮುಖ್ಯರೂಪದಲ್ಲಿ ಮೂರು ಪುರುಷರಿದ್ದಾರೆ ಅದರ ಉಲ್ಲೇಖವನ್ನು ಮೇಲೆ ಹೇಳಲಾಗಿದೆ.

1. ಕ್ಷರ ಪುರುಷ (ಬ್ರಹ್ಮ) ಇವನು ಗೀತೆಯ **11**ನೇ ಅಧ್ಯಾಯದ **32**ನೇ ಶ್ಲೋಕದಲ್ಲಿ ತನ್ನನ್ನು ತಾನೇ ‘ಕಾಲ’ ಎಂದು ಹೇಳಿದ್ದಾನೆ.
2. ಪರಮ ಅಕ್ಷರ ಪುರಷ (ಪರಮ ಅಕ್ಷರ ಬ್ರಹ್ಮ) : ಇವರ ಬಗ್ಗೆ ಗೀತೆಯ **8**ನೇ ಅಧ್ಯಾಯದ **3, 8, 9, 10** ರಲ್ಲಿ ಹಾಗೂ **18**ನೇ ಅಧ್ಯಾಯದ ಶ್ಲೋಕ **62,** ಮತ್ತು ಅಧ್ಯಾಯ **15** ಶ್ಲೋಕ **1** ರಿಂದ **4** ಹಾಗೂ **17** ರಲ್ಲಿ ಹೇಳಲಾಗಿದೆ.

## "ಬ್ರಹ್ಮ (ಕಾಲ)ನ ಅವತಾರಗಳ ಬಗ್ಗೆ ಅರಿವು"

**ಗೀತೆಯ 4ನೇ ಅಧ್ಯಾಯದ 7ನೇ ಶ್ಲೋಕ.**

ಯದಾ, ಯದಾ, ಹಿ, ಧರ್ಮಸ್ಯ, ಗ್ಲಾನಿಃ, ಭರ್ವತಿ, ಭಾರತ ।
ಅಭ್ಯುತ್ಥಾನಮ, ಧರ್ಮಸ್ಯ, ತದಾ, ಆತ್ಮಾನಮ, ಸೃಜಾಮಿ, ಅಹಂ ॥ 7 ॥

ಅನುವಾದ :– ಹೇ ಭಾರತ, ಯಾವಾಗ ಧರ್ಮದ ಹಾನಿ ಹಾಗೂ ಅಧರ್ಮದ ವೃದ್ಧಿಯಾಗುವುದೋ, ಆಗ ನಾನು ನನ್ನ ಅಂಶದಿಂದ ಅವತರಿಸುತ್ತೇನೆ. ಶ್ರೀ ರಾಮಚಂದ್ರ ಹಾಗೂ ಶ್ರೀ ಕೃಷ್ಣನನ್ನು ಭೂಮಿಯಲ್ಲಿ ಅವತರಿಸಲು ಕಾಲ ಬ್ರಹ್ಮನೇ ಕಳುಹಿಸಿದ, ಅವರನ್ನು ಸ್ವಯಂ ಶ್ರೀ ವಿಷ್ಣು ಎಂದು ನಂಬಲಾಗಿದೆ. ಇನ್ನೂ 8 ಅವತಾರಗಳ ಬಗ್ಗೆ ಹೇಳಲಾಗಿದೆ. ಈ ಅವತಾರಗಳಲ್ಲಿ ಸ್ವಯಂ ವಿಷ್ಣುವೇ ಅವತರಿಸದೆ, ಅವನ ಕೃಪಾ ಪಾತ್ರರಾದ ಪವಿತ್ರ ಆತ್ಮಗಳು ಅವತರಿಸಿವೆ. ಶ್ರೀ ವಿಷ್ಣುವಿನಿಂದ ಕಳುಹಿಸಲ್ಪಟ್ಟ ಈ ಪವಿತ್ರ ಆತ್ಮಗಳನ್ನು ಅವತಾರಗಳೆಂದು ಹೇಳಲಾಗಿದೆ. ಅಲ್ಲಲ್ಲಿ ಪುರಾಣಗಳಲ್ಲಿ 25 ಅವತಾರಗಳ ಉಲ್ಲೇಖವೂ ಬಂದಿರುತ್ತದೆ. ಕಾಲ ಬ್ರಹ್ಮನಿಂದ ಕಳುಹಿಸಲ್ಪಟ್ಟ ಅವತಾರವು ಭೂಮಿಯಲ್ಲಿನ ಅಧರ್ಮವನ್ನು ಘೋರ ನರಸಂಹಾರ ಮಾಡಿಯೇ, ನಾಶ ಮಾಡುತ್ತಾರೆ. ಉದಾಹರಣೆಗೆ, ಶ್ರೀ ರಾಮಚಂದ್ರ, ಶ್ರೀ ಕೃಷ್ಣ, ಶ್ರೀ ಪರಶುರಾಮ, ಶ್ರೀ ನಿಃಕಲಂಕ ರವರು (ಕಲ್ಕಿ) ಅವತಾರ ಈ ಕಲಿಯುಗದ ಅಂತ್ಯದಲ್ಲಿ ಬರಲಿದ್ದಾರೆ. ಈ ಎಲ್ಲಾ ಅವತಾರಗಳ ಕಾರ್ಯ ದುಷ್ಟತೆಯನ್ನು ಅಳಿಸುವುದು, ಅಧರ್ಮದ ನಾಶ ಮಾಡುವುದು, ಶಿಷ್ಟತೆಗೆ ಸಹಕಾರ ನೀಡುವುದು, ಶಾಂತಿ ಸ್ಥಿರಗೊಳಿಸುವುದೇ ಆಗಿದೆ. ಆದರೆ ಶ್ರೀ ರಾಮಚಂದ್ರನು ರಾವಣನನ್ನು ಸಂಹರಿಸಿದ ಯುದ್ಧವಾಯಿತು. ಕೋಟ್ಯಾಂತರ ಜೀವಿಗಳ ನಾಶವಾಯಿತು. ಇವರಲ್ಲಿ ಧರ್ಮಾತ್ಮರೂ ಹಾಗು ಅಧರ್ಮಿಗಳೂ ಕೊಲ್ಲಲ್ಪಟ್ಟರು. ನಂತರ ಅವರ ಪತ್ನಿಯರು ಹಾಗು ಚಿಕ್ಕ ದೊಡ್ಡ ಮಕ್ಕಳು ಉಳಿದುಕೊಂಡರು. ಅವರ ಜೀವನ ನರಕವಾಯಿತು. ವಿಧವೆಯರನ್ನು ಅನ್ಯವ್ಯಕ್ತಿಗಳು ತಮ್ಮ ಭೊಗ ಸುಖಕ್ಕೆ ಬಳಸಿಕೊಂಡರು. ನಿರ್ವಹಣೆಯ ಸಮಸ್ಯೆಯು ಉತ್ಪನ್ನವಾಯಿತು. ಇನ್ನೂ ಮೊದಲಾದ ಅನೇಕ ಅಂಶಗಳು ಅಶಾಂತಿಗೆ ಕಾರಣವಾಯಿತು. ಇದೇ ಪರಿಸ್ಥಿತಿ, ಶ್ರೀ ಕೃಷ್ಣ ಮತ್ತು ಶ್ರೀ ಪರಶುರಾಮರ ಕಾಲದಲ್ಲೂ ಮುಂದುವರೆಯಿತು. ಈ ಪರಿಸ್ಥಿತಿಯಲ್ಲೇ ಹತ್ತನೆಯ ಅವತಾರ ಕಾಲಬ್ರಹ್ಮನ ಮೂಲಕ ಉತ್ಪನ್ನವಾಗುವನು. ಅವನು ರಾಜ ಹರಿಶ್ಚಂದ್ರನ ಆತ್ಮವಾಗಿರುವನು. ಸಂಬಲ ನಗರದಲ್ಲಿ ಶ್ರೀ ವಿಷ್ಣುದತ್ತರ ಮನೆಯಲ್ಲಿ ಜನ್ಮತಾಳುವನು. ಆ ಸಮಯದಲ್ಲಿ ಎಲ್ಲಾ ಮಾನವರು ಅತ್ಯಾಚಾರಿ ಅನ್ಯಾಯಿಗಳಾಗಿರುವರು. ಅವನು ಎಲ್ಲರನ್ನೂ ಕೊಲ್ಲುವನು. ಆ ಸಮಯದಲ್ಲಿ ಯಾವ ಯಾವ ಮಾನವರಲ್ಲಿ ಪರಮಾತ್ಮನ ಭಯವಿರುವುದೋ, ಸ್ವಲ್ಪ ಸದಾಚಾರಿಗಳಿರುವರೋ, ಅವರನ್ನು ಬಿಟ್ಟು, ಬೇರೆ ಎಲ್ಲರನ್ನೂ ಸಾಯಿಸುವನು. ಇದು ಅಧರ್ಮ ನಾಶಮಾಡಿ, ಶಾಂತಿ ಸ್ಥಾಪನೆ ಮಾಡುವುದಾಗಿ ಅವನ ನಿಯಮವಾಗಿದೆ.

## "ಪರಮ ಅಕ್ಷರ ಬ್ರಹ್ಮ ಅಥವಾ ಸತ್ಯಪುರಷನ ಅವತಾರಗಳ ಬಗ್ಗೆ ಅರಿವು"

**1.** ಪರಮ ಅಕ್ಷರ ಬ್ರಹ್ಮನು, ಭೂಮಿಯ ಮೇಲೆ ಸ್ವಯಂ ಪ್ರಕಟವಾಗುತ್ತಾನೆ. ಅವನು ಸಶರೀರನಾಗಿ ಬರುತ್ತಾನೆ. ಸಶರೀರವಾಗಿಯೇ ಹಿಂದಕ್ಕೆ ಹೋಗುತ್ತಾನೆ. ಈ ಲೀಲೆಯನ್ನು ಅವನು ಎರಡು ಪ್ರಕಾರವಾಗಿ ಮಾಡುತ್ತಾನೆ.

◆ ಕ: ಪ್ರತ್ಯೇಕ ಯುಗದಲ್ಲಿ, ಶಿಶುರೂಪದಲ್ಲಿ ಯಾವುದಾದರೂ ಸರೋವರದಲ್ಲಿ ಕಮಲದ ಹೂವಿನ ಮೇಲೆಲ್ಲ ಪ್ರಕಟವಾಗುತ್ತಾನೆ. ಅಲ್ಲಿಂದ ಮಕ್ಕಳಿಲ್ಲದ ದಂಪತಿಗಳು ಆ ಶಿಶುವನ್ನು ಎತ್ತಿಕೊಂಡು

ಹೋಗುತ್ತಾರೆ. ನಂತರ ಲೀಲೆ ಮಾಡುತ್ತಾ ದೊಡ್ಡವರಾಗುತ್ತಾರೆ. ಆಧ್ಯಾತ್ಮಿಕ ಜ್ಞಾನ ಪ್ರಚಾರ ಮಾಡಿ, ಅಧರ್ಮದ ನಾಶ ಮಾಡುತ್ತಾರೆ. ಸರೋವರದ ಜಲದಲ್ಲಿ ಕಮಲದ ಹೂವಿನ ಮೇಲೆ ಅವತರಿಸಿದ ಕಾರಣ ಪರಮೇಶ್ವರನು ನಾರಾಯಣ ಎಂದು ಕರೆಯಲ್ಪಡುತ್ತಾನೆ (ನಾರ್=ಜಲ, ಆಯಣ=ಬರುವವನು), ಅಂದರೆ ನೀರಿನ ಮೇಲೆ ಬರುವವನು.

♦ ಖ: ತಾವು ಇಚ್ಛಿಸಿದಾಗ ಯಾವಾಗ ಬೇಕು ಆವಾಗ ಸಾಧು ಸಂತರ ರೂಪದಲ್ಲಿ ಭೂಮಿಯ ಮೇಲೆ ಪ್ರತ್ಯಕ್ಷರಾಗುತ್ತಾರೆ. ಹಾಗೂ ಉತ್ತಮ ಆತ್ಮಗಳಿಗೆ ಜ್ಞಾನವನ್ನು ಕೊಡುತ್ತಾರೆ ನಂತರ ಅವರಿಂದ ಜ್ಞಾನ ಪಡೆದ ಪುಣ್ಯಾತ್ಮರೂ ಸಹ ಜ್ಞಾನ ಪ್ರಚಾರ ಮಾಡಿ ಅಧರ್ಮವನ್ನು ನಾಶ ಮಾಡುತ್ತಾರೆ. ಅವರೂ ಸಹ ಪರಮೇಶ್ವರನಿಂದ ಕಳುಹಿಸಲ್ಪಟ್ಟ ಅವತಾರವೇ ಆಗಿರುತ್ತಾರೆ.

ಈ ಕಲಿಯುಗದಲ್ಲಿ ಜ್ಯೇಷ್ಠ ॥ಶು॥ ಹುಣ್ಣಿಮೆಯ ದಿನ **1455 (ಸನ್ 1398)** ರಲ್ಲಿ ಕಾಶೀ ಪಟ್ಟಣದ, ಲಹರ್ ತಾರಾ ಹೆಸರಿನ ಸರೋವರದ ಕಮಲ ಪುಷ್ಪದ ಮೇಲೆ ಶಿಶುವಿನ ರೂಪದಲ್ಲಿ ಅವತರಿಸುತ್ತಾರೆ. ಇವರೇ ಸತ್ಯಲೋಕದಿಂದ ಬಂದ ಕಬೀರ್ ಪರಮೇಶ್ವರ. ಇವರನ್ನು ನೀರೂ, ನೀಮಾ ಎಂಬ ನೇಕಾರ ದಂಪತಿಗಳು ಎತ್ತಿಕೊಂಡು ಹೋಗಿ ಸಲಹುತ್ತಾರೆ. ಇವರು ಶಿವ ಪೂಜೆಯನ್ನು ಮಾಡುತ್ತಿದ್ದ ಬ್ರಾಹ್ಮಣ ದಂಪತಿಗಳು. ಆದರೆ ಇವರನ್ನು ಮುಸಲ್ಮಾನರು ಬಲವಂತವಾಗಿ ಇಸ್ಲಾಂ ಧರ್ಮಕ್ಕೆ ಮತಾಂತರಿಸುತ್ತಾರೆ. ಶಿಶು ರೂಪದ ಈ ಕವಿರ್ದೇವ 25 ದಿನಗಳವರೆಗೆ ಯಾವುದೇ ಆಹಾರವನ್ನು ಸ್ವೀಕರಿಸಲಿಲ್ಲ. ಮಗುವು ಆಹಾರ ಸ್ವಿಕರಿಸದಿರುವುದನ್ನು ಕಂಡು, ಅವರು ತಮ್ಮ ಇಷ್ಟ ದೇವ ಶಿವನನ್ನು ಪ್ರಾರ್ಥಿಸಿದರು. ಕಬೀರ್ ಪರಮೇಶ್ವರರು ಶಿವನಿಗೆ ಪ್ರೇರಣೆ ಮಾಡಿ ಸಾಧು ರೂಪದಲ್ಲಿ ಕರೆಸುತ್ತಾರೆ. ಕಬೀರರು ಶಿವನೊಂದಿಗೆ ಹೀಗೆ ಹೇಳಿದರು. "ಶಿವನೇ ನೀನು ಈ ದಂಪತಿಗಳಿಗೆ ಒಂದು ಕಡಸನ್ನು (ಕರುಹಾಕದ ಹಸು) ತರುವಂತೆ ತಿಳಿಸು. ನನ್ನ ದಯೆಯಿಂದ ಅದು ಹಾಲು ಕೊಡುವುದು." ಶಿವನು ಹಾಗೆಯೇ ಹೇಳಿದನು. ಕಡಸನ್ನು ತಂದರು. ಕಬೀರರ ಆದೇಶದಂತೆ ಶಿವನು ಅದರ ಸೊಂಟದ ಮೇಲೆ ಮುಟ್ಟಿದಾಗ ಕೆಚ್ಚಲಿನಲ್ಲಿ ಹಾಲು ತುಂಬಿಕೊಂಡಿತು. ಒಂದು ಮಡಿಕೆಯನ್ನು ಕೆಚ್ಚಲ ಕೆಳಗೆ ಇಟ್ಟಾಗ ಅದು ತುಂಬಿತು. ಹಾಲಿನ ಧಾರೆ ನಿಂತಿತು. ಹೀಗೆಯೇ ಪ್ರತಿದಿನ ಕೆಚ್ಚಲಿನ ಕೆಳಗೆ ಪಾತ್ರೆ ಇರಿಸಿ, ಹಾಲನ್ನು ಪಡೆಯುತ್ತಿದ್ದರು. ಈ ಹಾಲನ್ನು ಕಬೀರ್ ಪರಮೇಶ್ವರನಿಗೆ ಕುಡಿಸುತ್ತಿದ್ದರು ಕಬೀರರು ದೊಡ್ಡವರಾದ ಮೇಲೆ, ತಾವೂ ನೇಕಾರ ವೃತ್ತಿಯನ್ನು ಮಾಡಿದರು, ದೃಢಭಕ್ತರಿಗೆ ಅಂದರೆ ಉತ್ತಮವಾದ ಜನರಿಗೆ ಪರಮ ತತ್ವಜ್ಞಾನವನ್ನು ಪರಿಚಯಿಸುತ್ತಾ, ಪ್ರಚಾರ ಮಾಡುತ್ತಾ, ಅಜ್ಞಾನವನ್ನು ನಾಶಮಾಡುತ್ತಿದ್ದರು. ಯಾವ–ಯಾವ ಪುಣ್ಯಾತ್ಮರಿಗೆ ಜ್ಞಾನ ತಿಳಿಯಿತೋ, ಅವರನ್ನೆಲ್ಲಾ ಸತ್ಯಲೋಕಕ್ಕೆ ಕರೆದುಕೊಂಡು ಹೋಗಿ ಪುನಃ ಕರೆತಂದರು. ಆಧ್ಯಾತ್ಮಿಕ ಜ್ಞಾನವನ್ನು ನೀಡುತ್ತಾ, ತಮ್ಮ ಪರಿಚಯ ಮಾಡಿಕೊಟ್ಟರು. ಅವರು ಸತ್ಯಪುರುಷನ ಅವತಾರವೇ ಆಗಿದ್ದರು. ಅಂತಹ ಅವತಾರಗಳಲ್ಲಿ ಯಾರು–ಯಾರು ಕಾಣಿಸಿಕೊಂಡಿದ್ದಾರೆಂದರೆ. (1) ಗೌರವಾನ್ವಿತ ಧರ್ಮದಾಸ್ ರವರು (2) ಗೌರವಾನ್ವಿತ ಮಲುಕ್‌ದಾಸ್ ರವರು (3) ಗೌರವಾನ್ವಿತ ಗುರು ನಾನಕ್ ರವರು (ಸಿಖ್ ಧರ್ಮ ಪ್ರವರ್ತಕ) (4) ಗೌರವಾನ್ವಿತ ದಾದೂ ರವರು (5) ಗೌರವಾನ್ವಿತ ಗರೀಬ್‌ದಾಸ್ ರವರು (6) ಗೌರವಾನ್ವಿತ ಘೀಸಾದಾಸ್ ರವರು ಗ್ರಾಮ ಖೇಖಡಾ ಜಿಲ್ಲೆ ಮೆರಠ್ (ಉ.ಪ್ರದೇಶ) ಈ ಎಲ್ಲರೂ ಪರಮ ಅಕ್ಷರ ಬ್ರಹ್ಮನ ಅವತಾರವೇ ಆಗಿದ್ದಾರೆ. ಇವರೆಲ್ಲಾ ತಮ್ಮ ಕರ್ತವ್ಯವನ್ನು ಮಾಡಿ ಅಜ್ಞಾನವನ್ನು ನಾಶಮಾಡಿದರು. ಈ ಕಾರಣದಿಂದಲೇ ಬಹು ದಿನಗಳವರೆಗೆ ಜನತೆಯಲ್ಲಿ ಕೆಟ್ಟ ನಡತೆ ಸುಳಿಯಲಿಲ್ಲ. ವರ್ತಮಾನ ಕಾಲದಲ್ಲಿ ಸಂತರ ಕೊರತೆ ಇಲ್ಲ. ಆದರೂ ಅಶಾಂತಿ ದೂರವಾಗಿಲ್ಲ. ಕಾರಣ ಅವರ ಸಾಧನೆ ಶಾಸ್ತ್ರವಿರುದ್ಧವಾಗಿದೆ. ಈ ಕಾರಣದಿಂದಲೇ ಸಮಾಜದಲ್ಲಿ ಅಧರ್ಮ ಹೆಚ್ಚಾಗುತ್ತಿದೆ. ಇಂತಹ ಸಂತರಿಂದ

ನೂರಾರು ವರ್ಷಗಳಿಂದ ಜ್ಞಾನ ಪ್ರಚಾರವಾದರೂ, ಅಶಾಂತಿ–ಅಧರ್ಮ ದೂರವಾಗಿಲ್ಲ. ಬದಲಾಗಿ ಹೆಚ್ಚುತ್ತಲೇ ಇದೆ.

## "ಸತ್ಯಪುರುಷನ ಈಗಿನ ಅವತಾರ"

ಯಾರು ಸತ್ಯ ಸಾಧನೆಯ ಮೂಲಕ ಪರಮೇಶ್ವರನ ತತ್ವಜ್ಞಾನವನ್ನು ಪ್ರಚಾರ ಮಾಡಿದರೋ, ಅವರೇ ಅವತಾರ ತಾಳಿದ ಸಂತರಾಗಿದ್ದರು. ಜನರಲ್ಲಿ ಪರಸ್ಪರ ಪ್ರೇಮವಿತ್ತು. ಜನರನ್ನು ಪ್ರೀತಿಸುತ್ತಿದ್ದರು. ಅವರೆಲ್ಲಾ ಪರಸ್ಪರ ಸುಖ–ದುಃಖಗಳನ್ನು ಹಂಚಿಕೊಳ್ಳುತ್ತಿದ್ದರು. ಅಸಹಾಯಕರಿಗೆ ನೆರವಾಗುತ್ತಿದ್ದರು. ಶಾಸ್ತ್ರ ವಿಧಿಗನುಗುಣವಾಗಿ ಸಾಧನೆ ಹಾಗೂ ಅದೇ ಆಧ್ಯಾತ್ಮದ ಜ್ಞಾನವನ್ನು ಸಂತ ರಾಮ್‌ಪಾಲ್ ದಾಸ್ ರವರಿಗೆ ಕಬೀರ್ ಪರಮೇಶ್ವರರು ನೀಡಿದ್ದರು. ಮಾರ್ಚ್ 1997 ನೇಯ ಫಾಲ್ಗುಣ ಮಾಸದ ಶುಕ್ಲ ಪಾಡ್ಯಮಿಯ ದಿನ ಹಗಲು ಹತ್ತು ಗಂಟೆಯ ಸಮಯದಲ್ಲಿ ಜಿಂದಾ ಮಹಾತ್ಮನ ರೂಪದಲ್ಲಿ ಸತ್ಯಲೋಕದಿಂದ ಬಂದು 'ಸತ್ಯನಾಮ' ಹಾಗೂ 'ಸಾರನಾಮ'ದ ನಾಮೋಪದೇಶ ಕೊಡುವ ಆದೇಶ ನೀಡಿ ಅದೃಶ್ಯರಾದರು.

ಸಂತ ರಾಮ್‌ಪಾಲ್‌ದಾಸ್ ರವರೂ ಸಹ ಪರಮೇಶ್ವರ ಪರಮ ಅಕ್ಷರ ಬ್ರಹ್ಮನ ಅವತಾರದಲ್ಲಿ ಒಬ್ಬರು ಆಗಿದ್ದಾರೆ. ಅವರೂ ಸಹ ಆಧ್ಯಾತ್ಮಿಕ ಜ್ಞಾನ ಪ್ರಚಾರದ ಮೂಲಕ ಅಜ್ಞಾನವನ್ನು ನಾಶ ಮಾಡುತ್ತಿರುವವರು. ಇನ್ನು ಮುಂದೆ ವಿಶ್ವದಲ್ಲಿ ಶಾಂತಿ ನೆಲಸುವುದು. ಎಲ್ಲಾ ಧರ್ಮಗಳ ಪಂಥಗಳ ವ್ಯಕ್ತಿಗಳೆಲ್ಲಾ ಒಂದಾಗಿ ಪರಸ್ಪರ ಪ್ರೇಮದಿಂದ ಇರುವರು. ರಾಜಕಾರಣಿಗಳೂ ಸಹ ದೇವರಲ್ಲಿ ಭಯ–ಭಕ್ತಿ ಇಟ್ಟುಕೊಂಡು ಕೆಲಸ ಮಾಡುವವರಾಗುವರು. ಜನತೆಯ ಸೇವಕರಾಗಿ ನಿಷ್ಪಕ್ಷಪಾತವಾಗಿ ಕಾರ್ಯ ಮಾಡುವರು. ಈ ಭೂಮಿಯ ಮೇಲೆ ಪುನಃ ಸತ್ಯಯುಗದಂತಹ ಸ್ಥಿತಿ ಬರುವುದು. ವರ್ತಮಾನದಲ್ಲಿ ಸಂತ ರಾಮ್‌ಪಾಲ್‌ರೇ ಸತ್ಯಪುರುಷರ ಅವತಾರರಾಗಿದ್ದಾರೆ. ಇನ್ನು ಮುಂದೆ ಮನೆ–ಮನೆಯಲ್ಲಿ ಪರಮೇಶ್ವರನ ಜ್ಞಾನದ ಬಗ್ಗೆ ಚರ್ಚೆಯಾಗುವುದು. ಹಳ್ಳಿ–ಹಳ್ಳಿಗಳಲ್ಲಿ ಪಟ್ಟಣ–ನಗರಗಳಲ್ಲಿ ಮನೆ–ಉದ್ಯಾನಗಳಲ್ಲಿ ಇಸ್ಪೀಟು ಆಟ, ರಾಜಕೀಯ ಮಾತು, ಮಗ–ಸೊಸೆಯರ ಕೆಟ್ಟ ಮಾತುಗಳ ಚರ್ಚೆ, ಬೇಡದ ಮಾತುಗಳ ಬದಲು ಪರಮೇಶ್ವರನ ಜ್ಞಾನದ ಮಾತುಗಳ ಚರ್ಚೆ, ಆಗುವುದು. ಈ "ಜ್ಞಾನ ಗಂಗಾ" ಪುಸ್ತಕದಲ್ಲಿನ ಜ್ಞಾನದ ಬಗ್ಗೆ ವಿಚಾರಗಳು ನಡೆಯುವವು. ಪರಮಾತ್ಮನ ಚರ್ಚೆ ಮಾಡಿದರು ಸಹ ಜೀವಿಯು ಪುಣ್ಯದ ಭಾಗಿಯಾಗುತ್ತಾನೆ. ಶಾಸ್ತ್ರವಿಧಿಯಂತೆ ಸಾಧನೆ ಮಾಡಿ ಜೀವನವನ್ನು ಸುಖ–ಶಾಂತಿಮಯಗೊಳಿಸುತ್ತಾನೆ. ಈ ಭೂಮಿಯ ಮೇಲೆ ಸತ್ಯಯುಗದಂತಹ ಸಮಯ ಪುನಃ ಬರುವುದು. ಹೆಚ್ಚಿನ ಮಾಹಿತಿಗಾಗಿ ಹಿಂದಿಯಲ್ಲಿ "ಧರತೀಪರ್ ಅವತಾರ್" ಪುಸ್ತಕವನ್ನು ದಯಮಾಡಿ ಓದಿರಿ.

## "ಅಮೆರಿಕದ ಮಹಿಳೆ ಫ್ಲೋರೆನ್ಸ್‌ಳ ಮಹತ್ವಪೂರ್ಣ ಭವಿಷ್ಯವಾಣಿ."

ಅಮೆರಿಕದ ವಿಖ್ಯಾತಳಾದ ಭವಿಷ್ಯ ನುಡಿವ ಮಹಿಳೆ ಫ್ಲೋರೆನ್ಸ್‌ಳು, ತನ್ನ ಭವಿಷ್ಯವಾಣಿಯಲ್ಲಿ, ಅನೇಕಬಾರಿ ಭಾರತವನ್ನು ವರ್ಣಿಸಿದ್ದಾಳೆ. ತನ್ನ 'ದ ಫಾಲ್ ಆಫ್ ಸೆನ್ಸಶೇಷನಲ್ ಕಲ್ಚರ್' ಎಂಬ ಪುಸ್ತಕದಲ್ಲಿ ಇಸವಿ 2000 ಬರುತ್ತಿದ್ದಂತೆಯೇ ಪ್ರಕೃತಿಯು ಸಮತೋಲನ ತಪ್ಪುತ್ತದೆ ಎಂದು ಬರೆದಿದ್ದಾರೆ. ಇದರಿಂದ ಭಯಾನಕ ಅವಘಡಗಳು ಉಂಟಾಗುತ್ತವೆ. ಜನರಲ್ಲಿ ಆಕ್ರೋಶದ ಭಾವನೆಗಳು ಹೆಚ್ಚಾಗುತ್ತದೆ. ದುರಾಚಾರಗಳು ಪರಾಕಾಷ್ಟತೆ ತಲುಪುತ್ತವೆ. ಪಶ್ಚಿಮ ದೇಶಗಳಲ್ಲಿನ ಜನರು ತಮ್ಮ ವಿಲಾಸಮಯ ಜೀವನದಿಂದಾಗಿ ನಿರಾಸೆ, ಅಶಾಂತಿಗಳನ್ನು ಹೊಂದುತ್ತಾರೆ. ಅತೃಪ್ತಿ, ಬಯಕೆಗಳು ಹೆಚ್ಚಾಗುತ್ತವೆ. ಇದರಿಂದ ಪರಸ್ಪರ ದ್ವೇಷ ಹೆಚ್ಚುತ್ತದೆ. ನಾಲ್ಕೂ ದಿಕ್ಕುಗಳಲ್ಲೂ ಹಿಂಸೆ, ಕಳ್ಳತನ ಹಾಗೂ ಭಯದ ವಾತಾವರಣವಿರುತ್ತದೆ. ಎಲ್ಲಾ ಕಡೆ ಹಾಹಾಕಾರವುಂಟಾಗುತ್ತದೆ. ಆದರೆ

ಭಾರತದಿಂದ ಪ್ರಚಾರವಾಗುವ, ಒಂದು ಹೊಸ ವಿಚಾರಧಾರೆಯಿಂದ, ಈ ಘಾತಕ ವಾತವರಣವು ಅಂತ್ಯವಾಗುತ್ತದೆ. ವೈಜ್ಞಾನಿಕ ದೃಷ್ಟಿಯಿಂದಲೂ, ಸೋದರತೆಯ ಭಾವದಿಂದಲೂ, ಮಹತ್ವಪೂರ್ಣವಾಗಿದ್ದು, ಈ ವಿಚಾರಧಾರೆಯು ಧರ್ಮ ಮತ್ತು ವಿಜ್ಞಾನಗಳಲ್ಲಿ ಸಾಮರಸ್ಯವನ್ನು ಸಾರುತ್ತದೆ. ಪರಸ್ಪರ ವಿರೋಧವಿಲ್ಲವೆಂದೂ ಹೇಳುತ್ತದೆ. ಈ ವಿಚಾರಧಾರೆ ಆಧ್ಯಾತ್ಮಿಕತೆ ಶ್ರೇಷ್ಠತೆ, ಭೌತಿಕತೆ; ಶೂನ್ಯತೆಯು ಎಲ್ಲರ ಮುಂದೆ ಪ್ರಕಟಗೊಳ್ಳುತ್ತದೆ. ಮಧ್ಯಮ ವರ್ಗದವರು ಈ ವಿಚಾರಧಾರೆಯಿಂದ ಅಧಿಕ ಪ್ರಭಾವಿತರಾಗುತ್ತಾರೆ. ಈ ವರ್ಗವು ಉತ್ತಮ ಸಮಾಜದ ನಿರ್ಮಾಣಕ್ಕಾಗಿ, ಎಲ್ಲರನ್ನೂ ಪ್ರೇರೇಪಿಸುತ್ತದೆ. ಈ ವಿಚಾರಧಾರೆಯು ಸಂಪೂರ್ಣ ವಿಶ್ವದಲ್ಲಿ ಆಶ್ಚರ್ಯಕರ ಪರಿವರ್ತನೆಯನ್ನು ತರುವುದು.

ನನಗೆ ನನ್ನ ಆರನೆಯ ಇಂದ್ರಿಯವು ಹೇಳುತ್ತಿದೆ. "ಈ ವಿಚಾರಧಾರೆಯನ್ನು ಹುಟ್ಟುಹಾಕುವ ಸಂತನು ಭಾರತದಲ್ಲಿ ಈಗಾಗಲೇ ಜನ್ಮತಾಳಿರುವನೆಂದು". ಆ ಸಂತನ ತೇಜಸ್ಸಿನಿಂದ ಕೂಡಿದ ವ್ಯಕ್ತಿತ್ವವು, ಎಲ್ಲರನ್ನೂ ಚಕಿತಗೊಳಿಸುವುದು. ಅವನ ವಿಚಾರಧಾರೆಯು, ಆಧ್ಯಾತ್ಮಿಕತೆಯ ಹಿನ್ನೆಡೆಯನ್ನು ತಡೆದು ಪುನಃ ಜಾಗೃತಗೊಳಿಸುವುದು. ಹೊಸ ಸ್ಫೂರ್ತಿ ತುಂಬುವುದು. ನಾಲ್ಕೂ ದಿಶೆಯಲ್ಲಿ ಆಧ್ಯಾತ್ಮಿಕ ವಾತಾವರಣ ಉಂಟಾಗುವುದು. ಸಂತನ ವಿಚಾರಧಾರೆಯನ್ನು ಪ್ರಚಾರ ಮಾಡಲು, ಜನರನ್ನು ಪ್ರಭಾವಿತಗೊಳಿಸಲು, ವಿಶ್ವಕಲ್ಯಾಣವಾಗಲು, ಜನರು ಪಶ್ಚಿಮದತ್ತ ಹೋಗುವರು. ನಿಧಾನವಾಗಿ ಏಷ್ಯಾ, ಅಮೇರಿಕ, ಯುರೋಪ್‌ಗಳಲ್ಲಿ ಈ ವಿಚಾರಧಾರೆ ಹರಡುವುದು. ಆ ಸಂತನ ವಿಚಾರಧಾರೆಗೆ ಸಂಪೂರ್ಣ ವಿಶ್ವ ಪ್ರಭಾವಿತವಾಗುವುದು. ಹಾಗೂ ಅವನ ಮಾರ್ಗದರ್ಶನದಂತೆ ಸಾಗುವುದು. ಪಶ್ಚಿಮ ದೇಶದ ಜನರು ಅವನನ್ನು ಯೇಸು, ಮುಸಲ್ಮಾನರು ದಯಾಳು ಎಂದೂ, ಏಷ್ಯಾದ ಜನರು ಅವನನ್ನು 'ಭಗವಂತ'ನ ಅವತಾರ ಎಂದು ತಿಳಿಯುವರು.

ಆ ಮಹಾನ್ ಸಂತನ ವಿಚಾರಧಾರೆಯಿಂದ ಭೌದ್ಧಿಕ ಕ್ರಾಂತಿಯಾಗುವುದು. ಬುದ್ಧಿಜೀವಿಗಳ ಮಾನ್ಯತೆ ಬದಲಾಗುವುದು. ಅವರಲ್ಲಿ ಈಶ್ವರನ ಬಗ್ಗೆ ಶ್ರದ್ಧೆ ಮತ್ತು ವಿಶ್ವಾಸದ ಚಿಗುರು ಹುಟ್ಟುವುದು. ಪ್ಲೋರೆನ್ಸ್‌ಳ ಪ್ರಕಾರ ಆ ಸಂತ ಭಾರತದಲ್ಲಿ ಜನ್ಮ ತಾಳಿದ್ದಾನೆ. ಅವಳು ಈ ಸಂತನಿಂದ ಪ್ರಭಾವಕ್ಕೆ ಒಳಗಾಗಿದ್ದಳು. ಅವಳು ತನ್ನ ಮತ್ತೊಂದು ಪುಸ್ತಕ "ಗೋಲ್ಡನ್ ಲೈಟ್ ಆಫ್ ನ್ಯೂ ಯರಾ" ದಲ್ಲಿ ಹೀಗೆ ಬರೆದಿದ್ದಾಳೆ. "ನಾನು ಧ್ಯಾನದಲ್ಲಿರುವಾಗ ಆಗಾಗ ಒಬ್ಬ ಸಂತನನ್ನು ನೋಡುತ್ತೇನೆ. ಅವನು ಗೌರವರ್ಣದವನಾಗಿದ್ದಾನೆ. ಬಿಳಿಯ ಕೂದಲು, ಮುಖದಲ್ಲಿ ಗಡ್ಡ ಮೀಸೆ ಇಲ್ಲದವನಾಗಿದ್ದಾನೆ. ಆ ಸಂತನ ಹಣೆಯಲ್ಲಿ ದಿವ್ಯ ತೇಜಸ್ಸು ಇದೆ. ಅವನ ಹಣೆಯ ಮೇಲೆ ಆಕಾಶದ ಒಂದು ನಕ್ಷತ್ರದ ಬೆಳಕಿನ ಕಿರಣ ನಿರಂತರ ಗೋಚರಿಸುತ್ತದೆ. ತನ್ನ ಹೊಸ ವಿಚಾರಧಾರೆ ಹಾಗೂ ತನ್ನ ಸದ್ಗುಣಿ ಚರಿತ್ರೆಯುಳ್ಳ ಪ್ರಬಲ ಅನುಯಾಯಿಗಳ ಶಕ್ತಿಯಿಂದ ಸಂಪೂರ್ಣ ವಿಶ್ವದಲ್ಲೇಲ್ಲ ಹೊಸ ಜ್ಞಾನದ ಪ್ರಕಾಶವನ್ನು ಹರಡುತ್ತಿದ್ದಾನೆ"

ಆ ಸಂತರು ತನ್ನ ಶಕ್ತಿಯನ್ನು ನಿರಂತರ ವೃದ್ಧಿಸುತ್ತಿರುವರು. ಅವರಲ್ಲಿ ಪ್ರಾಕೃತಿಕ ಪರಿವರ್ತನೆಯನ್ನು ಮಾಡಬಲ್ಲಂತಹ ಶಕ್ತಿಯಿದೆ. ಅವರು ತಮ್ಮ ಕಾರ್ಯಗಳನ್ನು ವೈಜ್ಞಾನಿಕವಾಗಿ ಮಾಡುವರು. ಅವರ ಕೃಪೆ ಹಾಗೂ ಪ್ರಯತ್ನಗಳಿಂದ ಮಾನವೀಯ ಸಭ್ಯತೆಯಲ್ಲಿ ಹೊಸ ಜಾಗೃತಿ ಉಂಟಾಗುವುದು. ವಿಶ್ವದ ಸಮಸ್ತ ಜನ ಸಮೂಹದಲ್ಲೂ, ಹೊಸ ಚೇತನವು ಸಂಚಾರವಾಗುವುದು. ಲೋಕಶಕ್ತಿಯ ಒಂದು ಹೊಸ ರೂಪವು ಪ್ರಕಾಶಮಾನವಾಗಿ ಮುಂದೆ ಬರುವುದು. ಅದು ಆಡಳಿತಾಧಿಕಾರಿಗಳ ಮನಬಂದಂತೆ ವರ್ತಿಸುವ ನಡೆಗೆ ತಡೆ ಹಾಕುವುದು.

ಮನೋಚಿಕಿತ್ಸಕರು ಹಾಗೂ ಸಮ್ಮೋಹನ ಕಲೆಯ ವಿಶ್ವಖ್ಯಾತಿಯ ಡಾಕ್ಟರ್ "ಮೋರೆ ಬರ್ಸ್ಟೀನ್"ರೊಂದಿಗೆ ಪ್ಲೋರೆನ್ಸಳಿಗೆ ಉತ್ತಮವಾದ ಗೆಳೆತನವಿತ್ತು. ಒಮ್ಮೆ ಪ್ಲೋರೆನ್ಸಳು ಅವರೊಂದಿಗೂ

ಹೇಳಿದ್ದಳು. "ಡಾಕ್ಟರ್ ಆ ಸಮಯವು ಬೇಗ ಬರಲಿದೆ. ಆಡಳಿತದಲ್ಲಿರುವ ರಾಜಕೀಯ ಮುಖಂಡರ ಕೆಲಸಕ್ಕೆ ಬಾರದ ಮಾತುಗಳಕಡೆ ಗಮನ ಕೊಡದೆ, ಆಸಕ್ತಿಯಿಂದ ನಿಮ್ಮಂತಹ ಸಮಾಜ ಸೇವಕರ ಮಾತನ್ನು ಜನರು ಇಷ್ಟಪಟ್ಟು ಕೇಳುತ್ತಾರೆ. 21 ನೇ ಶತಮಾನದಲ್ಲಿ ಈ ಹೊಸ ವಿಚಾರಧಾರೆಯು ಸಂಪೂರ್ಣ ವಿಶ್ವವನ್ನೇ ಪ್ರಭಾವಿತಗೊಳಿಸುವುದು. ಪ್ರತಿ ರಾಷ್ಟ್ರದಲ್ಲೂ, "ಸತ್ಯಚರಿತ್ರ ಧಾರ್ಮಿಕ ಜನರ ಸಂಘಟನೆಯು ಜನರ ಮೆದುಳಿನಲ್ಲಿ  ಕುಳಿತ ತಪ್ಪು ಮಾರ್ಗದಿಂದ ಉತ್ತಮವಾದ ಸರಿಮಾರ್ಗದತ್ತ ಕರದೊಯ್ಯುವುದು. ಈ ವಿಚಾರಧಾರೆಗಳು ಭಾರತದಿಂದ ಪ್ರಸ್ಫುಟಿತವಾಗುವುವು. ಅಲ್ಲಿಂದಲೇ ಸಂಪೂರ್ಣ ವಿಶ್ವವನ್ನೇ ಆವರಿಸುವುದು. ನಾನು ಆ ಪವಿತ್ರ ಸ್ಥಾನದಲ್ಲಿ ಒಬ್ಬ ಜಾಗೃತ ತಪಸ್ವಿಯನ್ನು ನೋಡುತ್ತಲಿದ್ದೇನೆ. ಅವರ ತೇಜಸ್ಸು, ತುಂಬಾ ವೇಗವಾಗಿ ಹರಡುತ್ತಲಿದೆ. ಮಾನವನಲ್ಲಿ ಅಡಗಿರುವ ದೈವತ್ವವನ್ನು ಜಾಗೃತಗೊಳಿಸಲು, ಈ ಧರೆಯನ್ನು ಸ್ವರ್ಗಮಾಡಲು, ಆ ಸಂತನು ಹಗಲು–ರಾತ್ರಿ ಪ್ರಯತ್ನಿಸುತ್ತಿರುವನು,"

1964 ರಲ್ಲಿ, ನೀವು ಪ್ರಪಂಚದ ಭವಿಷ್ಯವನ್ನು ಹೇಳಬಲ್ಲಿರಾ? ಎಂದು ಒಬ್ಬ ಪತ್ರಕಾರನು ಕೇಳಿದನು. "1970ರ ಆರಂಭವು ಬಹಳ ಅಲ್ಲೋಲ–ಕಲ್ಲೋಲ ದಿಂದ ಕೂಡಿರುವುದು" ಎಂದು ಪ್ಲೋರೆನ್ಸಳು ತಿಳಿಸಿದಳು. 1979–80ರಲ್ಲಿ ನ್ಯೂಜರ್ಸಿಯ ಕೆಲವು ಭಾಗ, ಯೂರೋಪಿನ ಹಾಗೂ ಏಷ್ಯಾದ ಕೆಲವು ದೇಶಗಳು, ಭೂಕಂಪನದಿಂದ ಬಹಳ ತೊಂದರೆಗೆ ಸಿಲುಕುವುದು. ಕೆಲವು ದೇಶಗಳ ಸ್ಥಾನ ಜಲಾವೃತವಾಗುವವು. ಮೂರನೆಯ ವಿಶ್ವಯುದ್ಧದ ಭಯವು, ಎಲ್ಲರಲ್ಲೂ ಆತಂಕ ಮೂಡಿಸುವುದು ಹಾಗೂ ಅವರೆಲ್ಲಾ ಯುದ್ಧದ ಸಿದ್ಧತೆಗೆ ತೊಡಗುವರು. ಆದರೆ ಭಾರತದ ಆಧ್ಯಾತ್ಮಿಕ ಪ್ರವೃತ್ತಿಯ ರಾಜಕೀಯ ನಾಯಕರ ಪ್ರಭಾವ ಹಾಗೂ ಬುದ್ಧಿವಂತಿಕೆಯಿಂದ ಮೂರನೆಯ ವಿಶ್ವ ಯುದ್ಧವು ತಪ್ಪಿಸುವುದರಲ್ಲಿ ಸಫಲರಾಗುವರು. ಮೂರನೆಯ ವಿಶ್ವಯುದ್ಧ ಆರಂಭವಾಗುವವರೆಗೆ, ಭಾರತದ ಶಾಸನ ಸೂತ್ರವು ಆಧ್ಯಾತ್ಮಿಕ ಪ್ರವೃತ್ತಿಯ ಜನರ ಕೈಯಲ್ಲಿರುವುದು. ಅವರ ಪ್ರಭಾವದಿಂದ ಮೂರನೆಯ ವಿಶ್ವ ಯುದ್ಧ ತಪ್ಪುವುದು. ಆ ಶಾಸಕರು ಮಹಾನ್ ಸಂತರ ತೇಜಸ್ವಿ ಹಾಗೂ ಕ್ರಾಂತಿಕಾರಿ ವಿಚಾರಧಾರೆಯಿಂದ ಪ್ರಭಾವಿತರಾಗಿರುವರು. ವಾಷಿಂಗ್‌ಟನ್ ಜನತೆ ಸ್ವತಂತ್ರತೆ ಮತ್ತು ಮಾನವತೆ ಬಗ್ಗೆ ಹೇಗೆ ಸಮರ್ಪಣಭಾವದಿಂದಿದ್ದರೋ, ಹಾಗೆ ಅವರು ಆ ಸಂತನಿಗೆ ಸರ್ವ ಸಮರ್ಪಿತವಾಗಿರುವರು.

ಅಮೆರಿಕದ ನ್ಯೂಜರ್ಸಿ ನಗರದಲ್ಲಿ ವಾಸವಿದ್ದ ಪ್ಲೋರೆನ್ಸ್ ನಿಜವಾಗಿಯೂ ಒಬ್ಬ ವಿಲಕ್ಷಣ ಮಹಿಳೆಯಾಗಿದ್ದಳು. "ನೀವು ಭಾರತದಲ್ಲಿ ಜನ್ಮತಾಳಿರುವ ಸಂತನ ಬಗ್ಗೆ ಆಗಾಗ ಹೇಳುತ್ತಲಿರುವಿರಿ, ನಾನು ನನ್ನ ಬಗ್ಗೆ ತಿಳಿಯಬೇಕೆಂದಿರುವೆ" ಎಂದು ನೆಬೆಲ್ ಎಂಬ ವ್ಯಕ್ತಿಯು ಕೇಳಿದ್ದ. ಪ್ಲೋರೆನ್ಸ್‌ಳು ಅವನ ಬಲದ ಕೈಯನ್ನು ಹಿಡಿದು ಹೇಳಿದಳು "ನೀವು ಬಹಳ ಬೇಗ ಬೇರೆ ರಾಜ್ಯದಿಂದ ಪ್ರಸಾರಣೆಯ ಕಾರ್ಯ ಮಾಡುವಿರಿ." ನೆಬಲ್ಲನು ಒಂದು ಪ್ರಸಾರಣಾ ಸೇವೆಯ ನೌಕರನಾಗಿದ್ದ. ಪ್ಲೋರೆನ್ಸಳ ಈ ಮಾತುಗಳನ್ನು ಕೇಳಿ ಅವನು ನಗತೊಡಗಿದ. ಕೆಲ ಸಮಯದ ನಂತರ ಹೇಳಿದ "ನೀವು ನನ್ನೊಂದಿಗೆ ಒಳ್ಳೆಯ ತಮಾಷೆ ಮಾಡಿರುವಿರಿ." ಒಂದು ವೇಳೆ, ನಮ್ಮ ಕಂಪನಿಯ ಅಧಿಕಾರಿಗಳು ಈ ಕಾರ್ಯಕ್ರಮವನ್ನು ನೋಡುತ್ತಿದ್ದರೆ, ಬೇರೆಯ ರಾಜ್ಯಕ್ಕೆ ಹೋಗುತ್ತೆನೋ ಇಲ್ಲವೋ, ಸಧ್ಯಕ್ಕಂತೂ ಈ ಕಂಪನಿಯಿಂದ ನನ್ನನ್ನು ತೆಗೆದು ಹಾಕುತ್ತಾರೆ" ಎಂದು ಹೇಳಿದ.

ಕೆಲವೇ ನಿಮಿಷಗಳ ನಂತರ ಟಿ.ವಿ. ಯ ಕಂಟ್ರೋಲ್ ರೂಮಿನ ಪೋನ್ ಢಣ–ಢಣ ರಿಂಗಾಯಿತು. ಫೋನ್ ನೆಬಲ್ಲನಿಗೆ ಬಂದಿತ್ತು. ಅವನ ಕಂಪನಿಯ ಜನರಲ್ ಮ್ಯಾನೇಜರ್ ಅವನೊಂದಿಗೆ ಮಾತನಾಡಬಯಸಿದ್ದರು. ನೆಬಲ್ಲ್‌ನು ಫೋನ್ ಎತ್ತಿದ. "ನಿನ್ನನ್ನು ನ್ಯೂಯಾರ್ಕ್‌ಗೆ ಪ್ರಸರಣ ಕಾರ್ಯಕ್ಕೆ ನಿಯುಕ್ತಿಗೊಳಿಸಿದೆ. ಅಲ್ಲಿಗೆ ನಿನ್ನನ್ನೇ ಕಳುಹಿಸಲಾಗುವುದು. ನಾವು ಅಲ್ಲಿಂದ

ಪ್ರಸರಣಾ ಕಾರ್ಯ ಆರಂಭಿಸುವ ನಿರ್ಣಯ ಮಾಡಿದ್ದೇವೆ" ಎಂದು ಹೇಳಿದರು. ಈಗ ಈ ವಿಚಾರವನ್ನು ರಹಸ್ಯವಾಗಿಡು. ನಾಳೆ ಇದರ ಘೋಷಣೆಯಾಗುವುದು. ನೀನು ಪ್ಲೋರೆನ್ಸ್‌ರೊಂದಿಗೆ ಮಾತನಾಡಿದನ್ನು ನಾನು ಟಿ.ವಿ.ಯಲ್ಲಿ ನೋಡಿದೆ. ನಿನ್ನ ವಿಚಾರದಲ್ಲಿ ಪ್ಲೋರೆನ್ಸ್ ಹೇಳಿದ ಮಾತು ಸತ್ಯ ಇದು ಹೇಗೆ ಇವಳಿಗೆ ಗೋತ್ತಾಯಿತು ಎಂದು ಮ್ಯಾನೇಜರ್ ಹೇಳಿದ. ಆಗ ಆಶ್ಚರ್ಯದಿಂದ ನೆಬಲ್ಲ್‌ನು ಪ್ಲೋರೆನ್ಸಳ ಮುಖ ನೋಡುತ್ತಿದ್ದ. ಈ ಮಾತು ಇವರಿಗೆ ಹೇಗೆ ಗೊತ್ತಾಯಿತು? ಎಂದು ಯೋಚಿಸುತ್ತಿದ್ದ. ಕೆಲವು ಪತ್ರಕರ್ತರು ಪ್ಲೊರೆನ್ಸ್‌ಳನ್ನು ಕೇಳಿದ್ದರು. "ಭವಿಷ್ಯವನ್ನು ನೀವು ಹೇಗೆ ನೋಡುತ್ತೀರಿ. ಕಳೆದು ಹೋಗಿರುವ ವ್ಯಕ್ತಿ ಅಥವಾ ವಸ್ತುಗಳ ಬಗ್ಗೆ ನಿಮಗೆ ಹೇಗೆ ತಿಳಿಯುತ್ತದೆ?" ಪ್ಲೋರೆನ್ಸ್ ಹೇಳಿದಳು "ಅದು ಹೇಗೆ ಸಾಧ್ಯವಾಗುತ್ತದೆಯೋ? ನನಗೇ ತಿಳಿದಿಲ್ಲ." ನಾನು ಭವಿಷ್ಯದ ಬಗ್ಗೆ ಒಂದು ಮಹತ್ವಪೂರ್ಣವಾದ ವಿಷಯವನ್ನು ಹೇಳುತ್ತೇನೆ. 20 ನೇ ಶತಮಾನದ ಅಂತ್ಯದಲ್ಲಿ ಭಾರತದೇಶದಿಂದ ಒಂದು ಪ್ರಕಾಶವು ಹೊರಡುವುದು. ಆ ಪ್ರಕಾಶವು ದೈವೀಶಕ್ತಿಗಳ ವಿಷಯವಾಗಿ ಅರಿವನ್ನು ನೀಡುವುದು. ಆ ಅರಿವು ಈವರೆಗೆ ನಮಗೆಲ್ಲಾ ರಹಸ್ಯಮಯವಾಗಿದೆ. (ದೈವೀ ಶಕ್ತಿಗಳ ಬಗೆಗಿನ ಅರಿವು ಸಂತ ರಾಮ್‌ಪಾಲ್ ದಾಸ್ ರವರ ಮೂಲಕ ತಿಳಿಸಲ್ಪಟ್ಟಿದೆ. ದಯವಿಟ್ಟು ಓದಿರಿ ಇದೇ ಪುಸ್ತಕದ "ಸೃಷ್ಠಿರಚನೆ" ಅಧ್ಯಾಯದಲ್ಲಿ). ಒಬ್ಬ ದಿವ್ಯ ಪುರುಷರ ಮೂಲಕ ಈ ಪ್ರಕಾಶವು ಸಂಪೂರ್ಣ ವಿಶ್ವದಲ್ಲಿ ಹರಡುವುದು. ಅವರು ಎಲ್ಲರನ್ನೂ ಸತ್ಯಮಾರ್ಗದಲ್ಲಿ ನಡೆಯಬೇಕೆಂದು ಪ್ರೇರಣೆ ನೀಡುವರು. ಇಡೀ ಪ್ರಪಂಚದಲ್ಲಿ ಒಂದು ಹೊಸ ಚಿಂತನೆಯ ಬೆಳಕು ಹರಡುವುದು. ಆ ದಿವ್ಯ ಪುರುಷರ ದರ್ಶನವು ನಾನು ಧ್ಯಾನಾವಸ್ಥೆಯಲ್ಲಿರುವಾಗ ಹಲವುಬಾರಿ ಆಗುವುದು."

ಪ್ಲೋರೆನ್ಸ್‌ಳು ಪದೇ-ಪದೇ ಈ ದಿವ್ಯ ಪುರುಷನ ವಿವರ ನೀಡಿರುವಳು. ಅವರು ಉತ್ತರ ಭಾರತದ ಒಂದು ಪವಿತ್ರ ಕ್ಷೇತ್ರದಲ್ಲಿರುವರೆಂದೂ ತಿಳಿಸಿರುವಳು.

ಸಜ್ಜನರೇ, ಈ ಮೇಲಿನ ಭವಿಷ್ಯವಾಣಿ ಹಾಗೂ ವರ್ತಮಾನದ ಮಾತುಗಳು, ಸಂತ ರಾಮ್‌ಪಾಲ್ ದಾಸ್ ರವರ ಬಗ್ಗೆ ಸತ್ಯ ಸಿದ್ಧವಾಗಿವೆ. ಹಾಗೂ ಇದೇ ರೀತಿಯಾಗಿ ಬೇರೆ ಭವಿಷ್ಯವಾಣಿಗಳೂ ಸಹ ಸಮರ್ಥನೆ ನೀಡಿವೆ. ಅದನ್ನು ಮುಂದೆ ಬರೆಯಲಾಗಿದೆ.

## "ಭಾಯಿ ಬಾಲೆವಾಲಿ ಜನ್ಮ ಸಾಖೀಯಲ್ಲಿ ಪ್ರಮಾಣ"

ಒಬ್ಬ ಮಹಾಪುರುಷರ ವಿಷಯದಲ್ಲಿ 'ಭಾಯಿ ಬಾಲೆಯ ಜನ್ಮ ಸಾಖಿಯಲ್ಲಿ' ಪ್ರಹ್ಲಾದ ಭಕ್ತನ ಭವಿಷ್ಯವಾಣಿ'

ಭಾಯಿ ಬಾಲೆವಾಲಿ ಜನ್ಮ ಸಾಖೀ ಎಂಬ ಪುಸ್ತಕದಲ್ಲಿ ಬರೆದಿರುವ ಸ್ಪಷ್ಟ ವಿವರಣೆಯ ಪ್ರಕಾರ, ಸಂತ ರಾಮ್‌ಪಾಲ್ ದಾಸರೇ ಆ ಅವತಾರವಾಗಿದ್ದಾರೆ. ಅವರು ಪರಮೇಶ್ವರ ಕಬೀರ್ ಹಾಗೂ ಸಂತ ನಾನಕ್ ರವರ ನಂತರ ಪಂಜಾಬಿನ ಭೂಮಿಯಲ್ಲಿ ಅವತರಿಸುತ್ತಾರೆ. ಸಂತ ರಾಮ್‌ಪಾಲ್ ದಾಸ್ ರವರು 8-9-1951ರಲ್ಲಿ ಹರಿಯಾಣಾ ಪ್ರಾಂತದ ಸೋನೀಪತ ಜಿಲ್ಲೆಯ ಧನಾನಾ ಎಂಬ ಹಳ್ಳಿಯಲ್ಲಿ ಜನಿಸಿದರು. (ಆ ಸಮಯದಲ್ಲಿ ಅದು ಪಂಜಾಬ್ ಪ್ರಾಂತವಾಗಿತ್ತು) ಭಾರತದ ಪವಿತ್ರ ಭೂಮಿಯ ಮೇಲೆ ಶ್ರೀ ನಂದರಾಮ್ ಜಾಟರ ಮನೆಯಲ್ಲಿ ಶ್ರೀಮತಿ ಇಂದ್ರಾದೇವಿ ಯವರ ಗರ್ಭದಿಂದ ಜನಿಸಿದರು. ಇವರು ಜಾಟ ಜಾತಿಯವರು.

"ಜನ್ಮ ಸಾಖೀ ಭಾಯಿ ಬಾಲೆವಾಲಿ" ಹಿಂದಿ ಭಾಷಾ ಪುಸ್ತಕದ ಪ್ರಕಾಶಕರು. "ಭಾಯಿ ಜವಾಹರ್ ಸಿಂಹ ಅಂಡ್ ಕಂಪನಿಯವರು. ಬಾಜಾರ್ ಮಾಯಿ ಸೇವಾ ಅಮೃತಸರ (ಪಂಜಾಬ್) ಹಾಗೂ ಇದೇ ಪುಸ್ತಕದ ಪಂಜಾಬಿ ಭಾಷೆಯ ಪ್ರಕಾಶಕರು. ಭಾಯಿ ಜವಾಹರ ಸಿಂಹ ಕೃಪಾಲ್

ಸಿಂಹ ಪುಸ್ತಕವಾಲೆ, ಗಲೀ–8 ಬಾಗ್ ರಾಮಾನಂದ ಅಮೃತಸರ (ಪಂಜಾಬ್).

ಇದರಲ್ಲಿ ಬರೆದಿರುವ ಅಮರ ಲೇಖನವು ಈ ರೀತಿ ಇದೆ. ಒಮ್ಮೆ ಭಾಯಿಬಾಲಾ ಮತ್ತು ಮರದಾನಾರನ್ನು ಜೊತೆಯಲ್ಲಿ ಕರೆದುಕೊಂಡು, ಸದ್ಗುರು ನಾನಕ್ ರವರು ಭಕ್ತಪ್ರಹ್ಲಾದನ ಲೋಕಕ್ಕೆ ಹೋದರು. ಅದು ಭೂಮಿಯಿಂದ ಅನೇಕ ಲಕ್ಷ ಮೈಲಿ ದೂರದಲ್ಲಿ ಅಂತರಿಕ್ಷದಲ್ಲಿದೆ. ಪ್ರಹ್ಲಾದರು ನಾನಕ್ ರವರನ್ನು ಕುರಿತು ಹೇಳಿದರು. "ನಾನಕ್ ರವರೆ ತಮಗೆ ಪರಮಾತ್ಮನು ದಿವ್ಯ ದೃಷ್ಟಿ ನೀಡಿ ದೊಡ್ಡ ಭಕ್ತರನ್ನಾಗಿ ಮಾಡಿರುವನು. ಕಲಿಯುಗದಲ್ಲಿ ನಿಮ್ಮ ಪ್ರತಾಪವು ಹೆಚ್ಚಾಗುವುದು. ಇಲ್ಲಿಗೆ ಮೊದಲು ಕಬೀರರು ಬಂದಿದ್ದರು. ಈಗ ತಾವು ಬಂದಿರುವಿರಿ. ಮುಂದೆ ತಮ್ಮಿಬ್ಬರಂತೆಯೇ ಇರುವ ಮಹಾ ಪುರುಷನೊಬ್ಬ ಬರುವನು. ಈ ಮೂವರಲ್ಲದೆ ನನ್ನ ಲೋಕಕ್ಕೆ ಬೇರಾರೂ ಬರಲು, ಸಾಧ್ಯವಿಲ್ಲ. ಭಕ್ತರು ಬಹಳ ಮಂದಿ ಆಗಿ ಹೋಗಿದ್ದಾರೆ. ಮುಂದೆಯೂ ಜನ್ಮ ತಾಳಲಿದ್ದಾರೆ. ಆದರೆ ನನ್ನ ಲೋಕಕ್ಕೆ ಬರಲು ತಮ್ಮಂತಹ ಮಹಿಮೆಯುಳ್ಳವರಿಗೆ ಮಾತ್ರ ಸಾಧ್ಯ. ಆದ್ದರಿಂದ ಈ ಮೂವರಿಗೆ ಮಾತ್ರ, ಇಲ್ಲಿಗೆ ಬರಲು ಸಾಧ್ಯ. ಆಗ ಮರದಾನೆಯವರು ಪ್ರಹ್ಲಾದನನ್ನು ಪ್ರಶ್ನಿಸಿದರು. ಕಬೀರ್ ನೇಕಾರರು, ನಾನಕ್‌ರು 'ಖತ್ರಿ' ವರ್ಣದವರು ಆ ಮೂರನೆಯವರು ಯಾವ ವರ್ಣದವರಿರುವರು?

ಭಕ್ತ ಪ್ರಹ್ಲಾದರು ಹೇಳಿದರು "ಸೋದರನೆ ಕೇಳು, ನಾನಕ್‌ರು ಸತ್ಯಲೋಕಕ್ಕೆ ಹೋದ ನೂರಾರು ವರ್ಷಗಳ ನಂತರ ಪಂಜಾಬಿನ ಭೂಮಿಯಲ್ಲಿ ಜಾಟ ಜಾತಿಯಲ್ಲಿ ಜನಿಸುವರು. ಹಾಗೂ ಅವರ ಪ್ರಚಾರ ಕ್ಷೇತ್ರವು ಬರವಾಲಾ ಪಟ್ಟಣವಾಗಿರುತ್ತದೆ.

ವಿವೇಚನೆ : ಸಂತ ರಾಮ್‌ಪಾಲ್ ದಾಸ್ ರವರು ಅದೇ ಅವತಾರವಾಗಿದ್ದಾರೆ. ಅನ್ಯ ಪ್ರಮಾಣಗಳ ಜೊತೆಗೆ ಜನ್ಮ ಸಾಖೀಯಲ್ಲಿ ಬರೆದಿರುವ ವರ್ಣನೆಯು ಸಹ, ಸತ್ಯವೇ ಆಗಿದೆ. ಜನ್ಮ ಸಾಖೀಯಲ್ಲಿ ನೂರಾರು ವರ್ಷಗಳ ನಂತರ ಎಂದು ಬರೆಯಲಾಗಿದೆ. ಪಂಜಾಬಿ ಭಾಷೆಯಲ್ಲಿ ನೂರು ವರ್ಷವಾದ ಕೂಡಲೆ, ಎಂದು ಬರೆದಿದೆ. ಏಕೆಂದರೆ ಮರದಾನ ಕೇಳಿದರು ಅವರು ಯಾವ ಯುಗದಲ್ಲಿ ಬರುವರು? ಆಗ ಭಕ್ತ ಪ್ರಹ್ಲಾದರು ಹೇಳಿದರು– ಶ್ರೀನಾನಕ್ ರವರ ನೂರಾರು ವರ್ಷಗಳ ನಂತರ ಕಲಿಯುಗದಲ್ಲಿ ನೂರು ವರ್ಷ ಎನ್ನುವುದಕ್ಕಿಂತ ನೂರಾರು ವರ್ಷಗಳ ನಂತರ, ಎಂಬುದೇ ನ್ಯಾಯೋಚಿತವಾಗಿದೆ. ಪ್ರಚಾರ ಕ್ಷೇತ್ರ ಬಟಾಲಾ ಎಂದು ಬರೆಯಲಾಗಿದೆ. 'ಬರವಾಲಾ' ಸ್ಥಾನವನ್ನು ಬಟಾಲಾ ಎಂದು ಬರೆದಿದೆ. 'ಬರವಾಲಾ' ನಗರವು ಹರಿಯಾಣದ ಹಿಸಾರ್ ಪ್ರಾಂತದಲ್ಲಿ ಪ್ರಸಿದ್ಧಿಯಾಗಿರಲಿಲ್ಲ ಆದರೆ 'ಬಟಾಲಾ' ನಗರವು ಸುಪ್ರಸಿದ್ದವಾಗಿತ್ತು. ಲೇಖನ ಮಾಡಿದವರು ಬರವಾಲಾದ ಸ್ಥಾನದಲ್ಲಿ ಬಟಾಲಾ ಎಂದು ತಪ್ಪು ಬರೆದ್ದಿದ್ದಾರೆ. ಅಂತೆಯೇ ಮುದ್ರಣವಾಗಿದೆ.

ಮತ್ತೊಂದು ವಿಚಾರಣೀಯ ಅಂಶವೆನೆಂದರೆ ಪಂಜಾಬಿನ ವಿಶಾಲ ನಗರದಲ್ಲಿ ಯಾವುದೇ ಜಾಟ ಜಾತಿಯ ಸಂತರು ಆಗಿಲ್ಲ, ಈ ಇಬ್ಬರ ಮಹಾ ಪುರುಷರ (ಕಬೀರ್ ಪರಮೇಶ್ವರರು ಹಾಗೂ ನಾನಕ್ ರವರು) ಸಮವಾಗಿ ಮಹಿಮೆಯುಳ್ಳವರು ಎಲ್ಲಾ ಆಧಾರಗಳಿಂದ ಸಂತ ರಾಮ್‌ಪಾಲ್ ದಾಸರೇ ಆ ಅವತಾರ ಪುರುಷರಾಗಿದ್ದಾರೆ. ಇವರ ಆಧ್ಯಾತ್ಮಿಕ ಜ್ಞಾನವು ಈ ಈರ್ವರ ಜ್ಞಾನದೊಂದಿಗೆ ಹೋಲಿಕೆಯಾಗುತ್ತದೆ. ಪಂಜಾಬಿ ಮತ್ತು ಹಿಂದಿಯ "ಜನ್ಮ ಸಾಖೀ ಭಾಯಿ ಬಾಲೆವಾಲಿ"ಯ ಪ್ರತಿಗಳನ್ನು ನೋಡಿದಾಗ ನಮಗೆ ಎರಡರಲ್ಲಿನ ವಿಚಾರಗಳೂ ಸ್ವಲ್ಪ ಸರಿಯಾಗಿ ಬರೆದಿಲ್ಲ ಎಂದು ತಿಳಿಯುತ್ತವೆ. ಹಿಂದಿ ಗ್ರಂಥವು ಪಂಜಾಬಿನಿಂದ ಅನುವಾದಿತವಾಗಿದೆ. ಪಂಜಾಬಿನಲ್ಲಿ "ಜೋ ಇಸ್ ಜೀಹಾ ಕೊಯಿ ಹೋವೇಗಾ ತಾಂ ಏಥೆ ಪಹುಂಚೇಗಾ ಹೋರದಾ ಏಥೆ ಪಹೂಂಚಣ್ ದಾ ಕಾಮ್ ನಹೀಂ" ಆದರೆ ಹಿಂದಿಯ ಜನ್ಮ ಸಾಖಿಯಲ್ಲಿ ಈ ವಿವರಣೆ ಇಲ್ಲ. ಇದು ಮಹತ್ವಪೂರ್ಣವಾದುದು. ಆದರೆ ಬರೆಯುವಾಗ ಕೆಲವು ಏರು–

ಪೇರುಗಳು ಆಗುವುದು ಸಹಜ. ಆದರೂ ಸಾಕಷ್ಟು ಪ್ರಮಾಣಗಳು ಉಳಿಯುತ್ತವೆ. ಅನ್ಯ ಮಹಾಪುರುಷರು ಹೇಳಿರುವ ತುಂಬಾ ಪ್ರಮಾಣಗಳು ಸಂತ ರಾಮ್‌ಪಾಲ್ ದಾಸರೇ ಆ ಮೂರನೆಯ ಮಹಾಪುರುಷನೆಂದು ಪ್ರಮಾಣಿಸುತ್ತವೆ.

ವಿಶೇಷ :– ಜನ್ಮ ಸಾಖೀಯಲ್ಲಿ ಬರೆದಿರುವ ವಿವರಣೆಯು ಸಂತ ಗರೀಬ್‌ದಾಸ್‌ರು ಛುಡಾನಿ ಹಳ್ಳಿಯವರು ಎಂದು ಯಾರಾದರು ಹೇಳಬಹುದು. ಏಕೆಂದರೆ ಗರೀಬ್‌ದಾಸರು ಸಹ ಜಾಟ ಜಾತಿಯವರು. ಅಲ್ಲದೆ ಛುಡಾನಿ ಗ್ರಾಮವು ಮೊದಲು ಪಂಜಾಬ್ ಪ್ರಾಂತದಲ್ಲಿಯೇ ಇತ್ತು ಎಂಬುದು ಸರಿ. ಏಕೆಂದರೆ ಸಂತ ಗರೀಬ್‌ದಾಸರ ಸದ್ಗುರು ಪೂಜ್ಯ ಕಬೀರ್ ಪರಮಾತ್ಮನೇ ಆಗಿದ್ದರು. ಹಿಂದಿನ ರೋಹತಕ್ ಜಿಲ್ಲೆ, ದೆಹಲಿಯ ಮಂಡಲಕ್ಕೆ ಸೇರಿತ್ತು. ಇದು ಯಾವುದೇ ರಾಜರ ಅಧೀನದಲ್ಲಿರಲಿಲ್ಲ. ಬ್ರಿಟಿಷರ ಆಳ್ವಿಕೆಯಲ್ಲಿ ದೆಹಲಿಯ ಅಧೀನದಲ್ಲಿತ್ತು. ಸದ್ಗುರು ದೆಹಲಿ ಮಂಡಲದಲ್ಲಿ ಬರುವರು, ಭಕ್ತಿಹೀನರಲ್ಲಿ ಜಾಗೃತಿಯುಂಟು ಮಾಡುವರು ಎಂದು ಗರೀಬ್‌ದಾಸರು ಸ್ಪಷ್ಟವಾಗಿ ಹೇಳಿದ್ದಾರೆ. ಸತ್ಯ ಭಕ್ತಿಯಲ್ಲಿ ಜನರನ್ನು ತೊಡಗಿಸುವರು. (ಕಬೀರ್ ಸಾಗರದಲ್ಲಿ ಸತ್ಯವನ್ನು ತಿಳಿಯದ ಕಾಲನ ಧೂರ್ತರು ಅನುಮಾನದಿಂದ ತಮಗೆ ತಿಳಿದಂತೆ ಪ್ರಮಾಣಗಳನ್ನು ನೀಡಿದ್ದಾರೆ. ಆ ಅಸತ್ಯ ಪ್ರಮಾಣವನ್ನು ನಾಶಮಾಡಲೆಂದೇ ಪರಮಾತ್ಮ ಕಬೀರರು ಸಂತ ಗರೀಬ್‌ದಾಸರಿಂದ ಯಥಾರ್ಥ ಜ್ಞಾನವನ್ನು ಪ್ರಚಾರ ಮಾಡಿಸಿದ್ದಾರೆ. ಅದು ಸಂತ ಗರೀಬ್‌ದಾಸ್ ರವರ ಅಮೃತವಾಣಿಯ ರೂಪದಲ್ಲಿದೆ. ಕಬೀರ್ ಸಾಗರದ ಸಂಪಾದಕರಾದ ಕಬೀರ್ ಪಂಥಿಯ ಶ್ರೀ ಯುಗಲಾನಂದ ಬಿಹಾರಿ ಯವರು "ಅನುರಾಗ ಸಾಗರ" ಹಾಗೂ "ಜ್ಞಾನ ಸಾಗರ"ದ ಪೀಠಿಕೆಯಲ್ಲಿನ ಟಿಪ್ಪಣಿಯಲ್ಲಿ ಹೇಳಿದ್ದಾರೆ. "ಕಬೀರ್ ಪಂಥಿಗಳೇ, ಕಬೀರ್ ಪಂಥದ ಗ್ರಂಥಗಳ ನಾಶ ಮಾಡಿದ್ದಾರೆ. ಅವರವರ ಅಭಿಪ್ರಾಯಕ್ಕೆ ಅನುಗುಣವಾಗಿ ಅವರದೇ ಅನಿಸಿಕೆಗಳನ್ನು ಸೇರಿಸಿದ್ದಾರೆ. ನಾನು 'ಅನುರಾಗ ಸಾಗರ್' ಹಾಗೂ 'ಜ್ಞಾನ ಸಾಗರ' ದ ಕೆಲವು ಹಸ್ತಲೇಖ ಪ್ರತಿಗಳನ್ನು ಇಟ್ಟಿದ್ದೇನೆ. ಅವುಗಳಲ್ಲಿ ಒಂದು ಮತ್ತೊಂದಕ್ಕೆ ಹೊಂದಿಕೆಯಾಗುತ್ತಿಲ್ಲ.)

ಸಂತ ರಾಮ್‌ಪಾಲ್ ದಾಸರ ಜನ್ಮ ಶ್ರೀ ನಂದಾರಾಮ್ ಜಾಟ್‌ರ ಮನೆಯಲ್ಲಿ 8–9–1951ರಂದು ಸೋನೀಪತ್ ಜಿಲ್ಲೆಯ (ಆ ಕಾಲದಲ್ಲಿ ರೋಹತಕ್ ಜಿಲ್ಲೆಯಲ್ಲಿ ಇತ್ತು) ಧನಾನಾ ಎಂಬ ಹಳ್ಳಿಯಲ್ಲಿ ಆಯಿತು. ಅದು ಈಗಿನ ಹರಿಯಾಣ ಮತ್ತು ಪಂಜಾಬಿ ಪ್ರಾಂತ ಸೇರಿದ ಪ್ರಾಂತವಾದ ಪಂಜಾಬ್ ಆಗಿತ್ತು. ಕಲಿಯುಗ 5500 ವರ್ಷಗಳು ಮುಗಿದ ಬಳಿಕ ಕಬೀರ್ ಪರಮೇಶ್ವರರು ಗರೀಬ್‌ದಾಸರ ಹನ್ನೆರಡನೆಯ ಪಂಥದಲ್ಲಿ ಸ್ವತಃ ಬರುವೆನೆಂದು ತಿಳಿಸಿದ್ದರು. ಸಂತರಾದ ಗರೀಬ್‌ದಾಸ್ ರವರ ಮೂಲಕ ನನ್ನ (ಕಬೀರ್ ಪರಮೇಶ್ವರರ) ಮಹಿಮೆಯ ವಾಣಿ ಪ್ರಕಟವಾಗುವುದು. ಗರೀಬ್‌ದಾಸರು ಹನ್ನೆರಡನೇ ಪಂಥದವರೆಗಿನ ಸಾಧಕರು ನನ್ನನ್ನೆ ಆಧಾರ ಮಾಡಿಕೊಳ್ಳುವರು. ನನ್ನ ವಾಣಿಯನ್ನು ತಿಳಿಯುವ ಪ್ರಯತ್ನ ಮಾಡುವರು. ಆದರೆ ನನ್ನ ವಾಣಿಯನ್ನು ತಿಳಿಯದೆ ಸತ್ಯನಾಮ ಮತ್ತು ಸಾರನಾಮದಿಂದ ವಂಚಿತರಾಗಿ ಅಸಂಖ್ಯ ಜನುಮಗಳವರೆಗೆ ಸತ್ಯಲೋಕವನ್ನು ಸೇರಲಾರರು. ಅದೇ 12ನೇ (ಗರೀಬ್‌ದಾಸರ) ಪಂಥದಲ್ಲಿ ನಾನೇ ಸ್ವತಃ ಬರುವೆನು. ಆಗ ಗರೀಬ್‌ದಾಸರಿಂದ ಪ್ರಕಟವಾದ ವಾಣಿಯನ್ನು ನಾನೇ (ಕಬೀರ್ ಪರಮೇಶ್ವರ) ಅರ್ಥಮಾಡಿಸುವೆನು. ಇದರಿಂದ ಜನ್ಮ ಸಾಖೀಯಲ್ಲಿ ಹೇಳಿರುವ ಜಾಟ ಜಾತಿಯಲ್ಲಿನ ಸಂತ, ಸಂತ ರಾಮ್‌ಪಾಲ್ ದಾಸರೇ ಎಂಬುದು ನಿರ್ವಿವಾದವಾಗಿ ದೃಢವಾಯಿತು. ಆದರೂ ನಮಗೆ ಸಂತ ಗರೀಬ್‌ದಾಸರಲ್ಲಿ ವಿಶೇಷ ಆದರವಿದೆ. ಏಕೆಂದರೆ ಅವರ ಕಬೀರ್ ಪರಮೇಶ್ವರರ ಅಮರ ಸಂದೇಶಗಳನ್ನು ತಿಳಿಸಿದ್ದಾರೆ.

ಯಾರಾದರೂ ಹತ್ತು ಗುರುಗಳಲ್ಲಿ ಯಾರನ್ನಾದರೂ ಸಂಕೇತಿಸಿ ಭ್ರಮೆ ಹುಟ್ಟಿಸಬಹುದು.

ಹತ್ತು ಗುರು ಗಳಲ್ಲಿ ಯಾರೂ ಜಾಟ ಜಾತಿಯವರಾಗಿರಲಿಲ್ಲವೆಂಬುದು ನೆನಪಿರಲಿ. ಎರಡನೆಯ ಸಿಖ್ ಗುರು ಶ್ರೀ ಅಂಗದ ದೇವ ರವರು ಖತ್ರಿಯಾಗಿದ್ದರು. ಮೂರನೆಯ ಗುರು ಶ್ರೀ ಅಮರದಾಸ್ ರವರು ಸಹ ಖತ್ರಿ ಆಗಿದ್ದರು. ನಾಲ್ಕನೆಯ ಗುರು ಶ್ರೀ ರಾಮ್‌ದಾಸ್ ರವರು ಹಾಗೂ ಐದನೆಯ ಗುರು ಶ್ರೀ ಅರ್ಜುನದೇವ ರವರಿಂದ ಹತ್ತು ಗುರುಗಳವರೆಗೆ ಎಲ್ಲರೂ ಖತ್ರಿ ಆಗಿದ್ದರು. ಗುರು ಗೋವಿಂದ ಸಿಂಹರು ಗುರು ಶ್ರೀರಾಮ್‌ದಾಸ್ ರವರ ಸಂತಾನವೂ ಖತ್ರಿಯೇ ಆಗಿತ್ತು. ಆದರೂ ನಾವು ಎಲ್ಲಾ ಸಿಖ್ ಗುರುಗಳನ್ನು ವಿಶೇಷವಾಗಿ ಆದರಿಸುತ್ತೇವೆ.

ಸಂತ ರಾಮ್‌ಪಾಲ್ ದಾಸರು ಹೇಳುತ್ತಾರೆ.

ಜೀವವೇ ನಮ್ಮ ಜಾತಿ, ಮಾನವ ಧರ್ಮ ನಮ್ಮದು ।
ಹಿಂದು ಮುಸ್ಲಿಮ್ ಸಿಖ್ ಈಸಾಯಿ, ಯಾವ ಧರ್ಮವು ಬೇರೆ ಅಲ್ಲ ॥

ಕಬೀರ ಪರಮೇಶ್ವರರು ಹೇಳಿದ್ದಾರೆ:–

"ಜಾತಿ ನ ಪೂಛೋ ಸಂತ ಕೀ, ಪೂಛ್ ಲೀಜಿಯೇ ಜ್ಞಾನ್ ।
ಮೋಲ್ ಕರೋ ತಲವಾರ್ ಕಾ, ಪಡೀ ರಹನ್ ದೋ ಮ್ಯಾನ್ ॥

ಅರ್ಥ : ಸಂತರ ಜಾತಿಯನ್ನು ಕೇಳಬೇಡ ಜ್ಞಾನವನ್ನು ಕೇಳಿ ತಿಳಿದುಕೋ, ಕತ್ತಿಗೆ ಬೆಲೆ ಕಟ್ಟು. ಆದರೆ ಅದರ ವರೆಯನ್ನಲ್ಲ"

ದಯವಿಟ್ಟು ಪ್ರಮಾಣಕ್ಕಾಗಿ, ಜನ್ಮ ಸಾಖೀ ಪಂಜಾಬಿ ಗುರುಮುಖೀಯ (ಪಂಜಾಬಿ ಭಾಷಾ) ಹಾಗೂ ಹಿಂದಿಯ ಗ್ರಂಥವೆರಡನ್ನೂ ನೋಡಿರಿ. ಸಹಜವಾಗಿ ತಾವು ವಾಸ್ತವಿಕ ಅಂಶವನ್ನು ತಿಳಿಯಲು ಸಾಧ್ಯ. ಜನ್ಮ ಸಾಖಿಯ ಪ್ರಕಾಶಕರು. ಭಾಯಿ ಜವಾಹರ ಸಿಂಹ ಕೃಪಾಲ ಸಿಂಹ ಅಮೃತಸರ (ಪಂಜಾಬ್) ದಯಮಾಡಿ ಜನ್ಮಸಾಖೀ ಭಾಯಿ ಬಾಲೇಯ (ಪಂಜಾಬಿ ಭಾಷೆಯ) ಪುಟ 272 ನ್ನು ನೋಡಿರಿ.

(੨੭੨) ਸਾਖੀ ਪ੍ਰਹਿਲਾਦ ਭਗਤ ਨਾਲ ਹੋਈ

ਕਾਜ ਸਵਾਰਿਆ ॥੪॥ ਤਾਂ ਪ੍ਰਹਿਲਾਦ ਭਗਤ ਕਹਿਆ ਨਾਨਕ ਤਪਾ ਜੀ ਤੇਨੂੰ ਕਲਜੁਗ ਵਿਚ ਰਾਮ ਜੀ ਨੇ ਵਡਾ ਭਗਤ ਕੀਤਾ ਹੈ ਔਰ ਆਪਕੇ ਸੰਜੋਗ ਬਹੁਤਿਆਂ ਕਾ ਉਧਾਰ ਹੋਵੇਗਾ ਤੇਰੀ ਸ੍ਰੀ ਰਾਮ ਨੇ ਵਡੀ ਨਦਰ ਖੋਲੀ ਹੈ ਤੇਰਾ ਵਡਾ ਪ੍ਰਤਾਪ ਹੋਵੇਗਾ ਇਸ ਕਲਜੁਗ ਵਿਚ ਅਗੇ ਕਬੀਰ ਭਗਤ ਏਥੇ ਆਯਾ ਹੈ ਅਤੇ ਜਾਂ ਆਪਕੋ ਕਰਤਾ ਨੇ ਆਂਦਾ ਹੈ ਤਾਂ ਮਰਦਾਨੇ ਪ੍ਰਹਿਲਾਦ ਭਗਤ ਨੂੰ ਪੁਛਿਆ ਹੇ ਭਗਤ ਜੀ ਤੁਸੀਂ ਭੀ ਵਡੇ ਭਗਤ ਹੋ ਅਤੇ ਤੁਸਾਡੇ ਪਿਛੇ ਰਾਮ ਜੀ ਵਡਾ ਚਲਤ ਦਿਖਾਇਆ ਹੈ ਤੇਰੀ ਰਾਮ ਜੀ ਨੇ ਵਡੀ ਨਦਰ ਖੋਲ੍ਹੀ ਹੈ ਭਗਤ ਜੀ ਏਥੇ ਹੋਰ ਕੋਈ ਵੀ ਪਹੁੰਚਿਆ ਹੈ ਕਿ ਕਬੀਰ ਅਤੇ ਨਾਨਕ ਤਪਾ ਹੀ ਪਹੁੰਚਿਆ ਹੈ ਤਾਂ ਪ੍ਰਹਿਲਾਦ ਭਗਤ ਬੋਲਿਆ ਭਾਈ ਨਾਨਕ ਤਪੇ ਪਾਸੋਂ ਪੁਛ ਲੇ ਹੋਰ ਭੀ ਆਵਸੀ ਕਿ ਨਾ ਆਵਸੀ ਕੋਈ ਤਾਂ ਮਰਦਾਨੇ ਕਹਿਆ ਜੀ ਤੁਸੀਂ ਵਡੇ ਭਗਤ ਹੋ ਅਗਲੀ ਤੇ ਪਿਛਲੀ ਸਭ ਆਪ ਨੂੰ ਸਤਿ ਜੁਗ ਥੀਂ ਆਦਿ ਲੇਕੇ ਮਾਲੂਮ ਹੈ ਤਾਂ ਪ੍ਰਹਿਲਾਦ ਭਗਤ ਨੇ ਕਹਿਆ ਸੁਣ ਭਾਈ ਇਸ ਜਿਹਾ ਕੋਈ ਹੋਵੇਗਾ ਤਾਂ ਏਥੇ ਪਹੁੰਚੇਗਾ ਹੋਰਸ ਦਾ ਏਥੇ ਪਹੁੰਚਣਾ ਕੰਮ ਨਾਹੀਂ ਹੋਰ ਅਗੇ ਵਡੇ ਵਡੇ ਭਗਤ ਹੋਏ ਹੈਨ ਅਤੇ ਹੋਵਨਗੇ ਪਰ ਪਹੁੰਚਿਆ ਕੋਈ ਨਾਹੀਂ ਤਾਂ ਫੇਰ ਮਰਦਾਨੇ ਪੁਛਿਆ ਜੀ ਓਹ ਕਦ ਹੋਸੀ ਕਿਤੇ ਨੇੜੇ ਜੁਗ ਵਿਚ ਹੋਸੀ ਤਾਂ ਪ੍ਰਹਿਲਾਦ ਭਗਤ ਕਹਿਆ ਸੁਣ ਭਾਈ ਕਲਜੁਗ ਵਿਚ ਹੋਵੇਗਾ ਜਟ ਨਾਨਕ ਤਪਾ ਸਚਖੰਡ ਜਾਵੇਗਾ ਤਾਂ ਇਸ ਤੋਂ ਪਿਛੇ ਸਉ ਵਰ੍ਹੇ ਹੋਸੀ ਅਤੇ ਏਹਨਾਂ ਤੇਹਾਂ ਤੋਂ ਬਗੈਰ ਹੋਰ ਕੋਈ ਨਾ ਆਵਸੀ ਤਾਂ ਮਰਦਾਨੇ ਪੁਛਿਆ ਜੀ ਤਿੰਨ ਕੇਹੜੇ ਹੈਨ ਤਾਂ ਪਹਿਲਾਦ ਭਗਤ ਕਹਿਆ ਭਾਈ ਅਗੇ ਕਬੀਰ ਹੋਇਆ ਹੈ ਤੇ ਹੁਣ

ದಯವಿಟ್ಟು ಫೋಟೋ ಕಾಪಿ ಜನ್ಮ ಸಾಖೀ ಭಾಯಿ ಬಾಲೇವಾಲೀ ಪಂಜಾಬಿ ಭಾಷೆಯ ಪುಟ 273 ರನ್ನು ನೋಡಿರಿ.

ਸਾਖੀ ਇਕ ਪਹਾੜ ਦੀ ਚਲੀ (੨੭੩)

ਨਾਨਕ ਤਪਾ ਹੂਆ ਹੈ ਅਤੇ ਫੇਰ ਉਹ ਹੋਸੀ ਤਾਂ ਮਰਦਾਨੇ ਪੁਛਿਆ ਜੀ ਕਬੀਰ ਜੁਲਾਹਾ ਹੋਯਾ ਤੇ ਨਾਨਕ ਖਤਰੀ ਹੋਏ ਅਤੇ ਜੋ ਉਹ ਕਿਸ ਵਰਨ ਹੋਵੇਗਾ ਜੀ ਤੇ ਕਿਸ ਧਰਤੀ ਤੇ ਹੋਸੀ ਕੇਹੜੇ ਸ਼ਹਿਰ ਤਾਂ ਪ੍ਰਹਿਲਾਦ ਭਗਤ ਕਿਹਾ ਭਾਈ ਪੰਜਾਬ ਧਰਤੀ ਤੇ ਵਰਨ ਜਟ ਤੇ ਸ਼ਹਿਰ ਵਟਾਲੇ ਵਿਚ ਹੋਸੀ । ਤਾਂ ਮਰਦਾਨਾ ਸ੍ਰੀ ਗੁਰੂ ਜੀ ਦੇ ਚਰਨਾਂ ਤੇ ਢਹਿ ਪਿਆ ਗੁਰੂ

ದಯವಿಟ್ಟು ಫೋಟೋ ಕಾಪಿ ಜನ್ಮ ಸಾಖೀ ಭಾಯಿ ಬಾಲೇವಾಲೀ ಪಂಜಾಬಿ ಭಾಷೆಯ ಪುಟ 305 ರನ್ನು ನೋಡಿರಿ.

जन्म साखी (३०५) भाई बाले वाली

तब भक्त प्रह्लाद ने कहा—हे नानक देव। आप को इस कलियुग में बड़ा भक्त बनाया है। आप की ही संगति से अनेकों प्राणियों का भला होगा। और आप का अनंत प्रताप होगा। तब मरदाने ने कहा—हे प्रह्लाद जी। आप भी तो परम भक्त हैं तथा भगवान ने आप के लिये ही अवतार धारन किया था। प्रह्लाद जी ने कहा—हे भाई मरदाना। इस स्थान पर या तो कबीर पहुंचा है, और या यह गुरु नानक आया है। यहां आना कोई सुगम कार्य नहीं है। एक और महा पुरुष होगा जो पहुंच सकेगा। मरदाने ने कहा—हे भक्त वर। वह पुरुष कौन और कब होगा। प्रह्लाद ने उत्तर दिया, कि जब गुरु नानक देव यहां आयेंगे तो इन के सौ वर्ष पश्चात आयेगा। अर्थात यहां केवल तीन आदमी ही आने हैं। एक तो भक्त कबीर और दूसरे श्री गुरु नानक देव जी इन के पश्चात वह तीसरा आयेगा। तब मर्दाने ने कहा हे प्रह्लाद जी। कबीर तो जुलाहा था, और नानक देव—खत्री है। परंतु वह तीसरा किस जाती का होगा, उत्तर में प्रह्लाद जी ने कहा—हे मर्दाना। पंजाब की धरती और वहां उस का जाट होगा। तथा नगर बटाला में होगा। उस समय मर्दाना गुरु जी के चरणों

ಪ್ರಶ್ನೆ :– ಒಬ್ಬ ಸಂಸ್ಕೃತ ವಿದ್ಯಾಂಸರು ಕೇಳಿದರು. ಗುರು ರಾಮ್‌ಪಾಲ್ ದಾಸರು ಸಂಸ್ಕೃತವನ್ನು ಓದಿಲ್ಲ. ಆದರೆ ಭಗವದ್ಗೀತೆಯ ಯಥಾರ್ಥ ಅನುವಾದವನ್ನು ಭಕ್ತರಿಗೆ ಹೇಳುತ್ತಾರೆ ಇದು ಎಂದಿಗೂ ಸಾಧ್ಯವಿಲ್ಲ.

ಉತ್ತರ :– ಸಂತ ರಾಮ್‌ಪಾಲ್ ದಾಸರ ಭಕ್ತನು ಉತ್ತರ ನೀಡಿದ. ಶಾಸ್ತ್ರೀ ಯವರೇ, ಅವರನ್ನೇ ಪರಮೇಶ್ವರರ ಅವತಾರ ಎಂದು ಕರೆಯುವುದು. ಆ ಅವತಾರ ಪುರುಷರು ಭಾಷಾ

ಜ್ಞಾನವಿಲ್ಲದಿದ್ದರೂ ಯಥಾರ್ಥ ಅನುವಾದವನ್ನು ಮಾಡುತ್ತಾರೆ. ಏಕೆಂದರೆ ಪರಮೇಶ್ವರ ಸರ್ವಜ್ಞರು. ಅವರ ಗುಣದಿಂದಯುಕ್ತ ಅವರು ಕಳಿಸಿದ ಅವತಾರ ಪುರುಷರಾಗಿರುತ್ತಾರೆ. ಅವರು ಸಂತ ರಾಮ್‌ಪಾಲ್ ದಾಸರು. ನೀವು ಕೇವಲ ವೇದ ಹಾಗೂ ಗೀತೆಗಳ ಅನುವಾದದಿಂದಲೇ ಆಶ್ಚರ್ಯ ಪಡುವಿರಿ. ಸಂತ ರಾಮ್‌ಪಾಲ್ ದಾಸರು ಬೈಬ್‌ಲ್ ಹಾಗೂ ಕುರಾನ್‌ಗಳ ಯಥಾರ್ಥ ಅನುವಾದವನ್ನು ಮಾಡಿ ತಿಳಿಸಿದ್ದಾರೆ. ಈಸಾಯಿ ಧರ್ಮದ ಈಗಿನ ಫಾದರ್ ಅಥವಾ ಪಾದರಿ ಹಾಗೂ ಮುಸಲ್ಮಾನ್ ಧರ್ಮದ ಮುಲ್ಲಾಗಳು ಹಾಗೂ ಕಾಜಿಗಳೆಲ್ಲರಿಗೂ ಗೊತ್ತಿಲ್ಲದ ವಿಚಾರಗಳನ್ನು ತಿಳಿಸಿದ್ದಾರೆ.



# 1. ಭಕ್ತಿ–ಮರ್ಯಾದೆ

ಜೀವವೇ ನಮ್ಮ ಜಾತಿ, ಮಾನವ ಧರ್ಮ ನಮ್ಮದು।
ಹಿಂದು ಮುಸ್ಲಿಮ್ ಸಿಖ್ ಈಸಾಯಿ, ಯಾವ ಧರ್ಮವು ಬೇರೆ ಅಲ್ಲ॥

ಪ್ರಿಯ ಭಕ್ತಾದಿಗಳೇ !

ಇಂದಿಗೆ ಸುಮಾರು 5 ಸಾವಿರ ವರ್ಷಗಳ ಹಿಂದೆ, ಯಾವುದೇ ಧರ್ಮ ಅಥವಾ ಬೇರೆ–ಬೇರೆ ಸಂಪ್ರದಾಯಗಳಿರಲಿಲ್ಲ. ಹಿಂದುವಾಗಲೀ, ಮುಸ್ಲಿಮ್‌ರಾಗಲಿ, ಈಸಾಯಿಯಾಗಲೀ ಇರಲಿಲ್ಲ. ಕೇವಲ ಮಾನವ ಧರ್ಮ ಮಾತ್ರ ಇತ್ತು. ಎಲ್ಲರದು ಒಂದೇ, ಅದು ಮಾನವಧರ್ಮ. ಕಲಿಯುಗದ ಪ್ರಭಾವ ಹೆಚ್ಚುತ್ತಾ ಹೋದಂತೆ ನಮ್ಮಲ್ಲಿ ಮತ ಬೇಧಗಳು ಹೆಚ್ಚಾಗುತ್ತಾ ಹೋಯಿತು. ಕುಲಗುರುಗಳು ಶಾಸ್ತ್ರಗಳಲ್ಲಿ ಬರೆದಿರುವ ಸತ್ಯವನ್ನು ಮುಚ್ಚಿಟ್ಟಿದ್ದ ಕಾರಣ ಹೀಗೆ ಆಗುತ್ತಿದೆ. ಈ ಕುಲಗುರುಗಳ ಸ್ವಾರ್ಥ ಅಥವಾ ಮೇಲ್ತೋರಿಸುವಿಕೆ ಇರಬಹುದು. ಇದರಿಂದ ಒಂದಾದ ಮಾನವ ಧರ್ಮ ನಾಲ್ಕು ಧರ್ಮ ಹಾಗೂ ಅನೇಕ ಸಂಪ್ರದಾಯಗಳಾಗಿ ಮಾರ್ಪಟ್ಟಿದೆ. ಇದರಿಂದಾಗಿ ಪರಸ್ಪರ ಮತಭೇದಗಳು ಆಗುವುದು ಸಹಜವಾಗಿದೆ. ಎಲ್ಲರ ದೇವರು ಪ್ರಭು/ ರಾಮ/ ಅಲ್ಲಾಹ್/ ರಬ್/ ಗಾಡ್/ ಖುದಾ/ ಪರಮೇಶ್ವರ ಒಬ್ಬನೇ ಆಗಿದ್ದಾನೆ. ಈ ಎಲ್ಲವೂ ಭಾಷೆಯ ಬೇರೆ–ಬೇರೆ ಶಬ್ದಗಳಾಗಿವೆ. ಎಲ್ಲರ ದೇವರೂ ಒಬ್ಬನೇ ಎಂದು ಎಲ್ಲರಿಗೂ ಗೊತ್ತು. ಹೀಗಿದ್ದೂ ಬೇರೆ–ಬೇರೆ ಧರ್ಮ–ಸಂಪ್ರದಾಯಗಳು ಏಕೆ?

ಸರ್ವರ ದೇವರು ಒಬ್ಬನೆ ರಬ್/ ಖುದಾ/ ಗಾಡ್/ ರಾಮ/ ಪರಮೇಶ್ವರ ಇದು ಖಂಡಿತ ಸರಿಯಾದ ಮಾತು. ವಾಸ್ತವಿಕವಾಗಿ ಆ ದೇವರ ನಾಮ ಕಬೀರ್ ಆಗಿದೆ. ಅವರು ತಮ್ಮ ಸತ್ಯಲೋಕ/ ಸತ್ಯಧಾಮ/ ಸತ್ಯಖಂಡದಲ್ಲಿ ಮಾನವರಂತೆ ಆಕಾರದಲ್ಲಿ ಇರುತ್ತಾರೆ. ಆದರೆ ಹಿಂದುಗಳು ಹೇಳುತ್ತಾರೆ "ನಮ್ಮ ರಾಮನೇ ದೊಡ್ಡವನೆಂದು, ಮುಸ್ಲಿಮ್‌ರು ಹೇಳುತ್ತಾರೆ ನಮ್ಮ ಅಲ್ಲಾಹನೇ ದೊಡ್ಡವನೆಂದು, ಈಸಾಯಿಗಳು ಹೇಳುತ್ತಾರೆ "ನಮ್ಮ ಯೇಸುವೇ ದೊಡ್ಡವನೆಂದು, ಸಿಖ್‌ರು ಹೇಳುತ್ತಾರೆ ನಮ್ಮ ಗುರುನಾನಕ್ ಸಾಹೇಬ್‌ರೇ ದೊಡ್ಡವರೆಂದು" ಒಬ್ಬ ತಂದೆಯ ನಾಲ್ಕು ಮಕ್ಕಳು ಜಗಳವಾಡುತ್ತಾ ಇವರು "ನಮ್ಮ ಅಪ್ಪ, ನಮ್ಮ ಅಪ್ಪ" ಎನ್ನುವ ಹಾಗೆ ಇಂತಹ ಅರಿವಿಲ್ಲದ ಮಕ್ಕಳ ಹಾಗೆ ನಮ್ಮ ಸ್ಥಿತಿಯೂ ಆಗಿದೆ.

ಕೋಯಿ ಕಹೆ ಹಮಾರಾ ರಾಮ್ ಬಡಾ ಹೈ, ಕೋಯಿ ಕಹೆ ಖುದಾಯಿ ರೇ ।
ಕೋಯಿ ಕಹೆ ಹಮಾರಾ ಈಸಾಮಸಿಹ ಬಡಾ, ಯೆ ಬಾಟಾ ರಹೆ ಲಗಾಯಿ ರೇ ॥

ನಮ್ಮೆಲ್ಲ ಧಾರ್ಮಿಕ ಗ್ರಂಥಗಳಲ್ಲಿ ಆ ಒಬ್ಬ ದೇವರು/ ಪ್ರಭು/ ರಾಮ/ ಅಲ್ಲಾಹ್/ ರಬ್/ ಗಾಡ್/ ಖುದಾ/ ಹೆಸರು ಕಬೀರ್ ಪರಮೇಶ್ವರ ಎಂದು ಬರೆದು ಹಾಡಿ ಹೊಗಳಿದ್ದಾರೆ. ಅವರು ಸತ್ಯಲೋಕದಲ್ಲಿ ಮಾನವನಂತೆ ಆಕಾರದಲ್ಲಿ ಇದ್ದಾರೆ.

ವೇದ, ಗೀತೆ, ಕುರಾನ್ ಮತ್ತು ಗುರು ಗ್ರಂಥ ಸಾಹೇಬ್ ಎಲ್ಲವೂ ಪರಸ್ಪರ ಸಂಬಂಧಿಸಿವೆ. ಎಲ್ಲದರ ತತ್ವಸಾರವೂ ಹೊಂದಿಕೆಯಾಗುತ್ತದೆ. ಯಜುರ್ವೇದದ ಅಧ್ಯಾಯ 5ರ 32ನೇ ಶ್ಲೋಕದಲ್ಲಿ, ಸಾಮವೇದದ ಸಂ. 1400, 822ನೇ ಶ್ಲೋಕದಲ್ಲಿ, ಅಥರ್ವ ವೇದ ಕಾಂಡ 4ರಲ್ಲಿನ ಅನುವಾಕ 1ರ ಶ್ಲೋಕ 7ರಲ್ಲಿ, ಋಗ್ವೇದದ ಮಂ.1 ಅ.1 ಸೂಕ್ತಿ 11ರ 4ನೇ ಶ್ಲೋಕದಲ್ಲಿ ಕಬೀರ್ ಎಂದು ಹೆಸರನ್ನು ಬರೆದು ಹೇಳಿದ್ದಾರೆ ಇವರೆ "ಪೂರ್ಣ ಬ್ರಹ್ಮ ಕಬೀರರು" ಅವರು ಸತ್ಯಲೋಕದಲ್ಲಿ

ಸಶರೀರ ಮಾನವನಂತೆ ಇದ್ದಾರೆ. ಗೀತೆ ಸಹ ಸತ್ಯಪುರುಷ ಕಬೀರರನ್ನು ಪೂರ್ಣಬ್ರಹ್ಮ ಎಂದು ಸೂಚಿಸುತ್ತದೆ. ಗೀತೆಯ 15ನೇ ಅಧ್ಯಾಯದ 16, 17ನೇ ಶ್ಲೋಕ, ಅಧ್ಯಾಯ 18ರ 46, 62ನೇ ಶ್ಲೋಕ, ಅಧ್ಯಾಯ 8ರ 8 ರಿಂದ 10ನೇ ಶ್ಲೋಕ ಹಾಗೂ 22ನೇ ಶ್ಲೋಕಗಳಲ್ಲಿ ಅಧ್ಯಾಯ 15ರ 1, 2, 4ನೇ ಶ್ಲೋಕಗಳಲ್ಲಿ ಅದೇ ಪೂರ್ಣ ಬ್ರಹ್ಮನ ಕಡೆಗೆ ಸಂಕೇತ ಮಾಡುತ್ತವೆ. ಶ್ರೀ ಗುರು ಗ್ರಂಥ ಸಾಹೇಬದ ಪುಟ 24 ಮತ್ತು ಪುಟ 721ರಲ್ಲಿ ಕಬೀರ್ ಸಾಹೇಬರ ಹೆಸರು ಬರೆದು ಮಹಿಮೆಯನ್ನು ಹಾಡಲಾಗಿದೆ.

ಇದೇ ರೀತಿ ಕುರಾನ್ ಮತ್ತು ಬೈಬಲ್ ಎರಡು ಒಂದೇ ಸಂದೇಶ ಕಬೀರ್ ಅಲ್ಲಾಹನ ಮಹಿಮೆಯನ್ನು ಕೂಗಿ ಅವರ ಶಕ್ತಿಯಿಂದಲೇ ಸೃಷ್ಠಿ ಕಾರ್ಯ ನಡೆಯುತ್ತಿದೆ ಎಂದು ಹೇಳಿವೆ. ಕುರಾನ್ ಶರೀಫ್‌ನಲ್ಲಿ ಸೂರತ್ ಫುರಕಾನಿ 25ನೇ ಆಯತ 52 ರಿಂದ 59 ರಲ್ಲಿ ಕಬೀರನ್, ಖಬೀರಾ, ಕಬೀರು ಮುಂತಾದ ಶಬ್ದಗಳನ್ನು ಬರೆದು ಆ ಒಬ್ಬ ಅಲ್ಲಾ ಕಬೀರರ ಪವಿತ್ರತೆಯನ್ನು ಸೂಚಿಸಿ, ಅವರು 6 ದಿನಗಳಲ್ಲಿ ತಮ್ಮ ವಚನ ಶಕ್ತಿಯಿಂದ ಸೃಷ್ಠಿಯ ರಚನೆ ಮಾಡಿ 7ನೇ ದಿನದಂದು ಸತ್ಯಲೋಕಕ್ಕೆ ಹೋಗಿ ವಿಶ್ರಮಿಸಿದರು. ಆ ಅಲ್ಲಾಹನೇ ಕಬೀರ್. ಇದೇ ರೀತಿ ಬೈಬಲ್‌ನ ಉತ್ಪತ್ತಿ ಗ್ರಂಥದಲ್ಲಿ ಸೃಷ್ಠಿ ರಚನೆಯ ಬಗ್ಗೆ ವಿವರಣೆಯಿದೆ. ಬೈಬಲ್‌ನ ಪ್ರಾರಂಭದಲ್ಲೇ 7 ದಿನಗಳಲ್ಲಿ ರಚನೆಯಾಯಿತೆಂದು 1:20, 2:5ರಲ್ಲಿ ಹೇಳಿದೆ.

ಎಲ್ಲಾ ಸಂತರ ಹಾಗೂ ಗ್ರಂಥಗಳ ಸಾರವೇ ಇದಾಗಿದೆ. "ಪೂರ್ಣಗುರು"ವಿನ ಹತ್ತಿರ ಮೂರು ನಾಮಗಳಿವೆ, ನಾಮವನ್ನು ಕೊಡುವ ಅಧಿಕಾರವೂ ಇದೆ. ಈ ನಾಮದಿಂದ ಜೀವವು ಜನ್ಮ–ಮೃತ್ಯುಗಳ ರೋಗದಿಂದ ಬಿಡುಗಡೆ ಹೊಂದುತ್ತದೆ." ನಮ್ಮ ಉದ್ದೇಶವು ಎಲ್ಲ ಜೀವಿಗಳನ್ನೂ ಕಾಲ ಬ್ರಹ್ಮನ ಸೆರೆಮನೆಯಿಂದ ಮುಕ್ತಗೊಳಿಸಿ, ನಮ್ಮ ಮೂಲ ದೇವರಾದ ಕವಿರ್ದೇವ ಕಬೀರ್ ಪರಮೇಶ್ವರರ ಸತ್ಯಲೋಕವನ್ನು ಹೊಂದುವುದಾಗಿದೆ. "ಒಂದು ಜೀವವನ್ನು ಕಾಲನ–ಸೆರೆಯಿಂದ ಬಿಡಿಸಿ ಸದ್ಗುರುವಿನಲ್ಲಿಗೆ ಕರೆದುಕೊಂಡು ಹೋಗಿ ಸತ್ಯ–ಉಪದೇಶ ಕೊಡಿಸುವುದರಿಂದ ಕೋಟಿ ಹಸು–ಕುರಿಗಳನ್ನು ಕಟುಕನಿಂದ ಪಾರು ಮಾಡಿದಷ್ಟು ಪುಣ್ಯ ಬರುವುದು." ಏಕೆಂದರೆ ಈ ಮಾನವ ಶರೀರ ಧರಿಸಿರುವ ಪ್ರಾಣಿಯು, ಸದ್ಗುರುವಿನಿಂದ ಉಪದೇಶ ಪಡೆಯದೆ, ತಪ್ಪು ಮಾರ್ಗದ ಉಪದೇಶ ಪಡೆದು, ಶಾಸ್ತ್ರ ವಿರುದ್ಧ ಮಾರ್ಗದಲ್ಲಿ ನಡೆದು, 84 ಲಕ್ಷ ಯೋನಿಗಳಲ್ಲಿ ಹುಟ್ಟಿ ಪುನಃ ಪುನಃ, ಕಷ್ಟಪಡಬೇಕಾಗುವುದು. ಸದ್ಗುರುವಿನಿಂದ ಜ್ಞಾನ ಮಾರ್ಗವನ್ನು ಅರಿತು ಯಾವ ಜೀವವು ಕಬೀರ್ ಪರಮೇಶ್ವರನ ಶರಣು ಬರುವುದೋ, ಆ ಜೀವಕ್ಕೆ ಸತ್ಯಲೋಕದಲ್ಲಿ ನೆಲೆ ಸಿಗುವುದು. ವಾಸ್ತವಿಕ ಪರಮ ಶಾಂತಿ ಲಭ್ಯವಾಗುತ್ತದೆ.

ಇಂದಿನ ಗುರುಗಳು ಹೆಚ್ಚು–ಹೆಚ್ಚು ಶಿಷ್ಯರನ್ನು ಮಾಡಿಕೊಂಡು, ತಮ್ಮ ಯೋಗ್ಯತೆಯನ್ನು ಪ್ರಮಾಣಿತಗೊಳಿಸುತ್ತಾರೆ ಅಂದರೆ ಪ್ರತಿಯೊಬ್ಬರು 4 ಕಥೆಗಳನ್ನು ಕಲಿತು ನಾನು ನಾಮೋಪದೇಶ ಕೊಡುವೆ ಕಥೆಯು ಮಾಡುವೆ ಎಂದು ಹೇಳುತ್ತಾ ಈ ಮುಗ್ಧ ಆತ್ಮಗಳನ್ನು ಶಾಸ್ತ್ರ ವಿರೋಧವಾದ ಮಾರ್ಗದಲ್ಲಿ ನಡೆಯಿಸಿ ಕಾಲನ ಸುಳಿಯಲ್ಲಿ ಸಿಲುಕಿಸುತ್ತಾರೆ. ನಿಶ್ಚಯವಾಗಿಯೂ ಇಂತಹ ಜೀವಿಗಳಿಗೆ ನರಕವೇ ಗತಿ. ಇವರನ್ನು ನರಕದಲ್ಲಿ ತಲೆ ಕೆಳಗಾಗಿ ನೇತು ಹಾಕಲಾಗುವುದು. ಈ ಮಾತನ್ನು ಶಾಸ್ತ್ರಗಳಲ್ಲಿ ಹೇಳಲಾಗಿದೆ. (ಭಗವದ್ಗೀತೆ, ವೇದ ಹಾಗೂ ಸಕಲ ಗ್ರಂಥಗಳಲ್ಲಿ) ಈ ಹೇಳಿಕೆಯನ್ನು ದೃಢಗೊಳಿಸಲು ಒಂದು ಸಂಕ್ಷಿಪ್ತ ಕಥೆಯನ್ನು ಹೇಳುತ್ತೇನೆ.

ಒಂದು ಸಮಯದ ಮಾತು ರಾಜಾ ಪರೀಕ್ಷಿತನಿಗೆ ಹಾವು ಕಚ್ಚಿ 7 ದಿನಗಳ ನಂತರ ಅವನ ಮೃತ್ಯುವಾಗುವುದೆಂದು ತಿಳಿದ ಮೇಲೆ ಎಲ್ಲರು ವಿಚಾರಿಸಿದರು ರಾಜನಿಗೆ 7 ದಿನಗಳವರೆಗೆ ಭಾಗವತ ಸುಧಾಸಾಗರದ ಕಥೆ ಕೇಳಿಸಿ, ಅವನ ಮೋಹ ಇಲ್ಲಿಂದ ಸರಿಸಿ ಪ್ರಭುನಲ್ಲಿ ಹಚ್ಚಬೇಕು ಏಕೆಂದರೆ

ಮನುಷ್ಯನು ಸಾಯುವ ಕಾಲದಲ್ಲಿ, ಯಾವ ರೀತಿ ಭಾವಿಸುವನೊ, ಅದೇ ರೀತಿಯ ಸದ್ಗತಿ ದೊರೆಯುವುದು. ಎಲ್ಲರೂ ಅತೀ ಉತ್ತಮ ಎಂದರು. ಆದರೆ ಈಗ ಕಥೆ ಯಾರು ಹೇಳಬೇಕು? ಅದಕ್ಕಾಗಿ ಭಾಗವತದ ಕಥೆ ಹೇಳಲು ಸದ್ಗುರುವನ್ನು ಅರಸತೊಡಗಿದರು. ಅಲ್ಲಿದ್ದ ಮಹರ್ಷಿಗಳು ಹಾಗೂ ಸಾಕ್ಷಾತ್ ಭಾಗವತದ ಕಥೆಯನ್ನು ರಚಿಸಿದ ಮಹರ್ಷಿ ವೇದವ್ಯಾಸರೂ ಸಹ ತಮ್ಮಲ್ಲಿ ಅಂತಹ ಸಾಮರ್ಥ್ಯವಿಲ್ಲವೆಂದು ಹೇಳಿಬಿಟ್ಟರು. ಅವರೆಲ್ಲರಿಗೂ ಅವರವರ ಸಾಮರ್ಥ್ಯದ ಅರಿವು ಇತ್ತು. ಅದಕ್ಕಾಗಿ ಒಂದು ಜೀವವನ್ನು ನಾಶಮಾಡಿ ಪಾಪದ ಭಾಗಿ ಆಗಲು ಯಾರೂ ಒಪ್ಪಲಿಲ್ಲ. ಏಕೆಂದರೆ 7 ದಿನಗಳ ನಂತರ ಪರಿಣಾಮ ತಿಳಿಯುತಿತ್ತು. ಇದಕ್ಕಾಗಿ ಒಬ್ಬರು ಸಹ 7 ದಿನ ಕಥೆ ಕೇಳಿಸುವ ಧೈರ್ಯ ಮಾಡಲಿಲ್ಲ. ಆದ್ದರಿಂದ ಸ್ವರ್ಗದಿಂದ ಸುಖದೇವರನ್ನು ಭಾಗವತದ ಕಥೆ ಹೇಳಲು ಕರೆಯಿಸಲಾಯಿತು. ಅವರಿಂದ ಭಾಗವತದ ಕಥೆ ಕೇಳುತ್ತಾ ರಾಜ ಪರೀಕ್ಷಿತನಿಗೆ ಈ ಧರೆಯ ಮೋಹ ದೂರವಾಗಿ ಸ್ವರ್ಗ ಪ್ರಾಪ್ತಿಯಾಯಿತು. ಸ್ವರ್ಗದಲ್ಲಿ ಸುಖವನ್ನು ಅನುಭವಿಸಿದ ನಂತರ, ನರಕಕ್ಕೂ ಹೋಗಬೇಕು ಪುನಃ 84 ಲಕ್ಷ ಯೋನಿಗಳಲ್ಲಿ ಹುಟ್ಟಿ ಬರಬೇಕು. ಇದೇ ಇಲ್ಲಿನ ಸ್ಥಿರವಾದ ನಿಯಮ. ಈ ಮೂರು ಲೋಕದ ಸುಖ ಪ್ರಾಪ್ತಿಗೂ ಸಹ ಪೂರ್ಣ ಗುರು ದೊರೆಯದೆ ಸಾಧ್ಯವಿಲ್ಲ.

ಸರಿಯಾಗಿ ಇದೇ ರೀತಿ ಯಾವುದೋ ಒಂದು ಸ್ಥಾನಕ್ಕೆ ಪ್ರಧಾನಮಂತ್ರಿ ಬರುತ್ತಿದ್ದಾರೆ ಎಂದು ತಿಳಿದಾಗ, ಮೂರು–ನಾಲ್ಕು ಜನ ಉತ್ತಮ ಭಾಷಣಕಾರರನ್ನೂ, ಗಾಯನ–ವಾದ್ಯದವರನ್ನೂ ಕರೆಸುತ್ತಾರೆ. ಅವರ ಮಧುರಮಾತು ಅವರ ಮಧುರ ಗಾಯನ–ಕಲೆಯಿಂದ ಜನ ಸಮೂಹವೂ ಪ್ರಭಾವಿತಗೊಳ್ಳುತ್ತದೆ. ಆದರೆ ಅವರು ಆಡುವ ಮಾತುಗಳಲ್ಲಿ ಒಂದು ಸಹ ಮಾಡಲು ಸಾಧ್ಯವಿಲ್ಲ. ಆದರೆ ಪ್ರಧಾನಮಂತ್ರಿ ಬಂದ ಮೇಲೆ ಅವರು ಕೆಲವೇ–ಕೆಲವು ಮಾತುಗಳಲ್ಲಿ ಆಜ್ಞೆ ಮಾಡುತ್ತಾರೆ. ಉದಾ : ಮೈಸೂರಿನಲ್ಲಿ ಇಂಟರ್‌ನ್ಯಾಶನಲ್ ಕಾಲೇಜು ತೆರೆಯಿರಿ. ಬೆಂಗಳೂರಿನಲ್ಲಿ ಇಂಟರ್‌ನ್ಯಾಶನಲ್ ಯೂನಿವರ್ಸಿಟಿ ತೆರೆಯಿರಿ ಇತ್ಯಾದಿ–ಇತ್ಯಾದಿ. ಅವರು ಹೇಳಿದ ಮರು ದಿನವೇ ಕಾರ್ಯ ಪ್ರಾರಂಭವಾಗುತ್ತದೆ. ಏಕೆಂದರೆ ಪ್ರಧಾನಿಯವರ ಮಾತಿನಲ್ಲಿ ಶಕ್ತಿ ಮತ್ತು ಸಾಮರ್ಥ್ಯವಿದೆ. ಇಂತಹ ಮಾತುಗಳನ್ನು ಸಾಮಾನ್ಯರು ಹೇಳಿದರೆ ಮೂರ್ಖರೆನಿಸುತ್ತಾರೆ. ಏಕೆಂದರೆ ಸಾಮಾನ್ಯರ ವಚನದಲ್ಲಿ ಶಕ್ತಿ–ಸಾಮರ್ಥ್ಯವಿಲ್ಲ. ಆದರೆ ಪ್ರಧಾನ ಮಂತ್ರಿಗೆ ಇದು ಸಾಧಾರಣವಾದ ವಿಚಾರ.

ಈ ಸತ್ವವನ್ನು ಅರಿಯಲು ಕೆಳಗಿನ ವಾಣಿಯನ್ನು ಅವಶ್ಯವಾಗಿ ಓದಿರಿ ಮತ್ತು ಗಹನವಾಗಿ ಯೋಚಿಸಿ, ಅತಿ ಶೀಘ್ರದಲ್ಲಿ ಗುರುಮಂತ್ರ ಪ್ರಾಪ್ತಿ ಮಾಡಿಕೊಳ್ಳಿ.

ಕಬೀರ್, ಪಂಡಿತ್ ಔರ್ ಮಶಾಲಚೀ, ದೋನೋಂ ಸೂಝೇಂ ನಾಹಿಂ ।
ಔರೋಂ ನೆ ಕರ್‍ಯೆ ಚಾಂದನಾ, ಆಪ್ ಅಂಧೇರೇ ಮಾಹಿಂ ॥

ಕಬೀರ್, ಕರಣೀ ತಜ್ ಕಥನೀ ಕಥೈ, ಅಜ್ಞಾನೀ ದಿನ್ ರಾತ್ ।
ಕುಕರ್ ಜ್ಯೋಂ ಭೌಂಕತ್ ಫಿರೈಂ, ಸುನೀ ಸುನಾಯಿ ಬಾತ್ ॥

ಗರೀಬ್, ಬೀಜಕ್ ಕೀ ಬಾತಾ ಕಹೈಂ, ಬೀಜಕ್ ನಾಹೀ ಹಾಥ್ ॥
ಪೃಥ್ವೀ ಡೋಬನ್ ಉತರೆ, ಕಹೈ–ಕಹೈ ಮೀಠೀ ಬಾತ್ ॥

ಗರೀಬ್, ಬೀಜಕ್ ಕೀ ಬಾತಾ ಕಹೈ, ಬೀಜಕ್ ನಾಹಿಂ ಪಾಸ್ ।
ಔರೋಂ ಕೊ ಪ್ರಮೋಧ್ ಹೀಂ, ಆಪನ್ ಚಲೇ ನಿರಾಶ್ ॥

ಗರೀಬ್, ಕಥನೀ ಕೇ ಶೂರೇ ಘನೇ, ಕಥೈ ಅಟಂಬರ್ ಜ್ಞಾನ್ ।
ಬಾಹರ್ ಜ್ವಾಬ್ ಆವೈ ನಹೀಂ, ಲೀದ್ ಕರೈಂ ಮೈದಾನ್ ॥

ಭಗವಂತನ ಕಥೆ ಹೇಳುವುದು ಹಾಗೂ ನಾಮ ಉಪದೇಶ ಕೊಡುವುದು ಮಕ್ಕಳ ಆಟವಲ್ಲ. ಕೈಯಲ್ಲಿ ಪುಸ್ತಕ ಹಿಡಿದು, ನಾನು ಕಥೆ ಹೇಳುವೆ, ರಾಮಾಯಣ ಕಥೆ ಮಾಡುವೆ, ಗೀತಾ–ಪ್ರವಚನ ಮಾಡುವೆ, ಗುರುಗ್ರಂಥ ಸಾಹೇಬದ ಪಾಠ ಮಾಡುವೆ, ಅಂದರೆ ಸತ್ಸಂಗ ಮಾಡುವೆ, ಅಲ್ಲದೆ ನಾಮೋಪದೇಶವನ್ನೂ ಕೊಡುವೆನು, ಇತ್ಯಾದಿಯಾಗಿ ಹೇಳುವುದು ಸರಿಯಲ್ಲ. ಪೂರ್ಣ ಸಂತ ಮಾತ್ರ ಕಥೆ ಹೇಳುವ ಹಾಗೂ ನಾಮೋಪದೇಶ ನೀಡುವ, ಅಧಿಕಾರಿಯಾಗಿರುತ್ತಾನೆ. ಅವನು ಆ ಕಥೆಯನ್ನು ಮಂಗಳಕರವಾಗಿ ಮುಕ್ತಾಯ ಮಾಡಲು ಸಮರ್ಥನಾಗಿರುತ್ತಾನೆ.

ಏಕೆಂದರೆ ಪೂರ್ಣ ಸಂತನ ಶಬ್ದಗಳಲ್ಲಿ ಶಕ್ತಿ ಇರುತ್ತದೆ. ಹೇಗೆ ಸುಖದೇವರ ಶಬ್ದಗಳಲ್ಲಿತ್ತೋ ಹಾಗೆ. ಉದಾಹರಣೆಗೆ ಯಾರೋ ಒಬ್ಬರು ಸತ್ಸಂಗ ಮಾಡುತ್ತಿದ್ದರು. ಅವರು ಮಾವಿನ ಹಣ್ಣಿನ ಮಹಿಮೆಯ ಬಗ್ಗೆ ಹೇಳುತ್ತಿದ್ದರು. “ಮಾವಿನ ಹಣ್ಣು ಬಹಳ ಸಿಹಿಯಾಗಿರುತ್ತದೆ. ಅದನ್ನು ಫಲಗಳ ರಾಜನೆನ್ನುತ್ತಾರೆ. ಅದರ ಬಣ್ಣ ಹಳದಿಯಾಗಿರುತ್ತದೆ. ಇತ್ಯಾದಿ”. ಯಾರೋ ಒಬ್ಬ ನನಗೆ ಮಾವಿನ ಹಣ್ಣು ತಂದು ಕೊಡಿ ಎಂದನು. ನನ್ನ ಬಳಿ ಮಾವಿನ ಹಣ್ಣು ಇಲ್ಲವೆಂದು ಸತ್ಸಂಗ ಮಾಡುವವನು ಹೇಳಿದನು. ಎಲ್ಲಿ ಸಿಗುವುದು ಎಂದು ಕೇಳಿದಾಗ?, “ನನಗೆ ಆ ವಿಚಾರವೂ ಗೊತ್ತಿಲ್ಲ ಮತ್ತು ಮಾವಿನ ಹಣ್ಣು ನಿರಾಕಾರ ಎಂದು ಹೇಳಿ, ಅದು ನೋಡಲು ಸಾಧ್ಯವಾಗದೂ” ಎಂದನು. ಆಗ ಪ್ರಶ್ನೆ ಮಾಡಿದವ ಹೇಳಿದ “ಅರೇ ಮೂರ್ಖ ! ನಿನ್ನ ಬಳಿ ಮಾವಿನ ಹಣ್ಣು ಇಲ್ಲ. ದೊರೆಯುವ ಸ್ಥಳವೂ ಗೊತ್ತಿಲ್ಲ. ಜೊತೆಯಲ್ಲಿ ಅದು ನಿರಾಕಾರವೆಂದು ವ್ಯರ್ಥವಾಗಿ ಏಕೆ ಹೇಳುತ್ತಾ ತಿರುಗುತ್ತಿರುವೆ? ಇದರ ಅಭಿಪ್ರಾಯವಿಷ್ಟೆ, ತತ್ವಜ್ಞಾನವನ್ನು ಸ್ವಯಂ ತಿಳಿಯದವನು, ಕಥೆ ಹೇಳುವ ಅಧಿಕಾರಿಯಾಗಲಾರ. ಹಾಗೂ ಅಂಥವನಿಂದ ಕಥೆ ಕೇಳಿದ ಸರ್ವರೂ ನರಕಕ್ಕೆ ಹೋಗುತ್ತಾರೆ.

ಒಂದು ವೇಳೆ ಯಾವುದೇ ವ್ಯಕ್ತಿ ತನಗೆ ತಾನೇ ಗುರು ಎಂದು. ತಿಳಿದು ಶಿಷ್ಯರನ್ನು ಮಾಡಿಕೊಂಡರೆ, ಅವನು ತನ್ನ ತಲೆಯ ಮೇಲೆ ತಾನೆ ಭಾರವನ್ನು ಹೊತ್ತುಕೊಂಡತೆಯೇ ಸರಿ. ಏಕೆಂದರೆ ಪರಮೇಶ್ವರನ ನಿಯಮವೇ ಇದಾಗಿದೆ ಎಲ್ಲಿಯವರೆಗೆ ಶಿಷ್ಯನು ಈ ಸಂಸಾರ ಬಂಧನದಿಂದ ಪಾರಾಗುವುದಿಲ್ಲವೋ, ಅಲ್ಲಿಯವರೆಗೆ ಆ ನಕಲಿ ಗುರು ಪದೇ–ಪದೇ ಹುಟ್ಟಿ ಬರಬೇಕಾಗುತ್ತದೆ. ಪೂರ್ಣಜ್ಞಾನಿಯಾದ ಸದ್ಗುರು, ಅಪೂರ್ಣ ಶ್ರದ್ಧಾವಂತ ಶಿಷ್ಯರಿಂದ ಬಿಡುಗಡೆಯಾಗಲು ಕೆಲವು ಲೀಲೆಗಳನ್ನು ಮಾಡುತ್ತಾರೆ. ಅದರಿಂದ ಅಪೂರ್ಣ ಶ್ರದ್ಧಾವಂತ ಶಿಷ್ಯರು, ಗುರುವನ್ನು ಕಡೆಗಾಣಿಸುತ್ತಾರೆ. ಹೇಗೆಂದರೆ ಕಬೀರ್ ಪರಮೇಶ್ವರರು ಕಾಶಿಯಲ್ಲಿ ಪ್ರಕಟಗೊಂಡಾಗ ಅವರನ್ನು 64 ಲಕ್ಷ ಶಿಷ್ಯರು ಗುರುವಾಗಿ ಸ್ವೀಕರಿಸಿದರು. ಅವರನ್ನೆಲ್ಲಾ ಪರೀಕ್ಷಿಸಲು ಕಬೀರ್ ಪರಮೇಶ್ವರರು ಒಬ್ಬ ಹೆಸರಾಂತ ವೇಶ್ಯೆಗೆ ತತ್ವಜ್ಞಾನದ ಬೋಧನೆ ಮಾಡಲು ಅವಳ ಮನೆಗೆ ಹೋಗತೊಡಗಿದರು. ಇದನ್ನು ಕಂಡು ಹಾಗೂ ಕೇಳಿದ ಶಷ್ಯರಿಗೆ ಗುರುಗಳ ಬಗ್ಗೆ ಬೇಸರ ಉಂಟಾಯಿತು. ಎಲ್ಲರಿಗೂ ಗುರುವಿನಲ್ಲಿದ್ದ ವಿಶ್ವಾಸ ದೂರವಾಯಿತು. ಕೇವಲ ಇಬ್ಬರನ್ನು ಬಿಟ್ಟು ಉಳಿದ ಎಲ್ಲರೂ ಗುರುವಿನಿಂದ ಬೇರೆಯಾದರು. ಸದ್ಗುರು ಗರೀಬ್‌ದಾಸರ ವಾಣಿಯಲ್ಲಿ ಇದಕ್ಕೆ ಪ್ರಮಾಣವಿದೆ.

ಗರೀಬ್, ಚಂಡಾಲೀ ಕೆ ಚೌಕ್ ಮೆ, ಸತ್‌ಗುರು ಬೈಠೇ ಜಾಯ್ ।
ಚೌಸಟ್ ಲಾಖ್ ಗಾರತ್ ಗಯೆ, ದೋ ರಹೇ ಸತ್‌ಗುರು ಪಾಯ್ ॥

ಭಡವಾ–ಭಡವಾ ಸಬ್ ಕಹೈ, ಜಾನತ್ ನಾಹೀ ಖೋಜ್ ।
ದಾಸ್ ಗರೀಬ್ ಕಬೀರ್ ಕರಮ್ ಸೆ, ಬಾಂಟತ್ ಸಿರ್ ಕಾ ಬೋಝ್ ॥

**ನಮ್ಮ ಪ್ರಾರ್ಥನೆ ಇಷ್ಟೆ, ವಿಚಾರ ಮಾಡಿ, ವ್ಯವಹಾರ ಮಾಡಿರಿ.**

**ಸಾಮವೇದದ 822ನೇ ಶ್ಲೋಕದಲ್ಲಿ ಹೇಳಿರುವಂತೆ, ಜೀವಿಗಳ ಮುಕ್ತಿ ಮೂರು ನಾಮಗಳಿಂದ**

ಆಗುತ್ತದೆ. ಮೊದಲನೆಯದು (ಓಂ) ಎರಡನೆಯದು ಸತ್ಯನಾಮ್ (ತತ್) ಮೂರನೆಯದು ಸಾರನಾಮ್ (ಸತ್) "ಓಂ ತತ್ ಸತ್" ಈ ನಾಮವನ್ನು ಗೀತೆಯಲ್ಲೂ ಹೇಳಲಾಗಿದೆ. ಶ್ರೀ ಗುರು ಗ್ರಂಥ ಸಾಹೇಬದಲ್ಲಿಯೂ ಕೂಡ ಇದರ ಸಂಕೇತವಿದೆ. ಸತ್ಯನಾಮ್-ಸತ್ಯನಾಮ್ ಎಂದು ಜಪ ಮಾಡುವುದಲ್ಲ. ಇದು ನಿಜ ನಾಮದ ಕಡೆ ಸಂಕೇತಿಸುತ್ತಿದೆ ಅದೇ ಸತ್ಯನಾಮ. ಇದೇ ರೀತಿ ಇನ್ನೊಂದು ಸಾರನಾಮ ಇದೆ. ಕೇವಲ 'ಓಂ' ನಾಮದಿಂದ ಏನೂ ಕಾರ್ಯವಾಗದು. ಈ ಮೂರು ನಾಮಗಳನ್ನು ಹಾಗೂ ಅದರ ಉಪದೇಶ ನೀಡುವ ಅಪ್ಪಣೆ, ಕಬೀರ್ ಪರಮೇಶ್ವರರ ಆಜ್ಞೆಯಾನುಸಾರ ನನಗೆ ನನ್ನ ಪೂಜ್ಯ ಗುರುಗಳಾದ ಸ್ವಾಮಿ ರಾಮದೇವಾನಂದ ಮಹಾರಾಜ್ ರವರಿಂದ ಅನುಗ್ರಹವಾಗಿ ದೊರೆತಿದೆ. ಮೊದಲು ಸತ್ಸಂಗದಲ್ಲಿ ಸೇರಿ, ಜ್ಞಾನವನ್ನು ಕೇಳಿ ಅರಿಯಿರಿ, ಸೇವೆ ಮಾಡಿರಿ. ಇದರಿಂದ ನಿಮ್ಮ ಭಕ್ತಿ ರೂಪದ ಹೊಲವು ಸಿದ್ಧವಾಗುವುದು.

ಕಬೀರ್. ಮಾನುಷ ಜನ್ಮ ಪಾಯ ಕರ್, ನಹೀ ರಟೈ ಹರಿನಾಮ್ ।
ಜೈಸೇ ಕುಂಆ ಜಲ್ ಬಿನಾ, ಖುದ್‌ವಾಯಾ ಕಿಸ್ ಕಾಮ್ ॥
ಕಬೀರ್, ಏಕ್ ಹರೀ ಕೆ ನಾಮ್ ಬಿನಾ, ಯೆ ರಾಜಾ ಋಷಭ್ ಹೋ ।
ಮಾಟೀ ಢೋವೈ ಕುಹ್ಮಾರ ಕೀ, ಘಾಸ್ ನ ಡಾಲೆಕೋ ॥

ಇದಾದ ನಂತರ ನಿಮ್ಮ ಸಿದ್ಧವಾದ ಹೊಲದಲ್ಲಿ ಬೀಜ ಬಿತ್ತಬೇಕಾಗುತ್ತದೆ. ಶಾಸ್ತ್ರಗಳ (ಕಬೀರ್ ಸಾಹೇಬರ ವಾಣಿ, ವೇದ, ಗೀತೆ, ಪುರಾಣ, ಕುರಾನ್, ಧರ್ಮ್‌ದಾಸ್ ಸಾಹೇಬ್ ಮುಂತಾದ ಸಂತರ ವಾಣಿಯ) ಅಧ್ಯಯನದಿಂದ ಮುಕ್ತಿ ದೊರೆಯದು. ಈ ಎಲ್ಲಾ ಶಾಸ್ತ್ರಗಳ ಸಾರ ಒಂದೇ ಆಗಿದೆ. ಪೂರ್ಣ ಮುಕ್ತಿ ಪಡೆಯಲು, ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರರ ಪ್ರತಿನಿಧಿ ಸಂತರಿಂದ (ಅವರಿಗೆ ಅವರ ಗುರುಗಳ ಮೂಲಕ ನಾಮೋಪದೇಶ ಕೊಡುವ ಆದೇಶ ದೊರೆತಿರಬೇಕು) ನಾಮೋಪದೇಶವನ್ನು ಪಡೆದುಕೊಂಡು ಆತ್ಮ ಕಲ್ಯಾಣ ಮಾಡಿಕೊಳ್ಳಬೇಕು. ಒಂದು ವೇಳೆ ನಾಮೋಪದೇಶ ಪಡೆಯದಿದ್ದರೆ.

ನಾಮ್ ಬಿನಾ ಸೂನಾ ನಗರ್, ಪಡಯಾ ಸಕಲ್ ಮೇ ಶೋರ್ ।
ಲೂಟ್ ನ ಲೂಟಿ ಬಂದಗೀ, ಹೋ ಗಯಾ ಹಂಸಾ ಭೋರ್ ॥

ಅದಲೀ ಆರತೀ ಅದಲ್ ಅಜೂನೀ, ನಾಮ್ ಬಿನಾ ಹೈ ಕಾಯಾ ಸೂನೀ ।
ಝೂಠೀ ಕಾಯಾ ಖಾಲ್ ಲುಹಾರಾ, ಇಂಗಲಾ-ಪಿಂಗಲಾ ಸುಷಮನ್ ದ್ವಾರಾ॥

ಕೃತಘ್ನೀ ಭೂಲೆ ನರ್ ಲೋಯಿ, ಜಾ ಘಟ ನಿಶ್ಚಯ್ ನಾಮ್ ನ ಹೊಯಿ ।
ಸೋ ನರ್ ಕೀಟ ಪತಂಗ ಭುಜಂಗಾ, ಚೌರಾಸೀ ಮೆ ಧರ್ ಹೈ ಅಂಗಾ ॥

ಬೀಜವನ್ನು ಬಿತ್ತದೆ ಹೋದರೆ, ಹೊಲವನ್ನು ಹಸನುಗೊಳಿಸಿದ್ದು ವ್ಯರ್ಥವಾಗುತ್ತದೆ. ಇದರ ಅಭಿಪ್ರಾಯವೆಂದರೆ, ನಿಮಗೆ ಅವಶ್ಯಕವಾದ ಜ್ಞಾನವು, ಇವುಗಳಿಂದ ಖಂಡಿತ ಸಿಗುತ್ತದೆ. ಆದರೆ ಪೂರ್ಣ ಗುರುವಿನ ಮೂಲಕ ನಾಮೋಪದೇಶವನ್ನು ಪಡೆದು ಬೀಜ ಬಿತ್ತುವುದು ಅವಶ್ಯಕವಾಗಿರುತ್ತದೆ. ನಾಮ ಜಪವು ಯಾವುದಿರಬೇಕೆಂದರೆ, ಯಾವ ನಾಮ ಜಪವನ್ನು ಗುರುನಾನಕ್ ಸಾಹೇಬರು, ಗರೀಬ್‌ದಾಸರು, ಧರ್ಮ್‌ದಾಸ್ ಸಾಹೇಬರು ಮುಂತಾದವರು ಜಪಿಸಿರುವರೋ ಅದೇ ಆಗಿರಬೇಕು. ಇದಲ್ಲದೆ ಅನ್ಯ ನಾಮ ಜಪದಿಂದ ಮುಕ್ತಿ ದೊರೆಯದು.

ಇದಕ್ಕಾಗಿ ನೀವೆಲ್ಲರೂ ನಾಮೋಪದೇಶವನ್ನು ಪಡೆದುಕೊಳ್ಳಿರಿ. ಭಕ್ತಿರೂಪದ ಧನವನ್ನು ಸಂಗ್ರಹಿಸಲು ಆರಂಭಿಸಿರಿ. ಬೇರೆ ಎಲ್ಲರಿಗೂ ಹೇಳಬೇಕು. ಎಷ್ಟು ಬೇಗ ಆಗುತ್ತದೋ ಅಷ್ಟು

**ಬೇಗನೆ ಹೇಳಿರಿ ಮತ್ತು ನಾಮೋಪದೇಶ ಪಡೆದು ಭಕ್ತಿ ಮಾಡಿ. ಯಾರಿಗೆ ಗೊತ್ತು ಈ ಶರೀರದ ಅಂತ್ಯವು ಯಾವಾಗ ಆಗುತ್ತದೋ? ಗುರುನಾನಕದೇವ ರವರು ಸಹ ಹೇಳುತ್ತಾರೆ.**

ನಾ ಜಾನೇ ಯೇ ಕಾಲ ಕೀ ಕರ್ ಡಾರ್‍ಯೈ, ಕಿಸ್ ವಿಧಿ ಢಲ್ ಜಾ ಪಾಸಾ ವೆ ।
ಜಿನ್ಹಾದೆ ಸಿರ್ ತೆ ಮೌತ್ ಖುಡಗದೀ, ಉನ್ಹಾನೂಂ ಕೇಡಾ ಹಾಂಸಾ ವೇ ॥

**ಕಬೀರ್ ಸಾಹೇಬರು ಹೇಳುತ್ತಾರೆ :–**

ಕಬೀರ್, ಸ್ವಾಂಸ್–ಸ್ವಾಂಸ್ ಮೆಂ ನಾಮ ಜಪೋ, ವ್ಯರ್ಥ್ಯಾ ಸ್ವಾಂಸ್
ಮತ್ ಖೋಯೆ ನ ಜಾನೆ ಇಸ್ ಸ್ವಾಂಸ್ ಕಾ, ಆವನ್ ಹೋ ಕೆ ನಾ ಹೋಯೆ ॥
ಸತ್‌ಗುರು ಸೋಯಿ ಜೋ ಸಾರನಾಮ್ ದೃಢಾವ್ಯೆ,
ಔರ್ ಗುರು ಕೋಯಿ ಕಾಮ ನಆವ್ಯೆ ।
"ಸಾರನಾಮ ಬಿನ್ ಪುರುಷ (ಭಗವಾನ್) ದ್ರೋಹಿ ॥"

**ಅರ್ಥಾತ್ ಯಾವ ಗುರುವು ಸಾರನಾಮ ಹಾಗೂ ಸಾರಶಬ್ದವನ್ನು ಉಪದೇಶಿಸುವುದಿಲ್ಲವೋರ ಅಥವಾ ಆ ಗುರುವಿಗೆ ತನ್ನ ಗುರುಗಳಿಂದ ನಾಮೋಪದೇಶ ಕೊಡುವ ಆಜ್ಞೆ ಇಲ್ಲವೋ ಅಂದರೆ ಶಾಸ್ತ್ರಗಳ ಅಧ್ಯಯನದಿಂದ ಯಾರಾದರೂ ಸ್ವೇಚ್ಚಾಚಾರಿ ಗುರು ನಾಮೋಪದೇಶ ಮಾಡಿದ್ದರೆ, ಆ ಗುರು ಮತ್ತು ಶಿಷ್ಯರನ್ನು ನರಕಕ್ಕೆ ಹಾಕಲಾಗುವುದು ಅಂತಹ ಗುರು ದೇವರ ಶತ್ರು ಆಗಿರುತ್ತಾನೆ. ಅವನನ್ನು ಭಗವಂತನ ಸಭೆಯಲ್ಲಿ ತಲೆಕೆಳಗಾಗಿ ನೇತುಹಾಕಲಾಗುವುದು.**

**ಈಗ ನಕಲಿ ಗುರುಗಳು ಒಂದು ತಪ್ಪಾದ ಧಾರಣೆಯನ್ನು ಹರಡಿಸಿದ್ದಾರೆ. ಅದೇನೆಂದರೆ, ಒಮ್ಮೆ ಒಬ್ಬ ಗುರುವನ್ನು ಸ್ವೀಕರಿಸಿದ ಮೇಲೆ ಬೇರೆ ಗುರುವಿನತ್ತ ಹೋಗಬಾರದು ಎಂದು ಸ್ವಲ್ಪ ವಿಚಾರಮಾಡಿ ನೋಡಿದರೆ, ಗುರುವು ನಮ್ಮ ಹುಟ್ಟು–ಸಾವುಗಳ ರೋಗವನ್ನು ನಿವಾರಿಸುವ ವೈದ್ಯರೇ ಆಗಿರುತ್ತಾರೆ. ಒಬ್ಬ ವೈದ್ಯನ ಚಿಕಿತ್ಸೆಯಿಂದ ರೋಗ ಗುಣವಾಗದಿದ್ದರೆ, ಬೇರೆ ಒಳ್ಳೆಯ ವೈದ್ಯರ ಬಳಿ ಹೋಗಿ ನಮ್ಮ ಪ್ರಾಣಾಂತಕವಾದ ರೋಗಕ್ಕೆ ಚಿಕಿತ್ಸೆ ಪಡೆದು ಗುಣ ಹೊಂದಬೇಕು. ಧರ್ಮ್‌ದಾಸ್ ರವರ ಮೊದಲ ಗುರು ಶ್ರೀ ರೂಪದಾಸರು ಆಗಿದ್ದರು. ಆದರೆ ಇವರಿಂದ ಪೂರ್ಣ ಮುಕ್ತಿ ಮಾರ್ಗದ ಜ್ಞಾನ ದೊರೆಯದು ಎಂದು ಅರಿತ ಮೇಲೆ ತಕ್ಷಣ ಅವರನ್ನು ಬಿಟ್ಟು ಪೂರ್ಣ ಬ್ರಹ್ಮ, ಸತ್ಯಪುರುಷ, ಕಬೀರ್ ಪರಮೇಶ್ವರರನ್ನು ತಮ್ಮ ಗುರುವನ್ನಾಗಿ ಸ್ವಿಕರಿಸಿಕೊಂಡರು. ಹಾಗೂ ಪೂರ್ಣ ಮೋಕ್ಷ ಹೊಂದಿ, ಸತ್ಯಲೋಕದಲ್ಲಿ ಸ್ಥಾನ ಪಡೆದರು. ಇದೇ ರೀತಿ ಅಪೂರ್ಣ ಜ್ಞಾನದ ಗುರುವನ್ನು ತ್ಯಜಿಸಬೇಕು.**

"ಝೂಠೇ ಗುರು ಕೆ ಪಕ್ಷ ಕೊ, ತಜತ್ ನ ಕೀಜ್ಯೈ ವಾರಿ"

**(ಗುರು ಹಾಗೂ ನಾಮದ ಮಹಿಮೆಯ ವಾಣಿ)**

ಗರೀಬ್, ಬಿನ ಉಪದೇಶ್ ಅಚಂಭ್ ಹೈ, ಕ್ಯೋ ಜೀವಿತ್ ಹೈ ಪ್ರಾಣ್।
ಬಿನ ಭಕ್ತಿ ಕಹಾ ಠೌರ್ ಹೈ, ನರನಾಹೀ ಪಾಷಾಣ್ ॥ 1 ॥
ಗರೀಬ್, ಏಕ್ ಹರೀ ಕೆ ನಾಮ್ ಬಿನಾ, ನಾರಿ ಕುತಿಯಾ ಹೋ।
ಗಲೀ–ಗಲೀ ಬೌಂಕತ್ ಫಿರ್ಯೆ, ಟೂಕ್ ನಾ ಡಾಲ್ಯೆ ಕೊ ॥ 2 ॥
ಗರೀಬ್, ಬೀಬೀ ಪಡದೆ ರಹ್ಯೆ ಥೀ, ಡ್ಯೋಡೀ ಲಗತೀ ಬಾರ್ ।
ಗಾತ್ ಉಘಾಡೇ ಫಿರತೀ ಹೈ, ಬನ್ ಕುತಿಯಾ ಬಾಜಾರ್ ॥ 3 ॥

ಗರೀಬ್, ನಕ ಬೇಸರ್ ನಕ್ ಸೆ ಬನೀ, ಪಹರತ್ ಹಾರ್ ಹಮೇಲ್ ॥
ಸುಂದರೀ ಸೆ ಸುನಹೀ (ಕುತ್ತಿಯಾ) ಬನೀ, ಸುನಿ ಸಾಹೇಬ್ ಕೆ ಖೇಲ್ ॥ 4 ॥

ಕಬೀರ್, ಹರೀಕೆ ನಾಮ ಬಿನಾ, ರಾಜಾ ಋಷಭ್ ಹೋಯೆ ।
ಮಾಟೀ ಲದೈ ಕುಮ್ಹಾರ ಕೈ, ಘಾಸ್ ನ ಡಾಲೇ ಕೋಯೆ ॥5॥

ಕಬೀರ್, ರಾಮಕೃಷ್ಣ ಸೆ ಕೌನ್ ಬಡಾ, ಉನ್ಹೋ ಭೀ ಗುರು ಕೀನ್ಹ್ ।
ತೀನ್ ಲೋಕ್ ಕೆ ವೆ ಧನೀ, ಗುರು ಆಗೆ ಆಧೀನ್ ॥ 6 ॥

ಕಬೀರ್, ಗರ್ಭ ಯೋಗೇಶ್ವರ್ ಗುರುಬಿನಾ, ಲಾಗಾ ಹರೀ ಕೀ ಸೇವ್ ।
ಕಹೈ ಕಬೀರ್ ಸ್ವರ್ಗಸೆ, ಫೆರ್ ದಿಯಾ ಸುಖದೇವ್ ॥ 7 ॥

ಕಬೀರ್, ರಾಜಾ ಜನಕ್‌ಸೆ ನಾಮ್‌ಲೆ, ಕಿನ್ಹೀ ಹರೀ ಕೀ ಸೇವ್ (ಪೂಜಾ)
ಕಹೈ ಕಬೀರ್ ವೈಕುಂಠ ಮೆ, ಉಲ್ಟಮಿಲೆ ಸುಖದೇವ್ ॥ 8 ॥

ಕಬೀರ್, ಸತ್‌ಗುರುಕೆ ಉಪದೇಶ್ ಕಾ, ಲಾಯಾ ಏಕ್ ವಿಚಾರ್ ।
ಜೈ ಸತ್‌ಗುರು ಮಿಲತೆ ನಹೀ, ಜಾತಾ ನರಕ್ ದ್ವಾರ್ ॥ 9 ॥

ಕಬೀರ್, ನರಕ್ ದ್ವಾರ್ ಮೆ ದೂತ್ ಸಬ್, ಕರತೆ ಖೈಂಚಾ ತಾನ್।
ಉನತೆ ಕಬಹು ನಾ ಛುಟತಾ, ಫಿರ್–ಫಿರತಾ ಚಾರೋ ಖಾನ್ ॥ 10 ॥

ಕಬೀರ್, ಚಾರ್ ಖಾನೀ ಮೇ ಭ್ರಮತಾ, ಕಬಹು ನಾ ಲಗತಾ ಪಾರ್ ।
ಸೋ ಫೆರಾ ಸಬ್ ಮಿಟ್ ಗಯಾ, ಸತ್‌ಗುರು ಕೆ ಉಪಕಾರ್ ॥ 11 ॥

ಕಬೀರ್, ಸಾತ್ ಸಮುಂದ್ರ ಕಿ ಮಸಿ ಕರೂ, ಲೇಖನೀ ಕರು ಬನರಾಯ್ ।
ಧರತೀ ಕಾ ಕಾಗದ್ ಕರೂ, ಗುರು–ಗುಣ ಲಿಖಾ ನಾ ಜಾಯ್ ॥ 12 ॥

ಕಬೀರ್, ಗುರು ಬಡೆ ಗೋವಿಂದ ಸೆ, ಮನ್ ಮೇ ದೇಖ್ ವಿಚಾರ್ ।
ಹರಿ ಸುಮರೆ ಸೋ ರಹ್‌ಗಯೆ, ಗುರು ಭಜೆ ಹುಯೆ ಪಾರ್ ॥ 13 ॥

ಕಬೀರ್, ಗುರು–ಗೋವಿಂದ್ ದೋವೂ ಖಡೆ, ಕಾಕೇ ಲಾಗೂ ಪಾಯ್ ।
ಬಲಿಹಾರೀ ಗುರು ಆಪನೆ, ಜಿನ್ ಗೋವಿಂದ ದಿಯಾ ಮಿಲಾಯ್ ॥ 14 ॥

ಕಬೀರ್, ಹರೀ ಕೆ ರೂಠತಾ, ಗುರು ಕೀ ಶರಣ್ ಮೇ ಜಾಯ್ ।
ಕಬೀರ್ ಗುರು ಜೈ ರೂಠಜಾ, ಹರಿ ನಹೀ ಹೋತ್ ಸಹಾಯ್ ॥ 15 ॥

## "ಯಾವ ರಾಮ ನಾಮವನ್ನು ಜಪಿಸಬೇಕು?".

<u>ಗೀತೆಯ 15ನೇ ಅಧ್ಯಾಯದ 16ನೇ ಶ್ಲೋಕದಲ್ಲಿ</u>

"ದ್ವೌ, ಇಮೌ, ಪುರುಷೌ, ಲೋಕೇ, ಕ್ಷರಃ, ಚ, ಅಕ್ಷರಃ, ಏವ, ಚ, ಕ್ಷರಃ, ಸರ್ವಾಣಿ, ಭೂತಾನಿ, ಕೂಟಸ್ಥಃ, ಅಕ್ಷರಃ, ಉಚ್ಯತೇ ॥"

**ಅನುವಾದ:– ಈ ಪ್ರಪಂಚದಲ್ಲಿ ಎರಡು ಪ್ರಕಾರವಾದ ಭಗವಂತರಿದ್ದಾರೆ. ನಾಶವಾಗುವ ಮತ್ತು ಅವಿನಾಶಿ. ಸಂಪೂರ್ಣ ಭೂತ ಪ್ರಾಣಿಗಳ ಶರೀರವು ನಾಶವಾಗುತ್ತದೆ. ಜೀವಾತ್ಮವು ಅವಿನಾಶಿ ಎಂದು ಹೇಳಲಾಗಿದೆ.**

<u>ಗೀತೆಯ 15ನೇ ಅಧ್ಯಾಯದ 17ನೇ ಶ್ಲೋಕದಲ್ಲಿ :–</u>

ಉತ್ತಮಃ, ಪುರುಷಃ, ತು, ಅನ್ಯಃ, ಪರಮಾತ್ಮಾ, ಇತಿ, ಉದಾಹೃತಃ, ಯಃ, ಲೋಕತ್ರಯಂ, ಆವಿಶ್ಯ, ವಿಭರ್ತಿ, ಅವ್ಯಯಃ, ಈಶ್ವರಃ ॥

**ಅನುವಾದ :– ಉತ್ತಮ ಭಗವಂತನು ಬೇರೆಯೇ ಇದ್ದಾನೆ. ಯಾರು ವಾಸ್ತವದಲ್ಲಿ ಮೂರು ಲೋಕಗಳಲ್ಲಿ ಪ್ರವೇಶಮಾಡಿ, ಎಲ್ಲರ ಧಾರಣೆ ಘೋಷಣೆ ಮಾಡುವನೋ, ಅವನನ್ನು ಅವಿನಾಶೀ ಪರಮೇಶ್ವರ ಪರಮಾತ್ಮಾ ಎಂದು ಈ ರೀತಿ ಹೇಳಲಾಗಿದೆ.**

ಕಬೀರ್, ಅಕ್ಷರ ಪುರುಷ್ ಏಕ್ ಪೇಡ್ ಹೈ, ನಿರಂಜನ್ ವಾಕಿ ಡಾರ್ ।
ತ್ರಿದೇವಾ ( ಬ್ರಹ್ಮಾ, ವಿಷ್ಣು, ಶಿವ ) ಶಾಖಾ ಭಯೆ, ಪಾತ ಭಯಾ ಸಂಸಾರ್॥

ಕಬೀರ್, ತೀನ್ ದೇವ್ ಕೊ ಸಬ್ ಕೋಯಿ ಧ್ಯಾವೈ, ಚೌಥಾ ದೇವ ಕಾ ಮರಮ್ ನ ಪಾವೈ ।
ಚೌಥಾ ಛಾಂಡಿ ಪಂಚಮ್ ಧ್ಯಾವೈ, ಕಹೆ ಕಬೀರ್ ಸೊ ಹಮಾರೆ ಆವೈ ॥

ಕಬೀರ್, ತೀನ್ ಗುಣನ್ ಕೀ ಭಕ್ತಿಮೆ, ಭೂಲಿ ಪರಯೌ ಸಂಸಾರ ।
ಕಹೈ ಕಬೀರ್ ನಿಜ ನಾಮ ಬಿನ್, ಕೈಸೆ ಉತರೈ ಪಾರ್ ॥

ಕಬೀರ್, ಓಂಕಾರ್ ನಾಮ ಬ್ರಹ್ಮ (ಕಾಲ) ಕಾ, ಯಹ ಕರ್ತಾ ಮತಿ ಜಾನಿ ।
ಸಾಂಚಾ ಶಬ್ದ ಕಬೀರ್ ಕಾ, ಪರದಾ ಮಾಹಿ ಪಹಿಚಾನಿ ॥

ಕಬೀರ್, ತೀನ್ ಲೋಕ್ ಸಬ್ ರಾಮ ಜಪತ್ ಹೈ, ಜಾನ ಮುಕ್ತಿ ಕೊ ಧಾಮ ।
ರಾಮಚಂದ್ರ ವಸಿಷ್ಠ ಗುರುಕಿಯಾ, ತಿನ್ ಕಹಿ ಸುನಾಯೋ ನಾಮ ॥

ಕಬೀರ್, ರಾಮಕೃಷ್ಣ ಅವತಾರ ಹೈ, ಇನಕಾ ನಾಹೀ ಸಂಸಾರ್ ।
ಜಿನ್ ಸಾಹಬ್ ಸಂಸಾರ್ ಕಿಯಾ, ಸೊ ಕಿನಹು ನ ಜನಮ್ಯಾ ನಾರ್ ॥

ಕಬೀರ್, ಚಾರ್ ಭುಜಾ ಕೆ ಭಜನ್ ಮೆ, ಭೂಲೀ ಪರೆ ಸಬ್ ಸಂತ ।
ಕಬೀರಾ ಸುಮಿರೈ ತಾಸು ಕೊ, ಜಾಕೆ ಭುಜಾ ಅನಂತ್ ॥

ಕಬೀರ್, ವಷಿಷ್ಠ ಮುನಿ ಸೆ ತತ್ವೇತಾ ಜ್ಞಾನೀ, ಶೋಧ್ ಕರ್ ಲಗ್ನ ಧರೈ ।
ಸೀತಾ ಹರಣ್ ಮರಣ್ ದಶರಥ ಕೊ, ಬನ್ ಬನ್ ರಾಮ ಫಿರೈ ॥

ಕಬೀರ್, ಸಮುದ್ರ ಪಾಟಿ ಲಂಕಾ ಗಯೆ, ಸೀತಾ ಕೊ ಭರತಾರ್ ।
ತಾಹಿ ಅಗಸ್ತಮುನಿ ಪೀಯ ಗಯೊ, ಇನಮೆ ಕೊ ಕರತಾರ್ ॥

ಕಬೀರ್, ಗೋವರ್ಧನ್ ಕೃಷ್ಣಜೀ ಉಠಾಯಾ, ದ್ರೋಣಗಿರಿ ಹನುಮಂತ ।
ಶೇಷ ನಾಗ್ ಸಬ ಸೃಷ್ಠಿ ಉಠಾಯಾ, ಇನಮೆ ಕೊ ಭಗವಂತ್ ॥

ಗರೀಬ್, ದುರ್ವಾಸಾ ಕೋಪೆ ತಹಾ, ಸಮಝುನ ಆಈ ನೀಚ್ ।
ಛಪ್ಪನ್ ಕೋಟಿ ಯಾದವ್ ಕಟೆ, ಮಚೀ ರುಧಿರ ಕೀ ಕೀಚ್ ॥

ಕಬೀರ್, ಕಾಟೆ ಬಂಧನ್ ವಿಪತೀ ಮೆ, ಕಠಿನ ಕಿಯಾ ಸಂಗ್ರಾಮ್ ।
ಚೀನ್ಹೋ ರೆ ನರ್ ಪ್ರಾಣಿಯಾ, ಗರುಡ ಬಡೋ ಕಿ ರಾಮ್ ॥

ಕಬೀರ್, ಕಹ್ ಕಬೀರ್ ಚಿತ್ ಚೇತಹೂ, ಶಬ್ದ ಕರೋ ನಿರವಾರ್ ।
ಶ್ರೀ ರಾಮಚಂದ್ರ ಕೊ ಕರ್ತಾ ಕಹತ್ ಹೈ, ಭೂಲೀ ಪರಯೋ ಸಂಸಾರ್ ॥

ಕಬೀರ್, ಜಿನ ರಾಮ ಕೃಷ್ಣ ನಿರಂಜನ್ ಕಿಯಾ, ಸೋ ತೊ ಕರತಾ ನ್ಯಾರ್ ।
ಅಂಧಾ ಜ್ಞಾನ್ ನ ಬೂಝುಯಿ, ಕಹೈ ಕಬೀರ್ ವಿಚಾರ್ ॥

ಕಬೀರ್, ತೀನ್ ಗುಣನ್(ಬ್ರಹ್ಮಾ, ವಿಷ್ಣು, ಶಿವ) ಕೀ ಭಕ್ತಿಮೆ, ಭೂಲ್ ಪಡಯೋ ಸಂಸಾರ್ ।
ಕಹೈ ಕಬೀರ್ ನಿಜ ನಾಮ ಬಿನಾ, ಕೈಸೆ ಉತರೋ ಪಾರ್ ॥

**॥ ಶಬ್ದ ॥ (ಸಂತ ರಾಮ್‌ಪಾಲ್ ದಾಸ್ ಮಹಾರಾಜ್ ರವರಿಂದ ರಚನೆಯಾಗಿರುವುದು)**

ಯುದ್ಧ್ ಜೀತ್ ಕರ್ ಪಾಂಡವ್, ಖುಶಿ ಹುಯೆ ಅಪಾರ್ ।
ಇಂದ್ರಪ್ರಸ್ಥ ಕೀ ಗದ್ದೀ ಪರ್, ಯಧಿಷ್ಠಿರ ಕೀ ಸರಕಾರ್ ॥ 1 ॥

ಏಕ್ ದಿನ್ ಅರ್ಜುನ್ ಪೂಛತಾ, ಸುನ್ ಕೃಷ್ಣ ಭಗವಾನ್ ।
ಏಕ್ ಬಾರ್ ಫಿರ್ ಸುನಾ ದಿಯೋ, ವೋ ನಿರ್ಮಲ ಗೀತಾ ಜ್ಞಾನ್ ॥ 2 ॥

ಘಮಾಶಾನ್ ಯುದ್ಧ ಕೆ ಕಾರಣ್, ಭೂಲ ಪಡೀ ಹೈ ಮೋಹೆ ।
ಜ್ಯೋ ಕಾ ತ್ಯೋ ಕಹನಾ ಭಗವನ್, ತನಿಕ್ ನ ಅಂತರ್ ಹೋಯೆ ॥ 3 ॥

ಋಷಿ-ಮುನಿ ಔರ್ ದೇವತಾ, ಸಬ್ ಕೋ ರಹೆ ತುಮ್ ಖಾಯ್ ।
ಇನ ಕೊ ಭೀ ನಹೀ ಛೋಡಾ ಆಪನೆ, ರಹೆ ತುಮ್ಹಾರಾ ಹೀ ಗುಣ್ ಗಾಯ್ ॥4 ॥

ಕೃಷ್ಣ ಬೋಲೆ ಅರ್ಜುನ್ ಸೆ, ಯಹ್ ಗಲತೀ ಕ್ಯೋ ಕಿನ್ಹ್ ।
ಐಸೆ ನಿರ್ಮಲ ಜ್ಞಾನ್ ಕೊ, ಭೂಲ್ ಗಯಾ ಬುದ್ಧಿ ಹೀನ್ ॥ 5 ॥

ಅಬ್ ಮುಝೇ ಭೀ ಕುಛ್ ಯಾದ್ ನಹೀ, ಭೂಲ್ ಪಡೀ ನೀದಾನ್ ।
ಜ್ಯೋಂ ಕಾ ತ್ಯೋಂ ಉಸ್ ಗೀತಾ ಕಾ, ಮೈ ನಹಿ ಕರ್ ಸಕತಾ ಗುಣಗಾನ್ ॥ 6 ॥

ಸ್ವಯಂ ಶ್ರೀ ಕೃಷ್ಣ ಕೊ ಯಾದ್ ನಹೀ, ಔರ್ ಅರ್ಜುನ್ ಕೊ ಧಮಕಾವೆ ।
ಬುದ್ಧಿ ಕಾಲ್ ಕೆ ಹಾಥ್ ಹೈ, ಚಾಹೆ ತ್ರಿಲೋಕೀ ನಾಥ್ ಕಹಲಾವೆ ॥ 7 ॥

ಜ್ಞಾನ ಹೀನ ಪ್ರಚಾರಕಾ, ಜ್ಞಾನ್ ಕಥೆ ದಿನ ರಾತ್ ।
ಜೋ ಸರ್ವ ಕೊ ಖಾನೆ ವಾಲಾ, ಕಹೆ ಉಸೀ ಕೀ ಬಾತ್ ॥ 8 ॥

ಸಬ್ ಕಹೆ ಭಗವಾನ ಕೃಪಾಲು ಹೈ, ಕೃಪಾ ಕರೆ ದಯಾಲ್ ।
ಜಿಸಕೀ ಸಬ್ ಪೂಜಾ ಕರೆ, ವಹ್ ಸ್ವಯಂ ಕಹೆ ಮೈ ಕಾಲ್ ॥ 9 ॥

ಮಾರೈ-ಖಾವೈ ಸಬಕೊ, ವಹ್ ಕೈಸಾ ಕೃಪಾಲ್ ।
ಕುತ್ತೆ-ಗಧೆ, ಸುಅರ್ ಬನಾವೈ ಹೈ, ಫಿರ್ ಭೀ ದೀನ ದಯಾಲ್ ॥ 10 ॥

ಬಾಯಿಬಲ್-ವೇದ ಕುರಾನ್ ಹೈ, ಜೈಸೆ ಚಾಂದ ಪ್ರಕಾಶ್ ।
ಸೂರಜ್ ಜ್ಞಾನ ಕಬೀರ್ ಕಾ, ಕರೈ ತಿಮಿರ್ ಕಾ ನಾಶ್ ॥ 11 ॥

ರಾಮ್‌ಪಾಲ್ ಸಾಚೇ ಕಹೈ, ಕರೋ ವಿವೇಕ ವಿಚಾರ್ ।
ಸತ್‌ನಾಮ್ ವ ಸಾರನಾಮ್, ಯಹೀ ಮಂತ್ರ್ ಹೈ ಸಾರ್ ॥ 12 ॥

ಕಬೀರ್ ಹಮಾರಾ ರಾಮ್ ಹೈ, ವೊ ಹೈ ದೀನ ದಯಾಲ್ ।
ಸಂಕಟ ಮೋಚನ್ ಕಷ್ಟ ಹರಣ, ಗುಣ ಗಾವೈ ರಾಮ್‌ಪಾಲ್ ॥ 13 ॥

**॥ ಶಬ್ದ ॥ ರಾಮ್‌ಪಾಲ್ ದಾಸ್ ಮಹಾರಾಜ್ ರವರು ರಚಿಸಿರುವುದು**

ಬ್ರಹ್ಮಾ, ವಿಷ್ಣು, ಶಿವ ಹೈ ತೀನ್ ಲೋಕ್ ಪ್ರಧಾನ್ ।
ಅಷ್ಟಂಗಿ ಇನಕೀ ಮಾತಾ ಹೈ, ಔರ್ ಪಿತಾ ಕಾಲ ಭಗವಾನ್ ॥ 1 ॥

ಏಕ ಲಾಖ್ ಕೊ ಕಾಲ್, ನಿತ್ ಖಾವ್ಯೆ ಸೀನಾ ತಾಣ್ ।
ಬ್ರಹ್ಮಾ ಬನಾವ್ಯೆ, ವಿಷ್ಣು ಪಾಲ್ಯೆ, ಶಿವ ಕರ ದೇ ಕಲ್ಯಾಣ್ ॥ 2 ॥

ಅರ್ಜುನ್ ಡರ್ ಕೇ ಪೂಚತಾ ಹೈ, ಯಹ್ ಕೌನ್ ರೂಪ್ ಭಗವಾನ್ ।
ಕಹೈ ನಿರಂಜನ್ ಮೈ ಕಾಲ್ ಹೂಂ, ಸಬ್ ಕೊ ಆಯಾ ಖಾನ್ ॥ 3 ॥

ಬ್ರಹ್ಮನಾಮ್ ಇಸೀ ಕಾ ಹೈ, ವೇದ ಕರೆ ಗುಣಗಾನ್ ।
ಜನ್ಮ ಮರಣ ಚೌರಾಸಿ, ಯಹ್ ಇಸಕಾ ಸಂವಿಧಾನ್ ॥ 4 ॥

ಚಾರ್ ರಾಮ್ ಕಿ ಭಕ್ತಿ ಮೆ, ಲಗ್ ರಹಾ ಸಂಸಾರ್ ।
ಪಾಂಚವೆ ರಾಮ್ ಕಾ ಜ್ಞಾನ ನಹೀ, ಜೋ ಪಾರ್ ಉತಾರನ ಹಾರ್ ॥ 5 ॥

ಬ್ರಹ್ಮಾ-ವಿಷ್ಣು, ಶಿವ ತೀನೋ ಗುಣ ಹೈ, ದೂಸರಾ ಪ್ರಕೃತಿ ಕಾ ಜಾಲ್ ।
ಲಾಖ್ ಜೀವ ನಿತ ಭಕ್ಷಣ ಕರೆ, ರಾಮ ತೀಸರಾ ಕಾಲ್ ॥ 6 ॥

ಅಕ್ಷರ ಪುರುಷ ಹೈ ರಾಮ್ ಚೌಥಾ, ಜೈಸೆ ಚಂದ್ರಮಾ ಜಾನ್ ।
ಪಾಂಚವಾ ರಾಮ್ ಕಬೀರ್ ಹೈ, ಜೈಸೆ ಉದಯ ಹುವಾ ಭಾನ್ ॥ 7 ॥

ರಾಮ್‌ದೇವಾನಂದ್ ಗುರುಜೀ, ಕರ್ ಗಯೆ ನಜರ್ ನಿಹಾಲ್ ।
ಸತ್‌ನಾಮ್ ಕಾ ದಿಯಾ ಖಜಾನಾ, ಬರತೈ ರಾಮ್‌ಪಾಲ್ ॥ 8 ॥

## "ನಾಮ ದೀಕ್ಷೆ ಪಡೆಯುವವರಿಗಾಗಿ ಅವಶ್ಯಕ ತಿಳುವಳಿಕೆ"

**1. ಪೂರ್ಣ ಗುರುವಿನ ಗುರುತು :- ಈ ಕಲಿಯುಗದಲ್ಲಿ ಪೂರ್ಣ ಗುರು ಯಾರೆಂದು ತಿಳಿಯುವುದು. ಭಕ್ತ ಸಮಾಜಕ್ಕೆ ಒಂದು ಜಟಿಲ ಪ್ರಶ್ನೆಯೇ ಆಗಿದೆ. ಇದಕ್ಕೆ ಒಂದು ಸರಳ ಉತ್ತರವಿದೆ. ಯಾರು ಶಾಸ್ತ್ರಗಳಿಗೆ ಅನುಗುಣವಾಗಿ ಭಕ್ತಿ ಮಾರ್ಗದಲ್ಲಿದ್ದಾರೋ, ಹಾಗೂ ತಮ್ಮ ಅನುಯಾಯಿಗಳಾದ ಶಿಷ್ಯರಿಗೆ ಅಂತಹದೇ ಮಾರ್ಗದರ್ಶನ ಮಾಡುವರೋ, ಅವರೇ ಪೂರ್ಣ ಸಂತರಾಗಿದ್ದಾರೆ. ಆ ಭಕ್ತಿ ಮಾರ್ಗವು ಕಬೀರ್ ಪರಮೇಶ್ವರರ ವಾಣಿ, ಗುರು ನಾನಕ್‌ರ ವಾಣಿ. ಸಂತ ಗರೀಬ್‌ದಾಸರ ವಾಣಿ ಹಾಗೂ ಸಂತ ಧರ್ಮ್‌ದಾಸರ ವಾಣಿ, ವೇದ, ಭಗವದ್ಗೀತೆ, ಪುರಾಣ, ಕುರಾನ್, ಬೈಬಲ್ ಮೊದಲಾದವುಗಳಲ್ಲಿ ಹೇಳಿರುವಂತಹ ಶಾಸ್ತ್ರ ಮಾರ್ಗವಾಗಿದೆ. ಯಾರು ಇಂತಹ ಶಾಸ್ತ್ರಗಳಿಗೆ ಅನುಗುಣವಾಗಿ ತಾವೂ ನಡೆದು ಭಕ್ತರನ್ನೂ ಅದೇ ಮಾರ್ಗದಲ್ಲಿ ಹೋಗಲು ಮಾರ್ಗದರ್ಶನ ಮಾಡುತ್ತಾ ಕರೆದೊಯ್ಯುತ್ತಾರೋ, ಅವರೇ ಪೂರ್ಣ ಸಂತರು. ಹಾಗಿಲ್ಲವಾದರೆ, ಅವರು ಭಕ್ತ ಸಮಾಜಕ್ಕೆ ಮಾಡುವ ಘೋರ ಅನ್ಯಾಯ ಮತ್ತು ಶತ್ರು ಸಹ. ಇಂತಹವರು ಅಮೂಲ್ಯವಾದ ಮಾನವ ಜನ್ಮದ ಜೊತೆ ಆಟ ಆಡುತ್ತಿದ್ದಾರೆ. ಇಂತಹ ಗುರು ಅಥವಾ ಸಂತನಿಗೆ ಭಗವಂತನ ಸಭೆಯಲ್ಲಿ ಘೋರ ನರಕ ದೊರೆತು. ಅವರನ್ನು ತಲೆ ಕೆಳಗಾಗಿ ನೇತು ಹಾಕುವರು. ಉದಾಹರಣೆಗೆ ಒಬ್ಬ ಶಿಕ್ಷಕನು ತನ್ನ ವಿದ್ಯಾರ್ಥಿಗಳಿಗೆ ಪಠ್ಯಕ್ರಮವನ್ನು ಹೊರತುಪಡಿಸಿ ಪಾಠ ಮಾಡಿದಂತೆ, ಅಂತಹ ಶಿಕ್ಷಕ ವಿದ್ಯಾರ್ಥಿಗಳ ಪಾಲಿಗೆ ಶತ್ರುವೇ ಆಗುತ್ತಾನೆ.**

ಗೀತೆಯ 7ನೇ ಅಧ್ಯಾಯದ 15ನೇ ಶ್ಲೋಕ.

ನ, ಮಾಮ್, ದುಷ್ಕೃತಿನಃ, ಮೂಢಾಃ, ಪ್ರಪದ್ಯಂತೆ, ನರಾಧಮಾಃ,
ಮಾಯಯಾ, ಅಪಹೃತಜ್ಞಾನಾಃ ಆಸುರಮ್, ಭಾವಮ್ ಆಶ್ರೀತಾಃ ॥

**ಅನುವಾದ :- ಮಾಯೆಯಿಂದ ಯಾರ ಜ್ಞಾನವು ಕಳೆದು ಹೋಗಿದೆಯೋ, ಇಂತಹ**

**ಅಸುರೀ ಸ್ವಭಾವವನ್ನು ಹೊಂದಿರುವವರು, ಮನುಷ್ಯರಲ್ಲಿ ನೀಚರಾದವರು, ದೂಷಿತವಾದ ಕರ್ಮ ಮಾಡುವವರು, ಮೂರ್ಖರು, ನನ್ನನ್ನು ಭಜಿಸುವುದಿಲ್ಲ. ಅಂದರೆ ಅವರು ಮೂರು ಗುಣಗಳ (ರಜೋಗುಣ-ಬ್ರಹ್ಮಾ, ಸತೊಗುಣ-ವಿಷ್ಣು, ತಮೋಗುಣ-ಶಿವ) ಸಾಧನೆಯನ್ನೇ ಮಾಡುತ್ತಿರುವವರು.**

**ಯಜುರ್ವೇದದ 40ನೇ ಅಧ್ಯಾಯದ 10ನೇ ಶ್ಲೋಕದಲ್ಲಿ (ಸಂತ ರಾಮ್‌ಪಾಲ್ ದಾಸ್ ಮಹಾರಾಜ್ ರವರು ಇದಕ್ಕೆ ಭಾಷ್ಯೆ ಬರೆದಿರುವರು)**

ಅನ್ಯದೇವಾಹುಃ ಸಂಭವಾದನ್ಯದಾಹುರಸಂಭವಾತ್,
ಇತಿ ಶುಶ್ರುಮ್ ಧೀರಾಣಾಂ ಯೆ ನಸ್ತದ್ವಿಚಚಕ್ಷಿರೆ ॥ 10 ॥

**ಅನುವಾದ :- ಪರಮಾತ್ಮನನ್ನು ಸಾಮಾನ್ಯವಾಗಿ ನಿರಾಕಾರ ಹಾಗು ಜನ್ಮತಾಳದವನು ಎಂದೂ ಸಹ ಹೇಳುತ್ತಾರೆ. ಕೆಲವರು ಆಕಾರಗಳಲ್ಲಿ ಅಂದರೆ ಅವತಾರಗಳ ರೂಪದಲ್ಲಿ ಜನ್ಮ ತಾಳುವನೆಂದು ಹೇಳುತ್ತಾರೆ. ಯಾರು ಪೂರ್ಣ ಜ್ಞಾನಿಯೋ ಅವರು ಈ ರೀತಿ ಸರಿಯಾಗಿ ಪರಮಾತ್ಮನ ಸಮರೂಪ ಅಂದರೆ ಯಥಾರ್ಥ ಜ್ಞಾನವನ್ನು ಭಿನ್ನ-ಭಿನ್ನ ರೂಪದಿಂದ ಪ್ರತ್ಯಕ್ಷ ಜ್ಞಾನವನ್ನು ಉತ್ತಮವಾಗಿ ತಿಳಿಸಿಕೊಡುತ್ತಾರೆ.**

<u>ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕ</u>.

ತತ್, ವಿದ್ಧಿ, ಪ್ರಣಿಪಾತೇನ, ಪರಿಪ್ರಶ್ನೇನ, ಸೇವಯಾ,
ಉಪದೇಕ್ಷ್ಯಂತಿ, ತೆ, ಜ್ಞಾನಮ್ ಜ್ಞಾನಿನಃ ತತ್ವದರ್ಶಿನಃ ॥

**ಅನುವಾದ :- ಆ ಜ್ಞಾನವನ್ನು ನೀನು ತತ್ವದರ್ಶಿಗಳಾದ ಜ್ಞಾನಿಗಳ ಬಳಿಗೆ ಹೋಗಿ ತಿಳಿದುಕೋ. ಅವರಿಗೆ ಶ್ರದ್ಧೆಯಿಂದ ಸಾಷ್ಟಾಂಗ ಪ್ರಣಾಮ ಮಾಡುವುದರಿಂದ ಅವರ ಸೇವೆ ಮಾಡುವುದರಿಂದ, ಮತ್ತು ಕಪಟವನ್ನು ಬಿಟ್ಟು ಸರಳತಾ ಪೂರ್ವಕವಾಗಿ ಪ್ರಶ್ನೆ ಮಾಡುವುದರಿಂದ, ಪರಮಾತ್ಮ ತತ್ವವನ್ನು ಚೆನ್ನಾಗಿ ತಿಳಿದಿರುವ, ಆ ಜ್ಞಾನಿ ಮಹಾತ್ಮರು ನಿನಗೆ ತತ್ವಜ್ಞಾನದ ಉಪದೇಶವನ್ನು ಮಾಡುವರು.**

2. <u>ನಶೆ ಬರಿಸುವಂತಹ ವಸ್ತುಗಳ ಸೇವನೆಯ ನಿಷೇಧ</u> :-

**ಮೊಟ್ಟೆ, ಮಾಂಸ, ಸಾರಾಯಿ, ಬಿಯರ್, ಬೀಡಿ, ಸಿಗರೇಟು, ಗುಟಖಾ, ಹುಕ್ಕಾ, ತಂಬಾಕು, ಮತ್ತು ಅಫೀಮು, ಗಾಂಜಾ ಇತರೆ ಬೇರೆ ನಶೆ ಬರಿಸುವ ವಸ್ತುಗಳ ಸೆವನೆಯಿಂದ ದೂರವಿರಬೇಕು. ಅಲ್ಲದೆ ಬೇರೆ ಯಾರಿಗೂ ಆ ವಸ್ತುಗಳನ್ನು ತಂದೂ ಸಹ ಕೊಡಬಾರದು. ಈ ಎಲ್ಲಾ ನಶೀಲೀ ವಸ್ತುಗಳನ್ನು ಬಹಳ ಕೆಟ್ಟದ್ದೆಂದು ತಿಳಿಸಿದ್ದಾರೆ.**

**ಗರೀಬ್‌ದಾಸ್ ರವರು ತಮ್ಮ ವಾಣಿಯಲ್ಲಿ ಹೇಳಿದ್ದಾರೆ.**

ಸುರಾಪಾನ ಮಧ್ಯ ಮಾಂಸಾಹಾರಿ, ಗಮನ್ ಕರ್ರೈ ಭೋಗ್ರೈ ಪರನಾರಿ ।
ಸತ್ತರ್ ಜನ್ಮ ಕಟತ್ ಹೈ ಶೀಶಂ, ಸಾಕ್ಷೀ ಸಾಹೀಬ್ ಹೈ ಜಗದೀಶಮ್ ॥
ಪರ ದ್ವಾರಾ ಸ್ತ್ರೀ ಕಾ ಖೋಲ್ರೈ, ಸತ್ತರ್ ಜನ್ಮ್ ಅಂಧಾ ಹೋವ್ರೈ ಡೋಲ್ರೈ ।
ಮದಿರಾ ಪೀವ್ರೈ ಕಡವಾ ಪಾನೀ, ಸತ್ತರ್ ಜನ್ಮ್ ಶ್ವಾನ ಕೆ ಜಾನೀ ॥
ಗರೀಬ್, ಹುಕ್ಕಾ ಹರದಮ್ ಪಿವತೆ, ಲಾಲ್ ಮಿಲಾವ್ರೈ ಧೂರ್ ।
ಇಸಮೆ ಸಂಶಯ ಹೈನಹೀ, ಜನ್ಮ ಪಿಛಲೆ ಸೂರ್ ॥ 1 ॥
ಗರೀಬ್, ಸೋ ನಾರೀ ಜಾರಿ ಕರ್ರೈ. ಸುರಾಪಾನ್ ಸೌ ಬಾರ್ ।
ಏಕ್ ಚಿಲಮ್ ಹುಕ್ಕಾ ಭರ್ರೈ, ಡುಬ್ರೈ ಕಾಲೀ ಧಾರ್ ॥ 2 ॥

ಗರೀಬ್, ಸೂರ ಗವು ಕು ಖಾತ ಹೈ. ಭಕ್ತಿ ಬಿಹುನೆ ರಾಡ್ ।
ಭಾಂಗ ತಂಬಾಖೂ ಖಾ ಗಯೆ, ಸೋ ಚಾಬತ್ ಹೈ ಹಾಡ್ ॥ 3 ॥

ಗರೀಬ್, ಭಾಂಗ ತಂಬಾಖೂ ಪೀವ ಹೀ, ಸುರಾ ಪಾನ ಸೇ ಹೇತ್ ।
ಗೌಸ್ತ ಮಟ್ಟೀ ಖಾಯ ಕರ್, ಜಂಗಲಿ ಬನೆ ಪ್ರೇತ್ ॥ 4 ॥

ಗರೀಬ್, ಪಾನ ತಂಬಾಖು ಚಾಬ್ ಹೀ, ನಾಸ್ ನಾಕ್ ಮೆ ದೇತ್ ।
ಸೊ ತೊ ಇರಾನ್ಯೆ ಗಯೆ, ಜ್ಯೂ ಭಡಭೂಜೆ ಕಾ ರೇತ್ ॥ 5 ॥

ಗರೀಬ್, ಭಾಂಗ ತಂಬಾಖು ಪೀವ ಹೀ, ಗೋಸ್ತ ಗಲಾ ಕಬಾಬ್ ।
ಮೋರ ಮೃಗ ಕೂ ಬಖತ್ ಹೈ, ದೇಂಗೇ ಕಹಾ ಜವಾಬ್ ॥ 6 ॥

3. <u>ತೀರ್ಥ ಸ್ಥಾನಗಳಿಗೆ ಹೋಗುವುದು ನಿಷೇಧ</u> :–

ಯಾವುದೇ ರೀತಿಯ ವ್ರತಗಳನ್ನು ಮಾಡಬಾರದು. ಯಾವುದೇ ತೀರ್ಥ ಯಾತ್ರೆಗಳನ್ನು ಮಾಡಬಾರದು. ಗಂಗಾ ಸ್ನಾನ ಮಾಡುವುದಾಗಲಿ, ಯಾವುದೇ ಧಾರ್ಮಿಕ ಸ್ಥಳಗಳಿಗೆ ಸ್ನಾನ ಅಥವಾ ದರ್ಶನಕ್ಕಾಗಿ ಹೋಗುವುದು ಕೂಡ ಮಾಡಬಾರದು. ಯಾವುದೇ ಮಂದಿರದಲ್ಲಿ ಅಥವಾ ಇಷ್ಟ ಧಾಮಗಳಲ್ಲಿ ಭಗವಂತನಿರುವನೆಂದು, ಪೂಜೆಗಾಗಿ–ಭಕ್ತಿಭಾವದಿಂದ ಹೋಗಬಾರದು. ಭಗವಂತ ಯಾವುದೇ ಪಶುವಲ್ಲ. ಅವನನ್ನು ಪೂಜಾರಿ ಮಂದಿರದಲ್ಲಿ ಬಂಧಿಸಿಟ್ಟಿಲ್ಲ. ಭಗವಂತನು ಪ್ರತಿ ಕಣ–ಕಣದಲ್ಲೂ ವ್ಯಾಪಕವಾಗಿದ್ದಾನೆ. ಈ ಎಲ್ಲಾ ಸಾಧನೆಗಳು ಶಾಸ್ತ್ರಗಳಿಗೆ ವಿರುದ್ಧವಾಗಿವೆ.

ಸ್ವಲ್ಪ ವಿಚಾರ ಮಾಡಿ ನೋಡಿರಿ ಈ ಎಲ್ಲಾ ತೀರ್ಥ ಸ್ಥಳಗಳಲ್ಲಿ (ಜಗನ್ನಾಥ ಮಂದಿರ, ಬದರೀನಾಥ, ಹರಿದ್ವಾರ, ಮಕ್ಕಾ–ಮದೀನಾ, ಅಮರ ನಾಥ, ವೈಷ್ಣೋದೇವಿ, ವೃಂದಾವನ, ಮಥುರಾ, ಬರಸಾನಾ, ಅಯೋಧ್ಯೆಯ ರಾಮಮಂದಿರ, ಕಾಶೀಧಾಮ, ಛುಡಾನಿ ಧಾಮ ಇತ್ಯಾದಿ) ಮಂದಿರ, ಮಸೀದಿ, ಗುರುದ್ವಾರಗಳಲ್ಲಿ, ಚರ್ಚ್ ಹಾಗೂ ಇಷ್ಟ ಧಾಮ ಮುಂತಾದವುಗಳಲ್ಲಿ ಯಾರಾದರು ಸಂತ ಮಹಾತ್ಮರು ಇರುತ್ತಿದ್ದರು. ಅವರು ಅಲ್ಲಿ ಭಕ್ತಿ ಸಾಧನೆ ಮಾಡುತ್ತಾ ಇದ್ದರು. ತಮ್ಮ ಭಕ್ತಿ ರೂಪದ ಧನವನ್ನು ಅಲ್ಲಿ ಸಂಗ್ರಹಿಸಿಕೊಂಡು ತಮ್ಮ ಇಷ್ಟದೇವರ ಲೋಕಗಳಿಗೆ ತೆರಳಿದ್ದರು. ನಂತರ ಅವರ ನೆನಪಿಗಾಗಿ ಹಾಗೂ ಅದನ್ನು ಪ್ರಮಾಣೀಕರಿಸಲು, ಅಲ್ಲಿ ಯಾರೋ ಮಂದಿರವನ್ನೋ, ಮಸೀದಿಯನ್ನೋ, ಗುರುದ್ವಾರವನ್ನೋ, ಚರ್ಚ್‌ನ್ನೋ ಹಾಗೂ ಧರ್ಮ ಶಾಲೆಯನ್ನೋ, ಇತ್ಯಾದಿಗಳನ್ನೋ ಕಟ್ಟಿಸಿದ್ದಾರೆ. ಆ ಮಹಾತ್ಮರು ಮಾಡಿದ ಸಾಧನೆಗಳು ನೆನಪಿನಲ್ಲಿ ಉಳಿಯಲೆಂದು, ಮತ್ತು ನಮ್ಮಂತಹ ಸಾಮಾನ್ಯರಿಗೆ ಅವರಂತೆ ಕರ್ಮ ಮಾಡಲು ಸ್ಫೂರ್ತಿ ಸಿಗಲೆಂದೂ, ಇಂತಹ ಮಂದಿರ ಇತ್ಯಾದಿಗಳನ್ನು ಕಟ್ಟಿಸಿದ್ದಾರೆ. ಇದರಿಂದ ತಾವುಗಳೂ ಸಹ, ಇಂತಹ ಸಾಧನೆ ಮಾಡಿದ ಹಾಗೂ ಸಾಧನ ಮಾರ್ಗ ತಿಳಿಸಿಕೊಡುವ ಸಂತರನ್ನು ಹುಡುಕಿರಿ. ನಂತರ ಅವರು ಹೇಳಿದಂತೆ ಮಾಡಿರಿ. ಎಂಬುದೇ ಈ ಪವಿತ್ರ ಧಾಮಗಳ ಸಂದೇಶವಾಗಿದೆ. ಆದರೆ ನಂತರದ ದಿನಗಳಲ್ಲಿ ಈ ಸ್ಥಾನಗಳಿಗೆ ಪೂಜೆ ಆರಂಭವಾಯಿತು. ಈ ರೀತಿಯ ಕ್ರಮ ಶಾಸ್ತ್ರ ವಿರೋಧ ಹಾಗೂ ವ್ಯರ್ಥ.

ಈ ಎಲ್ಲಾ ಸ್ಥಾನಗಳು ಹಲವಾಯಿಯ (ಒಲೆ) ಭಟ್ಟಿಯಂತೆ. ಹೇಗೆ ಹಲವಾಯಿಯು ಒಂದು ಸ್ಥಳದಲ್ಲಿ ಭಟ್ಟಿ ಹಾಕಿಕೊಂಡು ವಿವಿಧ ಹಲವಾಗಳನ್ನು ತಯಾರಿಸಿ, ತಾನೂ ತಿಂದು ಬೇರೆಯವರಿಗೂ, ಬಂಧು–ಮಿತ್ರರಿಗೂ ತಿನ್ನಿಸುತ್ತಾನೆಯೋ ಹಾಗೆ ನಂತರ ಅವನು ಬೇರೆ ಕಡೆ ಭಟ್ಟಿ ಹಾಕಿಕೊಳ್ಳಲು ಅಲ್ಲಿಂದ ಜಾಗ ಬಿಡುವನು. ಈಗ ಅಲ್ಲಿ ಭಟ್ಟಿ ಇದೆ. ಆದರೆ ಹಲವಾ ಆಗಲಿ ಹಲವಾಯಿ ಆಗಲಿ ಇಲ್ಲ. ಅವನು ನಮಗೆ ಮಿಠಾಯಿ ಮಾಡಲು ಕಲಿಸಲೂ ಇಲ್ಲ. ನಮಗೆ ಹೊಟ್ಟೆ ತುಂಬಲೂ ಇಲ್ಲ. ಈಗ ನಾವು ಇಲ್ಲಿ ಒಮ್ಮೆ ಹಲವಾಯಿಯೊಬ್ಬ ಹಲವಾ ತಯಾರಿಸುತ್ತಿದ್ದ ಎಂದು

ತೋರಿಸುತ್ತೇವೆ. ಅಲ್ಲಿಗೆ (ಭಟ್ಟಿಗೆ) ಹೋಗಿ ಏಳು ಸುತ್ತು ಪ್ರದಕ್ಷಿಣೆ ಹಾಕುತ್ತೇವೆ. ಅಲ್ಲಿ ನಿಮಗೆ ಹಲವಾ (ಮಿಠಾಯಿ ಇತ್ಯಾದಿ) ಸಿಕ್ಕಿತೆ? ಹಲವಾ ಮಾಡುವ ಕ್ರಮವನ್ನು ತಿಳಿಸಿಕೊಡುವ ಹಲವಾಯಿ ಸಿಕ್ಕಿದನೆ? ಇಲ್ಲ. ಆದ್ದರಿಂದ ನೀವು ಅಂತಹ ಹಲವಾಯಿಯನ್ನು ಹುಡುಕಬೇಕು. ಅವನು ಮೊದಲು ನಿಮಗೆ ತಿನ್ನಿಸಬೇಕು, ನಂತರ ಹಲವಾ ಮಾಡುವ ಕ್ರಮವನ್ನು ಸಹ ತಿಳಿಸಿಕೊಡಬೇಕು. ನಂತರ ಅವನು ಹೇಳಿದಂತೆಯೇ ನಾವು ಮಾಡಬೇಕು, ಬೇರೆಯದನಲ್ಲ.

ಇದೇ ರೀತಿ, ತೀರ್ಥ ಸ್ಥಾನಗಳಲ್ಲಿ ಪೂಜೆ ಮಾಡದೆ, ಸಂತರನ್ನು ಹುಡುಕಿರಿ. ಆ ಸಂತರು ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರರ ಭಕ್ತಿ ಮಾಡುತ್ತಿರಬೇಕು ಮತ್ತು ನಮಗೆ ಭಕ್ತಿ ಮಾರ್ಗವನ್ನು ತೋರಿಸಿಕೊಡುವವರೂ ಆಗಿರಬೇಕು. ನಂತರ ಆ ಸಂತರು ಹೇಳಿದಂತೆ ಮಾಡಬೇಕು. ಮನದಲ್ಲಿ ಬಂದಂತೆ (ಸ್ವೇಚ್ಛಾಚಾರದಿಂದ) ಏನನ್ನೋ ಮಾಡಬಾರದು.

**ಸಾಮವೇದದ ಸಂಖ್ಯೆ 1400 ಉತಾರ್ಚಿಕ ಅಧ್ಯಾಯ 12, ಖಂಡ 3ರ, 5ನೇ ಶ್ಲೋಕ (ಸಂತ ರಾಮ್‌ಪಾಲ್ ದಾಸರೇ ಭಾಷ್ಯ ಬರೆದಿರುತ್ತಾರೆ)**

ಭದ್ರಾ ವಸ್ತ್ರಾ ಸಮನ್ಯಾವ್ಯಸಾನೋ ಮಹಾನ್ ಕವಿರ್ನಿವಚನಾನಿ ಶಂಸನ್ ।
ಆ ವಚ್ಯಸ್ವ ಚಮ್ ವೋಃ ಪೂಯಮಾನೋ ವಿಚಕ್ಷಣೋ ಜಾಗೃವಿರ್ದೇವ ವೀತೌ ॥ 5 ॥

**ಅರ್ಥ :–** ಚತುರ ವ್ಯಕ್ತಿಗಳು ತಮ್ಮ ವಚನಗಳ ಮೂಲಕ ಪೂರ್ಣ ಬ್ರಹ್ಮನ ಪೂಜೆಯ ಸತ್ಯ ಮಾರ್ಗದರ್ಶನ ಮಾಡಿಸದೆ, ಅಮೃತದ ಸ್ಥಾನಗಳಲ್ಲಿ ಅನ್ಯ ಉಪಾಸನಾ ರೂಪೀ ಹುಣ್ಣು ಹಾಗೂ ಗಾಯದಿಂದ ಹೊರಡುವ ಕೀವನ್ನು ಆದರದಿಂದ ಆಚಮನ ಮಾಡಿಸುತ್ತಾ ಇರುತ್ತಾರೆ.

**ಉದಾಹರಣೆಗೆ :–** ಭೂತಪೂಜೆ, ಪಿತೃಪೂಜೆ, ಶ್ರಾದ್ಧ ಮಾಡುವುದು, ತ್ರಿಗುಣಗಳ ಪೂಜೆ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ) ಹಾಗೂ ಕಾಲ ಬ್ರಹ್ಮನ ಪೂಜೆ ಮಂದಿರ–ಮಸೀದಿ–ಗುರುದ್ವಾರಾ–ಚರ್ಚ್ ಹಾಗೂ ತೀರ್ಥ ಸ್ಥಳಗಳಲ್ಲಿ ಉಪವಾಸ ಇತ್ಯಾದಿ ಮಾಡಿಸುತ್ತಾರೆ. ಪರಮ ಸುಖದಾಯಕ ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರರು ಸಾಧಾರಣವಸ್ತ್ರ ಧರಿಸಿದ ಶರೀರದೊಂದಿಗೆ, ಸಾಧಾರಣ ವ್ಯಕ್ತಿಗಳಂತೆ ಜೀವಿಸುವರು. ಕೆಲವು ದಿನಗಳು ಈ ಸಂಸಾರದಲ್ಲಿದ್ದು (ಸಂತರಿಗೆ ಶರೀರವೂ ಒಂದು ವಸ್ತ್ರದಂತೆ. ಸಂತರು ಶರೀರ ತ್ಯಾಗ ಮಾಡಿದಾಗ ಇವರು ವಸ್ತ್ರವನ್ನು ತ್ಯಜಿಸಿದರು ಎಂದು ಸಹ ಹೇಳುತ್ತಾರೆ.) ತಮ್ಮ ಶಬ್ದ–ಸಾಖೀಗಳ ಮೂಲಕ ಸತ್ಯ ಜ್ಞಾನವನ್ನು ವರ್ಣಿಸಿ ತಿಳಿಸುವರು. ಪೂರ್ಣ ಪರಮಾತ್ಮನ ರಹಸ್ಯವಾಗಿ ಅಡಗಿರುವ ವಾಸ್ತವಿಕ ಸತ್ಯಜ್ಞಾನವನ್ನೂ ತಿಳಿಸುತ್ತಾ ಭಕ್ತಿಯನ್ನು ಜಾಗೃತಗೊಳಿಸುವರು.

**ಗೀತೆಯ 16ನೇ ಅಧ್ಯಾಯದ 23ನೇ ಶ್ಲೋಕ.**

ಯಃ, ಶಾಸ್ತ್ರ ವಿಧಿಂ, ಉತ್ಸೃಜ್ಯ, ವರ್ತತೇ, ಕಾಮಕಾರತಃ, ನ, ಸಹಃ ।
ಸಿದ್ಧಿಂ, ಅವಾಪ್ನೋತಿ, ನ, ಸುಖಂ, ನ, ಪರಾಮ್, ಗತಿಮ್ ॥

**ಅನುವಾದ :–** ಯಾವ ಪುರುಷನು ಶಾಸ್ತ್ರವಿಧಿಯನ್ನು ತ್ಯಜಿಸಿ, ತನ್ನ ಇಚ್ಛೆಯಿಂದ ಮನಬಂದಂತೆ ಆಚರಣೆ ಮಾಡುತ್ತಾನೋ, ಅವನು ಸಿದ್ಧಿಯನ್ನು ಪಡೆಯುವುದಿಲ್ಲ, ಪರಮ ಗತಿಯನ್ನೂ ಪಡೆಯುವುದಿಲ್ಲ ಹಾಗೂ ಸುಖವನ್ನೂ ಹೊಂದುವುದಿಲ್ಲ.

**ಗೀತೆಯ 6ನೇ ಅಧ್ಯಾಯದ 16ನೇ ಶ್ಲೋಕ.**

ನ, ಅತಿ, ಅಶ್ರನತಃ, ತು, ಯೋಗಃ, ಅಸ್ತಿ, ನ, ಚ, ಏಕಾಂತಮ್,
ಅನಶ್ರನತಃ, ನ, ಚ, ಅತಿ, ಸ್ವಪ್ನಶೀಲಸ್ಯ, ಜಾಗ್ರತಃ, ನ, ಏವ, ಚ, ಅರ್ಜುನ ॥

**ಅನುವಾದ :–ಹೇ ಅರ್ಜುನಾ! ಈ ಯೋಗ ಅಂದರೆ ಭಕ್ತಿಯು ಅತಿಯಾಗಿ ತಿನ್ನುವವನಿಗೂ, ಸರ್ವತಾ ತಿನ್ನದಿರುವವನಿಗೂ, ಏಕಾಂತ ಸ್ಥಾನದಲ್ಲಿ ಆಸನ ಹಾಕಿ ಕುಳಿತು ಒಂದೇ ಸಮನೆ ಸಾಧನೆ ಮಾಡುವವನಿಗೂ ತುಂಬಾ ಮಲಗುವ ಸ್ವಭಾವವುಳ್ಳವನಿಗೂ, ಅಥವಾ ಸರ್ವತಾ ಮಲಗದೇ ಇರುವವನಿಗೂ ಸಿದ್ಧಿಸುವುದಿಲ್ಲ.**

ಪೂಜೈ ದೇಯಿ ಧಾಮ್ ಕೊ. ಶೀಶ್, ಹಲಾವೈ ಜೊ ।
ಗರೀಬ್ ದಾಸ್ ಸಾಚೀ ಕಹೈ, ಹದ್ ಕಾಫಿರ್ ಹೈ ಸೊ ॥

ಕಬೀರ್, ಗಂಗಾ ಕಾಠೈ ಘರ್ ಕರೈ ಪೀವೈ ನಿರ್ಮಲ ನೀರ ।
ಮುಕ್ತಿ ನಹಿ ಹರಿ ನಾಮ್ ಬಿನ್, ಸತ್ ಗುರು ಕಹೈ ಕಬೀರ್ ॥

ಕಬೀರ್, ತೀರ್ಥ್ ಕರ್–ಕರ್ ಜಗ್ ಮೂವಾ, ಉಡೈ ಪಾನೀ ನ್ಹಾಯ್ ।
ರಾಮ್ ಹೀ ನಾಮ್ ನಾ ಜಪಾ, ಕಾಲ್ ಘಸೀಟೆ ಜಾಯ್ ॥

ಗರೀಬ್, ಪೀತಲ್ ಹೀ ಕಾ ಥಾಲ್ ಹೈ, ಪೀತಲ್ ಕಾ ಲೋಟಾ ।
ಜಡ ಮೂರತ್ ಕೊ ಪೂಜತೆ, ಆವೈಗಾ ಟೋಟಾ ॥

ಗರೀಬ್, ಪೀತಲ್ ಚಮಚ್ಚಾ ಪೂಜಿಯೆ, ಜೊ ಥಾಲ್ ಪರೋಸೈ ।
ಜಡ್ ಮೂರತ್ ಕಿಸ್ ಕಾಮ್ ಕೀ, ಮತಿ ರಹೋ ಭರೋಸೈ ॥

ಕಬೀರ್, ಪರ್ವತ್ ಪರ್ವತ್ ಮೈ ಫಿರಿಯಾ, ಕಾರಣ್ ಅಪನೆ ರಾಮ್ ।
ರಾಮ್ ಸರೀಖೆ ಜನ ಮಿಲೆ, ಜಿನ್ ಸಾರೆ ಸಬ್ ಕಾಮ್ ॥

**4. ಪಿತೃ ಪೂಜೆ ನಿಷೇಧ :– ಯಾವುದೇ ರೀತಿಯ ಪಿತೃ ಪೂಜೆ ಶ್ರಾದ್ಧ ಮುಂತಾದವುಗಳನ್ನು ಮಾಡಬಾರದು ಭಗವಾನ್ ಶ್ರೀಕೃಷ್ಣನೇ ಪಿತೃಪೂಜೆ ಹಾಗೂ ಭೂತಗಳ ಪೂಜೆಯನ್ನು ಸರ್ವತಾ ಮಾಡಬಾರದೆಂದು ತಿಳಿಸಿದ್ದಾರೆ.**

**ಗೀತೆಯ 9ನೇ ಅಧ್ಯಾಯದ 25ನೇ ಶ್ಲೋಕದಲ್ಲಿ ಹೀಗೆ ಹೇಳಲಾಗಿದೆ.**

ಯಾಂತಿ, ದೇವವ್ರತಾಃ, ದೇವಾನ್, ಪಿತೃಋಣ್‌ಯಾಂತಿ, ಪಿತೃವ್ರತಾಃ ।
ಭೂತಾನಿ, ಯಾಂತಿ, ಭೂತೇಜ್ಯಾಃ, ಮಧ್ಯಾಜಿನಃ, ಅಪಿ, ಮಾಮ್ ॥

**ಅನುವಾದ :– ದೇವತೆಗಳನ್ನು ಪೂಜಿಸುವವರು, ದೇವತೆಗಳನ್ನು ಪಡೆಯುತ್ತಾರೆ. ಪಿತೃಗಳನ್ನು ಪೂಜಿಸುವವರು ಪಿತೃಗಳನ್ನು ಪಡೆಯುತ್ತಾರೆ. ಭೂತಗಳನ್ನು ಪೂಜಿಸುವವರು, ಭೂತಗಳನ್ನು ಪಡೆಯುತ್ತಾರೆ. ಮತ್ತು ನನ್ನನ್ನು ಪೂಜಿಸುವ ಭಕ್ತರು, ನನ್ನಿಂದ ದೊರೆಯುವ ಲಾಭವನ್ನೆ ಪಡೆಯುತ್ತಾರೆ.**

**ಬಂದೀಛೋಡ್ ಕಬೀರ್ ಪರಮೇಶ್ವರರು ಮತ್ತು ಗರೀಬ್‌ದಾಸ್ ಮಹಾರಾಜ್ ಸಹ ಹೇಳುತ್ತಾರೆ**

ಗರೀಬ್, ಭೂತ್ ರಮೈ ಸೊ ಭೂತ್ ಹೈ, ದೇವ್ ರಮೈ ಸೊ ದೇವ್ ।
ರಾಮ್ ರಮೈ ಸೊ ರಾಮ್ ಹೈ, ಸುನೋ ಸಕಲ ಸುರ ಭೇವ್ ॥

**ಆದ್ದರಿಂದ ಆ ಪೂರ್ಣ ಪರಮೇಶ್ವರನ ಭಕ್ತಿ ಮಾಡಿರಿ, ಅದರಿಂದ ಪೂರ್ಣ ಮುಕ್ತಿಸಿಗುವುದು. ಆ ಪರಮಾತ್ಮ ಪೂರ್ಣ ಬ್ರಹ್ಮ ಸತ್ಯರುಷನಾಗಿದ್ದಾನೆ. (ಸತ್ಯ ಕಬೀರ್) ಇದಕ್ಕೆ ಪ್ರಮಾಣವು ಗೀತೆಯ 18ನೇ ಅಧ್ಯಾಯದ 46ನೇ ಶ್ಲೋಕದಲ್ಲಿದೆ.**

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮ್ಯಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ (46)

**ಅನುವಾದ :– ಯಾವ ಪರಮೇಶ್ವರನಿಂದ ಸಂಪೂರ್ಣ ಪ್ರಾಣಿಗಳ ಉತ್ಪತ್ತಿಯಾಗಿದೆಯೋ ಮತ್ತು ಯಾರಿಂದ ಈ ಸಮಸ್ತ ಜಗತ್ತು ವ್ಯಾಪಕವಾಗಿದೆಯೋ, ಆ ಪರಮೇಶ್ವರನನ್ನು ತನ್ನ ಸ್ವಾಭಾವಿಕ ಕರ್ಮಗಳ ಮೂಲಕ ಪೂಜಿಸಿ. ಮನುಷ್ಯನು ಪರಮ ಸಿದ್ಧಿಯನ್ನು ಪಡೆಯುತ್ತಾನೆ.**

**ಗೀತೆಯ 18ನೇ ಅಧ್ಯಾಯದ 62ನೇ ಶ್ಲೋಕ.**

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।

ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ (62)

**ಅನುವಾದ :– ಹೇ ಭರತ ವಂಶೋದ್ಭವ ಅರ್ಜುನ ! ನೀನು ಎಲ್ಲಾ ಪ್ರಕಾರದಿಂದಲೂ ಆ ಪರಮೇಶ್ವರನಲ್ಲಿಯೇ ಶರಣು ಹೋಗು. ಆ ಪರಮಾತ್ಮನ ಕೃಪೆಯಿಂದಲೇ, ನೀನು ಪರಮ ಶಾಂತಿಯನ್ನು ಹಾಗೂ ಸನಾತನವಾದ ಪರಮಧಾಮವನ್ನು ಪಡೆಯುವೆ.**

**ಸರ್ವಭಾವದ ತಾತ್ಪರ್ಯವು ಇದಾಗಿದೆ. ಬೇರೆ ಪೂಜೆಗಳನ್ನು ಮಾಡದೆ ಮನ–ಕರ್ಮ–ವಚನಗಳಿಂದ ಒಬ್ಬ ಪರಮೇಶ್ವರನಲ್ಲಿ ಶ್ರದ್ಧೆಯನ್ನಿಡು.**

**ಗೀತೆಯ 8ನೇ ಅಧ್ಯಾಯದ 22ನೇ ಶ್ಲೋಕ :–**

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।
ಯಸ್ಯಾಂತಃ ಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥ (22)

**ಅನುವಾದ :– ಹೇ ಪಾರ್ಥನೇ! ಯಾವ ಪರಮಾತ್ಮನ ಅಂತರ್ಗತವಾಗಿ ಎಲ್ಲ ಜೀವಿಗಳಿವೆಯೋ ಮತ್ತು ಯಾವ ಸಚ್ಚಿದಾನಂದ ಘನ ಪರಮಾತ್ಮನಿಂದ ಈ ಸಮಸ್ತ ಜಗತ್ತು ಪರಿಪೂರ್ಣವಾಗಿದೆಯೋ, ಆ ಸನಾತನ ಪರಮಪುರುಷನು ಅನನ್ಯವಾದ ಭಕ್ತಿಯಿಂದಲೇ ಪ್ರಾಪ್ತವಾಗಲು ಯೋಗ್ಯವಾಗಿದ್ದಾನೆ.**

**ಅನನ್ಯ ಭಕ್ತಿಯ ತಾತ್ಪರ್ಯವು ಇದಾಗಿದೆ :–**

**ಒಬ್ಬನೇ ಪರಮೇಶ್ವರನಲ್ಲಿ ಭಕ್ತಿ ಇಡು (ಪೂರ್ಣ ಬ್ರಹ್ಮನಲ್ಲಿ) ಬೇರೆ ದೇವಿ–ದೇವತೆಯರಲ್ಲಿ ಅರ್ಥಾತ್ ಮೂರು ಗುಣ (ರಜೋಗುಣ–ಬ್ರಹ್ಮಾ ಸತೋಗುಣ–ವಿಷ್ಣು, ತಮೋಗುಣ–ಶಿವ) ಗಳಲ್ಲಿ ಅಲ್ಲ. ಗೀತೆಯ 15ನೇ ಅಧ್ಯಾಯದ 1 ರಿಂದ 4ನೇ ಶ್ಲೋಕ :**

**ಗೀತೆಯ 15ನೇ ಅಧ್ಯಾಯದ 1 ರಿಂದ 4 ಶ್ಲೋಕಗಳ ವಿವರಣೆ :–**

ಊರ್ಧ್ವ, ಮೂಲಂ, ಅಧಃ, ಶಾಖಂ, ಅಶ್ವತ್ಥಂ, ಪ್ರಾಹುಃ, ಅವ್ಯಯಮ್,
ಛಂದಾಂಸಿ, ಯಸ್ಯ, ಪರ್ಣಾನಿ, ಯಃ, ತಮ್, ವೇದ, ಸಃ, ವೇದವಿತ್ ॥ (1)

**ಅನುವಾದ :– ಸಂಸಾರವೆಂಬುದು ತಲೆಕೆಳಗಾಗಿ ನೇತುಹಾಕಿರುವ ವೃಕ್ಷದಂತೆ ಇದೆ. ಅದರ ಮೇಲೆ ಬೇರು, ಕೆಳಗೆ ಅದರ ಕೊಂಬೆಗಳಿವೆ. ಯಾರು ಈ ಸಂಸಾರರೂಪದ ವೃಕ್ಷವನ್ನು ಸಂಪೂರ್ಣವಾಗಿ ಬೇರುಗಳಿಂದ ಹಿಡಿದು ಎಲೆಗಳವರೆಗೆ ಯಾವ ಭಾಗ ಯಾವ ದೇವನದಿದೆ ಎಂದು ತಿಳಿಸುತ್ತಾರೋ, ಅವರೇ ತತ್ವದರ್ಶಿ ಸಂತರು.**

**ಅಧಃ, ಚ, ಉರ್ಧ್ವಮ, ಪ್ರಸೃತಾಃ, ತಸ್ಯ, ಶಾಖಾಃ, ಗುಣ, ಪ್ರವೃದ್ಧಾಃ, ವಿಷಯ, ಪ್ರವಾಲಾಃ,**
ಅಧಃ,ಚ, ಮೂಲಾನಿ, ಅನುಸಂತತಾನಿ, ಕರ್ಮಾನು ಬಂಧೀನಿ, ಮನುಷ್ಯಲೋಕೇ ॥ (2)

**ಅನುವಾದ :– ಆ ವೃಕ್ಷದ ಕೆಳಗೆ ಮತ್ತು ಮೇಲೆ ಮೂರು ಗುಣಗಳ ಬ್ರಹ್ಮಾ–ರಜೋಗುಣ,**

**ವಿಷ್ಣು–ಸತೋಗುಣ, ಶಿವ–ತಮೋಗುಣ ರೂಪದಲ್ಲಿ ಹರಡಿರುವ ವಿಕಾರ–ಕಾಮ–ಕ್ರೋಧ–ಮೋಹ, ಲೋಭ, ಅಹಂಕಾರ ರೂಪಿನ ಚಿಗುರುಗಳು, ಕೊಂಬೆಗಳು ಇವು ಜೀವಗಳನ್ನು ಕರ್ಮ ಬಂಧನದಲ್ಲಿ ಕಟ್ಟಿಹಾಕಲು ಮುಖ್ಯ ಕಾರಣವಾಗಿವೆ. ಭೂಲೋಕ, ಸ್ವರ್ಗ–ನರಕ ಹಾಗು ಪಾತಾಳ ಲೋಕಗಳಲ್ಲಿ (84 ಲಕ್ಷ ಯೋನಿಗಳಲ್ಲಿ ಜೀವಗಳನ್ನು ಕರ್ಮ ಬಂಧನದಲ್ಲಿ ಕಟ್ಟಿಹಾಕಲು) ಕೆಳಗೆ–ಮೇಲೆ ವ್ಯವಸ್ಥೆ ಮಾಡಿಡಲಾಗಿದೆ.**

ನ, ರೂಪಮ, ಅಸ್ಯ, ಇಹ, ತಥಾ, ಉಪಲಭ್ಯತೆ, ನ, ಅಂತಃ, ನ, ಚ, ಆದಿಃ ನ, ಚ, ಸಂಪ್ರತಿಷ್ಠಾ,
ಅಶ್ವತ್ಥಂ, ಏನಮ್, ಸುವಿರೂಢ ಮೂಲಂ, ಅಸಂಗ ಶಸ್ತ್ರೇಣ, ದೃಢೇನ, ಛಿತ್ವಾ॥ (3)

**ಅನುವಾದ :– ಈ ರಚನೆಯ ಪ್ರಾರಂಭವಾಗಲಿ ಮತ್ತು ಅಂತ್ಯವಾಗಲಿ, ಹಾಗೆಯ ಇದರ ಸ್ವರೂಪವಾಗಲಿ ಸಿಗುವುದಿಲ್ಲ ಹಾಗೂ ಇಲ್ಲಿ ನನ್ನ ಮೂಲಕ ಈ ಗೀತೆಯ ಜ್ಞಾನ ಕೊಡಲ್ಪಟ್ಟಿದ್ದರೂ, ಅದರ ಸಂಪೂರ್ಣವಾದ ತಿಳುವಳಿಕೆ ಜ್ಞಾನ ನನಗೆ ಇಲ್ಲ. ಏಕೆಂದರೆ ವಿಸ್ತಾರವಾಗಿ ನನಗೆ ಸರ್ವ ಬ್ರಹ್ಮಾಂಡಗಳ ರಚನೆಯ ಪರಿಚಯವಿಲ್ಲ. ಈ ಉತ್ತಮ ರೀತಿಯಲ್ಲಿ ಸ್ಥಿರವಾಗಿರುವ, ಅಶ್ವತ್ಥ ವೃಕ್ಷ ರೂಪ ಸಂಸಾರದ ಜ್ಞಾನವನ್ನು ಪೂರ್ಣ ರೂಪದಿಂದ ನಿರ್ಮಲವಾದ ತತ್ವಜ್ಞಾನದಿಂದ ಕತ್ತರಿಸಿ ಅಂದರೆ ಕಾಲ ನಿರಂಜನನ ಭಕ್ತಿಯನ್ನು ಕ್ಷಣಿಕ ಎಂದು ತಿಳಿ.**

ತತಃ, ಪದಂ, ತತ್ಪರಿಮಾರ್ಗಿತವ್ಯಂ, ಯಸ್ಮಿನ್ಗತಾ, ನ, ನಿವರ್ತಂತಿ, ಭೂಯಃ ।
ತಮೇವ, ಚಾದ್ಯಂ, ಪುರುಷಂ, ಪ್ರಪದ್ಯೇ, ಯತಃ, ಪ್ರವೃತ್ತಿ, ಪ್ರಸೃತಾ, ಪುರಾಣೀ ॥ 4 ॥

**ಅನುವಾದ :– ಅದರ ನಂತರ ಆ ಪರಮಪದ ಪರಮಾತ್ಮನನ್ನು ಅರಸಬೇಕು. ಯಾರನ್ನು ಪಡೆಯುವುದರಿಂದ ಮನುಷ್ಯನು ಮತ್ತೆ ಈ ಜಗತ್ತಿಗೆ ಮರಳಿ ಬರುವುದಿಲ್ಲವೋ, ಯಾರಿಂದ ಅನಾದಿ ಕಾಲದಿಂದಲೂ ನಡೆದು ಬಂದಿರುವ ಈ ಸೃಷ್ಠಿ ವಿಸ್ತಾರಕ್ಕೆ ಪ್ರಾಪ್ತವಾಗಿದೆಯೋ, ಆ ಆದಿ ಪುರುಷನಿಗೇ ನಾನು ಸಹ ಶರಣಾಗಿದ್ದೇನೆ.**

**ಈ ರೀತಿಯಾಗಿ ಸ್ವಯಂ ಶ್ರೀ ಕೃಷ್ಣನು ಇಂದ್ರನ (ದೇವ–ದೇವತೆಗಳ ರಾಜ) ಪೂಜೆಯನ್ನು ಮಾಡಬೇಡಿ ಎಂದು ಹೇಳಿ, ಪರಮಾತ್ಮನಲ್ಲಿ ಭಕ್ತಿ ಮಾಡಲು ತಿಳಿಸಿದರು. ಅದಕ್ಕಾಗಿ ಕೃಷ್ಣನು ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು ಇಂದ್ರನ ಕೋಪದಿಂದ ಬ್ರಜವಾಸಿಗಳ ರಕ್ಷಣೆಗೆ ಕಾರಣವಾದನು.**

ಗರೀಬ್, ಇಂದ್ರ ಚಢಾ ಬ್ರಿಜ ಡುಬೋವನ್, ಭೀಗಾ ಭೀತ್ ನ ಲೇವ್ ।
ಇಂದ್ರ ಕಢಾಯಿ ಹೋತ ಜಗತ್ ಮೆ, ಪೂಜಾ ಖಾ ಗಯೇ ದೇವ್ ॥

ಕಬೀರ್, ಇಸ್ ಸಂಸಾರ್ ಕೊ, ಸಮಝಾವೂ ಕೈ ಬಾರ್ ।
ಪೂಂಛ್ ಜೊ ಪಕಡ್ಯೈ ಭೇಡ್ ಕೀ, ಉತರಾ ಚಾಹ್ಯೆ ಪಾರ್ ॥

**5. <u>ಗುರುವಿನ ಆಜ್ಞೆಯ ಪಾಲನೆ</u> :– ಗುರುದೇವರ ಆಜ್ಞೆ ಇಲ್ಲದೆ ಮನೆಯಲ್ಲಿ ಯಾವುದೇ ಪ್ರಕಾರದ ಧಾರ್ಮಿಕ ಅನುಷ್ಠಾನವನ್ನು ಮಾಡಬಾರದು. ಏಕೆಂದರೆ ಪರಮಾತ್ಮ ತಮ್ಮ ವಾಣಿಯಲ್ಲಿ ಹೀಗೆ ಹೇಳುತ್ತಾರೆ :**

ಗುರು ಬಿನ್ ಯಜ್ಞ–ಹವನ್ ಜೋ ಕರಹೀ, ಮಿಥ್ಯಾ ಜಾವೆ ಕಬಹು ನಹಿ ಫಲಹೀ ।
ಕಬೀರ್, ಗುರು ಬಿನ್ ಮಾಲಾ ಫೇರತೆ, ಗುರು ಬಿನ್ ದೇತೇ ದಾನ್ ।
ಗುರು ಬಿನ್ ದೋನೋ ನಿಷ್ಫಲ ಹೈ, ಪೂಛೋ ವೇದ ಪುರಾಣ್ ॥

**6 <u>ಸಮಾಧಿ, ಮೂರ್ತಿ ಪೂಜಿಸುವುದು ನಿಷೇಧ</u> :– ತಮ್ಮ ಹೊಲಗದ್ದೆಗಳಲ್ಲಿ ನಿರ್ಮಿಸಿರುವ ಯಾವುದೇ ಸಮಾಧಿಗೆ ಪೂಜಿಸಬಾರದು. ಯಾವುದೇ ದೇವತೆಗಳ ಮೂರ್ತಿಗೆ ಪೂಜಿಸಬಾರದು. ಸಮಾಧಿ ಯಾರದ್ದಿದ್ದರೂ ಪೂಜಿಸಬಾರದು. ತ್ರಿಗುಣ (ರಜಗುಣ ಬ್ರಹ್ಮಾ, ಸತ್‌ಗುಣ ವಿಷ್ಣು, ತಮಗುಣ ಶಿವ) ಗಳ ಪೂಜೆ ಮಾಡಬಾರದು. ಕೇವಲ ಗುರು ತಿಳಿಸಿದಂತೆ ಮಾತ್ರ ಮಾಡಬೇಕು.**

**<u>ಗೀತೆಯ 7ನೇ ಅಧ್ಯಾಯದ 15ನೇ ಶ್ಲೋಕ.</u>**

ನ, ಮಾಮ್, ದುಷ್ಕೃತಿನಃ, ಮೂಢಾಃ, ಪ್ರಪದ್ಯಂತೆ, ನರಾಧಮಾಃ ।
ಮಾಯಯಾ, ಪಹೃತ ಜ್ಞಾನಾಃ, ಆಸುರಂ, ಭಾವಮ್, ಆಶ್ರಿತಾಃ ॥ (15)

**ಅನುವಾದ :– ಮಾಯೆಯ ಮೂಲಕ ಯಾರ ಜ್ಞಾನವು ಅಪಹರಿಸಲ್ಪಟ್ಟಿದೆಯೋ ಅವರು ರಾಕ್ಷಸ ಭಾವವನ್ನು ಆಶ್ರಯಿಸಿದವರು, ಮನುಷ್ಯರಲ್ಲಿ ನೀಚರು, ಮತ್ತು ದೂಷಿತ ಕರ್ಮ ಮಾಡುವವರು, ಮುರ್ಖರು ನನ್ನನ್ನು ಭಜಿಸುವುದಿಲ್ಲ. ತ್ರಿಗುಣ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು ಹಾಗೂ ತಮೋಗುಣ–ಶಿವ) ಗಳ ಉಪಾಸನೆ ಅಂದರೆ ಪೂಜೆ ಮಾಡುತ್ತಿರುತ್ತಾರೆ.**

ಕಬೀರ್, ಮಾಯಿ ಮಸಾನೀ ಶೇಢ ಶೀತಲಾ ಭೈರವ ಭೂತ ಹನುಮಂತ್ ।
ಪರಮಾತ್ಮ ಉನಸೆ ದೂರ್ ಹೈ, ಜೋ ಇನಕೊ ಪೂಜಂತ್ ॥
ಕಬೀರ್, ಸೌ ವರ್ಷ್ ತೊ ಗುರು ಕೀ ಸೇವಾ, ಏಕ್ ದಿನ್ ಆನ ಉಪಾಸೀ ।
ವೊ ಅಪರಾಧಿ ಆತ್ಮಾ, ಫರ್ರೈ ಕಾಲ್ ಕೀ ಫಾಂಸೀ ॥
ಗುರು ಕೊ ತಜ್ಜೈ ಭಜ್ಜೈ ಜೊ ಆನಾ । ತಾ ಪಸುವಾ ಕೊ ಫೋಕಟ್ ಜ್ಞಾನಾ ॥

**7. <u>ಸಂಕಟ ಮೋಚನರು ಕಬೀರ್ ಪರಮಾತ್ಮ ಆಗಿದ್ದಾರೆ</u> :– ಕರ್ಮದಿಂದ ಕಷ್ಟ ಬಂದಾಗ ಯಾವುದೆ ಬೇರೆ ಇಷ್ಟ ದೇವತೆಯ ಅಥವಾ ಶಾಕಿನಿ–ಡಾಕಿನಿಯರ ಪೂಜೆಯನ್ನು ಎಂದು ಮಾಡಬಾರದು ಮತ್ತು ಯಾವುದೆ ಇತರ ಮಂತ್ರ ಓದಿಸಬಾರದು. ಕೇವಲ ಕರ್ಮ ಬಂಧನದಿಂದ ಪಾರು ಮಾಡುವ ಕಬೀರ್ ಪರಮೇಶ್ವರನನ್ನು ಪೂಜಿಸಬೇಕು. ಇವರೇ ದುಃಖ ದೂರಮಾಡಿ ಸಂಕಟಗಳಿಂದ ಮುಕ್ತಿ ಕೊಡಿಸುವವರಾಗಿದ್ದಾರೆ.**

**ಸಾಮವೇದ ಸಂ. 822 ಉತಾರ್ಚಿಕ ಅಧ್ಯಾಯ ಸಂಖ್ಯೆ 3 ಖಂಡ ಸಂಖ್ಯೆ 5 ಶ್ಲೋಕ ಸಂಖ್ಯೆ 8 : (ಸಂತ ರಾಮ್‌ಪಾಲ್ ದಾಸ್ ಮಹಾರಾಜ್ ರವರಿಂದ ಭಾಷ್ಯೆ ಬರೆಯಲಾಗಿದೆ)**

ಮನೀಷಿಭಿಃ ಪವತೆ ಪೂರ್ವ್ಯಃ ಕವಿರ್ನೃಭಿರ್ಯತಃ ಪರಿ ಕೋಶಾಂ ಅಸಿಷ್ಯದತ್ ।
ತ್ರಿತಸ್ಯ ನಾಮ ಜನಯನ್ಮಧು ಕ್ಷರನ್ನಿಂದ್ರಸ್ಯ ವಾಯುಂ ಸಂಖ್ಯಾಯ ವರ್ಧಯನ್ ॥ 8 ॥

**ಅನುವಾದ :– ಹೃದಯದಿಂದ ಪ್ರೀತಿಸುವ ಶ್ರದ್ಧಾವಂತರನ್ನು ಸನಾತನ ಅರ್ಥಾತ್ ಅವಿನಾಶೀ ಕಬೀರ್ ಪರಮೇಶ್ವರರು ಅಮರರನ್ನಾಗಿಸುತ್ತಾರೆ. ಅವರಿಗೆ ಪವಿತ್ರವಾದ ಮೂರು ಮಂತ್ರಗಳ (ಓಂ–ತತ್–ಸತ್) ಉಪದೇಶವನ್ನು ನೀಡುತ್ತಾರೆ. ಅವರನ್ನು ತನ್ನ ಆಪ್ತ ಸಖನಂತೆ ಸ್ವೀಕರಿಸಿ, ತಮ್ಮ ಕೃಪಾ ಭಂಡಾರದಿಂದ ಆ ಭಕ್ತರ ವಯಸ್ಸು ಹೆಚ್ಚಿಸುತ್ತಾರೆ. ಈ ಕಾರಣದಿಂದ ಭಕ್ತರಿಗೆ ಪರಮೇಶ್ವರನ ವಾಸ್ತವಿಕ ಆನಂದವನ್ನು ತಮ್ಮ ಆಶೀರ್ವಾದದಿಂದ ಅನುಗ್ರಹಿಸುತ್ತಾರೆ.**

ಕಬೀರ್, ದೇವೀ –ದೇವ ಠಾಢೆ ಭಯೆ, ಹಮ ಕೊ ಠೌರ್ ಬತಾವೊ ।
ಜೊ ಮುಝು ಕೊ (ಕಬೀರ್)ಪೂಜೈ ನಹೀ, ಉನಕೊ ಲೂಟೊ ಖಾವೋ ॥

ಕಬೀರ್, ಕಾಲ ಜೊ ಪೀಸೈ ಪೀಸನಾ, ಜೋರಾ ಹೈ ಪನಿಹಾರ್ ।
ಯೆ ದೊ ಅಸಲ್ ಮಜೂರ್ ಹೈ, ಸತ್‌ಗುರು ಕೆ ದರಬಾರ್ ॥

**8**. ಅನಾವಶ್ಯಕ ದಾನ ನಿಷೇಧ :– ಎಲ್ಲಿಯೂ ಹಾಗೂ ಯಾರಿಗೂ ದಾನದ ರೂಪದಲ್ಲಿ ಏನನ್ನೂ ಕೊಡಬೇಡಿ, ಹಣವನ್ನಾಗಲೀ–ಹೊಲಿಯದ ಬಟ್ಟೆಯನ್ನಾಗಲೀ ಕೊಡಬೇಡಿ. ಯಾರಾದರೂ ದಾನವಾಗಿ ಏನನ್ನಾದರೂ ಕೇಳಲು ಬಂದರೆ, ಅವರಿಗೆ ಊಟ ಮಾಡಿಸಿ, ಚಹ, ಲಸ್ಸಿ, ನೀರು ಏನನ್ನಾದರೂ ಕುಡಿಯಲು ಕೊಡಿರಿ, ಆದರೆ ಏನನ್ನೂ ದಾನ ಕೊಡಬೇಡಿ, ಯಾರಿಗೆ ಗೊತ್ತು ಆ ಬಿಕ್ಷುಕನು ದಾನದ ಹಣವನ್ನು ಹೇಗೆ ದುರುಪಯೋಗ ಮಾಡುವನೋ? ಒಬ್ಬ ಭಿಕಾರಿಯು ಇನ್ನೊಬ್ಬ ವ್ಯಕ್ತಿಗೆ ತನ್ನ ಸುಳ್ಳು ಕತೆಯನ್ನು ಹೇಳುತ್ತಲಿದ್ದ. ಅವನು ತನ್ನ ಮಗನಿಗೆ ಖಾಯಿಲೆ ಆಗಿದೆ. ಚಿಕಿತ್ಸೆಗೆ ದಯಮಾಡಿ ಹಣ ನೀಡಿ ಸಹಾಯ ಮಾಡಿ ಎಂದನು. ಅವರು ಕನಿಕರಿಸಿ **100** ರೂ ಕೊಟ್ಟರು. ಪ್ರತಿ ದಿನ **1/ 4** ಬಾಟಲು ಮಾತ್ರ ಕುಡಿಯುತ್ತಿದ್ದವನು. ಅಂದು ಹೆಂಡದ ಅಂಗಡಿಯಲ್ಲಿ **1/ 2** ಬಾಟಲು ಹೆಂಡ ಕುಡಿದು ಮನೆಗೆ ಹೋಗಿ ಹೆಂಡತಿಯನ್ನು ಹೊಡೆದನು. ಅವನ ಹೆಂಡತಿಯು ಮಕ್ಕಳ ಸಮೇತವಾಗಿ ಆತ್ಮಹತ್ಯೆ ಮಾಡಿಕೊಂಡಳು. ನಿಮ್ಮ ಮೂಲಕ ನಿಡಲ್ಪಟ್ಟ ದಾನದ ಹಣವು ಒಂದು ಕುಟುಂಬದ ನಾಶಕ್ಕೆ ಕಾರಣವಾಯಿತು. ಒಂದು ವೇಳೆ ನಿಮಗೆ ಸಹಾಯ ಮಾಡಬೇಕು ಎನ್ನಿಸಿದರೆ, ದುಃಖಿತ ವ್ಯಕ್ತಿಗೆ ಸಹಾಯ ಮಾಡಿ. ಅವನ ಮಕ್ಕಳಿಗೆ ಚಿಕಿತ್ಸೆ ಅಗತ್ಯವಿದ್ದರೆ ಡಾಕ್ಟರ್ ಹತ್ತಿರ ತೋರಿಸಿ ಔಷಧಿ ಕೊಡಿಸಿರಿ, ಹಣವನ್ನು ಕೊಡಬೇಡಿರಿ.

ಕಬೀರ್, ಗುರು ಬಿನ ಮಾಲಾ ಫೇರತೆ, ಗುರು ಬಿನ ದೇತೆ ದಾನ್ ।
ಗುರು ಬಿನ ದೋನೋ ನಿಷ್ಫಲ್ ಹೈ. ಪೂಛೊ ವೇದ್–ಪುರಾಣ್ ॥

**9**. ಎಂಜಲು ತಿನ್ನುವುದು ನಿಷೇಧ :– ಯಾರು ಸಾರಾಯಿ, ಮಾಂಸ, ತಂಬಾಖು, ಮೊಟ್ಟೆ, ಬಿಯರ್, ಅಫೀಮ್, ಗಾಂಜಾ ಮುಂತಾದವುಗಳನ್ನು ಸೇವಿಸುತ್ತಾರೋ ಅವರ ಎಂಜಲನ್ನು ತಿನ್ನಬಾರದು.

**10**. ಸತ್ಯಲೋಕಕ್ಕೆ ಹೋದ (ದೇಹಾಂತ್ಯದ) ನಂತರ ಮಾಡುವ ಕ್ರಿಯಾ ಕರ್ಮಗಳು ನಿಷೇಧ :–

ಪರಿವಾರದಲ್ಲಿ ಯಾರದ್ದಾದರೂ ಸಾವು ಆದರೆ, ಚಿತೆಗೆ ಅಗ್ನಿಯನ್ನು ಯಾರಾದರೂ ಹಾಕಬಹುದು. ಮನೆಯವರು ಅಥವಾ ಬೇರೆಯವರು, ಅಗ್ನಿ ಪ್ರಜ್ವಲಿಸುವಾಗ ಮಂಗಳಾಚರಣವನ್ನು ಹೇಳಲಿ. ಅದರ ಹೂವು ಮುಂತಾದವು ಏನನ್ನೂ ತೆಗೆಯಬಾರದು. ಆ ಸ್ಥಾನವನ್ನು ಶುಚಿಗೊಳಿಸುವುದು ಅನಿವಾರ್ಯವಾದಾಗ, ಅಲ್ಲಿನ ಅಸ್ತಿಗಳನ್ನು ಸಂಗ್ರಹಿಸಿ ಹರಿಯುವ ನೀರಿನಲ್ಲಿ ಬಿಡಬೇಕು. ಆ ಸಮಯದಲ್ಲೂ ಮಂಗಳಾಚರಣವನ್ನು ಹೇಳಬೇಕು. ಪಿಂಡ ಬಿಡುವುದು, ಹದಿಮೂರನೆ ದಿನ ಆಚರಣೆ, ಆರು ತಿಂಗಳ ತಿಥಿ, ವಾರ್ಷಿಕ ತಿಥಿ ಪ್ರತಿವರ್ಷ ತಿಥಿ ಏನನ್ನೂ ಮಾಡಬಾರದು. ಬೇರೆ ಯಾವುದೋ ವ್ಯಕ್ತಿಯಿಂದ ಹವನ–ಹೋಮಗಳನ್ನು ಮಾಡಿಸಬಾರದು. ಶೋಕ ವ್ಯಕ್ತಪಡಿಸಲು ಬರುವ ಸಂಬಂಧಿಕರಿಗೆ ಒಂದು ದಿನ ನಿಗಧಿಪಡಿಸಿ, ಆ ದಿನ ಪ್ರತಿದಿನ ಮಾಡುವಂತೆ ನಿತ್ಯಕರ್ಮಗಳನ್ನು ಮಾಡಲಿ, ಜ್ಯೋತಿಯನ್ನು ಹಚ್ಚಿರಿ, ಎಲ್ಲರಿಗೂ ಊಟ ಹಾಕಿರಿ. ಸತ್ತವರ ಹೆಸರಿನಲ್ಲಿ ಏನಾದರೂ ಧರ್ಮಕಾರ್ಯ ಮಾಡುವುದಾದರೆ, ಗುರುಗಳ ಆಜ್ಞೆಪಡೆದು, ಬಂದೀಛೋಡ್ ಗರೀಬ್‌ದಾಸ್ ಮಹಾರಾಜ್‌ರ ಅಮೃತವಾಣಿಯ ಅಖಂಡ ಪಾಠ ಮಾಡಿಸಿ. ಗುರುಗಳ ಆಜ್ಞೆ ದೊರೆಯದಿದ್ದಲ್ಲಿ ಪರಿವಾರದಲ್ಲಿನ ಉಪದೇಶ ಪಡೆದ ನಾಲ್ಕು ಜನ ಭಕ್ತರು ನಾಲ್ಕು ದಿನ ಅಥವಾ ಏಳು ದಿನಗಳವರೆಗೆ ಮನೆಯಲ್ಲಿ ಅಖಂಡವಾಗಿ ಜ್ಯೋತಿ ಬೆಳಗಿಸಿ, ಜ್ಯೋತಿಗೆ ದೇಶೀ ಹಸುವಿನ ತುಪ್ಪವನ್ನು ಬಳಸಿ. ಬ್ರಹ್ಮ ಗಾಯತ್ರಿ ಮಂತ್ರವನ್ನು ಪ್ರತಿದಿನ ನಾಲ್ಕು ಬಾರಿ ಹೇಳಲಿ. ಹಾಗೂ ಮೂರು ಅಥವಾ ಒಂದು ಬಾರಿಯ ಮಂತ್ರದ ದಾನ ಸಂಕಲ್ಪವನ್ನು ಸತ್ಯಲೋಕವಾಸಿಗೆ ಅರ್ಪಿಸಿರಿ. ಹೇಗೆ ಉಚಿತವೆನಿಸುವುದೋ ಹಾಗೆ ಒಂದು, ಎರಡು, ಮೂರು ದಿನಗಳ ಜಪದ ಫಲವನ್ನು ಅವರಿಗೆ ದಾನ ಮಾಡಿರಿ, ಪ್ರತಿದಿನವೂ

ಜ್ಯೋತಿ ಬೆಳಗುತ್ತಾ, ಆರತಿ ನಾಮಸ್ಮರಣೆ ಮಾಡುತ್ತಿರಬೇಕು. ಈ ಮಾತುಗಳನ್ನು ನೆನಪಿನಲ್ಲಿರಿಸಿಕೊಳ್ಳಿ.

ಕಬೀರ್, ಸಾಥಿ ಹಮಾರೆ ಚಲೆ ಗಯೆ, ಹಮ್ ಭೀ ಚಾಲನ್ ಹಾರ್ ।
ಕೋಯೇ ಕಾಗಜ್ ಮೇ ಬಾಕೀ ರಹ್ ರಹೀ, ತಾತೇ ಲಾಗ್ ರಹಿ ವಾರ್ ॥
ಕಬೀರ್, ದೇಹ್ ಪಡೀ ತೋ ಕ್ಯಾ ಹುವಾ, ಝೂಠಾ ಸಭೀ ಪಟೀಟ್ ।
ಪಕ್ಷಿ ಉಡಿಯಾ ಆಕಾಶ್ ಕೂ, ಚಲತಾ ಕರ್ ಗಯಾ ಬೀಟ್ ॥

## "ಕರ್ಮಕಾಂಡದ ವಿಷಯದಲ್ಲಿ ಸತ್ಯ ಕಥೆ"

ನನ್ನ (ಸಂತ ರಾಮ್‌ಪಾಲ್ ದಾಸರ) ಪೂಜ್ಯ ಗುರುದೇವ ಸ್ವಾಮಿ ರಾಮದೇವಾನಂದ ಮಹಾರಾಜ್‌ರಿಗೆ ಅವರ ಹದಿನಾರನೇ ವಯಸ್ಸಿನಲ್ಲಿ ಸತ್ಸಂಗದ ವಾಣಿ ಕೇಳಿ ವೈರಾಗ್ಯವಾಗಿತ್ತು. ಒಂದು ದಿನ ಅವರು ಹೊಲದ ಹತ್ತಿರ ಹೋಗಿದ್ದರು. ಹತ್ತಿರದಲ್ಲೇ ಕಾಡು ಇತ್ತು. ಅವರು ಕಾಡಿಗೆ ಹೋಗಿ ಯಾವುದೋ ಮೃತ ಪ್ರಾಣಿಯ ಮೂಳೆಗಳ ಹತ್ತಿರ ತಮ್ಮ ಬಟ್ಟೆಯನ್ನು ಹರಿದು ಎಸೆಯುತ್ತಾರೆ. ಮತ್ತು ಸ್ವತಃ ಮಹಾತ್ಮರ ಹತ್ತಿರ ಹೋಗುತ್ತಾರೆ.

ಮನೆಯವರು ಅವರನ್ನು ಹುಡುಕುತ್ತಾ, ಕಾಡಿನಲ್ಲಿ ಅವರ ಹರಿದ ಬಟ್ಟೆಗಳನ್ನು ನೋಡಿ, ಯಾವುದೋ ಪ್ರಾಣಿ ಅವರನ್ನು ತಿಂದಿರಬಹುದು ಎಂದು ಯೋಚಿಸುತ್ತಾರೆ. ಆ ಬಟ್ಟೆ ಚೂರುಗಳನ್ನು ಹಾಗೂ ಮೂಳೆಗಳನ್ನು ಮನೆಗೆ ತರುತ್ತಾರೆ. ಅದಕ್ಕೆ ಅಂತಿಮ ಸಂಸ್ಕಾರವನ್ನು ಮಾಡುತ್ತಾರೆ. ಅದಾದ ನಂತರ ಹದಿಮೂರನೇ ದಿನದ ತಿಥಿ, ಆರು ತಿಂಗಳ ಕ್ರೀಯೆಯ ನಂತರ ಶ್ರಾದ್ಧ ಶುರುವಾಗುತ್ತದೆ. ಯಾವಾಗ ನನ್ನ ಗುರುಗಳು ವೃದ್ಧರಾದರೋ ಆಗ ಮನೆಗೆ ಹೋಗುತ್ತಾರೆ. ಆಗ ಮನೆಯವರಿಗೆ ಅವರು ಬದುಕಿದ್ದರು, ಹಾಗೂ ಮನೆ ಬಿಟ್ಟು ಹೋಗಿದ್ದರೆಂದು ತಿಳಿಯುತ್ತದೆ. ಆಗ ಮನೆಯವರು ಅವರನ್ನು ಹುಡುಕಿದ ಬಗ್ಗೆ, ಮೂಳೆ, ಹರಿದ ಬಟ್ಟೆಗಳನ್ನು ತಂದು ಸಂಸ್ಕಾರ ಮಾಡಿದ ಬಗ್ಗೆ ಹೇಳುತ್ತಾರೆ.

ನಂತರ ನಾನು (ಸಂತ ರಾಮ್‌ಪಾಲ್ ದಾಸ್) ನನ್ನ ಪೂಜ್ಯ ಗುರುದೇವರ ತಮ್ಮನ ಹೆಂಡತಿಯನ್ನು ಕೇಳಿದೆ. ನಮ್ಮ ಗುರುದೇವರು ಮನೆ ಬಿಟ್ಟು ಹೋದ ಮೇಲೆ ನೀವು ಏನು ಮಾಡಿದಿರಿ? ಆಗ ಆ ವೃದ್ಧೆ ಹೇಳಿದಳು. ಮದುವೆಯಾಗಿ ಬಂದ ಮೇಲೆ ನನ್ನ ಕೈಯಾರೆ. ಈಗಾಗಲೇ 70 ಶ್ರಾದ್ಧಗಳನ್ನು ಮಾಡಿದ್ದೇನೆ. ಮನೆಯಲ್ಲಿ ಏನಾದರೂ ನಷ್ಟವಾದರೆ, ಎಮ್ಮೆ ಹಾಲು ಕೊಡದಿದ್ದರೆ. ಕೆಚ್ಚಲಿನಲ್ಲಿ ತೊಂದರೆಯಾದರೆ, ಬೇರೆ ಏನೇ ನಷ್ಟವಾದರೂ ಸಮಾಧಿ ಸ್ಥಾನದಲ್ಲಿ ಭೂತಾರಾಧನೆ ಮಾಡಲು ಹೋಗುತ್ತಿದ್ದೆವು. ತಂತ್ರ ಮಂತ್ರ ಮಾಡುವವರು ಆಗ ಅಲ್ಲಿ ಹೇಳುತ್ತಿದ್ದರು. "ನಿಮ್ಮ ಮನೆಯಲ್ಲಿ ಯಾರೊ ಅವಿವಾಹಿತರು ಸತ್ತಿದ್ದಾರೆ. ಅವರೇ ಹೀಗೆ ನಿಮಗೆ ದುಃಖ ಉಂಟು ಮಾಡುತ್ತಿದ್ದಾರೆ" ಆಗ ಆ ವೃದ್ಧೆ ಹೇಳಿದಳು ನಾವು ಅವರ ಬಟ್ಟೆ ಮುಂತಾದವನ್ನು ಕೊಡುತ್ತಿದ್ದೆವು.

ಆಗ ನಾನು ಆ ವೃದ್ಧೆಗೆ ಹೇಳಿದೆ ಅವರು ಪ್ರಪಂಚದ ಉದ್ಧಾರ ಮಾಡುತ್ತಿದ್ದಾರೆ. ಅಂತಹವರು ಯಾರಿಗಾದರೂ ದುಃಖ ಉಂಟುಮಾಡುತ್ತಾರೆಯೇ? ಅವರು ಈಗ ಸುಖದಾತರಾಗಿದ್ದಾರೆ. ಈಗಂತೂ ಅವರು ನಿಮ್ಮ ಕಣ್ಣಮುಂದೇ ಇದ್ದಾರೆ. ಈಗೇಕೆ ವ್ಯರ್ಥವಾಗಿ ಶ್ರಾದ್ಧ ಮಾಡುವಿರಿ? ಬಿಟ್ಟು ಬಿಡಿ ಎಂದೆ. "ಹೇಗೆ ಬಿಡಲು ಸಾಧ್ಯ? ಇದು ನಮ್ಮ ಹಿಂದಿನ ರೀತಿ-ರಿವಾಜು" ಎಂದಳು ಆ ವೃದ್ಧೆ. ಪ್ರತ್ಯಕ್ಷ ಪ್ರಮಾಣವಿದ್ದರೂ ತಪ್ಪು ಮಾಡುವುದನ್ನು ಬಿಡಲು ಸಿದ್ಧರಿಲ್ಲ. ಇದರಿಂದ ಪ್ರಮಾಣಿತವಾಗುತ್ತದೆ ಶ್ರಾದ್ಧ ಮಾಡುವುದು, ಪಿತೃ ಪೂಜೆ ಮಾಡುವುದು, ಎಲ್ಲ ವ್ಯರ್ಥವೆಂದು.

**11. ಮಕ್ಕಳ ಜನನ ಸಂಬಂಧವಾಗಿ ಶಾಸ್ತ್ರ ವಿರುದ್ಧವಾದ ಪೂಜೆ ನಿಷೇಧ :-**

ಮಕ್ಕಳ ಜನನ ಸಂಬಂಧವಾಗಿ ಸೂತಕ, ಹುಟ್ಟಿದ ಹಬ್ಬದ ಆಚರಣೆ ಮುಂತಾದವುಗಳನ್ನು

ಮಾಡಬಾರದು. ಹಾಗೂ ಆ ದಿನಗಳಲ್ಲಿ ಪ್ರತಿದಿನ ಮಾಡುತ್ತಿದ್ದ ಪೂಜೆ ಆರತಿ ಜ್ಯೋತಿ ಬೆಳಗುವುದು ಭಜನೆ ಇತ್ಯಾದಿಗಳನ್ನು ನಿಲ್ಲಿಸಬಾರದು.

ಈ ಸಂದರ್ಭಕ್ಕೆ ಸಂಬಂಧಿಸಿದ ಒಂದು ಕಥೆ ಹೇಳುತ್ತೇನೆ. ಒಬ್ಬ ವ್ಯಕ್ತಿಗೆ ಮದುವೆಯಾದ ಹತ್ತು ವರ್ಷಗಳ ನಂತರ ಪುತ್ರ ಭಾಗ್ಯವಾಯಿತು. ಈ ಖುಷಿಯನ್ನು ಬಹಳ ಸಂಭ್ರಮದಿಂದ ಆಚರಿಸಿದ 20–25 ಊರಿನ ಜನರಿಗೆ ಊಟಕ್ಕೆ ಆಮಂತ್ರಿಸಿದ್ದ. ಬಹಳ ಹಣವನ್ನು ಖರ್ಚು ಮಾಡಿದ. ಹಾಡು–ನಾಟ್ಯ ಇತ್ಯಾದಿಗಳನ್ನು ಏರ್ಪಡಿಸಿದ್ದ. ಒಂದು ವರ್ಷದ ನಂತರ ಆ ಪುತ್ರನ ಮರಣವಾಯಿತು. ಪುನಃ ಅದೇ ಪರಿವಾರದವರು ಬಹಳ ಗೋಳಾಡಿ ಅತ್ತರು, ದುಃಖಿಸಿದರು. ಇದಕ್ಕಾಗಿ ಕಬೀರ್‌ಸಾಹೇಬರು ನಮಗೆ ಹೀಗೆ ಹೇಳಿದ್ದಾರೆ :

ಕಬೀರ್, ಬೇಟಾ ಜಾಯಾ ಖುಷಿ ಹುಯಿ, ಬಹುತ್ ಬಜಾಯೆ ಥಾಲ್ ।
ಆನಾ–ಜಾನಾ ಲಗ್ ರಹಾ, ಜ್ಯೋ ಕಿಡಿ ಕಾ ನಾಲ್ ॥

ಕಬೀರ್, ಪತ್‌ಝುಡ್ ಆವತ್ ದೇಖ್ ಕರ್, ಬನ್ ರೋವೈ ಮನಮಾಹಿ ।
ಊಂಚಿ ಡಾಲಿ ಪಾತ ಥೆ, ಅಬ್ ಪೀಲೇ ಹೊ ಹೊ ಜಾಹಿ ॥

ಕಬೀರ್, ಪಾತ ಝುಡಂತಾ ಯುಂ ಕಹ್ಯೆ, ಸುನ್ ಭಾಯಿ ತರುವರ್ ರಾಯ್ ।
ಅಬ್ ಕೆ ಬಿಛುಡೆ ನಹಿ ಮಿಲಾ, ನ ಜಾನೆ ಕಹಾ ಗಿರೇಂಗೆ ಜಾಯ್ ॥

ಕಬೀರ್, ತರುವರ ಕೆಹತಾ ಪಾತ ಸೆ, ಸುನೋ ಪಾತ ಏಕ್ ಬಾತ ।
ಯಹಾ ಕೀ ಯಾಹೆ ರೀತಿ ಹೈ, ಏಕ್ ಆವತ ಏಕ ಜಾತ್ ॥

12. ದೇವಿ–ಧಾಮಗಳಿಗೆ ಕೂದಲು ಕತ್ತರಿಸುವುದಕ್ಕೆ ಹೋಗುವುದು ನಿಷೇಧ :– ಮಗುವಿನ ಕೂದಲು ತಗಿಸಲು ಯಾವುದೆ ದೇವಿ–ಧಾಮಗಳಿಗೆ ಹೋಗಬಾರದು. ಕೂದಲು ಉದ್ದ ಬೆಳೆದರೆ ಕತ್ತರಿಸಿ ಎಸೆಯಿರಿ. ಒಂದು ಮಂದಿರದಲ್ಲಿ ನೋಡಿದೆ. ಒಬ್ಬ ವ್ಯಕ್ತಿ ತನ್ನ ಮಗ–ಮಗಳ ಮುಡಿ ಕೊಡಲು ಬಂದಿದ್ದ. ಅಲ್ಲಿಯೇ ಇದ್ದ ಕ್ಷೌರಿಕನು ಮಕ್ಕಳ ತಲೆಯಿಂದ ಒಮ್ಮೆ ಕತ್ತರಿ ಹಾಕಿ ಕೊಂಚ ಕೂದಲನ್ನು ಕತ್ತರಿಸಿ ತಾಯಿ–ತಂದೆಗೆ ಕೊಟ್ಟ. ಅವನು ಹೊರಗಿನ ಬೆಲೆ ಮೂರರಷ್ಟು ದುಡ್ಡು ಹೆಚ್ಚು ತೆಗೆದುಕೊಂಡ. ಅವರು ಅದನ್ನು ಶ್ರದ್ಧೆಯಿಂದ ಮಂದಿರಕ್ಕೆ ಅರ್ಪಿಸಿದರು. ಪೂಜಾರಿ ಆ ಕೂದಲನ್ನು ಒಂದು ಚೀಲಕ್ಕೆ ಹಾಕಿದ ರಾತ್ರಿ ಆ ಕೂದಲನ್ನು ದೂರ ಬಿಸಾಕಿದ. ಇದು ಕೇವಲ ನಾಟಕೀಯ ವಿಧಾನ. ಸ್ವಾಭಾವಿಕ ರೀತಿಯಲ್ಲಿ ಕೂದಲನ್ನು ಕತ್ತರಿಸಿ ಹೊರಗೆ ಹಾಕಬಾರದಿತ್ತೆ. ಪರಮಾತ್ಮನು ನಾಮ ಸ್ಮರಣೆಯಿಂದ ಪ್ರಸನ್ನನಾಗುತ್ತಾನೆ ಮೂಢನಂಬಿಕೆಗಲ್ಲ.

13. ನಾಮ ಜಪದಿಂದ ಸುಖ :– ನಾಮೋಪದೇಶವನ್ನು ದುಃಖ ನಿವಾರಣೆಗೆ ಮಾತ್ರ ಪಡೆಯಬೇಡಿ. ಬದಲಾಗಿ ಆತ್ಮ ಕಲ್ಯಾಣಕ್ಕಾಗಿ ನಾಮೋಪದೇಶ ಪಡೆದು, ನಾಮ ಜಪ ಮಾಡಿರಿ. ನಾಮಜಪದಿಂದ ಎಲ್ಲ ಸುಖ ತನಗೆ ತಾನೇ ಲಭ್ಯವಾಗುತ್ತದೆ.

ಕಬೀರ್, ಸುಮೀರಣ್ ಸೆ ಸುಖ್ ಹೋತ್ ಹೈ, ಸುಮಿರಣ್ ಸೆ ದುಃಖ ಜಾಯೆ ।
ಕಹ್ಯೆ ಕಬೀರ್ ಸುಮಿರಣ್ ಕಿಯೆ, ಸಾಂಯಿ ಮಾಹಿ ಸಮಾಯ್ ॥

14. ವ್ಯಭಿಚಾರ ನಿಷೇಧ :– ಪರಸ್ತ್ರೀಯನ್ನು ತಾಯಿ–ಮಗಳು–ಸೋದರಿಯ ರೂಪದಲ್ಲಿ ನೋಡಬೇಕು. ವ್ಯಭಿಚಾರವು ಮಹಾಪಾಪ. ಹೇಗೆಂದರೆ :–

ಗರೀಬ್, ಪರದ್ವಾರಾ ಸ್ತ್ರೀ ಕಾ ಖೋಲೈ, ಸತ್ತರ್ ಜನ್ಮ ಅಂಧಾ ಹೊ ಡೋಲೈ ॥

ಸುರಾಪಾನ್ ಮಧ್ಯ ಮಾಂಸಾಹಾರಿ, ಗಮನ ಕರೆ ಭೋಗ್ಯೆ ಪರ ನಾರಿ ।
ಸತ್ತರ ಜನ್ಮ ಕಟತ್ ಹೈ ಶೀಶಂ, ಸಾಕ್ಷಿ ಸಾಹಿಬ್ ಹೈ ಜಗದೀಶ್ಂ ॥

ಪರ ನಾರೀ ನಾ ಪರಸಿಯೊ, ಮಾನೋ ವಚನ ಹಮಾರ್ ।
ಭವನ್ ಚತುರ್ದಶ ತಾಸ ಸಿರ, ತ್ರಿಲೋಕೀ ಕಾ ಭಾರ್ ॥

ಪರ ನಾರೀ ನಾ ಪರಸಿಯೊ, ಸುನೋ ಶಬ್ದ ಸಲತಂತ್ ।
ಧರ್ಮರಾಯ್ ಕೆ ಖಂಭ ಸೆ, ಅರ್ಧಮುಖೀ ಲಟಕಂತ್ ॥

**15.** **<u>ನಿಂದಿಸುವುದು ಮತ್ತು ನಿಂದೆ ಕೇಳುವುದು ನಿಷೇಧ</u> :– ನಿಮ್ಮ ಗುರುಗಳ ನಿಂದೆಯನ್ನು ಮರೆತೂ ಸಹ ಮಾಡಬೇಡಿರಿ. ಹಾಗೂ ಗುರು ನಿಂದೆ ಕೇಳಬೇಡಿರಿ. ಒಂದು ವೇಳೆ ನಿಮ್ಮ ಗುರುಗಳ ಬಗ್ಗೆ ಯಾರಾದರೂ ಸುಳ್ಳು ಮಾತನ್ನಾಡಿದರೆ, ನೀವು ಅವರೊಂದಿಗೆ ಜಗಳ ಮಾಡಬೇಡಿ. ಅವನು ವಿಚಾರ ಮಾಡದೆ ಮಾತನಾಡುತ್ತಿದ್ದಾನೆ. ಅಂದರೆ ಸುಳ್ಳು ಹೇಳುತ್ತಿದ್ದಾನೆ.**

ಗುರು ಕೀ ನಿಂದಾ ಸುನ್ಯೆ ಜೊ ಕಾನಾ । ತಾಕೊ ನಿಶ್ಚಯ್ ನರಕ್ ನಿದಾನಾ ॥
ಅಪನೆ ಮುಖ ನಿಂದಾ ಜೊ ಕರಹೀ । ಶುಕರ–ಶ್ವಾನ ಗರ್ಭ್ ಮೆ ಪರಹೀ ॥

**ಯಾರನ್ನೂ ನಿಂದಿಸಬಾರದು ಹಾಗೂ ನಿಂದೆ ನುಡಿಗಳನ್ನು ಕೇಳಬಾರದು. ಅವನು ಸಾಮಾನ್ಯ ವ್ಯಕ್ತಿ ಇದ್ದರು ಸಹ. ಕಬೀರ್ ಸಾಹೇಬರು ಹೇಳುತ್ತಾರೆ.**

ತಿನಕಾ ಕಬಹೂ ನ ನಿಂದಿಯೆ, ಜೊ ಪಾಂವ ತಲೆ ಹೋ ।
ಕಬಹು ಉಡ್ ಆಖಿನ್ ಪಡೆ, ಪೀರ್ ಘನೇರೀ ಹೋ ॥

**16.** **<u>ಗುರು ದರ್ಶನದ ಮಹಿಮೆ</u> :– ಸಮಯ ಸಿಕ್ಕಾಗ ಸತ್ಸಂಗಕ್ಕೆ ಬರುವ ಪ್ರಯತ್ನ ಮಾಡಿರಿ, ಸತ್ಸಂಗದಲ್ಲಿ ಗೌರವ ಹೆಚ್ಚಿಸಲು ಬರಬೇಡಿ, ನಿಮ್ಮನ್ನು ನೀವು ಒಬ್ಬ ರೋಗಿ ಎಂದು ತಿಳಿದುಕೊಂಡು ಬನ್ನಿರಿ. ರೋಗಿ ಎಷ್ಟೇ ಧನಿಕವಾಗಿರಲಿ, ಉನ್ನತ ಪದವಿಯಲ್ಲಿರಲಿ, ಆಸ್ಪತ್ರೆಗೆ ಹೋಗುವ ಉದ್ದೇಶ ಅವನು ರೋಗ ಮುಕ್ತನಾಗಲು. ಅಲ್ಲಿ ವೈದ್ಯರು ಮಲಗಲು ಹೇಳಿದರೆ ಮಲಗುವರು. ಕುಳಿತುಕೊಳ್ಳಲು ಹೇಳಿದರೆ ಕುಳಿತುಕೊಳ್ಳುವರು. ಹೊರಗೆ ಹೋಗಲು ತಿಳಿಸಿದೊಡನೆ ಹೊರಹೋಗುವರು. ಪುನಃ ಒಳಗೆ ಬರಬೇಕೆಂದು ಕರೆದರೆ ಸುಮ್ಮನೆ ಒಳಗೆ ಹೋಗುವರು. ಇದೇ ರೀತಿ ನೀವು ಸತ್ಸಂಗಕ್ಕೆ ಬಂದರೆ, ಅಲ್ಲಿಗೆ ಬಂದ ಲಾಭ ದೊರೆಯುತ್ತದೆ ಇಲ್ಲವಾದಲ್ಲಿ ನಿಷ್ಫಲವಾಗುತ್ತದೆ. ಸತ್ಸಂಗದಲ್ಲಿ ಎಲ್ಲಿ ಕೂರಲು ಸ್ಥಳ ದೊರೆವುದೋ ಅಲ್ಲೇ ಕುಳಿತುಕೊಳ್ಳಬೇಕು. ತಿನ್ನಲು ಏನು ಕೊಟ್ಟರೂ ಅದನ್ನು ಕಬೀರ್ ಪರಮಾತ್ಮರ ಪ್ರಸಾದವೆಂದು ಸಂತೋಷದಿಂದ ಸ್ವೀಕರಿಸಬೇಕು.**

ಕಬೀರ್, ಸಂತ ಮಿಲನ್ ಕು ಚಾಲಿಯೆ, ತಜ್ ಮಾಯಾ ಅಭಿಮಾನ್ ।
ಜ್ಯೋ–ಜ್ಯೋ ಕದಮ್ ಆಗೆ ರಖೆ, ವೋ ಹೀ ಯಜ್ಞ ಸಮಾನ್ ॥

ಕಬೀರ್, ಸಂತ ಮಿಲನ್ ಕು ಜಾಯಿಯೆ, ದಿನ್ ಮೆ ಕಯಿ–ಕಯಿ ಬಾರ್ ।
ಆಸೋಜ್ ಕೆ ಮೇಹ್ ಜ್ಯೋ, ಘನಾ ಕರೇ ಉಪಕಾರ್ ॥

ಕಬೀರ್, ದರ್ಶನ ಸಾಧು ಕಾ, ಪರಮಾತ್ಮಾ ಆವೈ ಯಾದ್ ।
ಲೇಖೆ ಮೆ ವೋಹೇ ಘಡೀ, ಬಾಕೀ ಕೆ ದಿನ್ ಬಾದ್ ॥

ಕಬೀರ್, ದರ್ಶನ್ ಸಾಧು ಕಾ, ಮುಖ ಪರ್ ಬಸೈ ಸುಹಾಗ್ ।
ದರ್ಶ್ ಉನ್ಹೀ ಕೊ ಹೋತ ಹೈ, ಜಿನಕೆ ಪೂರ್ಣ ಭಾಗ್ ॥

**17.** **<u>ಗುರು ಮಹಿಮೆ</u> :– ಎಲ್ಲಿಯಾದರೂ ಪಾಠ ಪ್ರವಚನ, ಸತ್ಸಂಗವಾಗುತ್ತಿದ್ದರೆ ಅಥವಾ ಗುರುವಿನ ದರ್ಶನಕ್ಕೆ ಹೊದರೆ ಮೊದಲು ಗುರುವಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. ನಂತರ**

**ಸದ್‌ಗ್ರಂಥ ಸಾಹೇಬ್ ಹಾಗೂ ಕಬೀರ್ ಸಾಹೇಬರ, ಗರೀಬ್ ದಾಸರ, ಸ್ವಾಮಿ ರಾಮದೇವಾನಂದ್‌ರ ಭಾವಚಿತ್ರಕ್ಕೆ ಭಕ್ತಿಯಿಂದ ನಮಸ್ಕಾರ ಮಾಡಿ. ಇದು ಮೂರ್ತಿ ಪೂಜೆಯಲ್ಲ. ನಮಸ್ಕಾರವು ನಿಮ್ಮಲ್ಲಿ ಶ್ರದ್ಧಾಭಾವವನ್ನು ಜಾಗೃತಮಾಡುತ್ತದೆ. ವರ್ತಮಾನ ಗುರುವಿನ ಪೂಜೆ ಹಾಗು ನಾಮ ಮಂತ್ರ ಪಠಿಸುವುದರಿಂದ ಸಂಸಾರದಿಂದ ಪಾರಾಗಬಹುದು.**

ಕಬೀರ್, ಗುರು–ಗೋವಿಂದ್ ದೋವು ಖಡೆ, ಕಾಕೇ ಲಾಗೂ ಪಾಯ್ ।
ಬಲಿಹಾರಿ ಗುರು ಆಪನೆ, ಜಿನ್ ಗೋವಿಂದ ದಿಯೋ ಮಿಲಾಯ್ ॥

ಕಬೀರ್, ಗುರು ಬಡೆ ಹೈ ಗೋವಿಂದ ಸೆ, ಮನ್ ಮೆ ದೇಖ್ ವಿಚಾರ್ ।
ಹರಿ ಸುಮಿರೆ ಸೋ ರಹ್ ಗಯೆ, ಗುರು ಭಜೆ ಹೋಯ್ ಪಾರ್ ॥

ಕಬೀರ್, ಹರೀ ಕೆ ರೂಠತಾ, ಗುರು ಕೀ ಶರಣ್ ಮೇ ಜಾಯ್ ।
ಕಬೀರ್ ಗುರು ಜೈ ರೂಠಜಾ, ಹರಿ ನಹೀ ಹೋತ್ ಸಹಾಯ್ ॥

ಕಬೀರ್, ಸಾತ್ ಸಮುಂದರ್ ಕೀ ಮಸಿ ಕರೂ, ಲೇಖನಿ ಕರೂ ಬನಿರಾಯ್ ।
ಧರತೀ ಕಾ ಕಾಗಜ ಕರೂ, ತೋ ಗುರು –ಗುನ ಲಿಖಾ ನ ಜಾಯ್ ॥ 18.

**18. <u>ಮಾಂಸ ಭಕ್ಷಣ ನಿಷೇಧ</u> :– ಮೊಟ್ಟೆ ಹಾಗೂ ಮಾಂಸವನ್ನು ತಿನ್ನುವುದು ಹಾಗೂ ಜೀವ ಹಿಂಸೆ ಮಾಡಬಾರದು. ಇದು ಮಹಾಪಾಪ. ಕಬೀರ್ ಪರಮೇಶ್ವರರು ಮತ್ತು ಗರೀಬ್‌ದಾಸ್ ಮಹಾರಾಜ್‌ರು ಹೀಗೆ ಹೇಳಿದ್ದಾರೆ :**

ಕಬೀರ್, ಜೀವ ಹನೆ ಹಿಂಸಾ ಕರೆ, ಪ್ರಕಟ್ ಪಾಪ್ ಸಿರ್ ಹೋಯ್ ।
ನಿಗಮ ಪುನಿ ಐಸೆ ಪಾಪ್ ತೆ, ಭಿಸ್ತ ಗಯಾ ನಹೀ ಕೋಯ್ ॥ 1 ॥

ಕಬೀರ್, ತಿಲ್ ಭರ್ ಮಛಲೀ ಖಾಯಕೆ, ಕೋಟಿ ಗವು ದೆ ದಾನ್ ।
ಕಾಶೀ ಕರೌತ್ ಲೆ ಮರೆ, ತೋ ಭೀ ನರಕ ನಿದಾನ್ ॥ 2 ॥

ಕಬೀರ್, ಬಕರೀ ಪಾತೀ ಖಾತ್ ಹೈ, ತಾಕೀ ಕಾಢೀ ಖಾಲ್ ।
ಜೊ ಬಕರೀ ಕೊ ಖಾತ್ ಹೈ, ತಿನಕಾ ಕೌನ್ ಹವಾಲ್ ॥ 3 ॥

ಕಬೀರ್, ಗಲಾ ಕಾಟಿ ಕಲಮಾ ಭರೆ, ಕೀಯಾ ಕಹೈ ಹಲಾಲ್ ।
ಸಾಹೇಬ್ ಲೇಖಾ ಮಾಂಗಸೀ, ತಬ ಹೋಸೀ ಕೌನ್ ಹವಾಲ್ ॥4॥

ಕಬೀರ್, ದಿನ್ ಕೋ ರೋಜಾ ರಹತ್ ಹೈ, ರಾತ್ ಹನತ್ ಹೈ ಗಾಯ್ ॥
ಯಹ್ ಖೂನ್ ವಹ್ ವಂದಗೀ, ಕಹು ಕ್ಯೋಂ ಖುಷಿ ಖುದಾಯ್ ॥5॥

ಕಬೀರ್, ಕಬಿರಾ ತೇಯಿ ಪೀರ್ ಹೈ, ಜೋ ಜಾನೈ ಪರ ಪೀರ್ ।
ಜೋ ಪರ್ ಪೀರ್ ನ ಜಾನಿ ಹೈ, ಸೊ ಕಾಫಿರ್ ಬೆಪೀರ್ ॥ 6 ॥

ಕಬೀರ್, ಖೂಬ್ ಖಾನಾ ಹೈ ಖೀಚಡಿ, ಮಾಂಹಿ ಪರೀ ಟುಕ್ ಲೌನ್ ।
ಮಾಂಸ ಪರಾಯಾ ಖಾಯಕೈ, ಗಲಾ ಕಟಾವೈ ಕೌನ್ ॥ 7 ॥

ಕಬೀರ್, ಮುಸಲಮಾನ್ ಮಾರೈ ಕರದಸೋ, ಹಿಂದೂ ಮಾರೈ ತರವಾರ್ ।
ಕಹೈ ಕಬೀರ್ ದೋನೋ ಮಿಲಿ, ಜೈ ಹೈ ಯಮಕೆ ದ್ವಾರ್ ॥ 8 ॥

ಕಬೀರ್, ಮಾಂಸ ಅಹಾರಿ ಮಾನವ, ಪ್ರತ್ಯಕ್ಷ ರಾಕ್ಷಸ ಜಾನಿ ।
ತಾಕೀ ಸಂಗತಿ ಮತಿ ಕರೈ, ಹೋಯಿ ಭಕ್ತಿ ಮೇ ಹಾನಿ ॥ 9 ॥

ಕಬೀರ್, ಮಾಂಸ ಖಾಯ್ ತೆ ಢೇಡ್ ಸಬ್, ಮದ್ ಪೀವೈ ಸೊ ನೀಚ್ ।
ಕುಲಕೀ ದುರಮತಿಪರ್ ಹರೈ, ರಾಮ ಕಹೈ ಸೋ ಊಂಭ್ ॥ 10 ॥

ಕಬೀರ್, ಮಾಂಸ–ಮಚಲಿಯಾ ಖಾತ್ ಹೈ, ಸುರಾಪಾನ್ ಸೆ ಹೇತ್ ।
ತೆ ನರ ನರಕೈ ಜಾಹಿಂಗೆ, ಮಾತಾ ಪಿತಾ ಸಮೇತ್ ॥ 11 ॥

ಗರೀಬ್, ಜೀವ ಹಿಂಸಾ ಜೋ ಕರತೆ ಹೈ, ಯಾ ಆಗೆ ಕ್ಯಾ ಪಾಪ್ ।
ಕಂಟಕ್ ಜುನೀ ಜಿಹಾನ್ ಮೆ ಸಿಂಹ ಭೇಡಿಯಾ ಔರ್ ಸಾಂಪ್ ॥

ಝೋಟೆ ಬಕರೆ ಮುರಗೆ ತಾಯಿ । ಲೇಖಾ ಸಬ್ ಹೀ ಲೆತ್ ಗುಸಾಯಿ ॥

ಮೃಗ್ ಮೋರ್ ಮಾರೆ ಮಹಮಂತಾ । ಅಚರಾ ಚರ್ ಹೈ ಜೀವ ಅನಂತಾ ॥

ಜಿಹ್ವಾ ಸ್ವಾದ್ ಹಿತೈ ಪ್ರಾನಾ । ನೀಮಾ ನಾಶ್ ಗಯಾ ಹಮ್ ಜಾನಾ ॥

ತೀತರ್ ಲವಾ ಬುಟೇರೀ ಚಿಡಿಯಾ । ಖೂನಿಮಾರೆ ಬಡೆ ಅಗಡಿಯಾ ॥

ಅದಲೆ ಬದಲೆ ಲೇಖೇ –ಲೇಖಾ । ಸಮಝ್ ದೇಖ್ ಸುನ್ ಜ್ಞಾನ ವಿವೇಕಾ ॥

ಗರೀಬ್, ಶಬ್ದ್ ಹಮಾರಾ ಮಾನಿಯೋ, ಔರ್ ಸುನತೇ ಹೋ ನರ ನಾರಿ ।
ಜೀವ ದಯಾ ಬಿನ್ ಕುಫರ್ ಹೈ, ಚಲೆ ಜಮಾನಾ ಹಾರಿ ॥

**ಗೊತ್ತಿಲ್ಲದೆ ಆದ ಹಿಂಸೆಯಿಂದ ಪಾಪ ಬರುವುದಿಲ್ಲ. ಮುಕ್ತಿದಾತ ಕಬೀರ್ ಪರಮೇಶ್ವರರು ಹೇಳುತ್ತಾರೆ.**

ಇಚ್ಛಾಕರ್ ಮಾರೇ ನಹೀ, ಬಿನ್ ಇಚ್ಛಾ ಮರ್ ಜಾಯೇ ।
ಕಹೈ ಕಬೀರ್ ತಾಸ್ ಕಾ, ಪಾಪ್ ನಹೀ ಲಗಾಯೇ ॥

**19. <u>ಗುರುದ್ರೋಹಿಯ ಸಂಪರ್ಕ ನಿಷೇಧ</u> :– ಯಾವುದೇ ಭಕ್ತನು ಗುರುವಿಗೆ ದ್ರೋಹ ಮಾಡಿದರೆ ಅವನು ಮಹಾಪಾಪಕ್ಕೆ ಭಾಗಿಯಾಗುತ್ತಾನೆ. ಒಂದು ವೇಳೆ ಆ ಗುರುವಿನ ಮಾರ್ಗ ಸರಿಯಿಲ್ಲ ಎನಿಸಿದರೆ ಗುರುವನ್ನು ಬದಲಾಯಿಸಬಹುದು. ಹಿಂದಿನ ಗುರುವಿನೊಂದಿಗೆ ದ್ವೇಷ ವಿರಿಸಿಕೊಂಡು ಅವರನ್ನು ನಿಂದಿಸಿದರೆ, ಅಂತಹವರನ್ನು ಗುರುದ್ರೋಹಿ ಎನ್ನುತ್ತಾರೆ. ಈ ರೀತಿಯ ಗುರುದ್ರೋಹಿಗಳೊಂದಿಗೆ ಭಕ್ತಿ ವಿಚಾರದ ಚರ್ಚೆ ಮಾಡುವುದೂ ಸಹ ದೋಷವಾಗುತ್ತದೆ. ಚರ್ಚೆ ಮಾಡಲು ಬಂದವನ ಭಕ್ತಿ ನಾಶವಾಗುತ್ತದೆ.**

ಗರೀಬ್, ಗುರು ದ್ರೋಹೀ ಕೀ ಪೈಡ್ ಪರ್, ಜೆ ಪಗ್ ಆವೈ ಬೀರ್ ।
ಚೌರಾಸಿ ನಿಶ್ಚಯ ಪಡೈ, ಸತ್‌ಗುರು ಕಹೈ ಕಬೀರ್ ॥

ಕಬೀರ್, ಜಾನ್ ಬುಝ್ ಸಾಚೀ ತಜೈ, ಕರೈ ಝೂಠೇ ಸೇ ನೇಹ್ ।
ಜಾಕೀ ಸಂಗತಿ ಹೇ ಪ್ರಭು, ಸ್ವಪ್ನ ಮೇಭೀ ನಾ ದೇಹ್ ॥

**ಅರ್ಥಾತ್ ಗುರುದ್ರೋಹಿಯ ಹತ್ತಿರ ಹೋಗುವವನು ತನ್ನ ಭಕ್ತಿಯನ್ನು ಕಳೆದುಕೊಂಡು ನರಕ ವಾಸಿಯಾಗುತ್ತಾನೆ. ಹಾಗೂ 84 ಲಕ್ಷ ಯೋನಿಗಳಲ್ಲಿ ಹುಟ್ಟುತ್ತಾನೆ.**

**20. <u>ಜೂಜು ನಿಷೇಧ</u> :– ಜೂಜು ಹಾಗೂ ಇಸ್ಪೀಟ್ ಆಟವನ್ನು ಎಂದೂ ಆಡಬಾರದು.**

ಕಬೀರ್, ಮಾಂಸ ಭಖೈ ಔರ್ ಮದ್ ಪಿಯೆ ಧನ ವೇಶ್ಯಾಸೋ ಖಾಯ್ ।
ಜುವಾ ಖೇಲೀ ಚೋರಿ ಕರೈ, ಅಂತ ಸಮೂಲಾ ಜಾಯ್ ॥

**21. <u>ಹಾಡು–ನೃತ್ಯಗಳು ನಿಷೇಧ</u> :– ಯಾವುದೇ ಸಂತೋಷದ ಸಮಯದಲ್ಲಿ ನರ್ತಿಸುವುದು ಹಾಗೂ ಅಶ್ಲೀಲವಾದ ಹಾಡುಗಳನ್ನು ಹಾಡುವುದು ಭಕ್ತಿ ಭಾವಕ್ಕೆ ವಿರುದ್ಧವಾಗಿದೆ. ಒಮ್ಮೆ ಒಬ್ಬಳು**

ವಿಧವೆ ಸೋದರಿ ಯಾವುದೋ ಸಂತೋಷದ ಸಂಧರ್ಭದಲ್ಲಿ ನೆಂಟರ ಮನೆಗೆ ಹೋಗಿದ್ದಳು. ಎಲ್ಲರೂ ಸಂತೋಷದಿಂದ ಹಾಡಿ ಕುಣಿಯುತ್ತಿದ್ದರು. ಆದರೆ ಈ ಸೋದರಿ ಒಂದು ಜಾಗದಲ್ಲಿ ಕುಳಿತು ದೇವರ ಧ್ಯಾನ ಮಾಡುತ್ತಿದ್ದಳು. ನೀನೇಕೆ ನಿರಾಶಾ ಭಾವದಲ್ಲಿರುವೆ? ಎಂದು ಅವರ ನೆಂಟರಲ್ಲಿ ಒಬ್ಬರು ಕೇಳಿದರು. ಬಾ ನೀನೂ ಸಹ ನಮ್ಮ ಜೊತೆ ಹಾಡು ನರ್ತಿಸು, ಸಂಭ್ರಮಿಸು ಎಂದರು. ಯಾವ ಸಂತೋಷಕ್ಕೆ ಖುಷಿ ಆಚರಿಸಲಿ, ಇದ್ದ ಒಬ್ಬ ಮಗನು ಮರಣ ಹೊಂದಿದ ಈಗ ಇನ್ನೇನು ಖುಷಿ ಉಳಿದಿದೆ ನನ್ನ ಜೀವನದಲ್ಲಿ ಎಂದು ಹೇಳಿದಳು. ಈ ಕಾಲನ ಲೋಕದಲ್ಲಿ ಪ್ರತಿಯೊಬ್ಬರ ಸ್ಥಿತಿಯೂ ಹೀಗೇ ಇದೆ.

**ಗುರು ನಾನಕ್‌ದೇವ ರವರ ವಾಣಿ :–**

ನಾ ಜಾನೇ ಕಾಲ್ ಕೀ ಕರ ಡಾರ್‍ಯೆ, ಕಿಸ್ ವಿಧಿ ಢಲ್ ಪಾಸಾ ವೇ ।
ಜಿನ್ಹಾದೆ ಸಿರ್ ತೆ ಮೌತ್ ಖುಡಗದೀ, ಉನ್ಹಾನೂ ಕೇಡಾ ಹಾಂಸಾ ವೇ ॥
ಸಾದ್ ಮಿಲೆ ಸಾಡೀ ಶಾದೀ (ಖುಷೀ) ಹೊಂದೀ, ಬಿಛಡ್ ದಾ ದಿಲ್ ಗಿರಿಷ (ದುಃಖ) ವೆ
ಅಖದೇ ನಾನಕ್ ಸುನೋ ಜಿಹಾನಾ, ಮುಶ್ಕಿಲ್ ಹಾಲ ಫಕೀರೀ ವೇ ॥

**ಕಬೀರ್ ಪರಮೇಶ್ವರರು ಹೇಳುತ್ತಾರೆ :–**

ಕಬೀರ್, ಝೂಠೆ ಸುಖ್ ಕೊ ಸುಖ್ ಕಹ್ಯೆ, ಮಾನ್ ರಹಾ ಮನ ಮೋದ್ ।
ಸಕಲ್ ಚಬೀನಾ ಕಾಲ ಕಾ, ಕುಛ್ ಮುಖ್ ಮೆ ಕುಛ್ ಗೋದ್ ॥

ಕಬೀರ್, ಬೇಟಾ ಜಾಯಾ ಖುಶೀ ಹುಯಿ, ಬಹುತ್ ಬಜಾಯೆ ಥಾಲ್ ।
ಆವಣ ಜಾಣಾ ಲಗ್ ರಹಾ, ಜ್ಯೋ ಕೀಡೀ ಕಾ ನಾಲ್ ॥

**ವಿಶೇಷ :–** ಸ್ತ್ರೀ ಮತ್ತು ಪುರುಷ ಇಬ್ಬರೂ ಪರಮಾತ್ಮನ ಪ್ರಾಪ್ತಿಗೆ ಅಧಿಕಾರಿಗಳು. ಸ್ತೀಯರು ತಮ್ಮ ಮಾಸಿಕ ಋತು ಚಕ್ರದ ಸಮಯದಲ್ಲೂ ತಮ್ಮ ದಿನನಿತ್ಯದ ಪೂಜೆ, ದೀಪ ಹಚ್ಚುವುದು ಮುಂತಾದವುಗಳನ್ನು ನಿಲ್ಲಿಸಬಾರದು. ಇಷ್ಟೇ ಅಲ್ಲ ಯಾರಾದರೂ ಮರಣಹೊಂದಿದಾಗ ಸೂತಕದ ಕಾರಣದಿಂದಾಗಿ ಮೈಲಿಗೆ ಎಂದು ದೀಪ ಹಚ್ಚುವ ಪೂಜೆ ಮಾಡುವ ಕಾರ್ಯ ನಿಲ್ಲಿಸಬಾರದು.

**ಸೂಚನೆ :–** ಯಾವ ಭಕ್ತಜನರು ಈ 21 ಸೂತ್ರದ ಆದೇಶಗಳ ಪಾಲನೆ ಮಾಡುವುದಿಲ್ಲವೋ, ಅವನು ನಾಮ ರಹಿತನಾಗುತ್ತಾನೆ. ನಾಮೋಪದೇಶದ ಮಹಿಮೆ ಅಂತ್ಯವಾಗುವುದು ಒಂದು ವೇಳೆ ತಿಳಿಯದೆ ಯಾವುದಾದರೂ ತಪ್ಪು ಆದರೆ ಅದು ಕ್ಷಮಿಸಲ್ಪಡುತ್ತದೆ. ಆದರೆ ತಿಳಿದೂ–ತಿಳಿದೂ ಯಾರಾದರೂ ತಪ್ಪು ಮಾಡಿದರೆ, ಆ ಭಕ್ತನು ನಾಮ ರಹಿತನಾಗುವನು. ಇದಕ್ಕೆ ಸಮಾಧಾನ ಗುರುದೇವರಲ್ಲಿ ಕ್ಷಮೆಯಾಚಿಸಿ, ಪುನಃ ನಾಮೋಪದೇಶವನ್ನು ಪಡೆಯ ಬೇಕಾಗುವುದು.

# ಕಬೀರ್ ಪರಮೇಶ್ವರರ ಅಸಂಖ್ಯ ಬ್ರಹ್ಮಾಂಡಗಳ ಲಘು ಚಿತ್ರ

ಅನಾಮಿ ಲೋಕ : ಈ ಲೋಕದಲ್ಲೂ ಸಹ ಕಬೀರ್ ಪರಮೇಶ್ವರರು ಅನಾಮಿ ಪುರುಷನ ರೂಪದಲ್ಲಿರುತ್ತಾರೆ

ಅಗಮ ಲೋಕ : ಈ ಲೋಕದಲ್ಲೂ ಸಹ ಕಬೀರ್ ಪರಮೇಶ್ವರರು ಅಗಮ ಪುರುಷನ ರೂಪದಲ್ಲಿರುತ್ತಾರೆ

ಅಲಖ ಲೋಕ : ಈ ಲೋಕದಲ್ಲೂ ಸಹ ಕಬೀರ್ ಪರಮೇಶ್ವರರು ಅಲಖ ಪುರುಷನ ರೂಪದಲ್ಲಿರುತ್ತಾರೆ



# 2. ಸೃಷ್ಠಿ ರಚನೆ

## (ಸೂಕ್ಷ್ಮ ವೇದದಿಂದ ನಿಷ್ಕರ್ಷ ರೂಪ ಸೃಷ್ಠಿ ರಚನೆಯ ವರ್ಣನೆ)

ಪ್ರಭುವಿನಲ್ಲಿ ಪ್ರೇಮವಿರುವ ಆತ್ಮಗಳೇ! ಮೊದಲ ಬಾರಿ ಕೆಳಗಿನ ಸೃಷ್ಠಿಯ ರಚನೆಯ ಬಗ್ಗೆ ಓದಿದರೆ, ಇದೊಂದು ದಂತಕಥೆಯೆನಿಸದೆ ಇರದು. ಆದರೆ ಎಲ್ಲ ಪವಿತ್ರ ಗ್ರಂಥಗಳಲ್ಲಿ ಪ್ರಮಾಣವನ್ನು ಓದಿದರೆ ಆಶ್ಚರ್ಯವಾಗುವುದು. ಈ ವಾಸ್ತವಿಕ ಜ್ಞಾನದ ಅರಿವು ಎಲ್ಲಿ ಅಡಗಿತ್ತು? ದಯಮಾಡಿ ಧೈರ್ಯದೊಂದಿಗೆ ಓದಿರಿ. ಹಾಗೂ ಈ ಅಮೃತಜ್ಞಾನವನ್ನು ಸುರಕ್ಷಿತವಾಗಿ ಕಾಪಾಡಿರಿ. ಇದು ನಿಮ್ಮ ಮುಂದಿನ ನೂರಾ ಒಂದನೆಯ ಪೀಳಿಗೆಯವರೆಗೂ ಉಪಯೋಗಕ್ಕೆ ಬರುವುದು. ಪವಿತ್ರ ಆತ್ಮಗಳೇ ! ದಯಮಾಡಿ ಸತ್ಯ ನಾರಾಯಣನ (ಅವಿನಾಶಿ ಪ್ರಭು/ ಸತ್ಯಪುರುಷ) ಮೂಲಕ ರಚಿತವಾಗಿರುವ ಸೃಷ್ಠಿಯ ವಾಸ್ತವಿಕ ಜ್ಞಾನವನ್ನು ಓದಿ ತಿಳಿಯಿರಿ.

1. ಪೂರ್ಣ ಬ್ರಹ್ಮ :– ಈ ಸೃಷ್ಠಿ ರಚನೆಯ ಕಾರ್ಯ ಆ ಪೂರ್ಣ ಬ್ರಹ್ಮನಿಂದ ಆಗಿದೆ. ಆ ಪೂರ್ಣ ಬ್ರಹ್ಮನು ಸತ್ಯಲೋಕದಲ್ಲಿ ಸತ್ಯಪುರುಷ, ಅಲಖ್‌ಲೋಕದಲ್ಲಿ ಅಲಖ್‌ಪುರುಷ, ಅಗಮ್‌ಲೋಕ (ದುಃಖವಿಲ್ಲದ ಲೋಕದ) ದಲ್ಲಿ ಅಗಮ್‌ಪುರುಷ ಹಾಗೂ ಅನಾಮಿ/ ಅಕಹ ಲೋಕದಲ್ಲಿ ಅನಾಮಿ/ ಅಕಹ ಪುರುಷ ಈ ಎಲ್ಲ ಲೋಕಗಳಲ್ಲೂ ಇರುವವರು ಒಬ್ಬನೇ ಪೂರ್ಣ ಬ್ರಹ್ಮ ಅವನೇ ವಾಸ್ತವದಲ್ಲಿ ಅವಿನಾಶಿ (ನಾಶವಿಲ್ಲದ–ಶಾಶ್ವತ) ಯಾಗಿದ್ದಾನೆ. ಆ ಪ್ರಭುವೇ ಭಿನ್ನ–ಭಿನ್ನ ರೂಪ ಧಾರಣೆ ಮಾಡಿ, ತನ್ನ ನಾಲ್ಕೂ ಲೋಕಗಳಲ್ಲಿ ಇರುವನು. ಅವನ ಅಧಿನದಲ್ಲಿ ಅಸಂಖ್ಯಾ (ಎಣಿಸಲಾರದ) ಬ್ರಹ್ಮಾಂಡಗಳು ಇವೆ.

2. ಪರಬ್ರಹ್ಮ :– ಇವನು ಕೇವಲ 7 ಸಂಖ ಬ್ರಹ್ಮಾಂಡದ ಪ್ರಭು ಇವನನ್ನು ಅಕ್ಷರ ಪುರುಷನೆಂದೂ ಹೇಳುತ್ತಾರೆ. ಆದರೆ ಇವನು ಹಾಗೂ ಇವನ ಬ್ರಹ್ಮಾಂಡವು ಸಹ, ವಾಸ್ತವವಾಗಿ ಅವಿನಾಶಿಯಲ್ಲ. (ಶಾಶ್ವತವಲ್ಲದ್ದು)

3. ಬ್ರಹ್ಮ :– ಇವನು ಕೇವಲ 21 ಬ್ರಹ್ಮಾಂಡದ ಪ್ರಭು ಇವನನ್ನು ಕ್ಷರ ಪುರುಷ (ಕ್ಷರ–ನಾಶ, ಲಯ, ಅಳಿವು) ಜ್ಯೋತಿನಿರಂಜನ, ಕಾಲ, ಮುಂತಾದ ಉಪಮೆಗಳೊಂದಿಗೆ ತಿಳಿಯಲಾಗುತ್ತದೆ. ಇವನು ಹಾಗೂ ಇವನ ಸರ್ವ ಬ್ರಹ್ಮಾಂಡವು ನಾಶವಾಗುವಂತಹದು. (ಕ್ಷರ ಬ್ರಹ್ಮಾಂಡ)

(ಮೇಲೆ ಹೇಳಿರುವ 3 ಪುರುಷರ (ಪೂರ್ಣಬ್ರಹ್ಮ, ಪರಬ್ರಹ್ಮ, ಬ್ರಹ್ಮ) (ಪ್ರಭುಗಳ) ಪ್ರಮಾಣವು ಪವಿತ್ರ ಶ್ರೀಮದ್ಭಗವದ್ಗೀತೆಯ 15ನೇ ಅಧ್ಯಾಯದ 16–17ನೆಯ ಶ್ಲೋಕಗಳಲ್ಲೂ ಇದೆ.)

4. ಬ್ರಹ್ಮಾ :– "ಬ್ರಹ್ಮಾ" ಇದೇ (ಮೇಲೆ ಹೇಳಿರುವ) ಬ್ರಹ್ಮನ ಜೇಷ್ಠಪುತ್ರ. ವಿಷ್ಣುವು ಎರಡನೆಯ ಪುತ್ರ ಹಾಗೂ ಶಿವನು ಮೂರನೆಯ ಪುತ್ರ. ಈ ಮೂವರೂ ಕೇವಲ ಒಂದು ಬ್ರಹ್ಮಾಂಡದಲ್ಲಿನ ಒಂದು ವಿಭಾಗದ (ಗುಣದ) ಪ್ರಭುಗಳಾಗಿದ್ದಾರೆ. ಹಾಗೂ ನಾಶವಾನರು ಆಗಿದ್ದಾರೆ. ವಿಸ್ತೃತ ವಿವರಣೆಗಾಗಿ ದಯಮಾಡಿ ಕೆಳಗೆ ಬರೆದಿರುವ ಸೃಷ್ಠಿ ರಚನೆಯ ವಿವರಗಳನ್ನು ಓದಿರಿ.

[ಕವಿರ್ದೇವ (ಕಬೀರ್ ಪರಮೇಶ್ವರ)ರು ಸೂಕ್ಷ್ಮವೇದ ಅರ್ಥಾತ್ ಕವಿರ್ವಾಣಿಯಲ್ಲಿ ಅವರೇ ರಚಿಸಿರುವ ಸೃಷ್ಠಿಯ ಜ್ಞಾನವನ್ನು ಸ್ವತಃ ಈ ಕೆಳಗೆ ಬರೆದಿರುವಂತೆ ತಿಳಿಸಿದ್ದಾರೆ]

ಮೊಟ್ಟ ಮೊದಲು ಅನಾಮಿ/ ಅಕಹ ಎಂಬ ಲೋಕವಿತ್ತು. ಪೂರ್ಣ ಪರಮಾತ್ಮನು ಆ ಅನಾಮಿ ಲೋಕದಲ್ಲಿ ಒಬ್ಬನೇ ಇದ್ದನು. ಆ ಪರಮಾತ್ಮನ ವಾಸ್ತವಿಕ ಹೆಸರು ಕವಿರ್ದೇವ, ಅರ್ಥಾತ್

ಕಬೀರ್ ಪರಮೇಶ್ವರ ಎಂಬುದಾಗಿದೆ. ಆ ಎಲ್ಲಾ ಆತ್ಮಗಳು ಆ ಪೂರ್ಣ ಪರಮಾತ್ಮನ ಶರೀರದಲ್ಲಿ ಸೇರಿಕೊಂಡಿದ್ದವು. ಈ ಕವಿರ್ದೇವರ ಉಪನಾಮ, ಪದವಿಯ ನಾಮ ಅನಾಮೀ ಪುರುಷ ಎಂದಾಗಿತ್ತು. (ಪುರುಷ ಶಬ್ದದ ಅರ್ಥ ಪ್ರಭು/ ಒಡೆಯ/ ಸ್ವಾಮಿ ಎಂದಾಗುತ್ತದೆ. ಪ್ರಭು ಮನುಷ್ಯನನ್ನು ತನ್ನದೇ ಸ್ವರೂಪದಲ್ಲಿ ನಿರ್ಮಾಣ ಮಾಡಿದ್ದಾನೆ. ಆದ್ದರಿಂದ ಮಾನವನ ಹೆಸರೂ ಸಹ ಪುರುಷ ಎಂದಾಗಿದೆ) ಅನಾಮೀ ಪುರುಷನ ಒಂದು ಕೂದಲಿನ ರಂಧ್ರದ ಪ್ರಕಾಶವು ಅಸಂಖ್ಯ–ಸೂರ್ಯನ ಪ್ರಕಾಶಕ್ಕಿಂತಲೂ ಅಧಿಕವಾಗಿದೆ.

ವಿಶೇಷ :– ಹೇಗೆಂದರೆ ಯಾವುದೇ ದೇಶದ ಸನ್ಮಾನ್ಯ ಪ್ರಧಾನ ಮಂತ್ರಿಯ ಶರೀರದ ಹೆಸರು ಬೇರೆ ಇದ್ದು ಪದವಿಯ ಹೆಸರು ಪ್ರಧಾನ ಮಂತ್ರಿ ಎಂದಿರುತ್ತದೆ. ಅನೇಕ ಸಂದರ್ಭಗಳಲ್ಲಿ ಪ್ರಧಾನ ಮಂತ್ರಿಗಳೇ ಹಲವಾರು ವಿಭಾಗಗಳನ್ನು ತಾವೇ ಇರಿಸಿಕೊಂಡಿರುತ್ತಾರೆ. ಆಗ ಯಾವ ವಿಭಾಗದ ಕಾಗದ ಪತ್ರಗಳ ಮೇಲೆ ಸಹಿ ಹಾಕಿ ಮುದ್ರೆ ಹಾಕುತ್ತಾರೋ, ಆಗ ಅದೇ ವಿಭಾಗದ ಪದವಿಯ ಹೆಸರನ್ನು ನಮೂದಿಸುತ್ತಾರೆ. ಉದಾಹರಣೆಗೆ ಗೃಹ ಮಂತ್ರಾಲಯದ ಪದವಿಯನ್ನು ನಿರ್ವಹಿಸುವ ಪ್ರಧಾನಮಂತ್ರಿ ಅಲ್ಲಿನ ಕಾಗದ ಪತ್ರಗಳಿಗೆ ಗೃಹ ಮಂತ್ರಿ ಎಂದೇ ಬರೆಯುತ್ತಾರೆ. ಅಲ್ಲಿ ಅದೇ ವ್ಯಕ್ತಿಯ (ಪ್ರಧಾನ ಮಂತ್ರಿಯ) ಹಸ್ತಾಕ್ಷರದ ಶಕ್ತಿ ಕಡಿಮೆಯಾಗುತ್ತದೆ. ಇದೇ ರೀತಿಯಲ್ಲಿ ಕಬೀರ್ ಪರಮೇಶ್ವರರ (ಕವಿರ್ದೇವ) ಶರಿರದ ಪ್ರಕಾಶದಲ್ಲಿನ ಪ್ರಭೆಯು ಬೇರೆ–ಬೇರೆ ಲೋಕಗಳಲ್ಲಿ ಬೇರೆ–ಬೇರೆ ಆಗಿರುತ್ತದೆ.

ಇದೇ ರೀತಿ ಪೂರ್ಣ ಪರಮಾತ್ಮರಾದ ಕವಿರ್ದೇವ (ಕಬೀರ್ ಪರಮೇಶ್ವರ) ರು ಕೆಳಗಿನ ಮೂರು ಬೇರೆಯ ಲೋಕಗಳನ್ನು (ಅಗಮ್‌ಲೋಕ, ಅಲಖ್‌ಲೋಕ, ಸತ್ಯಲೋಕ) ಶಬ್ದ (ವಚನ) ದಿಂದ ರಚಿಸಿದ್ದಾರೆ. ಇದೇ ಕವಿರ್ದೇವರು, ಅಗಮ್‌ಲೋಕದ ಸ್ವಾಮಿಯಾಗಿ "ಅಗಮ್‌ಪುರುಷ" ಎಂದೂ ಕರೆಸಿಕೊಳ್ಳುತ್ತಾರೆ. "ಅಗಮ್‌ಪುರುಷನ" ಮಾನವ ಸದೃಶ್ಯ ಶರೀರವು ಬಹಳ ತೇಜೋಮಯವಾಗಿದೆ. ಇವರ ಒಂದು ರೋಮಕೂಪದಲ್ಲಿನ ಪ್ರಕಾಶವು ಬಿಲಿಯನ್ ಸೂರ್ಯಗಳ ಪ್ರಕಾಶಕ್ಕಿಂತ ಹೆಚ್ಚಿನದು.

ಇದೇ ರೀತಿ ಕವಿರ್ದೇವರು 'ಅಲಖ್‌ಲೋಕದ' ಸ್ವಾಮಿಯಾಗಿ ಮಾನವ ಸದೃಶ್ಯ ಶರೀರವನ್ನು ಧರಿಸಿ ಸ್ವಯಂ ಪ್ರಕಾಶಿತರಾಗಿದ್ದಾರೆ. (ಸ್ವಜ್ಯೋತಿ ಪ್ರಕಾಶ) ಇಲ್ಲಿನ ಒಂದು ರೋಮ ಕೂಪದ ಪ್ರಕಾಶವು ಮಿಲಿಯನ್ ಸೂರ್ಯಗಳ ಪ್ರಕಾಶಕ್ಕಿಂತ ಅಧಿಕವಾಗಿದೆ.

ಈ ಕವಿರ್ದೇವರು ಸತ್ಯಲೋಕದ ಅಧಿಪತಿಯಾಗಿ ಅಲ್ಲಿನ ಪದನಾಮ 'ಸತ್ಯಪುರುಷ' ಎನಿಸಿಕೊಂಡಿದ್ದಾರೆ. ಸತ್ಯಪುರುಷ ಅಂದರೆ ಅವಿನಾಶಿ ಪ್ರಭು ಎಂದಾಗುತ್ತದೆ. ಇವರದೆ ಹೆಸರು 'ಅಕಾಲಮೂರ್ತಿ, ಪೂರ್ಣಬ್ರಹ್ಮ, ಪರಮ ಅಕ್ಷರ ಬ್ರಹ್ಮ' ಶಬ್ದ ಸ್ವರೂಪಿ ರಾಮ ಇನ್ನೂ ಮುಂತಾದವುಗಳಾಗಿವೆ. ಈ ಸತ್ಯಪುರುಷರ ಮಾನವ ಸದೃಶ್ಯ ಶರೀರವು ಕೋಟಿ ಸೂರ್ಯ–ಚಂದ್ರರ ಪ್ರಕಾಶಕ್ಕಿಂತ ಅಧಿಕವಾಗಿದೆ. ಈ ಕವಿರ್ದೇವರು (ಕಬೀರ್ ಪ್ರಭು) "ಸತ್ಯಪುರುಷ" ರೂಪದಲ್ಲಿ ಪ್ರಕಟವಾಗಿ, ಸತ್ಯಲೋಕದಲ್ಲಿ ವಿರಾಜಮಾನರಾಗಿ, ಪ್ರಥಮ ಸತ್ಯಲೋಕದಲ್ಲಿ ಬೇರೆ ರಚನೆಗಳನ್ನೂ ಮಾಡಿದ್ದಾರೆ.

ಒಂದು ಶಬ್ದ (ವಚನ) ದಿಂದ ಹದಿನಾರು ದ್ವೀಪಗಳ ರಚನೆ ಮಾಡಿದರು. ನಂತರ ಹದಿನಾರು ಶಬ್ದಗಳಿಂದ ಹದಿನಾರು ಪುತ್ರರು ಉತ್ಪತ್ತಿಯಾದರು. ಒಂದು ಮಾನಸ ಸರೋವರದ ರಚನೆಮಾಡಿ. ಅದರಲ್ಲಿ ಅಮೃತವನ್ನು ತುಂಬಿದರು. ಹದಿನಾರು ಪುತ್ರರ ಹೆಸರುಗಳು ಹೀಗಿವೆ :

1) ಕೂರ್ಮ, 2) ಜ್ಞಾನಿ, 3) ವಿವೇಕ, 4) ತೇಜ, 5) ಸಹಜ, 6) ಸಂತೋಷ, 7) ಸುರತಿ, 8) ಆನಂದ, 9) ಕ್ಷಮಾ, 10) ನಿಷ್ಕಾಮ, 11) ಜಲರಂಗೀ, 12) ಅಚಿಂತ, 13) ಪ್ರೇಮ, 14)

**ದಯಾಲ, 15) ಧೈರ್ಯ, 16) ಯೋಗ ಸಂತಾಯನ ಅರ್ಥಾತ್ "ಯೋಗಜಿತ್" ಎಂಬುದಾಗಿದೆ.**

**ಸತ್ಯಪುರುಷ ಕವಿರ್ದೇವರು ತಮ್ಮ ಪುತ್ರ ಅಚಿಂತನಿಗೆ, ಸತ್ಯಲೋಕದ ಬೇರೆ ರಚನೆಯ ಭಾರವನ್ನು ಒಪ್ಪಿಸಿದರು. ಹಾಗೂ ಶಕ್ತಿ ಪ್ರಧಾನ ಮಾಡಿದರು. ಅಚಿಂತನು ತನ್ನ ಶಬ್ದಶಕ್ತಿಯಿಂದ ಅಕ್ಷರ ಪುರುಷ (ಪರಬ್ರಹ್ಮ) ನನ್ನು ಉತ್ಪತ್ತಿ ಮಾಡಿದನು. ಹಾಗೂ ಅಕ್ಷರ ಪುರುಷನ ಸಹಾಯ ಕೇಳಿದನು. ಅಕ್ಷರ ಪುರುಷನು (ಪರಬ್ರಹ್ಮ) ಸ್ನಾನ ಮಾಡಲು ಮಾನಸ ಸರೋವರಕ್ಕೆ ಹೋದವನು ಆನಂದದಲ್ಲಿ ತಲ್ಲೀನನಾಗಿ ಮಲಗಿ ಬಿಟ್ಟನು (ಏಕೆಂದರೆ ಸತ್ಯಲೋಕದಲ್ಲಿ ಉಸಿರಾಡುವ ಶರೀರ ಇರುವುದಿಲ್ಲ). ಬಹಳ ಸಮಯದವರೆಗೆ ಹೊರಬರಲಿಲ್ಲ. ಆಗ ಅಚಿಂತನು ಅಕ್ಷರ ಪುರುಷನನ್ನು ಎಚ್ಚರಿಸಲು ಕವಿರ್ದೇವ (ಕಬೀರ್ ಪರಮೇಶ್ವರ) ರನ್ನು ಪ್ರಾರ್ಥಿಸಿದ ಅವರು ಮಾನಸ ಸರೋವರದಿಂದ ಸ್ವಲ್ಪ ಅಮೃತ ಜಲವನ್ನು ತೆಗೆದುಕೊಂಡು, ಅದರಿಂದ ಒಂದು ಮೊಟ್ಟೆಯನ್ನು ಮಾಡಿದರು ಹಾಗೂ ಆ ಮೊಟ್ಟೆಯಲ್ಲಿ ಒಂದು ಆತ್ಮವನ್ನು ಪ್ರವೇಶ ಮಾಡಿಸಿದರು. ಆ ಮೊಟ್ಟೆಯನ್ನು ಮಾನಸ ಸರೋವರದಲ್ಲಿ ಬಿಟ್ಟರು. ಮೊಟ್ಟೆಯ ಗಡ-ಗಡ ಶಬ್ದದಿಂದ ಅಕ್ಷರ ಪುರುಷನ ನಿದ್ರಾಭಂಗವಾಯಿತು. ಅವನು ಮೊಟ್ಟೆಯನ್ನು ಕೋಪದಿಂದ ನೋಡಿದನು. ಆಗ ಆ ಮೊಟ್ಟೆಯು ಎರಡು ಭಾಗವಾಯಿತು. ಅದರಿಂದ ಜ್ಯೋತಿನಿರಂಜನ (ಕ್ಷರ ಪುರುಷ) ಹೊರಬಂದ, ಅವನನ್ನೇ ಮುಂದೆ 'ಕಾಲ' ಎಂದು ಕರೆದರು. ಇವನ ವಾಸ್ತವಿಕ ಹೆಸರು "ಕೈಲ" ಎಂದು. ಆಗ ಸತ್ಯಪುರುಷನು (ಕವಿರ್ದೇವ) ಆಕಾಶವಾಣಿ ಮೂಲಕ ಅವರಿಬ್ಬರನ್ನೂ (ಅಕ್ಷರ ಪುರುಷ ಹಾಗೂ ಕಾಲ) ಹೊರಗೆ ಬರುವಂತೆ ಹೇಳಿದನು. ಇಬ್ಬರನ್ನು ಅಚಿಂತನ ದ್ವೀಪದಲ್ಲಿರಲು ತಿಳಿಸಿದರು. ಸತ್ಯಪುರುಷನ ಆಜ್ಞೆಯಂತೆ ಅವರಿಬ್ಬರೂ ಅಲ್ಲಿಯೇ ಇರತೊಡಗಿದರು. (ಮಕ್ಕಳ ಅಸಮರ್ಥತೆಯ ಕಾರಣ ಪ್ರಭುತೆಯ ವಿಚಾರದಲ್ಲಿ ಗೊಂದಲವುಂಟಾಗಬಹುದೆಂದು ತಿಳಿದರು ಏಕೆಂದರೆ ಸಮರ್ಥರಿಂದಲೇ ಕಾರ್ಯ ಸಿದ್ಧವಾಗುತ್ತವೆ) ಪುನಃ ಕವಿರ್ದೇವರೇ ಎಲ್ಲ ರಚನಾ ಕಾರ್ಯಗಳನ್ನು ಸ್ವತಃ ಮಾಡಿದರು. ತಮ್ಮ ಶಬ್ಧ ಶಕ್ತಿಯಿಂದ ಒಂದು 'ರಾಷ್ಟ್ರಾ' ಶಕ್ತಿಯನ್ನು ಉತ್ಪತ್ತಿ ಮಾಡಿ, ಅದರಿಂದ ಸಕಲ ಬ್ರಹ್ಮಾಂಡವನ್ನೂ ಸ್ಥಾಪಿಸಿದರು. ಪೂರ್ಣ ಬ್ರಹ್ಮನು ತನ್ನ ವಚನ ಶಕ್ತಿಯ ಮೂಲಕ ಎಲ್ಲಾ ಆತ್ಮಗಳನ್ನು ತನ್ನ ಮಾನವ ಸದೃಶ್ಯ ಶರೀರವನ್ನಾಗಿ ಉತ್ಪನ್ನ ಮಾಡಿದನು. ಪ್ರತಿಯೊಂದು ಹಂಸ ಆತ್ಮಗಳ ಮಾನವ ಸದೃಶ್ಯ ಶರೀರದ ಪ್ರಕಾಶವು 16 ಸೂರ್ಯಗಳ ಪ್ರಕಾಶಕ್ಕಿಂತಲು ಅಧಿಕವಾಗಿದೆ. ಆದರೆ ಪರಮೇಶ್ವರನ ಒಂದು ರೋಮಕೂಪದ ಪ್ರಕಾಶವು ಕೋಟಿ ಸೂರ್ಯರ ಪ್ರಕಾಶಕ್ಕೂ ಹೆಚ್ಚಾಗಿದೆ. ಬಹಳ ಸಮಯದ ನಂತರ ಕ್ಷರ ಪುರುಷ (ಜ್ಯೋತಿನಿರಂಜನ) ನು ಯೋಚಿಸಿದ, "ನಾವು ಮೂವರೂ (ಅಚಿಂತ-ಅಕ್ಷರ ಪುರುಷ-ಕ್ಷರ ಪುರುಷ) ಒಂದೇ ದ್ವೀಪದಲ್ಲಿ ಇದ್ದೇವೆ. ಬೇರೆ ಸಹೋದರರು ಒಂದೊಂದು ದ್ವೀಪದಲ್ಲಿದ್ದಾರೆ. ನಾನೂ ಸಾಧನೆ ಮಾಡಿ. ಪ್ರತ್ಯೇಕ ದ್ವೀಪವನ್ನು ಪಡೆಯುವೆ". ಈ ವಿಚಾರ ಮಾಡಿದವನೇ ಒಂಟಿ ಕಾಲಿನಲ್ಲಿ ನಿಂತು 70 ಯುಗಗಳವರೆಗೆ ತಪಸ್ಸು ಮಾಡಿದ.**

## "ಆತ್ಮಗಳು ಕಾಲನ ಬಲೆಯಲ್ಲಿ ಹೇಗೆ ಸಿಲುಕಿಕೊಂಡವು?"

**ವಿಶೇಷ :- ಜ್ಯೋತಿನಿರಂಜನನ ಇಪ್ಪತ್ತೊಂದು ಬ್ರಹ್ಮಾಂಡಗಳಲ್ಲಿರುವ ಆತ್ಮಗಳು, ಜ್ಯೋತಿನಿರಂಜನನ (ಬ್ರಹ್ಮ) ತಪಸ್ಸಿನ ಮೇಲೆ ಆಸಕ್ತಗೊಂಡು ತಮ್ಮ ಹೃದಯದಿಂದ ಅವನನ್ನು ಇಷ್ಟಪಡತೊಡಗಿದೆವು. ನಮಗೆ ಸುಖ ನೀಡುತ್ತಿದ್ದ ಪ್ರಭು ಸತ್ಯಪುರುಷನಿಗೆ ವಿಮುಖರಾದೆವು. ಈ ಕಾರಣದಿಂದಾಗಿ ಪತಿವ್ರತೆ ಪದವಿಯಿಂದ ಕೆಳಗೆ ಬಿದ್ದೆವು. ಪೂರ್ಣ ಪುರುಷನ ಮೂಲಕ ಪದೇ ಪದೇ ಎಚ್ಚರಿಕೆ ದೊರೆತರೂ, ನಮ್ಮ ಆಸಕ್ತಿ ಕ್ಷರ ಪುರುಷನಿಂದ ಬೇರಾಗಲಿಲ್ಲ.** [ಇದೇ ಪ್ರಭಾವವು ಇಂದಿಗೂ ಕಾಲನ ಸೃಷ್ಟಿಯ ಮೇಲಿದೆ. ಯಾವ ರೀತಿ ನಮ್ಮ ಯುವ ಪೀಳಿಗೆ ಯುವಕರು ಮಕ್ಕಳು ಚಿತ್ರ ನಟ-ನಟಿಯರ ಕೃತಕ ಅಭಿನಯ ಹಾಗೂ ತಮ್ಮ ದೈನಂದಿನ ಬದುಕಿಗಾಗಿ

ಮಾಡುತ್ತಿರುವ ಪಾತ್ರಗಳ ಮೇಲೆ ಎಷ್ಟು ಆಸಕ್ತಿ ತಾಳುತ್ತಾರೆ. ನಿಲ್ಲಿಸಿದರು ನಿಲ್ಲುವುದಿಲ್ಲ. ಯಾರಾದರೂ ಸಿನಿಮಾ ನಟ–ನಟಿಯರು ಪಟ್ಟಣಕ್ಕೆ / ಯಾವುದೇ ಊರಿಗೆ ಬರುತ್ತಾರೆಂದಾದರೆ, ಅವರನ್ನು ನೋಡಲು ಮುಗ್ಧ ಮಕ್ಕಳು –ಯುವಕರು ಗುಂಪು ಸೇರುತ್ತಾರೆ. ನೂಕು–ನುಗ್ಗಲಾಗುತ್ತದೆ. ಅವರಿಂದ ಇವರಿಗೇನೂ ಲಾಭವಿಲ್ಲ. ಅವರು ಅವರ ದೈನಂದಿನ ಬದುಕಿಗಾಗಿ ಹಣ ಸಂಪಾದಿಸುತ್ತಿದ್ದಾರೆ. ಅಪ್ಪ–ಅಮ್ಮ ಎಷ್ಟು ಬುದ್ಧಿ ಹೇಳಿದರೂ ಮಕ್ಕಳು ಕೇಳದೆ, ಎಲ್ಲಾದರೂ, ಯಾವಾಗಲಾದರೂ ಕದ್ದು–ಮುಚ್ಚಿ ಹೋಗಿ ತಮ್ಮ ಹಣ ಮತ್ತು ಸಮಯ ವ್ಯರ್ಥಮಾಡಿಕೊಳ್ಳುತ್ತಿದ್ದಾರೆ.]

**ಪೂರ್ಣ ಬ್ರಹ್ಮ ಕವಿರ್ದೇವರು (ಸತ್ಯ ಕಬೀರರು) ಕ್ಷರ ಪುರುಷನನ್ನು ನಿನಗೇನು ಬೇಕು? ಎಂದು ಕೇಳಿದರು, ಆಗ ಅವನು ನನಗೆ ಈ ಜಾಗ ಸಾಲದು, ಪ್ರತ್ಯೇಕವಾದ ದ್ವೀಪವನ್ನು ದಯಮಾಡಿ ಕೊಡಬೇಕು ಎಂದು ಕೇಳಿದನು. ಸತ್ಯಪುರುಷ ಪೂರ್ಣ ಬ್ರಹ್ಮ ಅವನಿಗೆ 21 ಬ್ರಹ್ಮಾಂಡಗಳನ್ನು ಅನುಗ್ರಹಿಸಿದರು. ಕೆಲ ಸಮಯದ ನಂತರ ಜ್ಯೋತಿನಿರಂಜನ ಈ ದ್ವೀಪಗಳಲ್ಲಿ ಏನಾದರೂ ರಚನೆ ಮಾಡಬೇಕು, ಎಂದು ಅಪೇಕ್ಷೆ ಪಟ್ಟನು. ಖಾಲಿ ಬ್ರಹ್ಮಾಂಡ (ಫ್ಲಾಟ್) ಏತಕ್ಕೆ? ಪ್ರಯೋಜನವಿಲ್ಲ ಎಂದು ಯೋಚಿಸಿದನು. ಈ ವಿಚಾರ ಬಂದದ್ದೇ ತಡ ಪುನಃ 70 ಯುಗಗಳವರೆಗೆ ತಪಸ್ಸನ್ನು ಮಾಡಿ. ಪೂರ್ಣ ಬ್ರಹ್ಮ ಕವಿರ್ದೇವರನ್ನು ರಚನೆಯ ಸಾಮಾಗ್ರಿಗಳಿಗಾಗಿ ಪ್ರಾರ್ಥಿಸಿದನು. ಆಗ ಅವರು (ಕವಿರ್ದೇವರು) ಮೂರು ಗುಣಗಳು ಮತ್ತು ಐದು ತತ್ವಗಳನ್ನು ಅನುಗ್ರಹಿಸಿದರು. ಇದರಿಂದ ಜ್ಯೋತಿ ನಿರಂಜನ ತನ್ನ ಬ್ರಹ್ಮಾಂಡದಲ್ಲಿ ಸೃಷ್ಟಿ ರಚಿಸಿ, ನಂತರ ಯೋಚಿಸಿದನು. ಇವುಗಳಲ್ಲಿ ಜೀವಗಳಿರಬೇಕು. ಒಂಟಿ ಇರಲು ಮನಸ್ಸು ಬರುತ್ತಿಲ್ಲ. ನಂತರ 64 ಯುಗಗಳವರೆಗೆ ತಪಸ್ಸು ಮಾಡಿದನು. ಪರಮಾತ್ಮ ಕವಿರ್ದೇವರು ಕೇಳಿದಾಗ ಹೇಳಿದನು– "ನನಗೆ ಕೆಲವು ಆತ್ಮಗಳನ್ನು ಕೊಡಿ ಒಂಟಿ ಇರಲು ಮನಸ್ಸು ಒಪ್ಪುತ್ತಿಲ್ಲ" ಆಗ ಸತ್ಯಪುರುಷ ಕವಿರಾಗ್ನಿ (ಕಬೀರ್ ಪರಮೇಶ್ವರ) ಹೇಳಿದರು ನಿನಗೆ ಬೇರೆ ಇನ್ನಷ್ಟು ಬ್ರಹ್ಮಾಂಡಗಳನ್ನು ಕೊಡುವೆ ಆದರೆ, ನನ್ನ ಆತ್ಮಗಳನ್ನು ನಿನ್ನ ಜಪ–ತಪ ಸಾಧನೆಯ ಫಲವಾಗಿ ಕೊಡಲು ಸಾಧ್ಯವಿಲ್ಲ". ಒಂದುವೇಳೆ ಸ್ವಇಚ್ಛೆಯಿಂದ ಯಾರಾದರೂ ಹೋಗಬಯಸಿದರೆ ಹೋಗಬಹುದು ಎಂದರು. ಸಮರ್ಥ ಕಬೀರರ ವಚನ ಕೇಳಿ ಜ್ಯೋತಿನಿರಂಜನ ನಮ್ಮ ಬಳಿ ಬಂದನು. ನಾವೆಲ್ಲರು ಅವನನ್ನು ಸುತ್ತಿಕೊಂಡು ನಿಂತೆವು ಏಕೆಂದರೆ ಮೊದಲಿನಿಂದಲೂ ನಮಗೆ ಅವನಲ್ಲಿ ಆಸಕ್ತಿ ಇತ್ತು. ಆಗ ಜ್ಯೋತಿನಿರಂಜನ ನಮ್ಮೊಂದಿಗೆ ಹೇಳಿದನು. "ನನಗೆ ತಂದೆಯವರು 21 ಬ್ರಹ್ಮಾಂಡಗಳನ್ನು ಕೊಟ್ಟಿದ್ದಾರೆ. ನಾನು ಅಲ್ಲಿ ನಾನಾ ಪ್ರಕಾರದ ರಮಣೀಯ ಸ್ಥಾನಗಳನ್ನು ರಚಿಸಿದ್ದೇನೆ. ಏನು ನೀವು ನನ್ನ ಜೊತೆ ಬರುವಿರಾ? ಎಂದಾಗ". ನಾವೇಲ್ಲರು ಯಾರು ಇವತ್ತು ಈ 21 ಬ್ರಹ್ಮಾಂಡದಲ್ಲಿ ಬಹಳ ಅಶಾಂತಿಯಿಂದ ಇದ್ದೇವೆ, ನಮಗೆ ತಂದೆಯ ಅನುಮತಿ ಸಿಕ್ಕಿದರೆ ನಾವು ಬರುವೆವು ಎಂದೆವು. ಆಗ ಕ್ಷರ ಪುರುಷನು ಪೂರ್ಣ ಬ್ರಹ್ಮ ಕವಿರ್ದೇವರಲ್ಲಿಗೆ ಹೋಗಿ ಎಲ್ಲಾ ಸಂಗತಿಗಳನ್ನು ತಿಳಿಸಿದನು. ಆಗ ಕವಿರಗ್ನಿ (ಕಬೀರ್ ಪರಮೇಶ್ವರ) ಯು ನನ್ನ ಮುಂದೆ ನಿನ್ನ ಜೊತೆ ಬರಲು ಇಚ್ಛಿಸುವವರಿಗೆ ಆಜ್ಞೆ ಕೊಡುವೆ ಎಂದರು. ಕ್ಷರ ಪುರುಷ ಹಾಗೂ ಪರಮ ಅಕ್ಷರ ಪುರುಷ (ಕವಿರಮಿತೌಜಾ) ಇಬ್ಬರೂ ನಮ್ಮ (ಹಂಸಾತ್ಮಗಳ) ಬಳಿಗೆ ಬಂದರು. ಯಾವ ಆತ್ಮಗಳು ಬ್ರಹ್ಮನೊಂದಿಗೆ ಹೋಗಲು ಬಯಸುತ್ತಿದ್ದಿರಿ ತಮ್ಮ ಕೈ ಮೇಲೆತ್ತಿ ಎಂದರು ನಮ್ಮ ತಂದೆಯ ಎದುರು ಕೈ ಎತ್ತಲು ಧೈರ್ಯ ಬರಲಿಲ್ಲ. ಯಾರೂ ಒಪ್ಪಿಗೆ ಕೊಡಲಿಲ್ಲ. ಬಹಳ ಸಮಯದವರೆಗೆ ಶಾಂತತೆ ಮೂಡಿತ್ತು ನಂತರ ಒಂದು ಹಂಸಾತ್ಮವು ಸಾಹಸ ಮಾಡಿ ತಾನು ಹೋಗುವುದಾಗಿ ಸಮ್ಮತಿ ಸೂಚಿಸಿತು. ತದನಂತರ ಅದನ್ನು ನೋಡಿ –ನೋಡುತ್ತಿದ್ದಂತೆ ನಾವೆಲ್ಲಾ ಹಂಸಾತ್ಮಗಳು (ಯಾರ್‍ಯಾರು ಈಗ 21 ಬ್ರಹ್ಮಾಂಡಗಳಲ್ಲಿ ಸಿಲುಕಿದ್ದೆವೆಯೋ) ಸಮ್ಮತಿ ಸೂಚಿಸಿದೆವು. ಜ್ಯೋತಿ ನಿರಂಜನನಿಗೆ ಪರಮೇಶ್ವರ ಕಬೀರರು ಹೇಳಿದರು : "ನೀನೀಗ ನಿನ್ನ ಸ್ಥಾನಕ್ಕೆ ಹೋಗು" ಯಾರೆಲ್ಲಾ**

ಹಂಸಾತ್ಮಗಳು ನಿನ್ನೊಂದಿಗೆ ಬರಲು ಒಪ್ಪಿಗೆ ಕೊಟ್ಟಿರುವರೊ, ಅವರನ್ನೆಲ್ಲಾ ನಾನು ನಿನ್ನ ಹತ್ತಿರ ಕಳುಹಿಸಿ ಕೊಡುತ್ತೇನೆ. ಜ್ಯೋತಿ ನಿರಂಜನ 21 ಬ್ರಹ್ಮಾಂಡಗಳಿಗೆ ಹೋದನು. ಆ ಸಮಯದವರೆಗೆ ಈ 21 ಬ್ರಹ್ಮಾಂಡಗಳೂ ಸತ್ಯಲೋಕದಲ್ಲೇ ಇದ್ದವು.

ಇದಾದ ಮೇಲೆ ಪೂರ್ಣ ಬ್ರಹ್ಮನು ಮೊದಲು ಒಪ್ಪಿಗೆ ಸೂಚಿಸಿದ ಆತ್ಮಕ್ಕೆ ಹುಡುಗಿಯ ರೂಪವನ್ನು ಕೊಟ್ಟನು ಆದರೆ ಸ್ತ್ರೀ ಇಂದ್ರಿಯವನ್ನು ರಚಿಸಲಿಲ್ಲ. ಎಲ್ಲ ಆತ್ಮಗಳನ್ನೂ (ಯಾವ ಆತ್ಮಗಳು ಜ್ಯೋತಿನಿರಂಜನನ್ನೊಂದಿಗೆ ಬರಲು ಸಮ್ಮತಿ ಕೊಟ್ಟಿದ್ದವು) ಹುಡುಗಿಯ ಶರೀರದ ಒಳಗೆ ಪ್ರವೇಶ ಮಾಡಿದನು ಹಾಗು ಅವಳಿಗೆ ಆಷ್ಟಾ (ಆದಿಮಾಯಾ/ ಪ್ರಕೃತಿದೇವಿ/ ದುರ್ಗಾ) ಎಂದು ಹೆಸರು ನೀಡಿ ಸತ್ಯಪುರುಷನು ಹೇಳಿದನು. "ಪುತ್ರಿ ನಾನು ನಿನಗೆ ಶಬ್ದ ಶಕ್ತಿ ಪ್ರಧಾನ ಮಾಡಿರುತ್ತೇನೆ. ಬ್ರಹ್ಮನು ಎಷ್ಟು ಜೀವಗಳನ್ನು ಉತ್ಪತ್ತಿ ಮಾಡಲು ಹೇಳುವನೋ, ಅಷ್ಟು ಜೀವಗಳನ್ನು ಉತ್ಪತ್ತಿ ಮಾಡು." ನಂತರ ಪೂರ್ಣ ಬ್ರಹ್ಮನು ತನ್ನ ಪುತ್ರ ಸಹಜದಾಸನ ಮೂಲಕ ಪ್ರಕೃತಿಯನ್ನು ಕ್ಷರ ಪುರುಷನ ಹತ್ತಿರ ಕಳುಹಿಸಿದ. ಸಹಜದಾಸನು ಜ್ಯೋತಿ ನಿರಂಜನ (ಕ್ಷರ ಪುರುಷ) ನಿಗೆ ಹೇಳಿದನು. "ತಂದೆಯವರು ಈ ಸಹೋದರಿಯ ಶರೀರದಲ್ಲಿ (ತಮ್ಮೊಂದಿಗೆ ಬರಲು ಒಪ್ಪಿದ ಹಂಸಾತ್ಮಗಳನ್ನು) ಆ ಎಲ್ಲಾ ಆತ್ಮಗಳನ್ನು ಪ್ರವೇಶ ಮಾಡಿದ್ದಾರೆ ಹಾಗೂ ಇವಳಿಗೆ ಶಬ್ದ ಶಕ್ತಿಯನ್ನು ಪ್ರಧಾನ ಮಾಡಿದ್ದಾರೆ. ನೀವು ಎಷ್ಟು ಜೀವಗಳನ್ನು ಇಚ್ಛಿಸುವಿರೋ, ಅಷ್ಟು ಜೀವಗಳನ್ನು ಪ್ರಕೃತಿ ಉತ್ಪನ್ನ ಮಾಡುತ್ತಾಳೆ. ಹೀಗೆ ಹೇಳಿ ಸಹಜದಾಸನು ತನ್ನ ದ್ವೀಪಕ್ಕೆ ಹಿಂತಿರುಗಿದನು.

ಯುವತಿಯಾಗಿದ್ದ ಕಾರಣ ಹುಡುಗಿಯ ರೂಪ-ಬಣ್ಣ ಆಕರ್ಷಣೀಯವಾಗಿತ್ತು. ಬ್ರಹ್ಮನ ಒಳಗೆ ವಿಷಯವಾಸನೆ (ಕಾಮುಬಯಕೆ) ಹುಟ್ಟಿಕೊಂಡಿತು. ಪ್ರಕೃತಿ ದೇವಿಯೊಂದಿಗೆ ಅಸಭ್ಯವರ್ತನೆಯನ್ನು ಮಾಡತೊಡಗಿದ. ತನಗೆ ತಂದೆಯವರು ಪ್ರಧಾನ ಮಾಡಿರುವ ಶಬ್ದ ಶಕ್ತಿ ಇರುವುದಾಗಿಯೂ, ಅದರಿಂದ ನೀವು ಎಷ್ಟು ಬಯಸಿದರಷ್ಟು ಜೀವಗಳನ್ನು ಉತ್ಪತ್ತಿ ಮಾಡಿಕೊಡುವುದಾಗಿಯೂ ತಿಳಿಸುತ್ತಾ. ತಮ್ಮೊಂದಿಗೆ ಮೈಥುನಕ್ರಿಯೆ ಮಾಡಬಾರದೆಂದಳು ನೀವು ಸಹ ಅದೇ ತಂದೆಯವರ ಶಬ್ದಶಕ್ತಿಯಿಂದ ಮೊಟ್ಟೆಯಿಂದ ಉತ್ಪನ್ನವಾಗಿದ್ದಿರಿ. ನಾನೂ ಸಹ ಅದೇ ತಂದೆಯವರಿಂದ ಉತ್ಪತ್ತಿಯಾಗಿರುವೆ. ಹೀಗಿರುವಾಗ ನಾವಿಬ್ಬರೂ ಅಣ್ಣ-ತಂಗಿಯರಾಗಿದ್ದೇವೆ. ಅಣ್ಣ-ತಂಗಿಯ ಈ ಕೂಡಿಕೆ ಮಹಾಪಾಪವಾಗುವುದು. ಆದರೆ ಜ್ಯೋತಿ ನಿರಂಜನನು, ಪ್ರಕೃತಿಯ ಒಂದು ಮಾತನ್ನು ಕೇಳಲು ಸಿದ್ಧವಿರಲಿಲ್ಲ. ಪುನಃ ಅವಳೊಂದಿಗೆ ಸೇರಲು ಬಲಾತ್ಕರಿಸಿದ. ಆಗ ಪ್ರಕೃತಿ ದೇವಿಯು ತನ್ನ ಮಾನರಕ್ಷಣೆಗೆ ಅನ್ಯ ಮಾರ್ಗ ಕಾಣದೆ. ಸೂಕ್ಷ್ಮರೂಪ ಧರಿಸಿ ಜ್ಯೋತಿ ನಿರಂಜನನ ತೆರೆದ ಬಾಯಿಯ ಮೂಲಕ ಹೊಟ್ಟೆಯಲ್ಲಿ ಪ್ರವೇಶಿದಳು ಮತ್ತು ಪೂರ್ಣ ಬ್ರಹ್ಮ (ಕವಿರ್ದೇವ) ರಲ್ಲಿ ತನ್ನ ರಕ್ಷಣೆಗಾಗಿ ಯಾಚಿಸಿದಳು ಅಲ್ಲಿ ಪರಮೇಶ್ವರ ಕವಿರ್ದೇವರು ತನ್ನ ಪುತ್ರ, ಯೋಗ ಸಂತಾಯನ ಅರ್ಥಾತ್ ಯೋಗಜೀತನ ರೂಪದಲ್ಲಿ ಅಲ್ಲಿ ಪ್ರತ್ಯಕ್ಷವಾದನು. ಹಾಗೂ ಆ ಕನ್ಯೆಯನ್ನು ಬ್ರಹ್ಮನ (ಜ್ಯೋತಿ ನಿರಂಜನ) ಉದರದಿಂದ ಹೊರಗೆ ತೆಗೆದನು. ನಂತರ ಬ್ರಹ್ಮನಿಗೆ ಹೇಳಿದನು. ಇಂದಿನಿಂದ ನಿನ್ನ ಹೆಸರು "ಕಾಲ" ಎಂದಾಗುವುದು. ನಿನಗೆ ಹುಟ್ಟು-ಸಾವುಗಳು ಆಗುತ್ತಾ ಇರುವುದು. ಆದ್ದರಿಂದ ನಿನ್ನ ಹೆಸರು 'ಕ್ಷರ' ಪುರುಷ ಎಂದಾಗುವುದು. ಒಂದು ಲಕ್ಷ ಮಾನವ ಶರೀರಧಾರಿ ಪ್ರಾಣಿಗಳನ್ನು ಪ್ರತಿದಿನ ತಿನ್ನುವೆ ಹಾಗೂ ಒಂದೂಕಾಲು ಲಕ್ಷ ಮಾನವ ಜೀವಿಗಳನ್ನು ಉತ್ಪನ್ನ ಮಾಡುವೆ ನಿಮ್ಮಿಬ್ಬರನ್ನೂ 21 ಬ್ರಹ್ಮಾಂಡಗಳ ಸಹಿತ ನಿಸ್ಕಾಸಿತ ಗೊಳಿಸುವೆ "(ಸತ್ಯಲೋಕದಿಂದ ಬೇರೆ) ಇಷ್ಟು ಹೇಳಿದ ಕೂಡಲೆ 21 ಬ್ರಹ್ಮಾಂಡಗಳು "ವಿಮಾನದ ಹಾಗೆ ಹೊರಟವು. ಸಹಜದಾಸನ ದ್ವೀಪದ ಹತ್ತಿರದಿಂದ ಹಾದು ಹೋಗುತ್ತ ಸತ್ಯಲೋಕದಿಂದ 16 ಸಂಖಮೈಲು {1 ಮೈಲು (ಕೋಶ) ಸುಮಾರು 3 ಕಿ.ಮೀ ಇರುತ್ತದೆ} ದೂರದಲ್ಲಿ ಬಂದು

# ಒಂದು ಬ್ರಹ್ಮಾಂಡದ ಲಘು ಚಿತ್ರ



ನಿಂತಿತು.

ವಿಶೇಷ ವಿವರಣೆ : ಈವರೆಗೆ ಮೂರು ಶಕ್ತಿಯ ವಿವರಣೆ ಬಂದಿದೆ.

1. ಪೂರ್ಣ ಬ್ರಹ್ಮ : ಇವನನ್ನು ಬೇರೆ ಉಪಮಾತ್ಮಕ ನಾಮಗಳಿಂದಲೂ ತಿಳಿಯಲಾಗುತ್ತದೆ.

ಉದಾ : ಸತ್ಯಪುರುಷ, ಅಕಾಲ ಪುರುಷ, ಶಬ್ಧ ಸ್ವರೂಪಿ ರಾಮ, ಪರಮ ಅಕ್ಷರ ಬ್ರಹ್ಮ/ ಪುರುಷ ಇತ್ಯಾದಿ ಈ ಪೂರ್ಣ ಬ್ರಹ್ಮ ಅಸಂಖ್ಯ ಬ್ರಹ್ಮಾಂಡಗಳ ಸ್ವಾಮಿ ಹಾಗೂ ವಾಸ್ತವವಾಗಿ ಅವಿನಾಶಿ (ನಾಶವಿಲ್ಲದ) ಆಗಿದ್ದಾರೆ.

2. ಪರಬ್ರಹ್ಮ :– ಇವನನ್ನು ಅಕ್ಷರ ಪುರುಷ ಎಂದೂ ಕರೆಯಲಾಗುತ್ತದೆ. ಇವನು ವಾಸ್ತವವಾಗಿ ಅವಿನಾಶಿ ಅಲ್ಲ. 7 ಸಂಖ ಬ್ರಹ್ಮಾಂಡಗಳ ಸ್ವಾಮಿ.

3. ಬ್ರಹ್ಮ :– ಇವನನ್ನು ಜ್ಯೋತಿ ನಿರಂಜನ, ಕಾಲ, ಕಾಲ ರೂಪಿ ಬ್ರಹ್ಮ, ಕೈಲ, ಕ್ಷರಪುರುಷ, ಸೈತಾನ ಹಾಗೂ ಧರ್ಮರಾಯ ಮುಂತಾದ ಹೆಸರುಗಳಿಂದ ತಿಳಿಯಲಾಗುತ್ತದೆ. ಇವನು 21 ಬ್ರಹ್ಮಾಂಡಗಳಿಗೆ ಮಾತ್ರ ಸ್ವಾಮಿ, ಈಗ ಮುಂದೆ ಇದೇ ಬ್ರಹ್ಮ (ಕಾಲ) ನ ಸೃಷ್ಠಿಯ ಒಂದು ಬ್ರಹ್ಮಾಂಡದ ಪರಿಚಯವನ್ನು ಕೊಡುವೆವು. ಇದರಲ್ಲಿ ಇನ್ನು ಮೂರು ಬೇರೆ ಹೆಸರುಗಳು ನಿಮಗೆ ಓದಲು ಸಿಗಲಿವೆ. * ಬ್ರಹ್ಮಾ– ವಿಷ್ಣು ಹಾಗೂ ಶಿವ.

ಬ್ರಹ್ಮ ಹಾಗೂ ಬ್ರಹ್ಮಾನಲ್ಲಿ ಭೇದ :– ಒಂದು ಬ್ರಹ್ಮಾಂಡದ ಅತ್ಯುನ್ನತ ಸ್ಥಾನದಲ್ಲಿ ಸ್ವತಃ ಬ್ರಹ್ಮನು ಮೂರು ಗುಪ್ತ ಸ್ಥಾನಗಳನ್ನು ರಚನೆ ಮಾಡಿ, ಬ್ರಹ್ಮಾ–ವಿಷ್ಣು ಹಾಗೂ ಶಿವನ ರೂಪದಲ್ಲಿರುತ್ತಾನೆ. ಅವನ ಹೆಂಡತಿ ಪ್ರಕೃತಿಯ (ದುರ್ಗಾ) ಸಹಯೋಗದಿಂದ ಮೂರು ಪುತ್ರರನ್ನು ಉತ್ಪತ್ತಿ ಮಾಡುತ್ತಾನೆ. ಅವರ ಹೆಸರು ಸಹ ಬ್ರಹ್ಮಾ–ವಿಷ್ಣು ಹಾಗೂ ಶಿವ ಇಡುತ್ತಾನೆ. ಆ ಬ್ರಹ್ಮನ ಹಿರಿಯ ಪುತ್ರನೇ ಬ್ರಹ್ಮಾ. ಈ ಬ್ರಹ್ಮಾನು ಒಂದು ಬ್ರಹ್ಮಾಂಡದಲ್ಲಿ ಕೇವಲ ಮೂರು ಲೋಕಗಳಲ್ಲಿ (ಪೃಥ್ವಿಲೋಕ, ಸ್ವರ್ಗಲೋಕ ಹಾಗೂ ಪಾತಾಳಲೋಕ) ಒಂದು ರಜೋಗುಣ ವಿಭಾಗದ ಮಂತ್ರಿಯಾಗಿದ್ದಾನೆ. ಇವನನ್ನು ತ್ರಿಲೋಕೀಯ 'ಬ್ರಹ್ಮಾ' ಎನ್ನುತ್ತಾರೆ ಹಾಗೂ ಬ್ರಹ್ಮನು ಬ್ರಹ್ಮಲೋಕದಲ್ಲಿ ಬ್ರಹ್ಮಾರೂಪದಲ್ಲಿರುತ್ತಾನೆ, ಅವನನ್ನು ಮಹಾ ಬ್ರಹ್ಮಾ ಹಾಗೂ ಬ್ರಹ್ಮಲೋಕೀಯ ಬ್ರಹ್ಮಾ ಎಂದು ಹೇಳಲಾಗುತ್ತದೆ. ಈ ಬ್ರಹ್ಮನನ್ನು (ಕಾಲ) ಮಹಾಬ್ರಹ್ಮಾ, ಮಹಾವಿಷ್ಣು, ಮಹಾಶಿವ (ಸದಾಶಿವ) ಎಂದೂ ಸಹ ಹೇಳಲಾಗುತ್ತದೆ.

ಶ್ರೀವಿಷ್ಣು ಪುರಾಣದಲ್ಲಿ ಪ್ರಮಾಣ:– ಚತುರ್ಥ ಅಂಶದ ಒಂದನೇ ಅಧ್ಯಾಯದ ಪುಟ 230 –231 ರಲ್ಲಿ, ಶ್ರೀ ಬ್ರಹ್ಮಾನು ಹೇಳಿದ್ದಾನೆ:– ಆ ಅಜನ್ಮ, ಸರ್ವಮಯ ವಿಧಾತಾ, ಪರಮೇಶ್ವರನ ಆದಿ–ಮಧ್ಯ, ಅಂತ್ಯ ಸ್ವರೂಪ, ಸ್ವಭಾವ ಮತ್ತು ಸಾರ (ತತ್ವ) ವನ್ನು ನಾವು ತಿಳಿಯಲಾಗುದಿಲ್ಲ. (ಶ್ಲೋಕ 83)

ಯಾರು ನನ್ನ ರೂಪಧಾರಣೆ ಮಾಡಿ, ಸಂಸಾರದ ರಚನೆ ಮಾಡುತ್ತಾನೆಯೋ, ಸ್ಥಿತಿಯ ಸಮಯದಲ್ಲಿ ವಿಷ್ಣು ರೂಪ ಹಾಗು ರುದ್ರ ರೂಪದಿಂದ ಪ್ರಪಂಚದ ನಾಶ ಮಾಡುತ್ತಾನೋ, ಅನಂತ ರೂಪದಿಂದ ಸಮಸ್ತ ವಿಶ್ವವನ್ನು ಧಾರಣೆ ಮಾಡುತ್ತಾನೆ. (ಶ್ಲೋಕ 86)

## "ಶ್ರೀ ಬ್ರಹ್ಮಾ, ಶ್ರೀ ವಿಷ್ಣು ಹಾಗೂ ಶ್ರೀ ಶಿವ ಇವರ ಉತ್ಪತ್ತಿ"

ಈಗ ನನಗೆ ಯಾರು ಏನು ಮಾಡಬಲ್ಲರು? ಎಂದು ಕಾಲನು (ಬ್ರಹ್ಮನು) ಸ್ವೇಚ್ಛಾ ವ್ಯವಹಾರ ಮಾಡಬಯಸಿದ. ಆಗ ಪ್ರಕೃತಿಯು ನಿಮಗೆ ನಾಚಿಕೆಯಾಗಬೇಕು ಎಂದು ಹೇಳಿದಳು. ಪುನಃ ಬ್ರಹ್ಮನಿಗೆ ತಮ್ಮಿಬ್ಬರ ಸಂಬಂಧದ ಬಗ್ಗೆ ಹೇಳುತ್ತಾಳೆ. ನಾವಿಬ್ಬರೂ ಒಂದೇ ತಂದೆಯ ಶಬ್ದಶಕ್ತಿಯಿಂದ

ಉತ್ಪನ್ನವಾದವರು ನಿಮ್ಮ ಉತ್ಪನ್ನ ಮೊಟ್ಟೆಯಿಂದ ಹಾಗೂ ನಂತರ ನನ್ನ ಉತ್ಪತ್ತಿ ಆಗಿದೆ, ಇನ್ನೊಂದು ನಾನು ನಿಮ್ಮ ಉದರದಿಂದ ಹೊರ ಬಂದವಳು. ಒಂದು ರೀತಿಯಲ್ಲಿ ತಂಗಿ, ಇನ್ನೊಂದು ರೀತಿಯಲ್ಲಿ ಮಗಳು ನೀವು ನನ್ನ ತಂದೆ. ಇಂತಹ ಪವಿತ್ರ ಸಂಬಂಧವನ್ನು ಕೆಡಸುವುದು ಮಹಾಪಾಪ. ನನ್ನ ಹತ್ತಿರ ತಂದೆಯವರು ಪ್ರಧಾನ ಮಾಡಿರುವ ಶಬ್ದ ಶಕ್ತಿ ಇದೆ. ನೀನು ಬಯಸಿದಷ್ಟು ಜೀವಗಳನ್ನು ಉತ್ಪತ್ತಿ ಮಾಡಿಕೊಡುವೆ. ಆದರೆ ಜ್ಯೋತಿ ನಿರಂಜನ ಇವಳ ಮಾತನ್ನು ತಿರಸ್ಕರಿಸಿದ, "ಅಲ್ಲದೆ ಸ್ವತಃ ತನಗೀಗಾಗಲೆ ಸತ್ಯಲೋಕದಿಂದ ಹೊರಹಾಕಿರುವ ಶಿಕ್ಷೆ ದೊರೆತಾಗಿದೆ, ಈಗ ನಾನು ಸ್ವೇಚ್ಛೆಯಾಗಿ ವರ್ತಿಸುವೆ" ಎಂದು ಹೇಳಿದ. ಅಷ್ಟೇ ಅಲ್ಲ ಕಾಲಪುರುಷನು ದುರ್ಗಾಳಿಗೆ ತನ್ನ ಶಬ್ದ ಶಕ್ತಿಯಿಂದ ಉಗುರಿನ ಮೂಲಕ ಸ್ತ್ರೀಯ ಜನನ ಇಂದ್ರೀಯವನ್ನು ಮಾಡಿ ಬಲಾತ್ಕಾರದಿಂದ ಮದುವೆಯಾದ. ಅವರಿಗೆ ಮೂರು ಜನ ಪುತ್ರರು ಜನಿಸಿದರು (ರಜೋಗುಣಯುಕ್ತ ಬ್ರಹ್ಮಾ, ಸತೋಗುಣಯುಕ್ತ ವಿಷ್ಣು ಹಾಗೂ ತಮೋಗುಣಯುಕ್ತ ಶಿವಶಂಕರರು) ಯುವಕರಾಗುವವರೆಗೆ ಮೂರೂ ಪುತ್ರರನ್ನು ದುರ್ಗೆಯ ಮೂಲಕ ಅಚೇತಗೊಳಿಸುತ್ತಾನೆ. (ಚೈತನ್ಯರಹಿತ) ನಂತರ ಯುವಕರಾದಮೇಲೆ ಬ್ರಹ್ಮಾನನ್ನು ಕಮಲಪುಷ್ಪದ ಮೇಲೆ, ಶ್ರೀ ವಿಷ್ಣುವನ್ನು ಶೇಷನಾಗನ ಮೇಲೆ, ಶಿವನನ್ನು ಕೈಲಾಸಪರ್ವತದ ಮೇಲೆ ಸಚೇತಗೊಳಿಸಿ ಇರಿಸುತ್ತಾನೆ. ನಂತರ ಪ್ರಕೃತಿಯ ಮೂಲಕ ಈ ಮೂವರಿಗೂ ಮದುವೆ ಮಾಡಿಸುತ್ತಾನೆ. ನಂತರ ಒಂದು ಬ್ರಹ್ಮಾಂಡದಲ್ಲಿ ಮೂರು ಲೋಕಗಳನ್ನು ಮಾಡಿ (ಭೂಲೋಕ–ಸ್ವರ್ಗಲೋಕ–ಪಾತಳಲೋಕ) ಮೂರು ವಿಭಾಗ ಮಾಡಿ ಒಂದೊಂದು ವಿಭಾಗಳಿಗೂ ಪ್ರತ್ಯೇಕವಾಗಿ ಒಬ್ಬೊಬ್ಬರನ್ನು ನೇಮಿಸುತ್ತಾನೆ. ರಜೋಗುಣ ವಿಭಾಗಕ್ಕೆ–ಬ್ರಹ್ಮಾ, ಸತೋಗುಣ ವಿಭಾಗಕ್ಕೆ ವಿಷ್ಣು, ತಮೋಗುಣ ವಿಭಾಗಕ್ಕೆ ಶಿವನನ್ನು ನೇಮಿಸಿ, ಸ್ವತಃ ಗುಪ್ತರೂಪದಲ್ಲಿ (ಮಹಾಬ್ರಹ್ಮಾ–ಮಹಾವಿಷ್ಣು–ಮಹಾಶಿವನಾಗಿ) ಮುಖ್ಯಮಂತ್ರಿಯ ಪದವಿಯನ್ನು ನಿಭಾಯಿಸುತ್ತಾನೆ. ಒಂದು ಬ್ರಹ್ಮಾಂಡದಲ್ಲಿ ಒಂದು "ಬ್ರಹ್ಮ" ಲೋಕದ ರಚನೆ ಮಾಡಿದ. ಅದರಲ್ಲಿ ಮೂರು ಗುಪ್ತ ಸ್ಥಾನಗಳನ್ನು ಮಾಡಿದ. ಒಂದು ಗುಪ್ತ ಸ್ಥಾನದಲ್ಲಿ (ರಜೋಗುಣ ಪ್ರಧಾನವಾದದ್ದು) ಸ್ವಯಂ ಮಹಾಬ್ರಹ್ಮಾ ತನ್ನ ಪತ್ನಿ ದುರ್ಗಾಳನ್ನು ಮಹಾಸಾವಿತ್ರಿ ರೂಪದಲ್ಲಿರಿಸಿದನು. ಈ ಈರ್ವರ ಸಂಯೋಗದಿಂದ ಹುಟ್ಟಿದ ಪುತ್ರನು ರಜೋಗುಣಯುಕ್ತನಾಗುತ್ತಾನೆ ಇವನನ್ನು 'ಬ್ರಹ್ಮ' ಎನ್ನಲಾಗುತ್ತದೆ. ಎರಡನೆಯ ಸ್ಥಾನವನ್ನು ಸತೋಗುಣ ಪ್ರಧಾನ ಮಾಡಿ, ಕ್ಷರ ಪುರುಷನು ಸ್ವಯಂ ಮಹಾವಿಷ್ಣು ರೂಪದಿಂದ ನೆಲಸಿ ಅವನ ಪತ್ನಿ ದುರ್ಗೆಯನ್ನು ಮಹಾಲಕ್ಷ್ಮಿ ರೂಪದಲ್ಲಿ ಇರಿಸುತ್ತಾನೆ. ಇವರಿಬ್ಬರ ಸಂಯೋಗದಿಂದ ಜನಿಸಿದ ಪುತ್ರನು ಸತ್ವಗುಣಯುಕ್ತನಾಗುತ್ತಾನೆ 'ವಿಷ್ಣು' ಎಂಬ ಹೆಸರಿನಿಂದ ಕರೆಯಲ್ಪಡುತ್ತಾನೆ. ಮೂರನೆಯ ಸ್ಥಾನವನ್ನು ಕ್ಷರ ಪುರುಷನು ತಮೋಗುಣ ಪ್ರಧಾನ ಮಾಡಿ, ಸ್ವಯಂ ಸದಾ ಶಿವರೂಪದಲ್ಲಿ ನೆಲಸಿ ತನ್ನ ಪತ್ನಿ ದುರ್ಗೆಯನ್ನು ಮಹಾಪಾರ್ವತಿ ರೂಪದಲ್ಲಿರಿಸುತ್ತಾನೆ. ಇವರಿಬ್ಬರಿಂದ ಜನಿಸುವ ಪುತ್ರ ತಮೋಗುಣಯುಕ್ತನಾಗಿದ್ದು 'ಶಿವ' ಎಂಬ ಹೆಸರಿನಿಂದ ಕರೆಯಲ್ಪಡುತ್ತಾನೆ.

(ಪ್ರಮಾಣಕ್ಕಾಗಿ ನೋಡಿರಿ ಪವಿತ್ರ ಶ್ರೀ ಶಿವ ಮಹಾಪುರಾಣ, ವಿದ್ವೇಶ್ವರ ಸಂಹಿತೆಯ ಅಧ್ಯಾಯ **10–11** ಪುಟ **21–26**ರಲ್ಲಿ (ಹಿಂದಿಯಲ್ಲಿ ಪುಟ ಸಂಖ್ಯೆ **24–26**) ಬ್ರಹ್ಮಾ–ವಿಷ್ಣು–ರುದ್ರ, ಮಹೇಶ್ವರರಲ್ಲದೆ ಬೇರೆ ಸದಾಶಿವ ನಾಮ ಸಹ ಉಲ್ಲೇಖವಿದೆ. ರುದ್ರ ಸಂಹಿತೆಯ ಅಧ್ಯಾಯ **6** ಹಾಗೂ **7, 9** ಪುಟ ಸಂಖ್ಯೆ **81–90**ರಲ್ಲಿ (ಹಿಂದಿಯಲ್ಲಿ ಪುಟ ಸಂಖ್ಯೆ **100–105** ಹಾಗು **110**) ಉಲ್ಲೇಖವಿದೆ. ಇದರ ಸಂಪಾದಕರು ಹನುಮಾನ್ ಪ್ರಸಾದ್ ಪೋದ್ದಾರ್, ಅನುವಾದಕರು ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್–ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತ ಹಾಗೂ ಪವಿತ್ರ ಗ್ರಂಥ. ಶ್ರೀಮದ್ದೇವಿಮಹಾಪುರಾಣದ ಮೂರನೇ ಸ್ಕಂದ ಅಧ್ಯಾಯ **1–3** ಪುಟ ಸಂಖ್ಯೆ **97–103**ರ (ಹಿಂದಿಯಲ್ಲಿ ಪುಟ ಸಂಖ್ಯೆ **114–123**) ವರೆಗೆ ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತ, ಇದರ ಅನುವಾದಕರು ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್) ನಂತರ

ಇವರುಗಳನ್ನು ಮರೆಮಾಚಿ ತನಗೆ ತಿನ್ನುವುದಕ್ಕಾಗಿ ಶ್ರೀ ಬ್ರಹ್ಮಾನಿಂದ ಜೀವಿಗಳನ್ನು ಸೃಷ್ಟಿ ಮಾಡಿಸುತ್ತಾನೆ. ಶ್ರೀ ವಿಷ್ಣುವಿನಿಂದ (ಸ್ಥಿತಿ) ಮೊಹ ಮಮತೆಯಲ್ಲಿ ಬಂಧಿಸುತ್ತಾನೆ. ಹಾಗೂ ಶ್ರೀ ಶಿವನಿಂದ ಸಂಹಾರ ಮಾಡಿಸುತ್ತಾನೆ. (ಏಕೆಂದರೆ ಕಾಲ ಪುರುಷನು ಶಾಪ ಗ್ರಸ್ತನಾಗಿರುವುದರಿಂದ ಒಂದು ಲಕ್ಷ ಮಾನವ ಶರೀರ ಧಾರಣೆ ಮಾಡಿರುವ ಪ್ರಾಣಿಗಳ ಸೂಕ್ಷ್ಮ ಶರೀರದಿಂದ ಕೊಳೆ ತೆಗೆದು ತಿನ್ನುವನು). ಅದಕ್ಕಾಗಿ 21ನೇ ಬ್ರಹ್ಮಾಂಡದಲ್ಲಿ ಒಂದು "ತಪ್ತಶಿಲೆ" ಇದೆ. ಅದು ಬಹಳ ಬಿಸಿಯಾಗಿದೆ. ಅದರ ಮೇಲೆ ಒಂದು ಲಕ್ಷ ಮಾನವ ಶರೀರ ಧಾರಣೆ ಮಾಡಿರುವ ಪ್ರಾಣಿಗಳ ಸೂಕ್ಷ್ಮ ಶರೀರವನ್ನು ಬೆಯಿಸಿ ಕೊಳೆ ತೆಗೆದು ತಿನ್ನುತ್ತಾನೆ. ಜೀವಗಳು (ಆತ್ಮ) ಸಾಯುವುದಿಲ್ಲ ಆದರೆ ಅಸಹನೀಯವಾದ ಕಷ್ಟಕ್ಕೆ ಒಳಗಾಗುತ್ತವೆ. ನಂತರ ಅವುಗಳ ಕರ್ಮಫಲಕ್ಕೆ ಅನುಗುಣವಾಗಿ ಹೊಸ ಶರೀರವನ್ನು ಪಡೆಯುತ್ತವೆ. ಈ ಕ್ರಿಯೆ ಹೇಗೆ ನಡೆಯುತ್ತದೆ ಉದಾಹರಣೆಗೆ :– ಒಂದು ಮನೆಯಲ್ಲಿ ಮೂರು ಕೊಠಡಿಗಳಿವೆ. ಒಂದರಲ್ಲಿ ಅಶ್ಲೀಲವಾದ ಚಿತ್ರಗಳಿವೆ. ಎರಡನೆಯ ಕೊಠಡಿಯಲ್ಲಿ ಸಾಧುಸಂತರ ಭಕ್ತರ ಚಿತ್ರಗಳಿವೆ. ಮೂರನೆಯ ಕೊಠಡಿಯಲ್ಲಿ ದೇಶಭಕ್ತರ, ದೇಶಕ್ಕಾಗಿ ಬಲಿದಾನವಾದವರ ಚಿತ್ರಗಳಿವೆ. ಈ ಮೂರು ಕೊಠಡಿಯಲ್ಲಿ ಚಿತ್ರಗಳನ್ನು ನೋಡುತ್ತಿದ್ದರೆ. ಕ್ರಮವಾಗಿ ಅಶ್ಲೀಲಭಾವ, ಭಕ್ತಿಭಾವ, ದೇಶಭಕ್ತಿಭಾವಗಳು ಜಾಗೃತವಾಗಿ ನಮ್ಮಲ್ಲಿ ಚಿಂತನೆ ಆರಂಭವಾಗುತ್ತದೆ. ಇದೇ ರೀತಿ ಬ್ರಹ್ಮ (ಕಾಲ)ನು ತನ್ನ ಅರಿವಿನಿಂದ ಮೂರು ಗುಣಗಳ ಪ್ರಧಾನ ಸ್ಥಾನಗಳನ್ನು ರಚಿಸಿದ್ದಾನೆ.

## "ಮೂರು ಗುಣಗಳು ಯಾವುವು ಆಧಾರ ಸಹಿತವಾಗಿ"

ಮೂರು ಗುಣಗಳು ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವನಾಗಿದ್ದಾನೆ. ಬ್ರಹ್ಮ (ಕಾಲ) ಹಾಗೂ ಪ್ರಕೃತಿ (ದುರ್ಗಾ) ಯಿಂದ ಉತ್ಪನ್ನರಾಗಿದ್ದಾರೆ. ಮೂವರೂ ನಾಶವಾಗುತ್ತಾರೆ.

ಪ್ರಮಾಣ :– "ಶ್ರೀ ಶಿವಮಹಾಪುರಾಣ" ಇದರ ಸಂಪಾದಕರು ಹನುಮಾನ್ ಪ್ರಸಾದ್ ಪೋದ್ದಾರ್, ಅನುವಾದಕರು ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್. ಅಧ್ಯಾಯ 10–11 ಪುಟ 21–26 (ಹಿಂದಿಯಲ್ಲಿ ಪುಟ ಸಂಖ್ಯೆ 24–26) ವಿದ್ವೇಶ್ವರ ಸಂಹಿತೆಯಲ್ಲಿ ಉಲ್ಲೇಖವಿದೆ ಹಾಗೂ ರುದ್ರ ಸಂಹಿತೆಯ 9ನೇ ಅಧ್ಯಾಯದ 90ನೇ (ಹಿಂದಿಯಲ್ಲಿ ಪುಟ ಸಂಖ್ಯೆ 110) ಪುಟದಲ್ಲಿ ಉಲ್ಲೇಖವಿದೆ. ಈ ಪ್ರಕಾರ ಬ್ರಹ್ಮಾ–ವಿಷ್ಣು ಹಾಗೂ ಶಿವ ಮೂರು ದೇವತೆಗಳಲ್ಲಿ ಗುಣಗಳಿವೆ. ಆದರೆ ಸದಾಶಿವ (ಬ್ರಹ್ಮ–ಕಾಲ) ಗುಣಾತೀತ ಎಂದು ಹೇಳಲಾಗಿದೆ.

ಎರಡನೆಯ ಪ್ರಮಾಣ ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತವಾಗಿರುವ "ಶ್ರೀಮದ್ ದೇವಿಭಾಗವತ ಪುರಾಣ" ಇದರ ಅನುವಾದಕರು ಸಹ ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್. ಅಧ್ಯಾಯ 4–5ರ ಮೂರನೆಯ ಸ್ಕಂದ ಪುಟ 105 (ಹಿಂದಿಯಲ್ಲಿ ಪುಟ ಸಂಖ್ಯೆ 123) ರಲ್ಲಿ ಭಗವಾನ್ ವಿಷ್ಣುವು ದುರ್ಗೆಯ ಸ್ತುತಿ ಮಾಡಿದ್ದಾನೆ. ಅದರಲ್ಲಿ ಹೀಗೆ ಹೇಳಿದ್ದಾನೆ. "ನಾನು (ವಿಷ್ಣು), ಬ್ರಹ್ಮಾ ಹಾಗೂ ಶಂಕರ ನಿಮ್ಮ ಕೃಪೆಯಿಂದ ವಿಧ್ಯಮಾನರಾಗಿದ್ದೇವೆ ನಮ್ಮ ಅವಿರ್ಭಾವ (ಹುಟ್ಟು) ತಿರೋಭಾವ (ಮರಣ) ವಾಗುತ್ತಿರುತ್ತದೆ, ನಾವು ನಿತ್ಯರಲ್ಲ (ಅವಿನಾಶಿ ಅಲ್ಲ) ನೀನು ನಿತ್ಯಳು ಜಗನ್ಮಾತೆ, ಜಗತ್ ಜನನಿ, ನೀನೇ ಪ್ರಕೃತಿ ಮತ್ತು ಸನಾತನ (ಆದಿ) ದೇವಿ. ಭಗವಾನ್ ಶಂಕರನು ಹೇಳಿದನು. ಬ್ರಹ್ಮಾ–ವಿಷ್ಣು ನಿನ್ನಿಂದ ಉತ್ಪನ್ನರಾದ ಮೇಲೆ ನಂತರ ಉತ್ಪನ್ನನಾದ ನಾನು ತಮೋಗುಣ ಲೀಲೆಯವ ಶಂಕರ ನಿನ್ನ ಸಂತಾನವಲ್ಲವೆ? ಅಂದರೆ ನನ್ನನ್ನು ಉತ್ಪನ್ನ ಮಾಡಿದವಳು ನೀನೆ. ಈ ಸಂಸಾರದ ಸೃಷ್ಟಿ–ಸ್ಥಿತಿ. ಸಂಹಾರಗಳಲ್ಲಿ ನಿನ್ನ ಗುಣಗಳು ಎಂದಿಗೂ ಇರುತ್ತವೆ. ಈ ಮೂರು ಗುಣಗಳಿಂದ ಉತ್ಪನ್ನರಾದ ನಾವು ಬ್ರಹ್ಮಾ–ವಿಷ್ಣು–ಶಂಕರ ನಿಯಮಾನುಸಾರವಾಗಿ (ಯಾರ ಹಣೆಬರಹದಲ್ಲಿ ಎಷ್ಟು ಬರೆದಿರುತ್ತದೆಯೋ ಅಷ್ಟೇ ಕೊಡುತ್ತೇವೆ

**ಹೆಚ್ಚು–ಕಡಿಮೆ ಮಾಡಲಾರೆವು) ಕಾರ್ಯದಲ್ಲಿ ತತ್ಪರರಾಗಿದ್ದೇವೆ.**

**ಮೇಲಿನ ಈ ವಿವರಣೆ ಕನ್ನಡ ಮತ್ತು ಹಿಂದಿಯಲ್ಲಿ ಅನುವಾದಿತವಾಗಿರುವ "ಶ್ರೀ ದೇವಿ ಮಹಾಪುರಾಣ" ದಿಂದ ತೆಗೆದು ಕೊಂಡಿದೆ. ಇದರಲ್ಲಿ ಕೆಲವು ತತ್ವಗಳನ್ನು ಅಡಗಿಸಿಡಲಾಗಿದೆ. ಆದ್ದರಿಂದ ಇದೇ ಪ್ರಮಾಣವನ್ನು ನೋಡಿ. "ಶ್ರೀ ಮದ್ ದೇವಿಭಾಗವತ ಮಹಾಪುರಾಣ" ಸಭಾಷಟಿಕಮ್ ಸಮಹಾತ್ಯಮ್, ಖೇಮರಾಜ ಶ್ರೀ ಕೃಷ್ಣ ದಾಸ್, ಪ್ರಕಾಶನ ಮುಂಬಯಿ, ಇದರಲ್ಲಿ ಸಂಸ್ಕೃತ ಸಹಿತ ಹಿಂದಿ ಅನುವಾದ ಮಾಡಿದೆ. 3ನೇ ಸ್ಕಂದದ 4ನೇ ಅಧ್ಯಾಯ ಪುಟ 10, ಶ್ಲೋಕ 42.**

ಬ್ರಹ್ಮಾ – ಅಹಂ ಮಹೇಶ್ವರಃ ಫಿಲ ತೇ ಪ್ರಭಾವಾತ್ಸರ್ವೇ ವಯಂ ಜನಿ ಯುತಾ
ನ ಯದಾ ತೂ ನಿತ್ಯಾಃ ಕೆ ಅನ್ಯೆ ಸುರಾಃ ಶತಮುಖ ಪ್ರಮುಖಾಃ ಚ
ನಿತ್ಯಾ ನಿತ್ಯಾ ತ್ವಮೇವ ಜನನಿ ಪ್ರಕೃತಿಃ ಪುರಾಣಾ (42)

**ಅನುವಾದ :– (ವಿಷ್ಣು ಹೇಳಿದನು) ಹೇ ಮಾತೆ! ಬ್ರಹ್ಮಾ, ನಾನು ಹಾಗೂ ಶಿವ ನಿನ್ನದೇ ಪ್ರಭಾವದಿಂದ ಜನನವಾಗಿದ್ದೇವೆ. ನಿತ್ಯರಲ್ಲ. ಅಂದರೆ ಅವಿನಾಶಿಯಲ್ಲ. ಅನ್ಯ ಇಂದ್ರಾದಿ ಬೇರೆ ದೇವರುಗಳು ಹೇಗೆ ನಿತ್ಯರಾಗಲು ಸಾಧ್ಯ? ನೀನೇ ಅವಿನಾಶಿಯಾಗಿರುವೆ. ನಮ್ಮೆಲ್ಲರ ಜನನಿ, ಅರ್ಥಾತ್ ಉತ್ಪನ್ನ ಮಾಡಿದ ಮಾತೆಯಾಗಿರುವೆ. ಪ್ರಕೃತಿ ಹಾಗೂ ಸನಾತನಿ ದೇವಿಯಾಗಿರುವೆ. (42)**

**ಅಧ್ಯಾಯ 5, ಪುಟ 11–12 ಶ್ಲೋಕ 8.**

ಯದಿ ದಯಾದ್ರಮನಾ ನ ಸದಾಂಬಿಕೆ ಕಥಮಹಂ ವಿಹಿತಃ
ಚ ತಮೋಗುಣಃ ಕಮಲಜಶ್ಚ ರಜೋಗುಣ ಸಂಭವಃ ಸುವಿಹಿತಃ
ಕಿಮು ಸತ್ವಗುಣೋ ಹರಿಃ (8)

**ಅನುವಾದ :– ಭಗವಾನ್ ಶಂಕರ ಹೇಳಿದ : ಹೇ ಮಾತೆ ! ನಿನಗೆ ನಮ್ಮ ಮೇಲೆ ದಯೆ ಇದ್ದರೆ, ನನ್ನನ್ನು ತಮೋಗುಣದವನಾಗಿ ಏಕೆ ಮಾಡಿದೆ? ಕಮಲದಿಂದ ಉತ್ಪನ್ನವಾದ ಬ್ರಹ್ಮಾನನ್ನು ರಜೋಗುಣದವನಾಗಿ ಏತಕ್ಕಾಗಿ ಮಾಡಿದೆ? ಹಾಗೂ ವಿಷ್ಣುವನ್ನು ಸತೋಗುಣದವನಾಗಿ ಏಕೆ ಮಾಡಿದೆ? ಅರ್ಥಾತ್ ಜೀವಗಳನ್ನು ಜನ್ಮ–ಮೃತ್ಯು ರೂಪದ ದುಷ್ಕರ್ಮದಲ್ಲಿ ಏಕೆ ತೊಡಗಿಸಿದೆ? (8)**

**ಶ್ಲೋಕ 12 :–** "ರಮಯಸೆ ಸ್ವಪತಿಂ ಪುರುಷಂ ಸದಾ ತವ ಗತಿಂ
ನ ಹಿ ವಿಹ ವಿದಮ್ ಶಿವೇ"

**ಅನುವಾದ :– ನಿನ್ನ ಪತಿ ಪುರುಷ ಅರ್ಥಾತ್ ಕಾಲ ಭಗವಂತನೊಂದಿಗೆ ಯಾವಾಗಲೂ ಭೋಗ ವಿಲಾಸ ಮಾಡುತ್ತಲಿರುವೆ. ನಿನ್ನ ಗತಿಯನ್ನು ಯಾರೂ ತಿಳಿದಿಲ್ಲ. (12)**

**ನಿಷ್ಕರ್ಷ:– ಮೇಲಿನ ಪ್ರಮಾಣ ಗಳಿಂದ ದೃಢವಾದ ವಿಚಾರವೆನೆಂದರೆ– ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು, ಹಾಗೂ ತಮೋಗುಣ ಶಿವ ಈ ಮೂವರೂ ನಾಶ ಹೊಂದುವರು. ದುರ್ಗಾಳೊಂದಿಗೆ ಅವಳ ಪತಿ ಕಾಲ ಬ್ರಹ್ಮ ಸದಾ ಭೋಗ–ವಿಲಾಸ ಮಾಡುತ್ತಿರುತ್ತಾನೆ.**

## "ಬ್ರಹ್ಮ (ಕಾಲ)ನು ಅವ್ಯಕ್ತವಾಗಿರಲು ಪ್ರತಿಜ್ಞೆ"

ಸೂಕ್ಷ್ಮವೇದದಿಂದ ಉಳಿದ ಸೃಷ್ಠಿ ರಚನೆ...

**ಮೂರು ಪುತ್ರರ ಉತ್ಪತ್ತಿಯ ನಂತರ ಬ್ರಹ್ಮನು ತನ್ನ ಪತ್ನಿ ದುರ್ಗಾಳೊಂದಿಗೆ ಹೇಳಿದ "ನಾನು ಪ್ರತಿಜ್ಞೆ ಮಾಡುತ್ತೇನೆ, ಭವಿಷ್ಯದಲ್ಲಿ ನನ್ನ ವಾಸ್ತವಿಕ ರೂಪದಲ್ಲಿ ಯಾರಿಗೂ ದರ್ಶನ**

ನೀಡುವುದಿಲ್ಲ. ಈ ಕಾರಣದಿಂದಲೇ ನನ್ನನ್ನು ಅವ್ಯಕ್ತ (ಅಗೋಚರ) ಎಂದು ಹೇಳಲಾಗವುದು. ಈ ನನ್ನ ರಹಸ್ಯವನ್ನು ನೀನು ಯಾರಿಗೂ ಹೇಳಬೇಡ. ನಾನು ರಹಸ್ಯವಾಗಿರುವೆನು". ಆಗ ದುರ್ಗಾ ಕೇಳಿದಳು:– "ನೀವು ನಿಮ್ಮ ಪುತ್ರರಿಗೂ ದರ್ಶನ ನೀಡುವುದಿಲ್ಲವೆ?" ಬ್ರಹ್ಮ ಹೇಳಿದನು. "ನನ್ನ ಪುತ್ರರಿಗಾಗಲಿ, ಬೇರೆ ಯಾರಿಗೇ ಆಗಲಿ, ಅವರ ಸಾಧನೆ (ಜಪ–ತಪ ಇತ್ಯಾದಿ) ಗೂ ನಾನು ದರ್ಶನ ನೀಡುವುದಿಲ್ಲ."

ದುರ್ಗಾ :– "ಇದು ಉತ್ತಮ ನಿಯಮವಲ್ಲ. ನಿಮ್ಮ ಪುತ್ರರಿಗೂ ದರ್ಶನ ನೀಡದೆ ಅಡಗಿಕೊಂಡಿರುವಿರಾ?" ಬ್ರಹ್ಮ :– ದುರ್ಗಾ! ಇದು ನನ್ನ ವಿವಶತೆ ಇದೆ ನನಗೆ ಒಂದು ಲಕ್ಷ ಮಾನವ ಶರೀರ ಧಾರಣೆ ಮಾಡಿದ ವರನ್ನು ತಿನ್ನಬೇಕೆಂಬ ಶಾಪವಿದೆ. ಈ ವಿಚಾರ ನನ್ನ ಪುತ್ರರಿಗೆ ತಿಳಿದರೆ ಅವರು (ಬ್ರಹ್ಮಾ–ವಿಷ್ಣು–ಮಹೇಶ) ಸೃಷ್ಟಿ–ಸ್ಥಿತಿ–ಸಂಹಾರಗಳ ಕೆಲಸವನ್ನೇ ಮಾಡುವುದಿಲ್ಲ. ಆದ್ದರಿಂದ ಈ ನನ್ನ ನಿಯಮ ಉತ್ತಮವಲ್ಲವಾದರೂ, ಸದಾ ಇರುವುದು. ಈ ಮೂವರನ್ನು ಸ್ವಲ್ಪ ದೊಡ್ಡವರಾದ ಮೇಲೆ ಚೇತನಗೊಳಿಸು. ಇಲ್ಲವಾದರೆ ನನ್ನ ವಿಷಯ ಹೇಳಿದರೆ ನಿನಗೂ ಶಿಕ್ಷೆ ವಿಧಿಸುವೆ." ಈ ಭಯದಿಂದ ವಾಸ್ತವಿಕ ಅಂಶವನ್ನು ಪ್ರಕೃತಿ (ದುರ್ಗೆ/ ಭವಾನಿ) ಹೇಳಲಿಲ್ಲ. ಆದ್ದರಿಂದ ಗೀತೆಯಲ್ಲಿನ 7ನೇ ಅಧ್ಯಾಯದ 24ನೇ ಶ್ಲೋಕದಲ್ಲಿ ಹೇಳಲಾಗಿದೆ :– ಈ ಬುದ್ಧಿಹೀನ ಜನ ಸಮುದಾಯವು, ನನ್ನ ಅನುತ್ತಮ ನಿಯಮ (ಅವ್ಯಕ್ತ ಸ್ವರೂಪ) ವನ್ನು ತಿಳಿಯದೆ ಇರುವರು. ನಾನು ಏಂದೂ ಯಾರಿಗೂ ಕಾಣಿಸಿಕೊಳ್ಳುವುದಿಲ್ಲ. ನನ್ನ ಯೋಗಮಾಯೆಯಿಂದ ರಹಸ್ಯವಾಗಿ ಅಡಗಿರುತ್ತೇನೆ. ಆದ್ದರಿಂದಲೇ ನನ್ನನ್ನು (ಕಾಲ ಬ್ರಹ್ಮ) ಮನುಷ್ಯರೂಪದಲ್ಲಿ ಬಂದ ಕೃಷ್ಣನೇ ಎಂದು ತಿಳಿಯುತ್ತಾರೆ.

(ಅಬುದ್ಧಯಃ) ಬುದ್ಧಿಹೀನರು (ಮಮ್) ನನ್ನ (ಅನುತ್ತಮಮ್) ಅತಿ ಕೆಟ್ಟದ್ದು (ಅವ್ಯಯಮ್) ಎಂದು ಬದಲಾಗದ (ಪರಮ ಭಾವಮ್) ಭಾವವನ್ನು (ಅಜಾನಂತಃ) ತಿಳಿಯದೆ (ಮಾಮ್ ಅವ್ಯಕ್ತಮ್) ಅವ್ಯಕ್ತನಾದವನನ್ನು (ವ್ಯಕ್ತಿಮ್) ಮನುಷ್ಯರೂಪದಲ್ಲಿ (ಆಪನ್ನಮ್) ಬಂದಿದ್ದಾನೆ (ಮನ್ಯಂತೆ) ಎಂದು ತಿಳಿಯುತ್ತಾರೆ. ಅರ್ಥಾತ್ ನಾನು ಕೃಷ್ಣನಲ್ಲ (ಗೀತೆಯ 7ನೇ ಅಧ್ಯಾಯದ 24ನೇ ಶ್ಲೋಕ)

ಗೀತೆಯ 11ನೇ ಅಧ್ಯಾಯದ 47 ಮತ್ತು 48ನೇ ಶ್ಲೋಕಗಳಲ್ಲಿ ಹೀಗೆ ಹೇಳಿದ್ದಾನೆ– ಇದು ನನ್ನ ವಾಸ್ತವಿಕವಾದ ಕಾಲರೂಪವಾಗಿದೆ. ವೇದದಲ್ಲಿ ವರ್ಣಿತ ವಿಧಿಯಿಂದಾಗಲಿ, ಯಜ್ಞಗಳಿಂದಾಗಲಿ, ಯಾವುದೆ ಕ್ರಿಯೆಗಳಿಂದಾಗಲಿ ಮತ್ತು ಉಗ್ರವಾದ ತಪಸ್ಸಿನಿಂದಾಗಲಿ ನನ್ನ ಈ ಕಾಲರೂಪವನ್ನು ನೋಡಲು ಯಾರಿಂದಲೂ ಸಾಧ್ಯವಿಲ್ಲ.

ಮೂರೂ ಮಕ್ಕಳು (ಬ್ರಹ್ಮಾ–ವಿಷ್ಣು–ಮಹೇಶ್ವರ) ದೊಡ್ಡವರಾದ ಮೇಲೆ ಪ್ರಕೃತಿ/ ದುರ್ಗೆಯು ನೀವು ಮೂವರೂ ಸಾಗರ ಮಂಥನ ಮಾಡಿರಿ ಎಂದು ಹೇಳಿದಳು. [ಜ್ಯೋತಿ ನಿರಂಜನ ತನ್ನ ಉಸಿರಿನ ಮೂಲಕ 4 ವೇದಗಳನ್ನು ಉತ್ಪನ್ನ ಮಾಡಿದನು. ಅವುಗಳಿಗೆ ಸಾಗರದಲ್ಲಿ ವಾಸ ಮಾಡಿರೆಂದು ಗುಪ್ತ ವಾಣಿ ಮೂಲಕ ತಿಳಿಸಿದನು] ಮೊದಲ ಬಾರಿಗೆ ನಾಲ್ಕು ವೇದಗಳು ಈ ಮೂವರು ಸಾಗರ ಮಂಥನ ಮಾಡಿದಾಗ ಹೊರಬಂದವು. ನಾಲ್ಕು ವೇದಗಳೊಂದಿಗೆ ಮೂವರೂ ತಾಯಿಯ ಬಳಿಗೆ ಬಂದರು. ಆಗ ತಾಯಿ ಹೇಳಿದಳು ಈ ನಾಲ್ಕು ವೇದಗಳನ್ನು ಬ್ರಹ್ಮಾನೇ ಇಟ್ಟಿಕೊಂಡು ಓದುತ್ತಿರಲಿ.

ಸೂಚನೆ :– ವಾಸ್ತವದಲ್ಲಿ ಪೂರ್ಣ ಬ್ರಹ್ಮನು, ಕಾಲ ಬ್ರಹ್ಮನಿಗೆ 5 ವೇದಗಳನ್ನು ನಿಡಿದ್ದನು. ಆದರೆ ಬ್ರಹ್ಮನು ಕೇವಲ 4 ವೇದಗಳನ್ನು ಪ್ರಕಟಗೊಳಿಸಿದ. ಐದನೆಯ ವೇದವನ್ನು ಅಡಗಿಸಿದನು. ಆ ಅಡಗಿಸಿಟ್ಟ ವೇದವನ್ನು ಪೂರ್ಣ ಪರಮಾತ್ಮ ಕಬೀರ್ ಈ ಭೂಮಿ ಮೇಲೆ ಪ್ರತ್ಯಕ್ಷನಾಗಿ "ಕವಿರ್ಗಿರ್ಭಿಃ" ಅಂದರೆ ಕವಿರ್‌ವಾಣಿಯ ಮೂಲಕ ಲೋಕೋಕ್ತಿ (ನಾಲ್ಕುನುಡಿ) ಹಾಗೂ

ದೋಹೆಗಳ (ಎರಡು ಸಾಲಿನ ಪದ್ಯ) ಮೂಲಕ ಪ್ರಕಟಗೊಳಿಸಿದನು.

ಪ್ರಕೃತಿಯು ತನ್ನದೇ ಬೇರೆ ಮೂರು ರೂಪಗಳನ್ನು (ಸಾವಿತ್ರಿ, ಲಕ್ಷ್ಮೀ, ಪಾರ್ವತಿ) ಧಾರಣೆ ಮಾಡಿ ಸಮುದ್ರದಲ್ಲಿ ಅಡಗಿಸಿದ್ದಳು. ಎರಡನೆಯ ಬಾರಿ ಸಾಗರ ಮಂಥನ ಮಾಡಿದಾಗ ಮೂವರು ಕನ್ಯೆಯರು ಹೊರಬಂದರು. ತಾಯಿಯು ಮೂವರಿಗೂ ವಿವಾಹ ಮಾಡಿದಳು. ಮೂರು ರೂಪವಾಗಿದ್ದ ಪ್ರಕೃತಿ/ ದುರ್ಗೆ, ಬ್ರಹ್ಮಾನಿಗೆ ಸಾವಿತ್ರಿ, ವಿಷ್ಣುವಿಗೆ ಲಕ್ಷ್ಮೀ ಹಾಗೂ ಶಂಕರನಿಗೆ ಪಾರ್ವತಿಯನ್ನು ಪತ್ನೀ ರೂಪದಲ್ಲಿರಲು ಹೇಳಿದಳು. ಮೂವರು ಭೋಗ-ವಿಲಾಸ ಮಾಡಿದರು ಇದರಿಂದ ಸುರ (ದೇವ-ದೇವತೆ) ಅಸುರ (ರಾಕ್ಷಸರು) ಹುಟ್ಟಿದರು.

[ಮೂರನೆಯ ಬಾರಿ ಸಾಗರ ಮಂಥನ ಮಾಡಿದಾಗ, 14 ರತ್ನಗಳು ಬಂದವು ಅದು ಬ್ರಹ್ಮಾನಿಗೆ, ಅಮೃತವು ವಿಷ್ಣು ಹಾಗೂ ದೇವತೆಗಳಿಗೆ, ಮಧ್ಯ (ಸಾರಾಯಿ) ಅಸುರರಿಗೆ ಹಾಗೂ ಶಿವನು ವಿಷವನ್ನು ಕುಡಿದು ತನ್ನ ಕಂಠದಲ್ಲೆ ತಡೆದನು. ಇದಂತೂ ಬಹಳ ಹಿಂದಿನ ದಿನಗಳ ಮಾತು] ಬ್ರಹ್ಮಾನು ವೇದವನ್ನು ಓದಿದಾಗ ಈ ಸಮಸ್ತ ಬ್ರಹ್ಮಾಂಡವನ್ನು ರಚಿಸಿರುವ ಸ್ವಾಮಿ ಬೇರೆಯೇ ಇರುವನೆಂದು ತಿಳಿಯಿತು. ಆಗ ಈ ವಿಚಾರವನ್ನು ವಿಷ್ಣುವಿಗೆ-ಶಂಕರನಿಗೆ ತಿಳಿಸಿದನು. "ವೇದಗಳಲ್ಲಿ ಹೇಳಿರುವ ಸೃಜನಹಾರ" ಬೇರೆ ಯಾರೋ ಇದ್ದಾನೆ, ಆದರೆ ವೇದಗಳು ನಮಗೂ ತಿಳಿಯದೆಂದು ಹೇಳುತ್ತವೆ. ಅದಕ್ಕಾಗಿ ಯಾರಾದರು ತತ್ವದರ್ಶಿ ಸಂತರನ್ನು ಕೇಳಿ ಎಂದು ಸನ್ನೆ ಮಾಡಿವೆ. ಆಗ ಬ್ರಹ್ಮಾನು ತಾಯಿಯ ಬಳಿ ಬಂದು ಎಲ್ಲಾ ವೃತ್ತಾಂತವನ್ನು ತಿಳಿಸಿದ. ಆದರೆ ತಾಯಿ ಹೇಳಿದಳು ನಾನೇ ಎಲ್ಲಾ. ನನ್ನ ಬಿಟ್ಟು ಬೇರೆ ಯಾರೂ ಇಲ್ಲ. ನಾನೇ ಕರ್ತಾ ನಾನೇ ಸರ್ವಶಕ್ತಿವಂತಳು. ಆದರೆ ಬ್ರಹ್ಮಾ ಹೇಳಿದನು ವೇದಗಳನ್ನು ಬ್ರಮ್ಹನು ಕೊಟ್ಟಿದ್ದಾನೆ, ಇವು ಸುಳ್ಳಾಗಲು ಸಾಧ್ಯವಿಲ್ಲ. ದುರ್ಗಾ ಹೇಳಿದಳು ನಿನ್ನ ತಂದೆ ಯಾರಿಗೂ ದರ್ಶನ ನೀಡುವುದಿಲ್ಲ ಎಂದು ಪ್ರತಿಜ್ಞೆಮಾಡಿದ್ದಾನೆ. ಇಲ್ಲ ತಾಯಿ ನಿನ್ನ ಮಾತುಗಳಲ್ಲಿ ನನಗೆ ವಿಶ್ವಾಸವಿಲ್ಲ. ನಾನು ಆ ಪುರುಷನನ್ನು ಕಂಡೇ ಕಾಣುತ್ತೇನೆ. ಒಂದು ವೇಳೆ ಅವರು ನಿನಗೆ ದರ್ಶನ ಕೊಡದಿದ್ದರೆ ನೀನು ಏನು ಮಾಡುವೆ? ಎಂದು ದುರ್ಗೆ ಕೇಳಿದಾಗ, "ನಾನು ನಿನಗೆ ಮುಖ ತೋರಿಸುವುದಿಲ್ಲ ಎಂದು ಬ್ರಹ್ಮಾ ಹೇಳಿದ. ಜ್ಯೋತಿ ನಿರಂಜನನು ಯಾರಿಗೂ ದರ್ಶನ ಕೊಡುವುದಿಲ್ಲ ಎಂದು ಪ್ರತಿಜ್ಞೆಮಾಡಿದ್ದಾನೆ. ಅಂದರೆ 21 ಬ್ರಹ್ಮಾಂಡಗಳಲ್ಲಿ ಏಂದೂ ತನ್ನ ವಾಸ್ತವಿಕ ಕಾಲ ರೂಪದಲ್ಲಿ ಆಕಾರದಲ್ಲಿ ನಾನು ಬರುವುದಿಲ್ಲ ಎಂದಿದ್ದಾನೆ.

<u>ಗೀತೆಯ 7ನೇ ಅಧ್ಯಾಯದ 24ನೇ ಶ್ಲೋಕ</u>.

ಅವ್ಯಕ್ತಂ, ವ್ಯಕ್ತಿಂ, ಆಪನ್ನಮ್, ಮನ್ಯಂತೇ, ಮಾಮ್, ಅಬುದ್ಧಯಃ ।
ಪರಂ, ಭಾವಮ್, ಅಜಾನಂತಃ, ಮಮ್, ಅವ್ಯಯಮ್, ಅನುತ್ತಮಾಮ್ ॥ 24 ॥

**ಅನುವಾದ:-** (ಅಬುದ್ಧಯಃ) ಬುದ್ಧಿಹೀನರು( ಮಮ್) ನನ್ನ (ಅನುತ್ತಮಮ್) ಅನುತ್ತಮ ಅರ್ಥಾತ್ ಅತಿ ಕೆಟ್ಟದು (ಅವ್ಯಯಮ್) ಎಂದೂ ಬದಲಾಗದ (ಪರಮ ಭಾವಮ್) ಭಾವವನ್ನು (ಅಜಾನಂತಃ) ತಿಳಿಯದೆ (ಮಾಮ್ ಅವ್ಯಕ್ತಮ್) ಅವ್ಯಕ್ತನಾದವನನ್ನು (ವ್ಯಕ್ತಿಮ್) ಮನುಷ್ಯರೂಪದಲ್ಲಿ ಕ್ರಷ್ಣನ ಅವತಾರ(ಆಪನ್ನಮ್) ಪಡೆದವನು (ಮನ್ಯಂತೆ) ಎಂದು ತಿಳಿದಿದ್ದಾರೆ.

<u>ಗೀತೆಯ 7ನೇ ಅಧ್ಯಾಯ 25ನೇ ಶ್ಲೋಕ.</u>

ನ, ಅಹಂ, ಪ್ರಕಾಶಃ, ಸರ್ವಸ್ಯ, ಯೋಗಮಾಯಾಸಮಾವೃತಃ ।
ಮೂಢಃ, ಅಯಂ, ನ, ಅಭಿಜಾನಾತಿ, ಲೋಕಃ, ಮಾಮ್, ಅಜಮ್, ಅವ್ಯಯಮ್ ॥

**ಅನುವಾದ:-** (ಅಹಂ) ನಾನು (ಯೋಗಮಾಯಾ ಸಮಾವೃತಃ) ಯೋಗಮಾಯೆಯಿಂದ ಅಡಗಿರುವವನು (ಸರ್ವಸ್ಯ) ಎಲ್ಲರ ಎದುರಗಡೆ (ಪ್ರತ್ಯಕ್ಷ) ಪ್ರತ್ಯಕ್ಷ (ನ) ವಾಗುವುದಿಲ್ಲ ಅದೃಶ್ಯ

ಅಂದರೆ ಅವ್ಯಕ್ತವಾಗಿರುವೆನು (ಅಜಮ್) ಎಂದೂ ಜನ್ಮ ತಾಳುವುದಿಲ್ಲ (ಅವ್ಯಯಮ್) ಎಂದೂ ಬದಲಾಗದ ಭಾವದವನು (ಅವ್ಯಯಮ್) ಈ (ಮುಢಃ) ಅಜ್ಞಾನಿ (ಲೋಕಃ) ಜನ ಸಮುದಾಯ (ಮಾಮ್) ನನ್ನನ್ನು (ನ) (ಅಭಿಜಾನಾತಿ) ತಿಳಿಯುವುದಿಲ್ಲ ಅರ್ಥಾತ್ ನನ್ನನ್ನು ಅವತಾರ ರೂಪದಲ್ಲಿ ಬಂದವನು ಎಂದು ತಿಳಿಯುತ್ತಾರೆ. ಏಕೆಂದರೆ ಬ್ರಹ್ಮ ತನ್ನ ಶಬ್ದ ಶಕ್ತಿಯಿಂದ ತನ್ನ ನಾನಾ ರೂಪವನ್ನು ಮಾಡಿ ಕೋಳ್ಳುತ್ತಾನೆ ಇದಕ್ಕಾಗಿ ಈ ಮಂತ್ರದಲ್ಲಿ ಹೇಳಿದ್ದಾನೆ. ನಾನು ಶ್ರೀಕೃಷ್ಣ ಮುಂತಾದವರ ಹಾಗೆ ದುರ್ಗಾಳಿಂದ ಜನ್ಮ ತಾಳುವುದಿಲ್ಲ.

## "ಬ್ರಹ್ಮಾನು ತನ್ನ ತಂದೆ (ಕಾಲ/ ಬ್ರಹ್ಮ) ಯನ್ನು ಪಡೆಯುವ ಪ್ರಯತ್ನದಲ್ಲಿ"

ದುರ್ಗಾ ಬ್ರಹ್ಮಾನಿಗೆ ಹೇಳಿದಳು. ಅಲಖ್ ನಿರಂಜನ ನಿಮ್ಮ ತಂದೆಯಾಗಿದ್ದಾರೆ. ಆದರೆ ನಿನಗೆ ದರ್ಶನ ಕೊಡುವುದಿಲ್ಲ. ಆದರೆ ನಾನು ದರ್ಶನ ಮಾಡಿಕೊಂಡೇ ಹಿಂದಕ್ಕೆ ಬರುವೆ ಎಂದನು ಬ್ರಹ್ಮಾ. ಒಂದು ವೇಳೆ ನಿನಗೆ ನಿನ್ನ ತಂದೆಯ ದರ್ಶನವಾಗದಿದ್ದರೆ ಏನು ಮಾಡುವೆ? ಬ್ರಹ್ಮಾ ಪ್ರತಿಜ್ಞೆ ಮಾಡಿದ ತಂದೆಯ ದರ್ಶನವಾಗದಿದ್ದರೆ ನಾನು ನಿಮ್ಮ ಮುಂದೆ ಬರುವುದೇ ಇಲ್ಲ. ಹೀಗೆ ಹೇಳಿ ಬ್ರಹ್ಮಾನು ಉತ್ತರ ದಿಕ್ಕಿಗೆ ಹೊರಟನು ಅಲ್ಲಿ ಕತ್ತಲೆಯೋ ಕತ್ತಲೆ. ಅಲ್ಲಿ ಬ್ರಹ್ಮಾನು 4 ಯುಗಗಳವರೆಗೆ ಧ್ಯಾನ ಮಾಡಿದ ಏನೂ ಪ್ರಾಪ್ತಿಯಾಗಲಿಲ್ಲ. ಕಾಲ(ಬ್ರಹ್ಮ) ನು ಆಕಾಶವಾಣಿ ಮೂಲಕ ಕೇಳಿದ ದುರ್ಗಾ ಜೀವಿಗಳ ಉತ್ಪತ್ತಿ ಏಕೆ ಮಾಡಿಲ್ಲ? ದುರ್ಗಾ ಹೇಳಿದಳು "ನಿಮ್ಮ ಜೇಷ್ಠ ಪುತ್ರ ಹಠ ಮಾಡಿ ನಿಮ್ಮನ್ನು ಹುಡುಕಲು ಹೊರಟಿದ್ದಾನೆ. ಬ್ರಹ್ಮಾ ಜೀವಗಳ ಉತ್ಪತ್ತಿ ಮಾಡದಿದ್ದರೆ ಎಲ್ಲಾ ಕಾರ್ಯಗಳು ಅಸಂಭವವಾಗುತ್ತವೆ. ಅವನನ್ನು ಹಿಂದಕ್ಕೆ ಕರೆಸಿಕೊ" ನಾನು ಅವನಿಗೆ ದರ್ಶನ ಕೊಡುವುದಿಲ್ಲ ಎಂದನು ಕಾಲ ಬ್ರಹ್ಮ. ಆಗ ದುರ್ಗಾ 'ಗಾಯತ್ರಿ' ಎಂಬ ಹುಡುಗಿಯನ್ನು ತನ್ನ ಶಬ್ದಶಕ್ತಿಯಿಂದ ಉತ್ಪನ್ನ ಮಾಡಿದಳು. ಬ್ರಹ್ಮಾನನ್ನು ಹಿಂದಕ್ಕೆ ಕರೆತರಲು ಹೇಳಿದಳು. ಗಾಯತ್ರಿ ಬ್ರಹ್ಮಾನಲ್ಲಿಗೆ ಹೋದಳು. ಆದರೆ ಬ್ರಹ್ಮಾನು ಯಾರು ಬಂದಿರುವರೆಂದು ಭಾಸವೇ ಆಗದಂತೆ, ಸಮಾಧಿ ಸ್ಥಿತಿಯಲ್ಲಿದ್ದನು. ಆಗ ದುರ್ಗೆಯು ಗಾಯತ್ರಿಗೆ ಧ್ಯಾನದ ಮೂಲಕ ಬ್ರಹ್ಮಾನ ಚರಣಗಳನ್ನು ಸ್ಪರ್ಶಿಸಲು ಹೇಳಿದಳು. ಆಗ ಬ್ರಹ್ಮಾನ ಸಮಾಧಿ ಭಂಗವಾಯಿತು. "ಯಾರು ನನ್ನ ಧ್ಯಾನ ಭಂಗ ಮಾಡಿದವಳು? ನಿನಗೆ ಶಾಪವನ್ನು ಕೊಡುವೆ ಎಂದ ಬ್ರಹ್ಮಾ. ಆಗ ಗಾಯತ್ರಿ ನನ್ನದೇನೂ ದೋಷವಿಲ್ಲ ಎಂದಳು. ಮೊದಲು ನನ್ನ ಮಾತುಗಳನ್ನು ಕೇಳು. ನಂತರ ಶಾಪ ಕೊಡುವೆಯಂತೆ ಎಂದಳು. ನಿನ್ನನ್ನು ಹಿಂದಕ್ಕೆ ಕರೆತರಲು ನನಗೆ ತಾಯಿ ಕಳುಹಿಸಿದ್ದಾರೆ. ನೀನು ಇಲ್ಲದಿದ್ದರೆ (ಬಾರದಿದ್ದರೆ) ಜೀವ ಉತ್ಪನ್ನ ಕಾರ್ಯ ಆಗುವುದಿಲ್ಲ. ನಾನು ಹೇಗೆ ಬರಲು ಸಾಧ್ಯ!. ತಂದೆಯ ದರ್ಶನ ಮಾಡದೆ ಬಂದರೆ ಅಪಹಾಸ್ಯಕ್ಕೆ ಗುರಿಯಾಗುವೆ. ಒಂದುವೇಳೆ ನೀನು ತಾಯಿಯವರಿಗೆ ಇವನಿಗೆ ತಂದೆಯ (ಜ್ಯೋತಿ ನಿರಂಜನನ) ದರ್ಶನವಾಗಿದೆ. ನಾನು ನನ್ನ ಕಣ್ಣಾರೆ ನೋಡಿದ್ದೇನೆ ಎಂದು ಹೇಳಿದ್ದರೆ ನಾನು ಹಿಂದಕ್ಕೆ ಬರುವೆ ಎಂದು ಬ್ರಹ್ಮಾ ಹೇಳಿದಾಗ ಗಾಯತ್ರಿ ಹೇಳಿದಳು. "ನೀನು ನನ್ನೊಂದಿಗೆ ಸಂಭೋಗಿಸಿದರೆ, ನಾನು ಈ ಸುಳ್ಳು ಸಾಕ್ಷಿ ಹೇಳುವೆ." ಆಗ ಬ್ರಹ್ಮಾನು ಯೋಚಿಸಿದ ಇತ್ತ ತಂದೆಯ ದರ್ಶನ ಭಾಗ್ಯವು ಇಲ್ಲ. ಅತ್ತ ತಾಯಿಗೆ ಮುಖ ತೋರಿಸಲು ಆಗದೆ. ಅದಕ್ಕಿಂತ ಇವಳು ಹೇಳುತ್ತಿರುವಂತೆ ಮಾಡುವೆ." ಎಂದು ಅವಳನ್ನು ಸಂಭೋಗಿಸಿದ. ಗಾಯತ್ರಿ ಮತ್ತೊಂದು ಸಾಕ್ಷಿಯನ್ನು ಏಕೆ ಸಿದ್ಧಮಾಡಿಕೊಳ್ಳಬಾರದು ಎಂದು ತನ್ನ ಶಬ್ದಶಕ್ತಿಯಿಂದ ಒಂದು ಹುಡುಗಿ ಪುಹಪವತಿಯನ್ನು ಉತ್ಪನ್ನ ಮಾಡಿದಳು. ಅವಳಿಗೆ ಹೇಳಿದಳು "ನಾನು ಬ್ರಹ್ಮಾನು ತಂದೆಯ ದರ್ಶನ ಮಾಡುವುದನ್ನು ನೋಡಿದೆ" ಎಂದು ಹೇಳು. ಆಗ ಪುಹಪವತಿ ಹೇಳಿದಳು. "ನಾನೇಕೆ ಸುಳ್ಳು ಸಾಕ್ಷಿ ನೀಡಲಿ. ಒಂದುವೇಳೆ ಬ್ರಹ್ಮಾನು ನನ್ನನ್ನು ಸಂಭೋಗಿಸಿದರೆ ನಾನು ಸುಳ್ಳು ಸಾಕ್ಷಿ ನೀಡುವೆ." ಗಾಯತ್ರಿಯು ಬ್ರಹ್ಮಾನನ್ನು ಹಾಗೇ ಮಾಡಲು ಪ್ರೇರೇಪಿಸಿದಳು. ಈಗ ಬೇರೆ ಉಪಾಯ ಕಾಣದೆ ಬ್ರಹ್ಮಾನು

ಪುಹಪವತಿಯನ್ನು ಸಂಭೋಗಿಸಿದ. ಮೂವರು (ಬ್ರಹ್ಮಾ, ಗಾಯತ್ರಿ–ಪುಹಪವತಿ) ಸೇರಿ ಆದಿ ಮಾಯೆಯ ಹತ್ತಿರ ಬಂದರು. ಇಬ್ಬರೂ ದೇವಿಯರು (ಗಾಯತ್ರಿ, ಪುಹಪವತಿ) ಮೇಲಿನ ಶರತನ್ನು ಏಕೆ ಮಾಡಿದರು ಎಂದರೆ ಒಂದು ವೇಳೆ ಬ್ರಹ್ಮಾನು ತಾಯಿ ಮುಂದೆ ನಮ್ಮ ಸುಳ್ಳು ಸಾಕ್ಷಿ ಬಾಯಿಬಿಟ್ಟರೆ ಎಂಬ ಭಯದಿಂದ, ಅವನನ್ನು ದೋಷಿ ಮಾಡಿಕೊಂಡರು.

ಇಲ್ಲಿ ಮಹಾರಾಜ್ ಗರೀಬ್‌ದಾಸರು ಹೇಳುತ್ತಾರೆ :

"ದಾಸ್ ಗರೀಬ್ ಯಹ ಚೂಕ ಧೂರೋ ಧೂರ್"

## "ತಾಯಿಯಿಂದ (ದುರ್ಗಾಳಿಂದ) ಬ್ರಹ್ಮಾನಿಗೆ ಶಾಪ"

ನಿನಗೆ ತಂದೆಯವರ ದರ್ಶನವಾಯಿತೆ! ಎಂದು ಬ್ರಹ್ಮಾನನ್ನು ತಾಯಿ ಕೇಳಿದಾಗ "ಹಾ! ಆಯಿತು" ಎಂದನು ಬ್ರಹ್ಮಾ! ಸಾಕ್ಷಿ ತೋರಿಸು ಎಂದಳು ದುರ್ಗಾ. ಆಗ ಈ ಇಬ್ಬರೂ (ಗಾಯತ್ರಿ, ಪುಹಪವತಿ) ಅಲ್ಲಿ ಸಾಕ್ಷತ್ಕಾರವಾದರು. ಆಗ ದೇವಿಯು ಆ ಇಬ್ಬರನ್ನೂ ಕೇಳಿದಳು. "ನಿಮ್ಮ ಮುಂದೆ ಬ್ರಹ್ಮಾನಿಗೆ ಅತನ ತಂದೆಯ ದರ್ಶನವಾಯಿತೆ? "ಹೌದು" ಎಂದರು ಇಬ್ಬರೂ. "ತಾವೇ ನಮ್ಮ ಕಣ್ಣುಗಳಿಂದ ಕಂಡೆವು" ದುರ್ಗಾಗೆ ಸಂಶಯವಾಯಿತು. "ನನಗೆ ಹೇಳಿದ ಪ್ರಕಾರ ಬ್ರಹ್ಮನು ಯಾರಿಗೂ ದರ್ಶನ ಕೊಟ್ಟಿರುವುದಿಲ್ಲ. ಆದರೆ ಇವರು ಏಕೆ ಹೀಗೆ ಹೇಳುತ್ತಿದ್ದಾರೆ. ಆಗ ದುರ್ಗಾ ಧ್ಯಾನದಿಂದ ಜ್ಯೊತಿನಿರಂಜನನ್ನು ಕೇಳಿದಾಗ "ಈ ಮೂವರು ಸುಳ್ಳು ಹೇಳುತ್ತಿದ್ದಾರೆಂದು ಜ್ಯೋತಿ ನಿರಂಜನ ಆಕಾಶವಾಣಿ ಮಾಡಿದನು". ನಿವು ಸುಳ್ಳು ಹೇಳುತ್ತಿದಿರಿ, ಆಕಾಶವಾಣಿ ಆಗಿದೆ ಇವರಿಗೆ ಏನು ದರ್ಶನ ಆಗಿಲ್ಲ. ಈ ಮಾತನ್ನು ಕೇಳಿ ಬ್ರಹ್ಮಾ ಹೇಳಿದ ತಾಯಿ ನಾನು ಶಪಥ ಮಾಡಿ "ತಂದೆಯವರ ದರ್ಶನಕ್ಕೆ ಹೊಗಿದ್ದೆ ಆದರೆ ದರ್ಶನವಾಗಲಿಲ್ಲ. ನಿನಗೆ ಮುಖ ತೋರಿಸಲು ನಾಚಿಕೆಯಾಯಿತು. ಆದ್ದರಿಂದ ಸುಳ್ಳು ಹೇಳಿದೆ." ನಾನೀಗ ನಿನಗೆ ಶಾಪ ಕೊಡುವೆ ಎಂದಳು ತಾಯಿ.

<u>ಬ್ರಹ್ಮಾನಿಗೆ ತಾಯಿ ದುರ್ಗೆಯಿಂದ ಶಾಪ</u> :– ಜಗತ್ತಿನಲ್ಲಿ ನಿನಗೆ ಯಾರೂ ಪೂಜೆ ಮಾಡುವುದಿಲ್ಲ. ಮುಂದೆ ನಿನ್ನ ವಂಶದವರು ಬಹಳ ಪಾಖಂಡಿ ದುಷ್ಟರಾಗಿರುವರು. ಸುಳ್ಳು ಮಾತುಗಳಿಂದ ಜಗದ ಜನರಿಗೆ ಮೋಸ ಮಾಡುವರು. ಮೇಲ್ನೋಟಕ್ಕೆ ಕರ್ಮ ಕಾಂಡ ಮಾಡುವರಂತೆ ಕಂಡರೂ ಒಳಗೊಳಗೆ ವಿಕಾರಿಗಳಾಗಿರುವರು. ಕಥಾ–ಶ್ರವಣ ಮಾಡಿಸುವರು. ಅವರಿಗೆ ಸ್ವತಃ ಜ್ಞಾನದ ಅರಿವು ಇರುವುದಿಲ್ಲ ಸದ್ಗ್ರಂಥಗಳಲ್ಲಿ ಏನು ಬರೆದಿದೆ, ಸಹಜತೆ ತಿಳಿಯದೆ ಕೀರ್ತಿ ಹಾಗೂ ಧನಕ್ಕಾಗಿ, ಗುರುವಾಗಿ, ಲೋಕಕ್ಕೆ ಶಾಸ್ತ್ರ ವಿರುದ್ಧ ಮಾರ್ಗವನ್ನು ತಿಳಿಸುತ್ತಾ, ದೇವ–ದೇವಿಯರ ಪೂಜೆ ಮಾಡಿಸುವರು. ಬೇರೆಯವರನ್ನು ನಿಂದಿಸಿ ಕಷ್ಟದ ಮೇಲೆ ಕಷ್ಟವನ್ನು ತಂದುಕೊಳ್ಳುವರು. ಅವರ ಅನುಯಾಯಿಗಳಿಗೆ ಪರಮಾರ್ಥವನ್ನು ತಿಳಿಸುವುದಿಲ್ಲ. ದಕ್ಷಿಣೆಯ ಹಣಕ್ಕಾಗಿ ಜಗತ್ತನ್ನೆ ಗೊಂದಲ ಮಾಡುವರು. ತನ್ನನ್ನು ತಾನು ಶ್ರೇಷ್ಠವೆಂದು, ಬೇರೆಯವರು ಕನಿಷ್ಠವೆಂದು ತಿಳಿಯುವರು" ತಾಯಿಯ ಬಾಯಿಂದ ಈ ಶಾಪ ವಚನ ಕೇಳಿ ಬ್ರಹ್ಮಾನು ಮೂರ್ಛೆ ಹೋದನು. ಬಹಳ ಸಮಯಗಳ ನಂತರ ಪ್ರಜ್ಞೆ ಬಂದಿತು.

<u>ಗಾಯತ್ರಿಗೆ ಶಾಪ</u> :– ನಿನಗೆ ಅನೇಕ ಗೂಳಿಗಳು ಗಂಡಂದಿರಾಗಿ ಸಿಗುವರು ನೀನು ಮೃತ್ಯು ಲೋಕದ ಹಸುವಾಗಿರುವೆ.

<u>ಪುಹಪವತಿಗೆ ಶಾಪ</u> :– ನೀನಿರುವ ಜಾಗದಲ್ಲಿ ಕೊಳಕು ಕೆಟ್ಟ ವಾಸನೆ ಇರುತ್ತದೆ. ನಿನ್ನ ಹೂವನ್ನು ಯಾರೂ ಪೂಜೆಗೆ ಬಳಸುವುದಿಲ್ಲ. ಈ ಸುಳ್ಳು ಸಾಕ್ಷಿಗಾಗಿ ನೀನು ಈ ನರಕವನ್ನು ಅನುಭವಿಸಬೇಕು. ನಿನ್ನ ಹೆಸರು ಕೇವಡಾಕೇತಕಿ (ಈ ಹೂವನ್ನು ಹರಿಯಾಣದಲ್ಲಿ ಕುಸೋಂದಿ ಎನ್ನುತ್ತಾರೆ. ಕೊಚ್ಚೆಯಿರುವಲ್ಲಿ ಈ ಹೂ ಬೇಳೆಯುತ್ತದೆ.)

ಈ ರೀತಿ ಮೂವರಿಗೂ ಶಾಪ ಕೊಟ್ಟ ನಂತರ ತಾಯಿ ಭವಾನಿಯು ಬಹಳ ಪಶ್ಚಾತ್ತಾಪ ಪಟ್ಟಳು. ಜೀವಿಗಳು ಈ ರೀತಿ ಯೋಚಿಸದೆ ತಪ್ಪು ಮಾಡಿ ನಂತರ ಪರಿತಪಿಸುತ್ತಾರೆ. ಇದು ಕಾಲ ನಿರಂಜನನ ಪ್ರಭಾವ ಆದರೆ ಆತ್ಮ (ಸತ್ಯಪುರುಷನ ಅಂಶ) ದ ಪ್ರಭಾವದಿಂದ ಜ್ಞಾನೋದಯವಾಗುತ್ತದೆ. ತಾಯಿ ತನ್ನ ಮಕ್ಕಳಿಗೆ ಚಿಕ್ಕ ತಪ್ಪಿಗಾಗಿ ಹೊಡೆದಿರುತ್ತಾಳೆ ನಂತರ ಪಶ್ಚಾತ್ತಾಪ ಪಡುತ್ತಾಳೆ (ಇದೆಲ್ಲಾ ಕಾಲನ ಪ್ರಭಾವ). ನಿರಂಜನನೂ ಸಹ ಹೇಳಿದ್ದಾನೆ. ಯಾರಾದರೂ ದುರ್ಬಲರನ್ನು ಪೀಡಿಸಿದರೆ ಅವರಿಗೆ ಅದರ ಎರಡಷ್ಟು ಪೀಡೆಯುಂಟಾಗುತ್ತದೆ. ಬ್ರಹ್ಮಾ–ಗಾಯತ್ರಿ–ಪುಹಪವತಿಗೆ ಶಾಪ ಕೊಟ್ಟಿದ್ದನ್ನು ನೋಡಿ ಕಾಲನಿರಂಜನನು “ನೀನು ತಪ್ಪು ಮಾಡಿದೆ” ಎಂದು ಪ್ರಕೃತಿಗೆ ತಿಳಿಸಿದ. ನಾನು ನಿನಗೆ ಶಾಪ ಕೊಡುವೆ ಅದೇನೆಂದರೆ “ದ್ವಾಪರ ಯುಗದಲ್ಲಿ ನಿನಗೆ ಐದು ಜನ ಗಂಡಂದಿರು ಇರುವರು” (ದ್ರೌಪದಿಯು ಆದಿ ಮಾಯೆಯ ಅವತಾರವೇ ಆಗಿದ್ದಳು) ಈ ಆಕಾಶವಾಣಿಯನ್ನು ಕೇಳಿದ ಆದಿ ಮಾಯೆಯು ಹೇಳಿದಳು “ನಾನೀಗ ನಿನ್ನ ವಶದಲ್ಲಿರುವೆ ನಿನಗೆ ಹೇಗೆ ಇಷ್ಟವೋ ಹಾಗೆಯೇ ಮಾಡು”.

ಸೃಷ್ಟಿ ರಚನೆಯಲ್ಲಿ ದುರ್ಗೆಯ ಇತರೆ ಹೆಸರುಗಳನ್ನು ಮತ್ತೆ–ಮತ್ತೆ ಬರೆಯಲು ಕಾರಣವೇನೆಂದರೆ ಪುರಾಣ, ಭಗವದ್ಗೀತೆ ಹಾಗೂ ವೇದಗಳಲ್ಲಿ ನೋಡುವಾಗ ಭ್ರಮೆಗೊಳಗಾಗಬಾರದು. ಯಾವ ರೀತಿ ಭಗವದ್ಗೀತೆಯ 14ನೇ ಅಧ್ಯಾಯದ 3–4ನೇ ಶ್ಲೋಕದಲ್ಲಿ ಕಾಲ ಬ್ರಹ್ಮ ಹೇಳುತ್ತಿದ್ದಾನೆ "ಪ್ರಕೃತಿಯು ಗರ್ಭಧಾರಣೆ ಮಾಡುವ ಎಲ್ಲಾ ಜೀವಿಗಳ ತಾಯಿ ಆಗಿದ್ದಾಳೆ. ನಾನು ಅವಳ ಗರ್ಭದಲ್ಲಿ ಬೀಜವನ್ನು ಸ್ಥಾಪಿಸುವ ತಂದೆ ಆಗಿದ್ದೇನೆ" 4ನೇ ಶ್ಲೋಕದಲ್ಲಿ ಬರೆದಿದೆ: ಪ್ರಕೃತಿಯಿಂದ ಉತ್ಪತ್ತಿಯಾದ ಮೂರು ಗುಣಗಳು ಜೀವಾತ್ಮನನ್ನು ಕರ್ಮದ ಬಂಧನದಲ್ಲಿ ಬಂಧಿಸುತ್ತಾರೆ. ಈ ಪ್ರಕರಣದಲ್ಲಿ ಪ್ರಕೃತಿ ದುರ್ಗೆಯಾಗಿದ್ದಾಳೆ ಮತ್ತು ಮೂರು ಗುಣಗಳುಳ್ಳ ದೇವರು ಅಂದರೆ ರಜೋಗುಣ ಬ್ರಹ್ಮಾ, ಸತೋಗುಣ–ವಿಷ್ಣು ಮತ್ತು ತಮೋಗುಣ–ಶಿವ ಇವರ ಸಾಂಕೇತಿಕ ನಾಮವಿದೆ.

## “ವಿಷ್ಣು ತನ್ನ ತಂದೆಯನ್ನು (ಕಾಲ–ಬ್ರಹ್ಮ) ಕಾಣಲು ಹೊರಡುವನು ಹಾಗೂ ತಾಯಿಯಿಂದ ಆಶೀರ್ವಾದ ಪಡೆಯುವನು”

ಇದಾದ ನಂತರ ವಿಷ್ಣುವಿಗೆ ಪ್ರಕೃತಿ ಹೇಳಿದಳು “ಮಗನೇ ನೀನೂ ಸಹ ನಿನ್ನ ತಂದೆಯನ್ನು ಹುಡುಕಿಕೊ.” ಆಗ ವಿಷ್ಣುವು ತನ್ನ ತಂದೆಯನ್ನು ಹುಡುಕುತ್ತಾ ಪಾತಾಳ ಲೋಕವನ್ನು ಸೇರಿದನು. ಅಲ್ಲಿ ಶೇಷನಾಗ ವಿಷ್ಣುವು ತನ್ನ ಸೀಮೆಗೆ ಬರುವುದನ್ನು ಕಂಡು ಕೋಪದಿಂದ ವಿಷಪೂರಿತವಾದ ಊಸಿರು ಬಿಟ್ಟಿತ್ತು. ಈ ವಿಷದ ಕಾರಣದಿಂದಾಗಿ ವಿಷ್ಣುವಿನ ಶರೀರವು ನೀಲಿಬಣ್ಣವಾಯಿತು. ಈ ನಾಗನಿಗೆ ಇದರ ತಪ್ಪಿನ ಶಿಕ್ಷೆ ನೀಡಬೇಕು ಎಂದು ಯೋಚಿಸಿದ. ಆಗ ಜ್ಯೋತಿ ನಿರಂಜನನು ವಿಷ್ಣುವಿಗೆ ಶಾಂತಗೋಳಿಸಲು ಆಕಾಶವಾಣಿ ಮಾಡಿ ಹೇಳಿದ “ಮಗನೆ ನಿನೀಗ ತಾಯಿಯ ಹತ್ತಿರ ಹೋಗು ಸತ್ಯವಾಗಿ ನಡೆದ ಘಟನೆಯನ್ನು ವಿವರಿಸಿ ಹೇಳು. ನಿನಗಾಗಿರುವ ಕಷ್ಟಕ್ಕೆ ದ್ವಾಪರ ಯುಗದಲ್ಲಿ ಯಾವಾಗ ನೀನು ಕೃಷ್ಣನ ಅವತಾರ ತಾಳುವೆ. ಆಗ ಶೇಷನಾಗನ ಅವತಾರ ಕಾಲಿಂದ್ರೀ ಎಂಬ ನಾಗನಾಗಿ ಕಾಲೀದಹ (ಯಮುನೆ–ಕರಿನೀರಿನ, ನದಿ) ದಲ್ಲಿರುವನು ಆಗ ನೀನು ಪ್ರತೀಕಾರ ತಿರಿಸಿಕೊ.

ಊಂಚ ಹೋಯಿ ಕೆ ನೀಚ್ ಸತಾವ್ಯೆ, ತಾಕರ್ ಓಯಲ್ (ಬದಲಾ) ಮೋಹಿ ಸೋ ಪಾವ್ಯೆ ।
ಜೋ ಜೀವ ದೇಯಿ ಪೀರ ಪುನೀ ಕಾಹೂ, ಹಮ್ ಪುನಿ ಓಯಲ್ ದಿವಾವೇ ತಾಹೂಂ॥

ಆಗ ವಿಷ್ಣುವು ತಾಯಿಯ ಹತ್ತಿರ ಬಂದು ಸತ್ಯ ವಿಚಾರವನ್ನು ಹೇಳಿದ. “ನನಗೆ ತಂದೆಯವರ ದರ್ಶನವಾಗಲಿಲ್ಲ” ಈ ಮಾತಿನಿಂದ ತಾಯಿಗೆ ಸಂತೋಷವಾಯಿತು. “ಮಗನೆ ನೀನು ಸತ್ಯವಾದಿ”

ಯಾಗಿರುವೆ. ಈಗ ನಾನು ನನ್ನ ಶಕ್ತಿಯಿಂದ ನಿನಗೆ ನಿನ್ನ ತಂದೆಯನ್ನು ಭೇಟಿ ಮಾಡಿಸುವೆ ಹಾಗೂ ನಿನ್ನ ಮನದ ಸಂಶಯವನ್ನು ನಿವಾರಿಸುತ್ತೇನೆ.

ಕಬೀರ್, ದೇಖ ಪುತ್ರ ತೋಹಿ ಪಿತಾ ಭಿಟಾಉ ತೋರೆ ಮನ ಕಾ ಧೋಖಾ ಮಿಟಾಉ ।
ಮನ್ ಸ್ವರೂಪ್ ಕರ್ತಾ ಕಹ್ ಜಾನೋ, ಮನ್‌ತೇ ದೂಜಾ ಔರ್ ನ ಮಾನೋ ।
ಸ್ವರ್ಗ ಪಾತಾಲ್ ದೌರ್ ಮನ್ ಕೇರಾ, ಮನ್ ಅಸ್ತೀರ್ ಮನ್ ಅಹೈ ಅನೇರಾ ।
ನಿರಂಕಾರ್ ಮನ್ ಹೀ ಕೋ ಕಹೀಯೆ, ಮನ್ ಕೀ ಆಶ್ ನಿಶ್ ದಿನ್ ರಹಿಯೆ ।
ದೇಖ್ ಹೂಂ ಪಲಟಿ ಸುನ್ಯ ಮಹ ಜ್ಯೋತಿ, ಜಹಾ ಪರ್ ಝಿಲ್-ಮಿಲ್ ಝಾಲರ್ ಹೋತಿ ॥

ಮನವೇ ಜಗತ್ತಿನ ಕರ್ತನಾಗಿದ್ದಾನೆ ಇವನೇ ಜ್ಯೋತಿ ನಿರಂಜನ ಇದ್ದಾನೆ ಎಂದು ತಾಯಿ (ಪ್ರಕೃತಿ/ ಅಷ್ಟಂಗಿ) ಮಗ ವಿಷ್ಣುವಿಗೆ ಹೇಳಿದಳು. "ಧ್ಯಾನದಲ್ಲಿ ಯಾವ ಒಂದು ಸಾವಿರ ಜ್ಯೋತಿಗಳು ದೃಷ್ಟಿಗೋಚರವಾಗುತ್ತವೋ, ಅದುವೇ ಅವನ ರೂಪ. ಶಂಖಾ, ಘಂಟೆಯ ಜೋರಾದ ಧ್ವನಿ, ವಾದ್ಯಗಳ ಧ್ವನಿ ಕೇಳುತ್ತಿರುವುದೇ ಮಹಾಸ್ವರ್ಗ. ಅದು ನಿರಂಜನನ ಧ್ವನಿಯೇ ಆಗಿದೆ. ಪುತ್ರನೇ ನೀನು ಎಲ್ಲ ದೇವತೆಗಳಿಗೂ ಕಿರೀಟಪ್ರಾಯನಾಗಿರುವೆ. ನಿನ್ನೆಲ್ಲಾ ಕಾರ್ಯ ಹಾಗೂ ಕಾಮನೆ (ಬಯಕೆ) ಗಳನ್ನು ನಾನು ಪೂರ್ಣಗೊಳಿಸುವೆ. ನಿನ್ನ ಪೂಜೆಯು ಸಮಸ್ತ ವಿಶ್ವದಲ್ಲಿ ಆಗುವುದು. ನೀನು ಸತ್ಯ ಹೇಳಿರುವೆ. ಕಾಲನ 21ನೇ ಬ್ರಹ್ಮಾಂಡದ ಜೀವಿಗಳು ತಮ್ಮ ಬಗ್ಗೆ ವ್ಯರ್ಥ ಮಹಿಮೆಯನ್ನು ಹೇಳುವುದು ಅಭ್ಯಾಸವಾಗಿಬಿಟ್ಟಿದೆ. ದುರ್ಗಾ, ಪ್ರಕಾಶವನ್ನು ತೋರಿಸಿ ಇದುವೇ ನಿನ್ನ ತಂದೆ. ನಾನು ನಿನಗೆ ನಿನ್ನ ತಂದೆಯ ಭೇಟಿ ಮಾಡಿಸಿದೆ". ಎಂದು ತಾಯಿಯು ತೋರಿಸಿದ ಜ್ಯೋತಿಯನ್ನೇ, ವಿಷ್ಣವು ತನ್ನ ಅನುಯಾಯಿಗಳಿಗೆ ತಿಳಿಸಿದನು. ಪರಮಾತ್ಮನ ಪ್ರಕಾಶ ಮಾತ್ರ ನೋಡಬಹುದು, ಅವನು ನಿರಾಕಾರ. ನಂತರ ಆದಿಭವಾನಿಯು, ರುದ್ರನ ಬಳಿಗೆ ಹೋಗಿ, ನೀನೂ ಸಹ ನಿನ್ನ ತಂದೆಯನ್ನು ಹುಡುಕು. ನಿನ್ನ ಇಬ್ಬರು ಸೋದರರಿಗೆ ಅವರ ದರ್ಶನವಾಗಲಿಲ್ಲ. ಅವರಿಗೆ ಏನನ್ನು ಕೊಡಬೇಕಿತ್ತೋ ಅದನ್ನು ಕೊಟ್ಟಿದ್ದಾಗಿದೆ. ಈಗ ನಿನಗೆ ಏನು ಬೇಕೆಂದು ಕೇಳು ಎಂದಾಗ ಮಹೇಶನು ಹೇಳಿದನು. "ಜನನೀ ನನ್ನ ಇಬ್ಬರು ಸೋದರರಿಗೂ ತಂದೆಯ ದರ್ಶನವಾಗಿಲ್ಲ, ಎಂದ ಮೇಲೆ, ನಾನೇಕೆ ವ್ಯರ್ಥ ಪ್ರಯತ್ನ ಮಾಡಲಿ? ನನಗೆ ನೀನು ವರವನ್ನು ಕೊಡುವುದಾದರೆ "ಮೃತ್ಯುಂಜಯನಾಗು" (ಅಮರನಾಗುವ) ವರವನ್ನು ಕೊಡು" ಎಂದಾಗ ಪ್ರಕೃತಿ ಹೇಳಿದಳು ನನ್ನಿಂದ ಇದು ಸಾಧ್ಯವಿಲ್ಲ. ಆದರೆ ನಿನಗೆ ನಿನ್ನ ಆಯುಷ್ಯವನ್ನು ಹೆಚ್ಚಿಸಿಕೊಳ್ಳಲು ಒಂದು ಯುಕ್ತಿಯನ್ನು ತಿಳಿಸುವೆ. ಅದರಿಂದ ನಿನ್ನ ಆಯಸ್ಸು ಹೆಚ್ಚಾಗುವುದು, ಅದು ವಿಧಿಯೋಗ ಸಮಾಧೀಸ್ತನಾಗಿರುವುದು (ಅದಕ್ಕಾಗಿಯೇ ಶಿವನು ಹೆಚ್ಚಾಗಿ ಸಮಾಧಿ ಸ್ಥಿತಿಯಲ್ಲೇ ಇರುವನು). ದುರ್ಗೆಯು ಮೂವರಿಗೂ ಪ್ರತ್ಯೇಕ ವಿಭಾಗಗಳನ್ನು ಹಂಚಿಕೊಟ್ಟಳು.

ಬ್ರಹ್ಮಾನಿಗೆ, ಕಾಲ ಲೋಕದಲ್ಲಿ 84 ಲಕ್ಷ ಜೀವಿಗಳ ಶರೀರವನ್ನು ಸೃಷ್ಟಿಸುವ ಅಂದರೆ ರಜೋಗುಣ ಪ್ರಭಾವದಿಂದ ಜೀವಿಗಳನ್ನು ಉತ್ಪತ್ತಿ ಮಾಡುವ ಕೆಲಸದ ವಿಭಾಗವನ್ನು ವಹಿಸಲಾಯಿತು.

ವಿಷ್ಣುವಿಗೆ ಈ ಜೀವಿಗಳ ಪಾಲನೆ-ಪೋಷಣೆ (ಕರ್ಮಾನುಸಾರ) ಮಾಡುವ ಹಾಗೂ ಮೋಹ-ಮಮತೆ ಮಾಯೆ, ಪ್ರಿತಿ ಹುಟ್ಟಿಸಿ ಇಲ್ಲೆ ಸಿಕ್ಕಿಸಿಡುವ ವಿಭಾಗ ನೀಡಲಾಯಿತು.

ಶಿವ ಶಂಕರನಿಗೆ ಸಂಹಾರಮಾಡುವ ಕೆಲಸವನ್ನು ನೀಡಲಾಯಿತು. ಏಕೆಂದರೆ ಇವರ ತಂದೆ ನಿರಂಜನ (ಕಾಲ) ನಿಗೆ ಪ್ರತಿ ದಿನ ಒಂದು ಲಕ್ಷ ಮಾನವ ಶರೀರಧಾರಿ ಜೀವಿಗಳ ಸೂಕ್ಷ್ಮ ಶರೀರವನ್ನು ಕಾಯಿಸಿ ಕೊಳಕು ತೆಗೆದು ತಿನ್ನುವ ಶಾಪ ತಗುಲಿದೆ.

ನಮ್ಮ ಮನಸ್ಸಿನಲ್ಲಿ ಇಲ್ಲೊಂದು ಪ್ರಶ್ನೆ ಹುಟ್ಟುವುದು ಸಹಜ. ಬ್ರಹ್ಮಾ, ವಿಷ್ಣು, ಮಹೇಶ್ವರರು, ತಮ್ಮ-ತಮ್ಮ ಲೋಕದಲ್ಲಿ ಪ್ರತ್ಯೇಕವಾಗಿ ಇರುತ್ತಾರೆ. ಇವರು ಉತ್ಪತ್ತಿ ಸ್ಥಿತಿ, ಲಯಗಳನ್ನು ಹೇಗೆ

ಮಾಡುತ್ತಾರೆ? ಹೇಗೆಂದರೆ ಈಗ ಉಪಗ್ರಹಗಳನ್ನು ಅಂತರಿಕ್ಷಕ್ಕೆ ಕಳುಹಿಸಿ, ಅವುಗಳಿಂದ ಬರುವಂತಹ ಕಿರಣಗಳಿಂದ ಕೆಳಗಿನ ಸಂಚಾರ ಇತ್ಯಾದಿ ಕೆಲಸಗಳನ್ನು ಸಮರ್ಥವಾಗಿ ಮಾಡಿರುತ್ತಿರುವಂತೆ. ಮೂರು ದೇವರು ಎಲ್ಲಿಯೇ ಇರಲಿ, ಅವರ ಶರೀರದಿಂದ ಹೊರಹೊಮ್ಮುವ ಗುಣ (ರಜೋಗುಣ–ಸತೋಗುಣ–ತಮೋಗುಣ) ದ ಕಿರಣಗಳ ಪ್ರಭಾವದಿಂದ ಮೂರು ಲೋಕಗಳ ಪ್ರತಿ ಜೀವಿಯೂ ಪ್ರಭಾವಿತವಾಗುತ್ತವೆ.

ಮೇಲಿನ ವಿವರಣೆ ಬ್ರಹ್ಮ (ಕಾಲ) ನ ಒಂದು ಬ್ರಹ್ಮಾಂಡದಲ್ಲಿನ ರಚನೆಯಾಗಿದೆ. ಇಂತಹ 21 ಬ್ರಹ್ಮಾಂಡಗಳು ಕ್ಷರ ಪುರುಷನ ಅಂದರೆ ದುರ್ಗೆಯ ಪತಿ ಕಾಲ ಬ್ರಹ್ಮನಲ್ಲಿ ಇವೆ.

ಆದರೆ ಕ್ಷರಪುರುಷನು (ಕಾಲ) ತನ್ನ ವಾಸ್ತವಿಕ ಶರೀರದಿಂದ ಎಲ್ಲರ ಮುಂದೆ ಬರುವುದಿಲ್ಲ. ಅವನನ್ನು ಕಾಣಲು ಮೂರು ದೇವರುಗಳು (ಬ್ರಹ್ಮಾ–ವಿಷ್ಣು–ಮಹೇಶ್ವರ) ವೇದದಲ್ಲಿ ತಿಳಿಸಿದ ಮಾರ್ಗದಲ್ಲಿ ಪ್ರಯತ್ನಿಸಿದರು, ಸಾಧನೆ ಮಾಡಿದರು, ಆದರೆ ದರ್ಶನವಾಗಲೇ ಇಲ್ಲ. ನಂತರ ಋಷಿಗಳು ವೇದಗಳನ್ನು ಓದಿದರು. ಅದರಲ್ಲಿ ಹೀಗೆ ಬರೆದಿದೆ. "ಅಗ್ನೇಃ ತನೂರ ಅಸಿ". (ಪವಿತ್ರ ಯಜುರ್ವೇದ ಒಂದನೇ ಅಧ್ಯಾಯದ 15ನೇ ಮಂತ್ರ) ಪರಮೇಶ್ವರನು ಸಶರೀರನಾಗಿದ್ದಾನೆ. ಹಾಗೂ ಪವಿತ್ರ ಯಜುರ್ವೇದ 5ನೇ ಅಧ್ಯಾಯದ 1ನೇ ಮಂತ್ರದಲ್ಲಿ ಹೀಗೆ ಹೇಳಿದೆ. "ಅಗ್ನೇಃ ತನೂರ ಅಸಿ ವಿಷ್ಣವೆ ತ್ವಾ ಸೋಮಸ್ಯ ತನೂರ ಅಸಿ" ಎಂದರೆ ಈ ಮಂತ್ರದಲ್ಲಿ ಎರಡು ಬಾರಿ ಸಾಕ್ಷಿ ನೀಡಲಾಗಿದೆ. ಸರ್ವ ವ್ಯಾಪಕ (ಎಲ್ಲೆಲ್ಲೂ ಇರುವ) ಸರ್ವರಪಾಲಕ (ಎಲ್ಲರನ್ನೂ ರಕ್ಷಿಸುವ) ಸತ್ಯಪುರುಷನು ಸಶರೀರನಾಗಿದ್ದಾನೆ. ಪವಿತ್ರ ಯಜುರ್ವೇದದ 40ನೇ ಅಧ್ಯಾಯದ 8ನೇ ಮಂತ್ರದಲ್ಲಿ ಹೀಗೆ ಹೇಳಿದೆ–ಯಾವ ಪರಮೇಶ್ವರನನ್ನು ಸರ್ವ ಪ್ರಾಣಿಗಳು ಇಷ್ಟಪಡುವವೋ, ಅವನು ಕವೀರನು ಅರ್ಥಾತ್ ಕಬೀರನೇ ಆಗಿರುವನು. ಅವನ ಶರೀರವು (ಅಸ್ನಾವೀರಂ) ನಾಡಿ ರಹಿತವಾಗಿದೆ. (ಶುಕ್ರಂ) ವೀರ್ಯದಿಂದಾದ ಪಂಚತತ್ವಗಳನ್ನು ಹೊಂದಿದ (ಅಕಾಯಂ) ಶರೀರವಲ್ಲ. ಅವನು ಎಲ್ಲರ ಸ್ವಾಮಿ, ಎಲ್ಲಕ್ಕಿಂತಲೂ ಮೇಲೆ ಇರುವ ಸತ್ಯಲೋಕದಲ್ಲಿ ವಿರಾಜಮಾನನಾಗಿದ್ದಾನೆ. (ಉಪಸ್ಥಿತನಿದ್ದಾನೆ). ಆ ಪರಮೇಶ್ವರನ ಶರೀರವು ತೇಜಪುಂಜದ ಸ್ವಪ್ರಕಾಶಿತ ಶರೀರ ಇದೆ, ಅದು ಶಬ್ದ ರೂಪ ದಿಂದ ಕೂಡಿದೆ. ಅವನೇ ಕವಿರ್ದೇವ (ಕಬೀರ್) ಸಕಲ ಬ್ರಹ್ಮಾಂಡಗಳ ರಚನೆ ಮಾಡುವವನು (ವ್ಯದಧಾತಾ) ಎಲ್ಲಾ ಬ್ರಹ್ಮಾಂಡಗಳ ರಚನಾಹಾರ (ಸ್ವಯಂಭು) ಸ್ವಯಂ ಪ್ರಕಟನಾಗುವನು (ಯಥಾ ತಥ್ಯ ಅರ್ಥಾತ) ವಾಸ್ತವವಾಗಿ (ಶಾಶ್ವತ) ನಾಶವಿಲ್ಲದವನಿದ್ದಾನೆ(ಅವಿನಾಶಿ). (ಗೀತೆಯ 15ನೇ ಅಧಾಯದ 17 ಶ್ಲೋಕದಲ್ಲಿ ಸಹ ಪ್ರಮಾಣವಿದೆ) ಇದರ ಸಾರವೆನೆಂದರೆ ಪೂರ್ಣಬ್ರಹ್ಮನ ಶರೀರದ ಹೆಸರೇ ಕಬೀರ್ (ಕವಿರ್ದೇವ) ಎಂದಾಗಿದೆ. ಆ ಪರಮೇಶ್ವರನ ಶರೀರವು ಪ್ರಕಾಶ ತತ್ವದಿಂದಾಗಿದೆ. (ನೂರ=ಪ್ರಕಾಶ) ಪರಮಾತ್ಮನ ಶರೀರವು ಅತಿ ಸೂಕ್ಷ್ಮವಾಗಿದೆ ಅದು ದಿವ್ಯದೃಷ್ಟಿಯುಳ್ಳ ಸಾಧಕನಿಗೆ ಕಾಣಿಸುತ್ತದೆ. ಈ ರೀತಿ ಜೀವಕ್ಕೂ ಸೂಕ್ಷ್ಮ ಶರೀರವಿದೆ. ಅದಕ್ಕೆ ತಂದೆ ತಾಯಿಯರ ವೀರ್ಯದಿಂದ ತಯಾರಾದ ಪಂಚತತ್ವ ಶರೀರದಿಂದ ಲೇಪಿಸಲಾಗಿದೆ. ಆ ಸೂಕ್ಷ್ಮ ಶರೀರವು ಈ ಪಂಚತತ್ವದ ಶರೀರ [ತಂದೆ ತಾಯಿಯರ (ಶುಕ್ರಮ್) ವೀರ್ಯದಿಂದ ತಯಾರಾದ ಶರೀರ] ಅಳಿದ ನಂತರವೂ (ಮರಣದ ನಂತರವೂ) ಜೀವದ ಜೊತೆಗೆ ಇರುತ್ತದೆ. ಆ ಸೂಕ್ಷ್ಮ ಶರೀರವು ದಿವ್ಯದೃಷ್ಟಿಯುಳ್ಳ ಸಾಧಕನಿಗೆ ಕಾಣಿಸುತ್ತದೆ. ಈ ರೀತಿ ಪರಮಾತ್ಮನ ಹಾಗೂ ಜೀವದ ಸ್ಥಿತಿಯನ್ನು ಅರಿಯಿರಿ.

ವೇದಗಳಲ್ಲಿ "ಓಂ" ನಾಮ ಸ್ಮರಣೆಯ ಬಗ್ಗೆ ಹೇಳಿದೆ. ಅದು ಬ್ರಹ್ಮ ಸಾಧನೆಯಾಗಿದೆ. ಈ ಉದ್ದೇಶದಿಂದ ಋಷಿಗಳು 'ಓಂ' ನಾಮ ಜಪವನ್ನು ಪೂರ್ಣ ಬ್ರಹ್ಮನದೆಂದು ಸಾವಿರಾರು ವರ್ಷಗಳ ವರೆಗೆ ಹಠಯೋಗಿಗಳಾಗಿ ಮಾಡಿದರು. ಆದರೆ ಪ್ರಭುವಿನ ದರ್ಶನಾಗಲಿಲ್ಲ. ಕೆಲವು ಸಿದ್ಧಿಗಳು ಲಭಿಸಿದವು. ಆ ಸಿದ್ಧಿ ರೂಪದ ಆಟಿಕೆಗಳನ್ನು ಬಳಸುತ್ತಾ ಋಷಿಗಳೂ ಸಹ ಜನನ–ಮರಣ

ಚಕ್ರದೊಳಗೆ ಉಳಿದರು. ತಮ್ಮ ಅನುಭವದ ಶಾಸ್ತ್ರಗಳಲ್ಲಿ ಪರಮಾತ್ಮನನ್ನು ನಿರಾಕಾರ ಎಂದು ಬರೆದರು. ಬ್ರಹ್ಮನು (ಕಾಲನು) ತಾನು ಯಾರಿಗೂ ತನ್ನ ವಾಸ್ತವಿಕ ರೂಪದಲ್ಲಿ ದರ್ಶನ ಕೊಡುವುದಿಲ್ಲವೆಂದು ಶಪಥವನ್ನೇ ಮಾಡಿರುವನು. ತನ್ನನ್ನು 'ಅವ್ಯಕ್ತ' ನೆಂದು ಅರೀಯುವರು. ಅವ್ಯಕ್ತದ ಅರ್ಥ ಆಕಾರವೇನೋ ಇದೆ ಆದರೆ ಅದನ್ನು ಗೋಚರಿಸುವುದಿಲ್ಲ ಎಂಬುದಾಗಿದೆ. ಹೇಗೆ ಮೋಡ ಮುಸುಕಿದಾಗ ಹಗಲಿನಲ್ಲೇ ಸೂರ್ಯ ಕಾಣುವುದಿಲ್ಲವೋ ಹಾಗೆ. ಆದರೆ ಮೋಡದ ಆಚೆ ಸೂರ್ಯ ಇದ್ದಂತೆಯೇ ಇದ್ದಾನೆ. (ಪ್ರಮಾಣಕ್ಕಾಗಿ ಗೀತೆಯ 7ನೇ ಅಧ್ಯಾಯದ 24–25, 11ನೇ ಅಧ್ಯಾಯ 32 ಮತ್ತು 48ನೇ ಶ್ಲೋಕಗಳನ್ನು ಓದಿರಿ).

ಪವಿತ್ರ ಗೀತೆಯನ್ನು ಹೇಳುವ ಕಾಲ ಬ್ರಹ್ಮ ಶ್ರೀ ಕೃಷ್ಣನ ಶರೀರದಲ್ಲಿ ಪ್ರೇತರೂಪದಲ್ಲಿ ಪ್ರವೇಶ ಮಾಡಿ ಹೇಳಿದ್ದಾನೆ. ಹೇ ಅರ್ಜುನಾ! "ನಾನು ಸರ್ವರನ್ನು ತಿನ್ನಲು ಬಂದ ಹಿಡಿತದಲ್ಲಿ ಬರದಿರುವ ಮಹಾಕಾಲನಿದ್ದೇನೆ" (ಗೀತೇಯ ಅಧ್ಯಾಯ 11ರ ಶ್ಲೋಕ 32). ಇದು ನನ್ನ ವಾಸ್ತವಿಕ ರೂಪ. ಈ ರೂಪವನ್ನು ನಿನ್ನನ್ನು ಬಿಟ್ಟು ಬೇರೆ ಯಾರೂ ಹಿಂದೆ ನೋಡಿಲ್ಲ ಹಾಗೂ ಮುಂದೆ ನೋಡುವುದು ಇಲ್ಲ ಅಂದರೆ ವೇದಗಳಲ್ಲಿ ವರ್ಣಿತವಾಗಿರುವ ಯಜ್ಞ–ಜಪ–ತಪ 'ಓಂ' ನಾಮದ ಜಾಪ ಮುಂತಾದವು ವಿಧಿಗಳಿಂದ ನನ್ನ ಈ ವಾಸ್ತವಿಕ ಸ್ವರೂಪವನ್ನು ನೋಡಲು ಸಾಧ್ಯವಿಲ್ಲ (ಗೀತೆಯ 11ನೇ ಅಧ್ಯಾಯದ 48ನೇ ಶ್ಲೋಕದಲ್ಲಿದೆ). ನಾನು ಕೃಷ್ಣನಲ್ಲ, ಈ ಮೂರ್ಖರು ನನ್ನ ಅವ್ಯಕ್ತ ರೂಪವನ್ನು ವ್ಯಕ್ತರೂಪದಲ್ಲಿ ತಿಳಿದಿದ್ದಾರೆ. ಇವರ್‍ಯಾರಿಗೂ ನನ್ನ ಬಗ್ಗೆ ಅರಿವಿಲ್ಲ. ನಾನು ಯಾರ ಮುಂದೆಯೂ ಬರುವುದಿಲ್ಲ. ಯೋಗಮಾಯೆಯಿಂದ ರಹಸ್ಯವಾಗಿ ಅಡಗಿ ಕುಳಿತಿರುವೆನು (ಗೀತೆಯ 7ನೇ ಅಧ್ಯಾಯ 24–25 ನೇ ಶ್ಲೋಕ). ವಿಚಾರ ಮಾಡಿ : ತನ್ನ ರಹಸ್ಯಮಯವಾಗಿರುವ ವಿಧಾನವನ್ನು ಸ್ವತಃ ಶ್ರೇಷ್ಠವಲ್ಲದ್ದು, (ಅನುತ್ತಮ್) ಎಂದು ಏಕೆ ಹೇಳುತ್ತಿದ್ದಾನೆ?

ಒಂದುವೇಳೆ ತಂದೆಯು ತನ್ನ ಮಕ್ಕಳಿಗೆ ದರ್ಶನ ಕೊಡುತ್ತಿಲ್ಲ ಎಂದರೆ ಅವನಲ್ಲಿ ಯಾವುದೊ ದೋಷ ಇದೆ ಈ ಕಾರಣದಿಂದಾಗಿ ರಹಸ್ಯಮಯವಾಗಿ ಎಲ್ಲ ಸೌಲಭ್ಯ ಒದಗಿಸುತ್ತಿದ್ದಾನೆ. ಶಾಪದಿಂದಾಗಿ ಕಾಲನು ಒಂದು ಲಕ್ಷ ಮಾನವ ಶರೀರ ಧರಿಸಿದ ಪ್ರಾಣಿಗಳನ್ನು ತಿನ್ನಬೇಕಾಗಿದೆ. ಇದಕ್ಕಿಂತ ಹೆಚ್ಚಾಗಿ ಒಂದು ಲಕ್ಷ ಕಾಲು ಅಂದರೆ 25% (ಪ್ರತಿಶತ) ಹೆಚ್ಚು ಉತ್ಪತ್ತಿಯಾದ ಜೀವಿಗಳನ್ನು ಕರ್ಮ ಭೋಗದ ಶಿಕ್ಷೆ ವಿಧಿಸಲು 84 ಲಕ್ಷ ಯೋನಿಗಳ ರಚನೆ ಮಾಡಲಾಗಿದೆ. ಒಂದು ವೇಳೆ ಎಲ್ಲರ ಎದುರಿಗೆ ಬಂದು ಕಾಲನು ಯಾರ ಮಗನನ್ನೂ, ಮಗಳನ್ನೂ, ತಂದೆ ತಾಯಿರನ್ನೂ, ಹೆಂಡತಿಯನ್ನೂ ತಿಂದರೆ ಎಲ್ಲರಿಗೂ ಕಾಲ ಬ್ರಹ್ಮನ ಮೇಲೆ ತಿರಸ್ಕಾರ ಆಗುತ್ತಿತ್ತು. ಯಾವಾಗಾದರು ಪೂರ್ಣ ಪರಮಾತ್ಮ ತಾನು ಸ್ವತಃ ಅಥವಾ ತನ್ನ ಧೂತನನ್ನು ಕಳುಹಿಸಿ ಸತ್ಯವಾದ ಭಕ್ತಿಯನ್ನು ಮಾಡಿಸಿ ನನ್ನ ಸೆರೆಯಿಂದ ಬಿಡಿಸಿಕೊಂಡರೆ ಎಂಬ ಭಯದಿಂದ ನಮ್ಮನ್ನು ಮೋಸದಿಂದ ಇಟ್ಟಿದ್ದಾನೆ. ಮತ್ತು ಪವಿತ್ರ ಗೀತೆಯ 7ನೇ ಅಧ್ಯಾಯದ 18, 24, 25ರಲ್ಲಿ ತನ್ನ ಸಾಧನೆಯಿಂದ ದೊರೆಯುವ ಮುಕ್ತಿ (ಗತಿ) ಯನ್ನು ಮತ್ತು ನಿಯಮವನ್ನು ಸಹ ಅಶ್ರೇಷ್ಠ (ಅನುತ್ತಮಾಮ್) ಎಂದಿದಾನೆ.

ಪ್ರತ್ಯೇಕ ಬ್ರಹ್ಮಾಂಡದ ಬ್ರಹ್ಮಲೋಕದಲ್ಲಿ ಒಂದು ಮಹಾಸ್ವರ್ಗವನ್ನು ರಚಿಸಿದ್ದಾನೆ. ಮಹಾಸ್ವರ್ಗದಲ್ಲಿ ಒಂದು ಸ್ಥಾನದಲ್ಲಿ ನಕಲಿ 'ಸತ್ಯಲೋಕ', ನಕಲಿ 'ಅಲಖ್‌ಲೋಕ', ನಕಲಿ 'ಅಗಮ್‌ಲೋಕ', ಹಾಗೂ ನಕಲಿ 'ಅನಾಮಿಲೋಕ' ಗಳ ರಚನೆ ಪ್ರಾಣಿಗಳನ್ನು ಮೋಸಮಾಡಲೆಂದೇ ಪ್ರಕೃತಿ (ದುರ್ಗಾ/ ಆದಿಮಾಯೆ) ಮೂಲಕ ಇವುಗಳನ್ನು ರಚಿಸಿದ್ದಾನೆ. ಇದರ ಬಗ್ಗೆ ಕಬೀರ್ ಪರಮೇಶ್ವರರ ಒಂದು ಶಬ್ದ ಹೀಗಿದೆ.

"ಕರ್ ನೈನೊ ದೀದಾರ್ ಮಹಲ್ ಮೆ ಪ್ಯಾರಾ ಹೈ"

ಕಾಯಾಭೇದ್ ಕಿಯಾ ನಿರವಾರಾ, ಯಹ್ ಸಬ್ ರಚನಾ ಪಿಂಡ್– ಮಂಝಾರಾ ಹೈ ।

# ಬ್ರಹ್ಮ ಲೋಕದ ಲಘು ಚಿತ್ರ



# ಜ್ಯೋತಿ ನಿರಂಜನ (ಕಾಲ) ಬ್ರಹ್ಮನ ಲೋಕ (ಇಪ್ಪತ್ತೊಂದು ಬ್ರಹ್ಮಾಂಡ)ದ ಲಘು ಚಿತ್ರ

ಭವರ ಗುಹೆ ಪರಬ್ರಹ್ಮನ ಲೋಕಕ್ಕೆ ತಲುಪುವ ದಾರಿ.

ಸತ್ಯಲೋಕಕ್ಕೆ ಹೋಗುವ ರಸ್ತೆ

ಕಾಲ (ಬ್ರಹ್ಮ)ನ ಲೋಕ

ಮಹಾ ಬ್ರಹ್ಮಾಂಡ

ತಪ್ತ ಶಿಲೆ (ಬಿಸಿ ಕಲ್ಲು)

ನಕಲಿ ಅನಾಮಿ ಲೋಕ

ನಕಲಿ ಅಗಮ ಲೋಕ

ನಕಲಿ ಅಲಖ ಲೋಕ

ನಕಲಿ ಸತ್ಯಲೋಕ

ವಜ್ರ ಕವಾಟ (ಕೀಲಿಕೈ)

ದ್ವಾದಶ (ಹನ್ನೆರಡನೆಯ) ಅಚಿಂತ ಭಕ್ತನ ನಿವಾಸ ಸ್ಥಾನ

ಕಾಲ ಲೋಕದ ಭವರ ಗುಹೆ

ಬ್ರಹ್ಮಾಂಡ

ಮಹಾ ಬ್ರಹ್ಮಾಂಡ

ಬ್ರಹ್ಮಾಂಡ

ಬ್ರಹ್ಮಾಂಡ

ಬ್ರಹ್ಮಾಂಡ

ಮಾಯಾ ಅವಿಗತ ಜಾಲ ಪಸಾರಾ, ಸೋ ಕಾರೀಗರ್ ಭಾರಾ ಹೈ ।
ಆದಿ ಮಾಯಾ ಕೀನ್ಹೀ ಚತುರಾಯಿ, ಝೂಠೀ ಬಾಜೀ ಪಿಂಡ್ ದಿಖಾಯಿ,
ಅವಿಗತ್ ರಚನಾ ರಚಿ ಅಂಡ್ ಮಾಹಿ ವಾಕಾ–ಪ್ರತಿಬಿಂಬ್ ಡಾರಾ ಹೈ।"

ಒಂದು ಬ್ರಹ್ಮಾಂಡದಲ್ಲಿ ಬೇರೆ ಮೂರು ಬ್ರಹ್ಮಾ, ವಿಷ್ಣು, ಹಾಗೂ ಶಿವ ಲೋಕಗಳ ರಚನೆಯೂ ಇದೆ. ಅಲ್ಲಿಯೇ ಕುಳಿತು ಈ ಮೂರೂ ಪ್ರಭುಗಳು ಸ್ವರ್ಗ (ಇಂದ್ರನಲೋಕ), ಪೃಥ್ವಿ, ಪಾತಾಳ ಲೋಕಗಳ ಒಂದೊಂದು ವಿಭಾಗದ ಒಡೆತನವನ್ನು ನಿಭಾಯಿಸುತ್ತಾರೆ ಮತ್ತು ತಮ್ಮ ತಂದೆ (ಕಾಲನಿಗೆ) ಗೆ ತಿನ್ನಲೆಂದು ಸೃಷ್ಟಿ, ಸ್ಥಿತಿ, ಸಂಹಾರಗಳ ಕಾರ್ಯವನ್ನು ನಿಭಾಯಿಸುತ್ತಾರೆ. ಈ ಮೂರು ಪ್ರಭುಗಳಿಗೆ (ಬ್ರಹ್ಮಾ–ವಿಷ್ಣು–ಮಹೇಶ್ವರ) ಹುಟ್ಟು–ಸಾವುಗಳಿವೆ. ಸಾವಾದಾಗ ಕಾಲನು ಇವರುಗಳನ್ನೂ ಸಹ ತಿನ್ನುತ್ತಾನೆ. ಈ ಬ್ರಹ್ಮಾಂಡವನ್ನು ಮೊಟ್ಟೆ (ಅಂಡ) ಎಂದೂ ಕರೆಯಲಾಗುತ್ತದೆ. ಏಕೆಂದರೆ ಇದು ಮೊಟ್ಟೆಯ ಆಕಾರದಲ್ಲಿದೆ. {ಇದನ್ನು ಪಿಂಡ ಎಂದೂ ಸಹ ಕರೆಯುತ್ತಾರೆ. ಏಕೆಂದರೆ ನಮ್ಮ ಶರೀರ ಅಂದರೆ 'ಪಿಂಡ'ದಲ್ಲಿ ಒಂದು ಬ್ರಹ್ಮಾಂಡದ ರಚನೆಯನ್ನು ಕಮಲಗಳಲ್ಲಿ ಟಿ.ವಿ. ಹಾಗೆ ನೋಡಬಹುದಾಗಿದೆ.} ಈ ಬ್ರಹ್ಮಾಂಡದಲ್ಲಿ ಒಂದು ಮಾನಸ ಸರೋವರ ಹಾಗೂ ಧರ್ಮರಾಯನ (ನ್ಯಾಯಾಧೀಶನ) ಲೋಕವಿದೆ. ಹಾಗು ಒಂದು ರಹಸ್ಯವಾದ ಸ್ಥಾನದಲ್ಲಿ ಪೂರ್ಣ ಪರಮಾತ್ಮನು ಬೇರೆ ರೂಪವನ್ನು ಧಾರಣೆ ಮಾಡಿಕೊಂಡು ಇರುತ್ತಾನೆ. ಹೇಗೆಂದರೆ ಪ್ರತಿಯೊಂದು ದೇಶಕ್ಕೂ "ರಾಯಭಾರಿಭವನ" ವಿರುವಂತೆ. ಅಲ್ಲಿಗೆ ಯಾರೂ ಹೋಗಲು ಸಾಧ್ಯವಿಲ್ಲ. ಅಲ್ಲಿ ಸತ್ಯಲೋಕದಲ್ಲಿನ ಆತ್ಮಗಳು (ಅರ್ಧಭಕ್ತಿಯ) ಇರುತ್ತವೆ. ಯಾವಾಗ ಭಕ್ತಿಯುಗ ಬರುವುದೋ, ಆಗ ಪರಮೇಶ್ವರ ಕಬೀರರು ತಮ್ಮ ಪ್ರತಿನಿಧಿ ಸಂತ, ಸದ್ಗುರುವಿಗೆ ಕಳುಹಿಸುತ್ತಾರೆ. ಆಗ ಈ ಪುಣ್ಯಾತ್ಮಗಳಿಗೆ ಭೂಮಿಯ ಮೇಲೆ ಮಾನವ ಶರೀರ ಪ್ರಾಪ್ತವಾಗುತ್ತದೆ. ಅವುಗಳು ಶೀಘ್ರವೇ (ಬೇಗನೆ) ಭಕ್ತಿಪಥದಲ್ಲಿ ಸಾಗುತ್ತವೆ. ಸದ್ಗುರುವಿನಿಂದ ದೀಕ್ಷೆ ಪಡೆದು ಅವುಗಳು ಮೋಕ್ಷವನ್ನು (ಜನನ–ಮರಣಗಳ ಬಾಧೆ ಇಲ್ಲದೆ) ಪಡೆಯುತ್ತವೆ. ಆ ಸ್ಥಾನಗಳಲ್ಲಿರುವ ಆತ್ಮಗಳ ಭಕ್ತಿ ಸಾಧನೆಯ ಪುಣ್ಯ ವ್ಯಯವಾಗದು. ಪರಮಾತ್ಮನ ಭಂಡಾರದಿಂದಲೇ ಎಲ್ಲಾ ಸೌಲಭ್ಯಗಳೂ ಪ್ರಾಪ್ತವಾಗುತ್ತವೆ. ಬ್ರಹ್ಮೋಪಾಸಕರು ಗಳಿಸಿದ ಭಕ್ತಿ, ಸ್ವರ್ಗ–ಮಹಾಸ್ವರ್ಗಗಳಲ್ಲಿ ಮುಗಿದುಹೋಗುತ್ತದೆ. ಏಕೆಂದರೆ ಈ ಕಾಲಲೋಕ (ಬ್ರಹ್ಮಲೋಕ) ಹಾಗೂ ಪರಬ್ರಹ್ಮ ಲೋಕದಲ್ಲಿ ಪ್ರಾಣಿಗಳು ತಾವು ಮಾಡಿದ ಕರ್ಮಫಲ ಮಾತ್ರ ಪಡೆಯುತ್ತದೆ.

ಕ್ಷರ ಪುರುಷ(ಬ್ರಹ್ಮ)ನು ತನ್ನ 20 ಬ್ರಹ್ಮಾಂಡಗಳನ್ನು 4 ಮಹಾ ಬ್ರಹ್ಮಾಂಡಗಳಾಗಿ ವಿಭಾಗಿಸಿದ್ದಾನೆ. ಒಂದು ಬ್ರಹ್ಮಾಂಡದಲ್ಲಿ 5 ಬ್ರಹ್ಮಾಂಡಗಳ ಸಮೂಹವನ್ನು ಮಾಡಿದ್ದಾನೆ. ಅದರ ನಾಲ್ಕೂ ಕಡೆಯೂ (ಸುತ್ತಲೂ) ಗೋಲಾಕಾರದ ಪರಿಧಿಯನ್ನು ಮಾಡಿದ್ದಾನೆ. ಅಲ್ಲದೆ ನಾಲ್ಕು ಮಹಾಬ್ರಹ್ಮಾಂಡಗಳಿಗೂ ಗೋಲಾಕಾರದ ಪರಿಧಿಯನ್ನು ರಚಿಸಲಾಗಿದೆ. 21ನೇ ಬ್ರಹ್ಮಾಂಡವು ಒಂದು ಮಹಾಬ್ರಹ್ಮಾಂಡದಷ್ಟು ಸ್ಥಳವನ್ನು ಹೊಂದಿದೆ. 21ನೇ ಬ್ರಹ್ಮಾಂಡಕ್ಕೆ ಪ್ರವೇಶ ಮಾಡಿದೊಡನೆ, ಮೂರು ರಸ್ತೆಗಳು ಗೋಚರಿಸುತ್ತವೆ. ಇಲ್ಲೂ ಸಹ ಪ್ರಾಣಿಗಳನ್ನು ವಂಚಿಸಿಡಲು, ಎಡಭಾಗದಲ್ಲಿ ನಕಲಿ ಸತ್ಯಲೋಕ, ನಕಲಿ ಅಲಖ್‌ಲೋಕ, ನಕಲಿ ಅಗಮ್‌ಲೋಕ ಹಾಗೂ ನಕಲಿ ಅನಾಮಿಲೋಕಗಳನ್ನು ಆದಿಮಾಯೆಯು (ದುರ್ಗಾ) ರಚಿಸಿರುತ್ತಾಳೆ. ಬಲಭಾಗದಲ್ಲಿ 12 ಸರ್ವಶ್ರೇಷ್ಠ ಸಾಧಕ ಬ್ರಹ್ಮ ಭಕ್ತರನ್ನು ಇರಿಸಲಾಗಿದೆ. ಪ್ರತಿಯೊಂದು ಯುಗಗಳಲ್ಲೂ ಈ ಸಾಧಕರನ್ನು ಸಂದೇಶವಾಹಕ ನಕಲಿ ಸಂತ, ಸದ್ಗುರುರನ್ನಾಗಿ ಮಾಡಿ ಭೂಮಿಗೆ ಕಳುಹಿಸಲಾಗುತ್ತದೆ. ಇವರು ಶಾಸ್ತ್ರವಿರುದ್ಧ ಜ್ಞಾನವನ್ನು ತಿಳಿಸುತ್ತಾರೆ. ಈ ಕಾರಣ ಸ್ವತಃ ಭಕ್ತಿಹೀನರಾಗಿ ತನ್ನ ಅನುಯಾಯಿಗಳ (ಭಕ್ತಸಮೂಹ) ಜೋತೆ ಕಾಲನಜಾಲದಲ್ಲಿ ಸಿಲುಕುತ್ತಾರೆ. ಇಂತಹ ಗುರು ಹಾಗೂ ಶಿಷ್ಯರು ನರಕಕ್ಕೆ ಹೋಗುತ್ತಾರೆ. ಮುಂಭಾಗದಲ್ಲಿ ಬೀಗ ಹಾಕಿದ ಒಂದು ವಿಭಾಗವಿದೆ. ಆ ರಸ್ತೆಯು ಕಾಲನ (ಬ್ರಹ್ಮನ) ನಿಜ

ಲೋಕದ ದಾರಿ. ಅಲ್ಲಿ ಈ ಕಾಲನು ತನ್ನ ವಾಸ್ತವಿಕ (ಸಹಜ) ಮಾನವ ಸದೃಶ್ಯ (ಮಾನವನಂತೆ ಕಾಣುವ) ಕಾಲ ರೂಪದಲ್ಲಿರುತ್ತಾನೆ. ಈ ಸ್ಥಳದಲ್ಲಿ ಕಾವಲಿ (ತವಾ) ರೂಪದ ಒಂದು ಕಲ್ಲಿನ ಭಾಗ (ಶಿಲೆ) ಇದೆ, ಅದು ಸ್ವತಃ ಬಹಳ ಬಿಸಿಯಾಗಿರುತ್ತದೆ. ಆ ಬಿಸಿಯಾದ ಶಿಲೆ ಮೇಲೆ ಒಂದು ಲಕ್ಷ ಮಾನವ ಸೂಕ್ಷ್ಮ ಶರೀರವನ್ನು ಕಾಯಿಸಿ, ಆ ಶರೀರದಿಂದ ಕೊಳೆ ಬೇರ್ಪಡಿಸಿ ಅದನ್ನು ಕಾಲಬ್ರಹ್ಮನು ತಿನ್ನುತ್ತಾನೆ. ಆ ಸಮಯದಲ್ಲಿ (ಕಾಯಿಸುವಾಗ) ಎಲ್ಲಾ ಜೀವಿಗಳು ಬಹಳ ಕಷ್ಟವನ್ನು ಅನುಭವಿಸುತ್ತಾ, ಹಾಹಾಕಾರ ಮಾಡುತ್ತವೆ, ಜೀವಿಗಳು ಸಾಯುವುದಿಲ್ಲ. ಅಲ್ಲಿಂದ ಧರ್ಮರಾಯನ (ನ್ಯಾಯಾಧೀಶ) ಲೋಕಕ್ಕೆ ಹೋಗುತ್ತವೆ. ಅಲ್ಲಿ ಅವುಗಳ ಕರ್ಮಗಳು ನಿರ್ಧಾರವಾಗಿ, ಅದಕ್ಕೆ ಅನುಗುಣವಾದ ಬೇರೆ ಜನ್ಮವನ್ನು ಪಡೆದು ಹುಟ್ಟು-ಸಾವಿನ ಚಕ್ರದಲ್ಲಿ ಸಿಲುಕುತ್ತವೆ. ಮೇಲೆ ಹೇಳಿರುವ ಬೀಗವು, ಕಾಲನು ತಿನ್ನುವ ಜೀವಿಗಳು ಒಳಗೆ ಹೋಗುವವರೆಗೆ ತೆರೆದಿರುತ್ತದೆ. ನಂತರ ಬೀಗ ಭದ್ರಪಡಿಸಲಾಗುತ್ತದೆ. ಪೂರ್ಣ ಪರಮಾತ್ಮನ ಸತ್ಯನಾಮ ಹಾಗೂ ಸಾರ ನಾಮದಿಂದ ಈ ಬೀಗವು ತಾನಾಗಿಯೆ (ಸ್ವಯಂ) ತೆರೆದುಕೊಳ್ಳುತ್ತದೆ. ಈ ರೀತಿ ಪೂರ್ಣ ಪರಮಾತ್ಮ (ಕಬೀರ್ ಪರಮೇಶ್ವರರು) ಕವಿರ್ದೇವರು ಈ ಕಾಲನ ಜಾಲ (ವ್ಯವಸ್ಥೆ) ತಮ್ಮ ನಿಜಭಕ್ತರಾದ ಧರ್ಮ್‌ದಾಸರಿಗೆ ತಿಳಿಸಿದ್ದಾರೆ.

## “ಪರಬ್ರಹ್ಮನ 7 ಸಂಖ ಬ್ರಹ್ಮಾಂಡಗಳ ಸ್ಥಾಪನೆ”

ಕಬೀರ್ ಪರಮೇಶ್ವರರು ಮುಂದೆ ಹೇಳಿದ್ದಾರೆ ಪರಬ್ರಹ್ಮನು (ಅಕ್ಷರ ಪುರುಷ) ತನ್ನ ಕಾರ್ಯದ ಜವಾಬ್ದಾರಿ ಮರೆತು ಮಾನಸ ಸರೋವರದಲ್ಲಿ ಮಲಗಿಬಿಟ್ಟನು ಮತ್ತು ಪರಮೇಶ್ವರ ಕಬೀರ್ ಸಾಹೇಬ್ ಆ ಸರೋವರದೊಳಗೆ ಬಿಟ್ಟಿರುವ ಮೊಟ್ಟೆಯನ್ನು ಪರಬ್ರಹ್ಮನು ಕ್ರೋಧದಿಂದ ನೋಡಿದನು. ಈ ಎರಡು ಕಾರಣಗಳಿಗಾಗಿ (1. ತನ್ನ ಕಾರ್ಯ ಮರೆತು ಮಾನಸ ಸರೋವರದಲ್ಲಿ ಮಲಗಿದ್ದು 2. ಕ್ರೋಧದಿಂದ ಮೊಟ್ಟೆಯನ್ನು ನೋಡಿದ್ದು) ಪರಬ್ರಹ್ಮನನ್ನು 7 ಸಂಖ ಬ್ರಹ್ಮಾಂಡ ಸಹಿತವಾಗಿ, ಸತ್ಯಲೋಕದಿಂದ ಹೊರಗೆ ಹಾಕಲಾಯಿತು. ಮತ್ತೊಂದು ಅಪರಾಧವೆಂದರೆ, ಪರಬ್ರಹ್ಮನು ತನ್ನ ಜೊತೆಗಾರ ಕಾಲ ಬ್ರಹ್ಮನನ್ನು ಬಿಟ್ಟಿರುವ ಬೇಸರದಿಂದ ಕವಿರ್ದೇವ (ಕಬೀರ್ ಪರಮೇಶ್ವರ) ನ ಸ್ಮರಣೆಯನ್ನೇ ಮಾಡಲಿಲ್ಲ. “ಕಾಲ ಬ್ರಹ್ಮನು ನನಗಿಂತ ಹೆಚ್ಚಿನ ಆನಂದದಲ್ಲಿರಬಹುದು ನಾನು ಹಿಂದೆ ಬಿದ್ದೆನಲ್ಲ” ಎಂದು ಚಿಂತಿಸ ತೊಡಗಿದ. ಬೇರೆ ಉಳಿದ ಕೆಲವು ಆತ್ಮಗಳು ಪರಬ್ರಹ್ಮನ್ನೊಂದಿಗೆ 7 ಸಂಖ ಬ್ರಹ್ಮಾಂಡಗಳಲ್ಲಿ ಹುಟ್ಟು-ಸಾವಿನ ಕರ್ಮದಂಡವನ್ನು ಅನುಭವಿಸುತ್ತಾ ಇವೆ. ಇವುಗಳು ತಮ್ಮಿಂದ ದೂರವಾದ ಕಾಲ ಬ್ರಹ್ಮನೊಂದಿಗೆ 21 ಬ್ರಹ್ಮಾಂಡಗಳಲ್ಲಿ ಸಿಲುಕಿಕೊಂಡಿರುವ ಆ ಹಂಸಾತ್ಮಗಳ ನೆನಪಿನಲ್ಲಿ ಲೀನರಾಗಿ ಸುಖ ನೀಡುವ ಕವಿರ್ದೇವರು ಪದೇ-ಪದೇ ತಿಳಿಸಿ ಹೇಳಿದರೂ,ಕಾಲ ಬ್ರಹ್ಮನಲ್ಲಿನ ಆಸಕ್ತಿಯು ಕಡಿಮೆಯಾಗಲಿಲ್ಲ. ಪರಬ್ರಹ್ಮನು ತಾನು ಬೇರೆಯಾದ ಸ್ಥಳವನ್ನು ಪಡೆಯಬೇಕು ಎಂದು ಯೋಚಿಸಿ, ಸ್ವರಾಜ್ಯ ಇಚ್ಛೆಯಿಂದ ಸಾರನಾಮವನ್ನು ಜಪಿಸತೊಡಗಿದ. ಪರಬ್ರಹ್ಮನೊಂದಿಗಿದ್ದ 7 ಸಂಖ ಬ್ರಹ್ಮಾಂಡಗಳಲ್ಲಿ ಸಿಲುಕಿಕೊಂಡಿರುವ ಆತ್ಮಗಳು ಯೋಚಿಸಿದವು, ಯಾವ ಹಂಸಾತ್ಮಗಳು ಕಾಲ ಬ್ರಹ್ಮ ನೊಂದಿಗೆ 21 ಬ್ರಹ್ಮಾಂಡಗಳಲ್ಲಿ ಹೋಗಿವೆ ಅವು ಅಲ್ಲಿ ಆನಂದದಿಂದ ಇರಬಹುದು, ನಾವು ಹಿಂದೆ ಉಳಿದೆವು. ಪರಬ್ರಹ್ಮನು, ಕಾಲ ಬ್ರಹ್ಮ ಬೇರೆ ಯಾಗಿ ಸುಖ-ಸುವಿಧತೆ, ವಿನೋದ, ಆನಂದದಿಂದ ಇರಬಹುದು ಈ ರೀತಿ ಇವುಗಳ ಬಗ್ಗೆಯೇ ಚಿಂತಿಸುತ್ತಾ ಇದ್ದ. ತಾನು ಬೇರೆಯಾದರೆ ಮಾತ್ರ ಸುಖವಾಗಿರಬಹುದೆಂದು ಯೋಚಿಸಿದ. ಈ ಯೋಚನೆ ಬಲವಾಗಿ ಅಂತರಾತ್ಮದಲ್ಲಿ ಬೇರೆಯಾಗಲೇಬೇಕೆಂದು ನಿರ್ಣಯಿಸಿದ. ಪರಬ್ರಹ್ಮನು ತನ್ನ ಯೋಚನೆಯ ಸಿದ್ಧಿಗಾಗಿ ಹಠ ಯೋಗ ಮಾಡಲಿಲ್ಲ. ಸಹಜ ಧ್ಯಾನದಿಂದ ಪ್ರತ್ಯೇಕ ರಾಜ್ಯಕ್ಕಾಗಿ ವಿಶೇಷವಾಗಿ ಆಸಕ್ತಿಯಿಂದ ಪ್ರಾರ್ಥಿಸಿದ. ಪ್ರತ್ಯೇಕ ರಾಜ್ಯಕ್ಕಾಗಿ ಹುಚ್ಚನಂತೆ ಅಲೆಯತೊಡಗಿದ. ಅನ್ನ-ಪಾನೀಯಗಳನ್ನು ತ್ಯಜಿಸಿದ. ಬೇರೆ ಕೆಲವು ಆತ್ಮಗಳು ಪರಬ್ರಹ್ಮನ ವೈರಾಗ್ಯವನ್ನು ಮೆಚ್ಚಿಕೊಂಡು

ಇವನಲ್ಲಿ ಆಸಕ್ತಿ ತೋರಿದವು. ಪೂರ್ಣ ಪ್ರಭುವು ಕೇಳಿದಾಗ, ತನಗಾಗಿ ಪ್ರತ್ಯೇಕ ಸ್ಥಾನವನ್ನು ಕೇಳಿದ. ಜೊತೆಗೆ ಕೆಲವು ಹಂಸಾತ್ಮಗಳನ್ನು ಕಳುಹಿಸಬೇಕೆಂದು ಯೋಚಿಸಿದ. ಆಗ ಪ್ರಭುವು ಸ್ವಇಚ್ಛೆಯಿಂದ ಪರಬ್ರಹ್ಮನೊಂದಿಗೆ ಹೋಗಬಯಸುವ ಹಂಸಾತ್ಮಗಳು ತಮ್ಮ ಸಮ್ಮತಿ ಸೂಚಿಸಲು ಕೈ ಎತ್ತಿ ಎಂದು ಹೇಳಿದ. ಒಂದು ಹಂಸಾತ್ಮ ತನ ಸಮ್ಮತಿ ಸೂಚಿಸಿತು. ಮೊದಲು ಸಮ್ಮತಿ ಸೂಚಿಸಿದ ಹಂಸಾತ್ಮಕ್ಕೆ ಸ್ತ್ರೀ ರೂಪವನ್ನು ನೀಡಿದ. ಅವಳ ಹೆಸರನ್ನು "ಈಶ್ವರೀ ಮಾಯಾ" ಎಂದು ಕರೆದ. ನಂತರ ಉಳಿದ ಸಮ್ಮತಿ ಸೂಚಿಸಿದ ಹಂಸಾತ್ಮಗಳನ್ನು ಅವಳ ಒಳಗೆ ಪ್ರವೇಶ ಮಾಡಿಸಿದ ಹಾಗೂ ಅಚಿಂತನ ಮೂಲಕ ಪರಬ್ರಹ್ಮನಲ್ಲಿಗೆ ಕಳುಹಿಸಿದ. ಆ ಮೊದಲ ಸ್ತ್ರೀ ಆತ್ಮಕ್ಕೆ ಪತಿವ್ರತಾ ಪದವಿಯಿಂದ ಇಳಿದ ಶಿಕ್ಷೆ ಸಿಕ್ಕಿತು. ಅನೇಕ ಯುಗಗಳ ವರೆಗೆ ಇಬ್ಬರೂ (ಈಶ್ವರೀ ಮಾಯಾ–ಪರಬ್ರಹ್ಮ) 7 ಸಂಖ ಬ್ರಹ್ಮಾಂಡದಲ್ಲಿದ್ದರು. ಆದರೂ ಅತ್ಯಾಚಾರ ಮಾಡಲಿಲ್ಲ. ಈಶ್ವರೀ ಮಾಯೆಯ ಸ್ವಇಚ್ಛೆಯಿಂದ ಅವಳಲ್ಲಿ ಸ್ತ್ರೀ ಯೋನಿಯನ್ನು ಉಗುರಿನಿಂದ ಮಾಡಿದ. ಅವಳಲ್ಲಿ ಸ್ವಇಚ್ಛೆಯಿಂದ ಸಂತಾನ ಉತ್ಪತ್ತಿ ಮಾಡಿದ. ಈ ಕಾರಣದಿಂದ ಪರಬ್ರಹ್ಮನ ಲೋಕದಲ್ಲಿ ಜೀವಿಗಳಿಗೆ ತಪ್ತ ಶಿಲೆಯ ಮೇಲೆ ಕಾಯಿಸುವ ಕಷ್ಟವಿಲ್ಲ. ಅಲ್ಲಿನ ಪಶು–ಪಕ್ಷಿಗಳು ಸಹ ಕಾಲ ಬ್ರಹ್ಮನ ಲೋಕಕ್ಕಿಂತ ಉತ್ತಮ ಚಾರಿತ್ರವುಳ್ಳವಾಗಿವೆ. ಇವುಗಳಿಗೆ ದೀರ್ಘ ಆಯಸ್ಸು ಇದೆ. ಆದರೆ ಹುಟ್ಟು–ಸಾವು ಕರ್ಮದಂಡ ಇಲ್ಲಿದ್ದ ಹಾಗೆ ಇವೆ. ಪರಿಶ್ರಮದಿಂದಲೇ ಹೊಟ್ಟೆ ತುಂಬಿಸಿಕೊಳ್ಳಬೇಕು. ಸ್ವರ್ಗ ಮತ್ತು ನರಕಗಳು ಸಹ ಹೀಗೆಯೇ ರಚನೆಯಾಗಿವೆ. ಪರ ಬ್ರಹ್ಮನಿಗೆ 7 ಸಂಖಗಳ ಬ್ರಹ್ಮಾಂಡಗಳು ಅವನ ಇಚ್ಛೆ ರೂಪಿ ಭಕ್ತಿ–ಧ್ಯಾನ ಅಂದರೆ ಸಹಜ ಸಮಾಧಿ ಯೋಗದ ವಿಧಿಯಿಂದ ಗಳಿಸಿದ ಪ್ರತಿಫಲವಾಗಿ ನಿಡಲಾಯಿತು. ಸತ್ಯಲೋಕದಿಂದ ಬೇರೆಯಾದ ಸ್ಥಾನದಲ್ಲಿ 7 ಸಂಖ ಬ್ರಹ್ಮಾಂಡಗಳ ಸುತ್ತ ಗೋಲಾಕಾರದ ಪರದೆಯಿಂದ ಬಂದಿಸಿ ಪರಬ್ರಹ್ಮ, ಈಶ್ವರೀ ಅವರೊಂದಿಗೆ ಆತ್ಮಗಳನ್ನು ಸತ್ಯಲೋಕದಿಂದ ದೂರವಿರಿಸಲ್ಪಟ್ಟಿದೆ.

ಪೂರ್ಣ ಬ್ರಹ್ಮ (ಸತ್ಯಪುರುಷ) ನು ಸಕಲ ಬ್ರಹ್ಮಾಂಡಗಳ ಸ್ವಾಮಿ, ಅಸಂಖ್ಯ ಬ್ರಹ್ಮಾಂಡಗಳ ಒಡೆಯ, 7 ಸಂಖ ಬ್ರಹ್ಮಾಂಡಗಳು, 21 ಬ್ರಹ್ಮಾಂಡಗಳ ಸಹಿತ ಪರಮೇಶ್ವರ ಕಬೀರ್ ಎಲ್ಲ ಬ್ರಹ್ಮಾಂಡಗಳ ಮತ್ತು ಎಲ್ಲ ಆತ್ಮಗಳ ಮಾಲಿಕರಿದ್ದಾರೆ.

ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಶ್ರೀ ಶಿವ ಇವರುಗಳಿಗೆ 4 ಭುಜಗಳು ಮತ್ತು 16 ಕಲೆಗಳಿವೆ. ದುರ್ಗಾ ದೇವಿಗೆ 8 ಭುಜಗಳು ಮತ್ತು 64 ಕಲೆಗಳಿವೆ. ಕಾಲ ಬ್ರಹ್ಮನಿಗೆ 1000 ಭುಜಗಳು ಮತ್ತು 1000 ಕಲೆಗಳು. ಪರ ಬ್ರಹ್ಮನಿಗೆ 10,000 ಭುಜಗಳು ಮತ್ತು 10,000 ಕಲೆಗಳಿವೆ. ಪೂರ್ಣ ಬ್ರಹ್ಮ ಅರ್ಥಾತ್ ಸತ್ಯಪುರುಷನಿಗೆ ಅಸಂಖ್ಯಾತ ಭುಜಗಳು ಮತ್ತು ಅಸಂಖ್ಯಾತ ಕಲೆಗಳಿವೆ ಹಾಗೂ ಅಸಂಖ್ಯಾತ ಬ್ರಹ್ಮಾಂಡಗಳ ಸ್ವಾಮಿ ಯಾಗಿದ್ದಾನೆ. ಪ್ರತಿಯೊಬ್ಬ ಪ್ರಭುವೂ ತಮ್ಮ ಭುಜಗಳನ್ನು ಕೇವಲ ಎರಡನ್ನಾಗಲಿ, ಅಥವಾ ತಮ್ಮ ಇಚ್ಛೆಯಿಂದ ಎಲ್ಲ ಭುಜಗಳನ್ನಾಗಲಿ ಹೊಂದಬಹುದಾಗಿದೆ. ಪೂರ್ಣ ಪರಮಾತ್ಮನು ಪ್ರತ್ಯೇಕ ಬ್ರಹ್ಮಾಂಡದಲ್ಲಿ ತನ್ನದೇ ಆದ ರಹಸ್ಯ ಸ್ಥಾನ ಮಾಡಿಕೊಂಡು, ಅಲ್ಲಿಯೇ ಗುಪ್ತವಾಗಿ ಇರುತ್ತಾನೆ. ನಾವು ಹೀಗೆ ತಿಳಿಯಬೇಕು. "ಒಂದು ಸಿ.ಸಿ ಕ್ಯಾಮರಾವನ್ನು ಹೊರಗೆ ಇರಿಸಿ, ಒಳಗೆ ಟಿ.ವಿ ಇಟ್ಟಿದೆ. ಟಿ.ವಿ ಯಲ್ಲಿ ಹೊರಗಿನ ಎಲ್ಲ ದೃಶ್ಯಗಳು ನೋಡಲು ಲಭ್ಯವಾಗುತ್ತದೆ. ಇದೇ ರೀತಿ ಮತ್ತೊಂದು ಟಿ.ವಿ ಯನ್ನು ಹೊರಗೆ ಇರಿಸಿ, ಒಳಗೆ ಸಿ.ಸಿ ಕ್ಯಾಮರಾ ಇಟ್ಟಿದೆ. ಅದರಲ್ಲಿ ಒಳಗೆ ಕುಳಿತಿರುವ ವ್ಯಕ್ತಿಯನ್ನು ಮಾತ್ರ ನೋಡಲು ಸಾಧ್ಯ. ಹೀಗೆ ಮಾಡುವುದರಿಂದ ನೌಕರರು ಎಚ್ಚರದಿಂದ ಇದ್ದು ಕಾರ್ಯ ನಿರ್ವಹಿಸುತ್ತಾರೆ. ಇದೇ ಪ್ರಕಾರ ಪೂರ್ಣ ಪರಮಾತ್ಮನು ತಾನು ಸತ್ಯ ಲೋಕದಲ್ಲಿದ್ದುಕೊಂಡೇ, ಎಲ್ಲರನ್ನೂ ನಿಯಂತ್ರಿಸುತ್ತಾನೆ. ಪ್ರತ್ಯೇಕ ಬ್ರಹ್ಮಾಂಡದಲ್ಲೂ ಸದ್ಗುರು ಕವಿರ್ದೇವರು ಇರುತ್ತಾರೆ. ಉದಾಹರಣೆಗೆ ಸೂರ್ಯ ದೂರದಲ್ಲಿದ್ದರೂ ತನ್ನ ಪ್ರಭಾವ ಬೇರೆ ಎಲ್ಲ ಲೋಕಗಳಲ್ಲೂ ಕ್ರಿಯಾಶೀಲನಾಗಿರುವಂತೆ.

## "ಪವಿತ್ರ ಅಥರ್ವಣ ವೇದದಲ್ಲಿ ಸೃಷ್ಠಿ ರಚನೆಯ ಪ್ರಮಾಣ(ಆಧಾರ)"

### ಅಥರ್ವಣ ವೇದದ 4ನೇ ಕಾಂಡದ 1ನೇ ಅನುವಾಕದ 1ನೇ ಮಂತ್ರ.

ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ ವಿ ಸೀಮತಃ ಸುರುಚೋ ವೇನ ಆವಃ ।
ಸ ಬುಧ್ನ್ಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿ ವಃ ॥ 1 ॥
ಬ್ರಹ್ಮ–ಜ–ಜ್ಞಾನಂ–ಪ್ರಥಮಮ್–ಪುರಸ್ತಾತ–ವಿಸಿಮತಃ– ಸುರುಚಃ–ವೇನಃ–ಅವಃ
ಸಃ–ಬುಧ್ನ್ಯಾಃ–ಉಪಮಾ–ಅಸ್ಯ–ವಿಷ್ಠಾ–ಸತಃ–ಚ–ಯೋನಿಮ್–ಅಸತಃ–ಚ–ವಿ–ವಃ

**ಅನುವಾದ:–** (ಪ್ರಥಮಮ್) ಮೊದಲಿಗೆ, ಪ್ರಾಚೀನ ಅಂದೆರೆ ಸನಾತನ, (ಬ್ರಹ್ಮ) ಪರಮಾತ್ಮನು (ಜ) ಪ್ರಕಟನಾಗಿ, (ಜ್ಞಾನಮ್) ತಮ್ಮ ತಿಳುವಳಿಕೆಯಿಂದ (ಪುರುಸ್ತಾತ್) ಶಿಖರದಲ್ಲಿ, ಅರ್ಥಾತ್ ಸತ್ಯಲೋಕ ಮುಂತಾದವುಗಳನ್ನು (ಸುರುಚಃ) ಸ್ವಇಚ್ಛೆಯಿಂದ, ಬಹಳ ಪ್ರೀತಿಯಿಂದ , ಸ್ವಪ್ರಕಾಶಿತ, (ವಿಸಿ ಮತಃ) ಸೀಮಾ ರಹಿತ, ಅರ್ಥಾತ್ ವಿಶಾಲ ಸೀಮೆಯುಳ್ಳ ಬೇರೆ ಲೋಕಗಳನ್ನು ಆ (ವೇವಃ) ನೇಕಾರನು ಅರ್ಥಾತ್ ಬಟ್ಟೆಯ ತರಹ ನೇಯ್ದು (ಆವಃ) ಸುರಕ್ಷಣೆ ಮಾಡಿದ (ಚ) ಹಾಗೂ (ಸಃ) ಪೂರ್ಣ ಬ್ರಹ್ಮವೇ ಎಲ್ಲ ರಚನೆಯನ್ನು ಮಾಡುತ್ತಾನೆ. (ಅಸ್ಯ) ಇದಕ್ಕಾಗಿ ಆ (ಬುಧ್ನ್ಯಾಃ) ಮೂಲ ಮಾಲಿಕನು, (ಯೋನಿಮ್) ಮೂಲಸ್ಥಾನ ಸತ್ಯಲೋಕದ ರಚನೆ ಮಾಡಿರುವನು. (ಅಸ್ಯ) ಇದಕ್ಕೆ (ಉಪಮಾ) ಹೋಲಿಕೆಯಾಗಿ ಅರ್ಥಾತ್ ಹೊಂದಿಕೊಂಡಿರುವಂತೆ (ಸತಃ) ಅಕ್ಷರ ಪುರುಷ ಅರ್ಥಾತ್ ಪರಬ್ರಹ್ಮ ಲೋಕ ಸ್ವಲ್ಪಮಟ್ಟಿಗೆ ಅವಿನಾಶಿ (ಚ) ಹಾಗೂ (ಅಸತಃ) ಕ್ಷರ ಪುರುಷನ ಲೋಕ ನಾಶವಾಗುವ ಮೊದಲಾದ (ವಿ.ವಃ) ವಾಸಿಸುವ ಸ್ಥಾನ ಬೇರೆಯಾಗಿ (ವಿಷ್ಠಾಃ) ಸ್ಥಾಪನೆಮಾಡಿದ್ದಾನೆ.

**ಭಾವಾರ್ಥ:– ಪವಿತ್ರ ವೇದಗಳನ್ನು ಹೇಳಿರುವ ಕಾಲ ಬ್ರಹ್ಮನು ಹೇಳುತ್ತಿದ್ದಾನೆ: ಸನಾತನ ಪರಮೇಶ್ವರನು ಸ್ವತಃ ಅನಾಮಿ ಲೋಕದಿಂದ ಸತ್ಯಲೋಕದಲ್ಲಿ ಪ್ರಕಟಗೊಂಡು ತನ್ನ ತಿಳುವಳಿಕೆಯಿಂದ ಬಟ್ಟೆಯಂತಹ ರಚನೆ ಮಾಡಿ ಮೇಲಿನ ಸತ್ಯಲೋಕ ಮುಂತಾದವುಗಳನ್ನು ಸೀಮಾರಹಿತವಾಗಿ ಸ್ವಪ್ರಕಾಶಿತಗೊಳಿಸಿದ ಅವುಗಳನ್ನು ಅಜರ–ಅಮರ–ಅವಿನಾಶಿ (ಮುಪ್ಪಿಲ್ಲದ–ಸಾವಿಲ್ಲದ–ನಾಶವಿಲ್ಲದ) ಯನ್ನಾಗಿ ಮಾಡಿ ನಿಲ್ಲಿಸಿದ ಹಾಗೂ ಕೆಳಗಿನ ಪರಬ್ರಹ್ಮನ 7 ಸಂಖ ಬ್ರಹ್ಮಾಂಡಗಳು ಹಾಗೂ ಕಾಲ ಬ್ರಹ್ಮನ 21 ಬ್ರಹ್ಮಾಂಡಗಳು ಹಾಗೂ ಇವುಗಳ ಅತಿ ಚಿಕ್ಕ ರಚನೆಗಳನ್ನು ಸಹ ಆ ಪರಮಾತ್ಮನೇ ಅಶಾಶ್ವತ ಗೊಳಿಸಿದ."**

### ಅಥರ್ವಣ ವೇದದ 4ನೇ ಕಾಂಡದ 1ನೇ ಅನುವಾಕದ 2ನೇಯ ಮಂತ್ರ.

ಇಯಂ ಪಿತ್ರ್ಯಾ ರಾಷ್ಟ್ರ್ಯೇತ್ವಗ್ರೇ ಪ್ರಥಮಾಯ ಜನುಷೆ ಭುವನೇಷ್ಠಾಃ ।
ತಸ್ಮಾ ಏತಂ ಸುರುಚಂ ಹಾರಮಹ್ಯಮ್ ಧರ್ಮಮ್ ಶ್ರೀಣಂತು ಪ್ರಥಮಾಯ ಧಾಸ್ಯವೇ ॥2॥
ಇಯಂ–ಪಿತ್ರ್ಯಾ–ರಾಷ್ಟ್ರೀ–ಏತು–ಅಗ್ರೇ–ಪ್ರಥಮಾಯ–ಜನುಷೆ–ಭುವನೇಷ್ಠಾ:–ತಸ್ಮಾ–ಏತಂ–ಸುರುಚಮ್– ಹವಾರಮಹ್ಯಮ್– ಧರ್ಮಮ್–ಶ್ರೀಣಾಂತು– ಪ್ರಥಮಾಯ–ಧಾಸ್ಯವೇ ॥

**ಅನುವಾದ:–** (ಇಯಮ್) ಇದೇ (ಪಿತ್ರ್ಯಾ) ಜಗತ್ತಿನ ತಂದೆ (ಏತು) ಈ (ಅಗ್ರೇ) ಸರ್ವೋತ್ತಮ (ಪ್ರಥಮಾಯ) ಎಲ್ಲದಕ್ಕೂ ಮೊದಲು (ರಾಷ್ಟ್ರೀ) ಆಕರ್ಷಣಶಕ್ತಿ ಯನ್ನು (ಜನುಷೆ) ಉತ್ಪನ್ನ ಮಾಡಿ (ಭುವನೇಷ್ಠಾಃ) ಲೋಕ ಸ್ಥಾಪನೆಯನ್ನು ಮಾಡಿದ (ತಸ್ಮಾ) ಅದೇ ಪರಮೇಶ್ವರನು (ಸುರುಚಮ್) ಬಹಳ ಪ್ರೀತಿಯಿಂದ, ಸ್ವ ಇಚ್ಛೆಯಿಂದ (ಏತಮ್) ಈ (ಪ್ರಥಮಾಯ) ಪ್ರಥಮ ಶಕ್ತಿಯ ಉತ್ಪತ್ತಿ ಮಾಡಿದನು. (ಹಾರ ಮಹ್ಯಮ್) ಒಂದು ಮತ್ತೊಂದರ ವಿಯೋಗ (ಬೇರೆಯಾಗುವಿಕೆ) ವನ್ನು ತಡೆಯಲು, ಅರ್ಥಾತ್ ಆಕರ್ಷಣ ಶಕ್ತಿಯಿಂದ (ಶ್ರೀಣಾಂತು)




ಮೇಲೆ ಬೇರು ಕೆಳಗೆ ಶಾಖೆಯುಳ್ಳ ಹಿಮ್ಮುಖವಾಗಿ ತೂಗಾಡುತ್ತಿರುವ ಸಂಸಾರ (ಜಗತ್ತು) ರೂಪಿ ಮರದ ಚಿತ್ರ

ಗುರುತ್ವಾಕರ್ಷಣಕ್ಕೆ ಪರಮಾತ್ಮನು ಆದೇಶಿಸಿ ಎಂದಿಗೂ ಸಮಾಪ್ತವಾಗದಂತೆ-ಎಂದೆಂದಿಗೂ ಇರುವಂತಹ (ಧರ್ಮಮ್) ಸ್ವಭಾವದಿಂದ (ಧಾಸ್ಯವೆ) ಧಾರಣೆ ಮಾಡಿದ. ಅರ್ಥಾತ್ ಬಟ್ಟೆಯ ಹಾಗೆ ಹೆಣೆದು ನಿಲ್ಲಿಸಿದ್ದಾನೆ.

**ಭಾವಾರ್ಥ:- ಜಗತ್ತಿನ ತಂದೆ ಎಲ್ಲಕ್ಕೂ ಮೊದಲು ತನ್ನ ಶಬ್ದ ಶಕ್ತಿಯಿಂದ ರಾಷ್ಟ್ರೀ ಎಂದರೆ ಆಕರ್ಷಣೆ ಶಕ್ತಿಯನ್ನು ಉತ್ಪನ್ನ ಮಾಡಿದ ಹಾಗೂ ಆ ಗುರುತ್ವಾಕರ್ಷಣೆಯ ಶಕ್ತಿಯ ಮೂಲಕ ಒಂದು ಮತ್ತೊಂದರ ಜೊತೆ ಆಕರ್ಷಣ ಶಕ್ತಿಯಿಂದ ನಿಲ್ಲಿಸುವ, ಎಂದೆಂದಿಗೂ ಸಮಾಪ್ತವಾಗದ ಗುಣದಿಂದ ಮೇಲಿನ ಎಲ್ಲ ಬ್ರಹ್ಮಾಂಡಗಳನ್ನೂ ಸ್ಥಾಪನೆ ಮಾಡಿದ.**

**ಅಥರ್ವಣ ವೇದದ 4ನೇ ಕಾಂಡದ 1ನೇ ಅನುವಾಕದ 3ನೇ ಮಂತ್ರ.**

ಪ್ರಯೋ ಯಜ್ಞೆ ವಿದ್ವಾನಸ್ಯ ಬಂಧುರ್ವಿಶ್ವಾ ದೇವಾನಾಂ ಜನಿಮಾ ವಿವಕ್ತಿ ।
ಬ್ರಹ್ಮ ಬ್ರಹ್ಮಣ ಉಜ್ಜಭಾರ ಮಧ್ಯಾನ್ನೀಚೈರುಚ್ಚೈಃ ಸ್ವಧಾ ಅಭಿ ಪ್ರ ತಸ್ಥೌ" ॥3 ॥

ಪ್ರ-ಯಃ-ಯಜ್ಞೆ- ವಿದ್ವಾನಸ್ಯ-ಬಂಧುಃ-ವಿಶ್ವಾ-ದೇವಾನಾಮ್-ಜನಿಮಾ-ವಿವಕ್ತಿ
ಬ್ರಹ್ಮಃ- ಬ್ರಹ್ಮಣಃ-ಉಜ್ಜಭಾರ-ಮಧ್ಯಾತ್-ನಿಚೈಃ-ಉಚೈಃ- ಸ್ವಧಾ-ಅಭಿಃ-ಪತಸ್ಥೌ

**ಅನುವಾದ :-** (ಪ್ರ) ಸರ್ವ ಪ್ರಥಮ (ದೇವಾನಾಮ್) ದೇವತೆಗಳ ಹಾಗೂ ಬ್ರಹ್ಮಾಂಡಗಳ (ಜಜ್ಞೆ) ಉತ್ಪತ್ತಿಯ ಜ್ಞಾನವನ್ನು (ವಿದ್ವಾನಸ್ಯ) ಜಿಜ್ಞಾಸು ಭಕ್ತನ (ಯಃ) ಯಾವ (ಬಂಧುಃ) ಪೂರ್ಣ ಪರಮಾತ್ಮನೇ ತನ್ನ ನಿಜ ಸೇವಕನಿಗೆ (ಜನಿಮಾ) ತನ್ನಿಂದ ಸೃಷ್ಠಿಯಾಗಿದಕ್ಕೆ (ವಿವಕ್ತಿ) ಸ್ವತಃ ಅವನೇ ಸರಿಯಾಗಿ ವಿಸ್ತಾರಪೂರ್ವಕವಾಗಿ ಹೇಳುತ್ತಾನೆ ಏನೆಂದರೆ (ಬ್ರಹ್ಮಣ) ಪೂರ್ಣ ಪರಮಾತ್ಮನು (ಮಧ್ಯಾತ್) ತನ್ನ ಶಬ್ದ ಶಕ್ತಿಯಿಂದ (ಬ್ರಹ್ಮಃ) ಕಾಲ ಬ್ರಹ್ಮನನ್ನು (ಉಜ್ಜಭಾರ) ಉತ್ಪನ್ನ ಮಾಡಿ (ವಿಶ್ವ) ಸಮಸ್ತ ಜಗತ್ತಿಗೆ (ಉಚ್ಚೈಃ) ಮೇಲಿನ ಸತ್ಯಲೋಕ ಮೊದಲಾದ (ನಿಚೈಃ) ಕೆಳಗಿನ ಪರಬ್ರಹ್ಮನ ಹಾಗೂ ಕಾಲ ಬ್ರಹ್ಮನ ಸಕಲ ಬ್ರಹ್ಮಾಂಡವನ್ನು (ಸ್ವಧಾ) ತಾನಾಗಿಯೆ ಧಾರಣಾ ಮಾಡುವ (ಅಭಿಃ) ಆಕರ್ಷಣ ಶಕ್ತಿಯಿಂದ (ಪ್ರ ತಸ್ಥೌ) ಎರಡನ್ನೂ ಉತ್ತಮ ರೀತಿಯಲ್ಲಿ ಸ್ಥಿರಗೊಳಿಸಿದ.

**ಭಾವಾರ್ಥ:- ಪೂರ್ಣ ಪರಮಾತ್ಮನು ತನ್ನಿಂದ ರಚಿತವಾದ ಸೃಷ್ಠಿಯ ಜ್ಞಾನವನ್ನು ಹಾಗೂ ಸಕಲ ಆತ್ಮಗಳ ಉತ್ಪತ್ತಿಯ ಜ್ಞಾನವನ್ನು, ತನ್ನ ನಿಜ ದಾಸನಿಗೆ ಸ್ವತಃ ಸರಿಯಾಗಿ ತಿಳಿಸುತ್ತಾನೆ. ಏನೆಂದರೆ ಪೂರ್ಣ ಪರಮಾತ್ಮನು ತನ್ನ ಶಬ್ದ ಶಕ್ತಿಯ ಮೂಲಕ ಕಾಲ ಬ್ರಹ್ಮನನ್ನು ಉತ್ಪತ್ತಿ ಮಾಡಿದನು. ಹಾಗೂ ಎಲ್ಲ ಬ್ರಹ್ಮಾಂಡಗಳನ್ನು, ಮೇಲಿನ ಸತ್ಯಲೋಕ, ಅಲಖಲೋಕ, ಅಗಮ್‌ಲೋಕ, ಅನಾಮಿಲೋಕ ಮುಂತಾದವುಗಳನ್ನು ಹಾಗೂ ಕೆಳಗಿನ ಪರಬ್ರಹ್ಮನ 7 ಸಂಖ ಬ್ರಹ್ಮಾಂಡ ಲೋಕ ಹಾಗೂ ಕಾಲ ಬ್ರಹ್ಮನ 21 ಬ್ರಹ್ಮಾಂಡಗಳನ್ನು ತಾನಾಗಿಯೆ ಧಾರಣೆ ಮಾಡುವ ಆಕರ್ಷಣೆ ಶಕ್ತಿಯಿಂದ ನೆಲೆಗೊಳಿಸಿದ್ದಾನೆ.**

**ಉದಾಹರಣೆಗೆ ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರರು (ಕವಿರ್ದೇವ) ತಮ್ಮ ನಿಜ ಸಖನಾದ ಗೌರವಾನ್ವಿತ ಧರ್ಮದಾಸರಿಗೆ, ಗರೀಬ್‌ದಾಸರಿಗೆ ಮುಂತಾದವರಿಗೆ ತನ್ನಿಂದ ರಚಿತವಾದ ಸೃಷ್ಠಿಯ ಜ್ಞಾನವನ್ನು ಸ್ವತಃ ಅವರೇ ತಿಳಿಸಿದ್ದಾರೆ. ಮೇಲಿನ ವೇದ ಮಂತ್ರವು ಇದನ್ನೇ ಸಮರ್ಥನೆ ಮಾಡುತ್ತಿವೆ.**

**ಅಥರ್ವಣ ವೇದದ 4ನೇ ಕಾಂಡದ ಅನುವಾಕ 1 ರ 4ನೇ ಮಂತ್ರ.**

ಸಃ ಹಿ ದಿವಃ ಸಃ ಪೃಥಿವ್ಯಾ ಋತಸ್ಥಾ ಮಹೀ ಕ್ಷೇಮಮ್ ರೋದಸೀ ಅಸ್ಕಭಾಯತ್
ಮಹಾನ್ ಮಹೀ ಅಸ್ಕಭಾಯದ್ ವಿ ಜಾತೋ ಧ್ಯಾಂ ಸದ್ಮ ಪಾರ್ಥಿವಂ ಚ ರಜಃ ॥ 4 ॥

ಸಃ–ಹಿ–ದಿವಃ–ಸ–ಪೃಥಿವ್ಯಾ–ಋತುಸ್ಥಾ–ಮಹೀ–ಕ್ಷೇಮಮ್–ರೋದಸಿ ಅಸ್ಕಭಾಯತ್–ಮಹಾನ್–ಮಹೀ–ಅಸ್ಕಭಾಯದ್– ವಿಜಾತಃ–ಧಾಮ್–ಸದಮ ಪಾರ್ಥಿವಮ್–ಚ–ರಜಃ

**ಅನುವಾದ:–** (ಸಃ) ಆ ಸರ್ವಶಕ್ತ ಪರಮಾತ್ಮನು (ಹಿ) ನಿಸ್ಸಂದೇಹ (ದಿವಃ) ಮೇಲಿನ ನಾಲ್ಕು ದಿವ್ಯ ಲೋಕಗಳು ಸತ್ಯಲೋಕ, ಅಲಖ್‌ಲೋಕ, ಅಗಮ್‌ಲೋಕ ಹಾಗೂ ಅನಾಮಿಲೋಕಗಳನ್ನು (ಋತಸ್ಥಾ) ಅಜರ–ಅಮರ ರೂಪದಿಂದ ಸ್ಥಿರಗೊಳಿಸಿದನು. (ಸ) ಅವುಗಳಿಗೆ ಸಮನಾಗಿ (ಪೃಥಿವ್ಯಾ) ಕೆಳಗಿನ ಪೃಥ್ವಿಯ ಸಕಲ ಲೋಕಗಳನ್ನು ಅಂದರೆ 7 ಸಂಖ ಬ್ರಹ್ಮಾಂಡಗಳು ಹಾಗೂ ಕಾಲ ಬ್ರಹ್ಮನ 21 ಬ್ರಹ್ಮಾಂಡಗಳು (ಮಹೀ) ಪೃಥ್ವಿ ತತ್ವದಿಂದ (ಕ್ಷೇಮ) ಸುರಕ್ಷೆಯ ಜೊತೆ (ಆಸ್ಕಭಾಯತ್) ನೆಲೆಗೊಳಿಸಿದ (ರೋದಸೀ) ಆಕಾಶ ತತ್ವ ಹಾಗೂ ಪೃಥ್ವಿ ತತ್ವ ಈ ಎರಡಕ್ಕೂ ಮೇಲೆ, ಕೆಳಗಿನ ಬ್ರಹ್ಮಾಂಡಗಳನ್ನು {ಹೇಗೆಂದರೆ ಆಕಾಶ ಒಂದು ಸೂಕ್ಷ್ಮತತ್ವವಾಗಿದೆ, ಆಕಾಶದ ಗುಣಶಬ್ದವಾಗಿದೆ. ಪೂರ್ಣ ಪರಮಾತ್ಮನು ಮೇಲಿನ ಲೋಕಗಳನ್ನು ಶಬ್ದ ರೂಪದಲ್ಲಿ ರಚಿಸಿದ್ದಾನೆ ಅವು ತೇಜಪುಂಜ ಅಂದರೆ ನೂರಿ ತತ್ವದಿಂದ ಮಾಡಲಾಗಿದೆ ಹಾಗೂ ಕೆಳಗಿನ ಪರಬ್ರಹ್ಮನ 7 ಸಂಖ ಬ್ರಹ್ಮಾಂಡಗಳು ಹಾಗೂ ಕಾಲ ಬ್ರಹ್ಮನ 21 ಬ್ರಹ್ಮಾಂಡಗಳನ್ನು ಪೃಥ್ವೀ ತತ್ವದಿಂದ ಅಸ್ಥಾಯಿ ಇರುವಂತೆ ರಚಿಸಿದನು} (ಮಹಾನ್) ಪೂರ್ಣ ಪರಮಾತ್ಮನು (ಪಾರ್ಥಿವಮ್) ಪೃಥ್ವಿಯ (ವಿ) ಬೇರೆ–ಬೇರೆ (ಧಾಮ) ಲೋಕ (ಚ) ಮತ್ತು (ಸದಮ್) ಆವಾಸಸ್ಥಾನ (ಮಹೀ) ಪೃಥ್ವೀ ತತ್ವದಿಂದ (ರಜಃ) ಪ್ರತ್ಯೇಕ ಬ್ರಹ್ಮಾಂಡದಲ್ಲಿ ಚಿಕ್ಕ–ಚಿಕ್ಕ ಲೋಕಗಳ (ಜಾತಃ) ರಚನೆ ಮಾಡಿ (ಅಸ್ಕಭಾಯಾತ್) ಸ್ಥಿರಗೊಳಿಸಿದನು.

**ಭಾವಾರ್ಥ:– ಮೇಲಿನ ನಾಲ್ಕು ಲೋಕಗಳನ್ನು (ಸತ್ಯಲೋಕ, ಅಲಖ್‌ಲೋಕ, ಅಗಮ್‌ಲೋಕ, ಅನಾಮಿಲೋಕ) ಅಜರ–ಅಮರವನ್ನಾಗಿ ರಚಿಸಿದೆ ಹಾಗೂ ಕೆಳಗಿನ ಕಾಲ ಬ್ರಹ್ಮ ಹಾಗೂ ಪರಬ್ರಹ್ಮನ ಲೋಕಗಳನ್ನು ಅಸ್ಥಾಯಿ (ಅವಿನಾಶಿಯಲ್ಲದ) ಯಾಗಿ ರಚಿಸಿದೆ. ಬೇರೆ ಚಿಕ್ಕ–ಚಿಕ್ಕ ಲೋಕಗಳನ್ನು ಸಹ ಅದೇ ಪರಮೇಶ್ವರನೇ ರಚಿಸಿ ಸ್ಥಿರಗೊಳಿಸಿದನು.**

**ಅಥರ್ವಣ ವೇದದ 4ನೇ ಕಾಂಡದ ಅನುವಾಕ 1ರ 5ನೇ ಮಂತ್ರ.**

ಸಃ ಬುಧ್ಯಾಸ್ನರಾಷ್ಟ್ರ ಜನುಷೋಭ್ಯಗ್ರಂ ಬೃಹಸ್ಪತಿರ್ದೇವತಾ ತಸ್ಯ ಸವ್ರಾಟ್ ।
ಅಹರ್ಯಚ್ಛುಕ್ರಂ ಜ್ಯೋತಿಷೋ ಜನಿಷ್ಠಾಥ ಧ್ಯುಮಂತೋ ವಿ ವಸಂತು ವಿಪ್ರಾಃ ॥ (5) ॥

ಸಃ–ಬುಧ್ಯಾಸ್ನತ್–ಅಷ್ಟ್ರ– ಜನುಷೇಃ– ಅಭಿ–ಅಗ್ರಮ್–ಬೃಹಸ್ಪತಿ–ದೇವತಾ–ತಸ್ಯ–ಸಮ್ರಾಟ–ಅಹಃ–ಯತ್–ಶುಕ್ರಮ್–ಜ್ಯೋತಿಷಃ–ಜನಿಷ್ಠ –ಅಥ–ಧ್ಯುಮಂತಃ–ವಿ–ವಸಂತು–ವಿಪ್ರಾಃ

**ಅನುವಾದ:–** (ಸಃ) ಅದೇ (ಬುಧ್ಯಾಸ್ನತ್) ಮೂಲ ಮಾಲಿಕನಿಂದ (ಅಭಿಅಗ್ರಮ್) ಸರ್ವ ಪ್ರಥಮ ಸ್ಥಾನದಲ್ಲಿ (ಆಷ್ಟ್ರ) ಮಾಯಾ/ದುರ್ಗಾದೇವಿ (ಜನುಷೇಃ) ಉತ್ಪನ್ನಳಾದಳು. ಏಕೆಂದರೆ ಕೆಳಗಿನ ಪರಬ್ರಹ್ಮ ಹಾಗೂ ಕಾಲ ಬ್ರಹ್ಮನ ಲೋಕಗಳ ಪ್ರಥಮ ಸ್ಥಾನ ಸತ್ಯಲೋಕವಾಗಿದೆ. ಇದನ್ನು ಮೂರನೆಯ ಧಾಮ ಎಂದು ಸಹ ಕರೆಯುತ್ತಾರೆ. (ತಸ್ಯ) ಈ ದುರ್ಗಾಳ ಮಾಲಿಕನು ಸಹ ಈ (ಸಾಮ್ರಾಟ) ರಾಜಾಧಿರಾಜ (ಬೃಹಸ್ಪತಿಃ) ಎಲ್ಲರಿಗಿಂತ ದೊಡ್ಡ ಪ್ರಭು ಹಾಗೂ ಜಗದ್ಗುರು (ದೇವತಾ) ಪರಮೇಶ್ವರನಾಗಿದ್ದಾನೆ. (ಯತ್) ಯಾವುದರಿಂದ (ಅಹಃ) ಎಲ್ಲರ ವಿಯೋಗವಾಯಿತೊ, (ಅಥ) ಇದರ ನಂತರ (ಜ್ಯೋತಿಷಃ) ಜ್ಯೋತಿ ರೂಪ ನಿರಂಜನ ಅರ್ಥಾತ್ ಕಾಲನ (ಶುಕ್ರಮ್) ವೀರ್ಯ ಅರ್ಥಾತ್ ಬೀಜಶಕ್ತಿಯಿಂದ (ಜನಿಷ್ಠ) ದುರ್ಗಾಳ ಉದರದಿಂದ ಉತ್ಪನ್ನರಾಗಿ (ವಿಪ್ರಾಃ) ಭಕ್ತ ಆತ್ಮಗಳು (ವಿ) ಪ್ರತ್ಯೇಕವಾದ (ಧ್ಯುಮಂತಃ) ಮನುಷ್ಯಲೋಕ ಹಾಗೂ ಸ್ವರ್ಗ ಲೋಕದಲ್ಲಿ ಜ್ಯೋತಿ ನಿರಂಜನನ ಆದೇಶದಂತೆ ನಿವಾಸ

ಮಾಡಿರಿ ಎಂದು ದುರ್ಗಾ ಹೇಳಿದಳು.

**ಭಾವಾರ್ಥ:- ಪೂರ್ಣ ಪರಮಾತ್ಮನು ಮೇಲಿನ ನಾಲ್ಕು ಲೋಕಗಳಲ್ಲಿನ ಕೆಳಗಿನಿಂದ ಎಲ್ಲಕ್ಕಿಂತ ಪ್ರಥಮ ಸತ್ಯಲೋಕದಲ್ಲಿ ಅಷ್ಟಾ ಅರ್ಥಾತ್ ಅಷ್ಟಂಗಿ (ಪ್ರಕೃತಿ/ ದುರ್ಗಾ) ಯನ್ನು ಉತ್ಪನ್ನ ಮಾಡಿದನು. ಇವರೇ ರಾಜಾಧಿರಾಜ, ಜಗದ್ಗುರು ಪೂರ್ಣ ಪರಮೇಶ್ವರ (ಸತ್ಯಪುರುಷ) ರಾಗಿದ್ದಾರೆ. ಇವರಿಂದ ಎಲ್ಲರ ವಿಯೋಗವಾಗಿದೆ. ಪುನಃ ಸಕಲ ಪ್ರಾಣಿಗಳು ಜ್ಯೋತಿನಿರಂಜನ (ಕಾಲ) ನ (ವಿರ್ಯ) ಬೀಜದಿಂದ ದುರ್ಗಾ (ಅಷ್ಟಾ) ಳ ಗರ್ಭದ ಮೂಲಕ ಉತ್ಪನ್ನರಾಗಿ, ಅವು ಸ್ವರ್ಗ ಹಾಗೂ ಭೂಲೋಕದಲ್ಲಿ ವಾಸ ಮಾಡತೊಡಗಿದವು.**

**ಅಥರ್ವಣ ವೇದದ 4ನೇ ಕಾಂಡದ 1ನೇ ಅನುವಾಕದ 6ನೇ ಮಂತ್ರ.**

ನೂನಂ ತದಸ್ಯ ಕಾವ್ಯೋ ಹಿನೋತಿ ಮಹೋ ದೇವಸ್ಯ ಪೂರ್ವಶ್ಯ ಧಾಮ ।
ಏಷ ಜಜ್ಞೆ ಬಹುಭಿಃ ಸಾಕಮಿತ್ಥಾ ಪೂರ್ವೆ ಅರ್ಧೆ ವಿಶಿತೆ ಸಸನ್ ನು ॥ 6 ॥
ನೂನಂ-ತತ್-ಅಸ್ಯ-ಕಾವ್ಯಃ-ಮಹಃ-ದೇವಸ್ಯ-ಪೂರ್ವಸ್ಯ-ಧಾನು-ಹಿನೋತಿ
ಪೂರ್ವೆ-ವಿಶಿತೆ-ಏಷ-ಜಜ್ಞೆ-ಬಹುಭಿಃ-ಸಾಕಮ್-ಇಥ್ಯಾ-ಅರ್ಧೆ-ಸಸನ್-ನು.

**ಅನುವಾದ:-** (ನೂನಂ) ಸಂದೇಹ ರಹಿತ (ತತ್) ಆ ಪೂರ್ಣ ಪರಮೇಶ್ವರ ಅರ್ಥಾತ್ ತತ್ ಬ್ರಹ್ಮನೇ (ಅಸ್ಯ) ಈ (ಕಾವ್ಯಃ) ಭಕ್ತ ಆತ್ಮವನ್ನು ಯಾರು ಪೂರ್ಣ ಪರಮೇಶ್ವರನಲ್ಲಿ ವಿಧಿವತ್ತಾಗಿ ಭಕ್ತಿಯನ್ನು ಮಾಡುತ್ತಾರೊ, ಅದನ್ನು ಹಿಂದಕ್ಕೆ (ಮಹಃ) ಸರ್ವ ಶಕ್ತಿಮಾನ್ (ದೇವಸ್ಯ) ಪರಮೇಶ್ವರನ (ಪೂರ್ವಸ್ಯ) ಮೊದಲಿನ (ಧಾಮ) ಲೋಕಕ್ಕೆ ಅರ್ಥಾತ್ ಸತ್ಯ ಲೋಕಕ್ಕೆ (ಹಿನೋತಿ) ಕಳುಹಿಸಿಕೊಡುತ್ತಾನೆ.

(ಪೂರ್ವ) ಮೊದಲಿನ (ವಿಷಿತೆ) ವಿಶೇಷ ಆತುರತೆ ಪಡೆಯುವ (ಏಷ) ಈ ಪರಮೇಶ್ವರನಿಗೆ ಹಾಗೂ (ಜಗ್ನೆ) ಸೃಷ್ಠಿ ಉತ್ಪತ್ತಿಯ ಜ್ಞಾನಕ್ಕೆ ಅರಿತು (ಬಹುಭಿ) ಆನಂದ (ಸಾಕಮ್) ದಿಂದ (ಅರ್ಧೆ) ಕಡಿಮೆ (ಸಸನ್) ಮಲಗುತ್ತಾ (ಇತ್ಥಾ) ವಿಧಿಯ ಅನುಸಾರ (ನು) ಅಂತರ ಆತ್ಮದಿಂದ ಸ್ತುತಿಸುತ್ತಾನೆ.

**ಭಾವಾರ್ಥ:- ಅದೇ ಪೂರ್ಣ ಪರಮೇಶ್ವರನು, ಸತ್ಯ ಸಾಧನೆ ಮಾಡುವ ಸಾಧಕನನ್ನು ಮೊದಲಿನ ಸ್ಥಾನವಾದ ಸತ್ಯಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ. ಆ ವಾಸ್ತವಿಕ ಸುಖ ನೀಡುವ ಪ್ರಭುವನ್ನು ಪಡೆದು ಆತ್ಮಾನಂದದಿಂದ ಸ್ತುತಿ ಮಾಡುತ್ತದೆ. ಏನೆಂದರೆ ಹೇ ಪರಮಾತ್ಮ ಅಸಂಖ್ಯ ಜನ್ಮಗಳಿಂದ ಸುತ್ತಾಡಿ (ಹುಟ್ಟು-ಸಾವಿನ ಜಾಲದಲ್ಲಿ) ದವರಿಗೆ, ಅಲೆದಾಡಿದವರಿಗೆ ವಾಸ್ತವಿಕವಾದ ನೆಲೆ ಸಿಕ್ಕಿತ್ತು ಎಂದು. ಇದಕ್ಕೆ ಪ್ರಮಾಣ ಪವಿತ್ರ ಋಗ್ವೇದದ 10ನೇ ಮಂಡಲದ 90ನೇ ಸೂಕ್ತಿಯ 16ನೇ ಮಂತ್ರದಲ್ಲಿದೆ.**

**ಗೌರವಾನ್ವಿತ ಗರೀಬ್‌ದಾಸ್ ರವರನ್ನು ಇದೇ ರೀತಿ, ಪರಮಾತ್ಮ ಕವಿರ್ದೇವರು (ಕಬೀರ್ ಪರಮೇಶ್ವರ) ಸ್ವತಃ ಸತ್ಯ ಭಕ್ತಿಯನ್ನು ಪ್ರಧಾನ ಮಾಡಿ ಸತ್ಯಲೋಕಕ್ಕೆ ಕರೆದುಕೊಂಡು ಹೋದರು. ಆಗ ತಮ್ಮ ಅಮೃತವಾಣಿಯಲ್ಲಿ ಗೌರವಾನ್ವಿತ ಗರೀಬ್‌ದಾಸ್ ಮಹಾರಾಜ ರವರು, ತಮ್ಮ ಕಣ್ಣುಗಳಿಂದ ನೋಡಿದ್ದನ್ನು ಹೇಳಿದ್ದಾರೆ.**

ಗರೀಬ್, ಅಜಬ್ ನಗರ ಮೆ ಲೇ ಗಯೆ, ಹಮಕು ಸದ್ಗುರು ಆನ್ ।
ಝಿಲಕೇ ಬಿಂಬ ಅಗಾಧ ಗತಿ, ಸುತೆ ಚಾದರ್ ತಾನ್ ॥

**ಅಥರ್ವ ವೇದದ 4ನೇ ಕಾಂಡದ 1ನೇ ಅನುವಾಕದ 7ನೇ ಮಂತ್ರ.**

ಯೋಥರ್ವಾಣಂ ಪಿತರಂ ದೇವಬಂಧುಂ ಬೃಹಸ್ಪತಿಂ ನಮಸಾವ ಚ ಗಚ್ಛಾತ್ ।
ತ್ವಂ ವಿಶ್ವೇಷಾಂ ಜನಿತಾ ಯಥಾಸಃ ಕವಿರ್ದೇವೋ ನ ದಭಾಯತ್ ಸ್ವಧಾವಾನ್ ॥ 7 ॥

ಯಃ–ಅಥರ್ವಾಣಂ–ಪಿತರಮಂ–ದೇವಬಂಧುಂ–ಬೃಹಸ್ಪತಿಂ–ನಮಸಾ–ಅವ–ಚ–ಗಚ್ಛಾತ್ –ತ್ವಮ್–ವಿಶ್ವೇಷಾಮ್–ಜನಿತಾ–ಯಥಾ–ಸಃ–ಕವಿರ್ದೇವಃ–ನ–ಭಾಯತ್‌ಯಧಾವಾನ್

**ಅನುವಾದ:–** (ಯಃ) ಯಾರು (ಅಥರ್ವಾಣಂ) ಅಚಲ ಅರ್ಥಾತ್ ಅವಿನಾಶಿ (ಪಿತ್ತರಮ್) ಜಗತ್ ಪಿತಾ (ದೇವಬಂಧುಂ) ಭಕ್ತರ ವಾಸ್ತವಿಕ ಜೊತೆಗಾರ ಅರ್ಥಾತ್ ಆತ್ಮದ ಆಧಾರ (ಬೃಹಸ್ಪತಿಮ್) ಜಗದ್ಗುರು (ಚ) ಹಾಗೂ (ನಮಸಾ) ವಿನಮ್ರ ಪೂಜಾರಿ ಅರ್ಥಾತ್ ವಿಧಿವತ್ತಾಗಿ ಸಾಧನೆ ಮಾಡುವವನನ್ನು, (ಅವ) ಸುರಕ್ಷೆಯೊಂದಿಗೆ (ಗಚ್ಛಾತ್) ಸತ್ಯಲೋಕಕ್ಕೆ ಕರೆದುಕೊಂಡು ಹೋಗುವನು (ವಿಶ್ವೇಷಾಮ್) ಸರ್ವ ಬ್ರಹ್ಮಾಂಡಗಳ (ಜನಿತಾ) ರಚನೆ ಮಾಡಿದ ತಾಯಿಯಂತಹ ಗುಣವುಳ್ಳವ (ನದಭಾಯತ) ಕಾಲ ಬ್ರಹ್ಮನ ಹಾಗೆ ವಿಶ್ವಾಸ ದ್ರೋಹ ಮಾಡದ (ಸ್ವಧಾವಾನ್) ಸ್ವಭಾವದ ಅರ್ಥಾತ್ ಗುಣಗಳಿಂದಯುಕ್ತ (ಯಥಾ) ಹೇಗಿದಿರೋ, ಹಾಗೆ ಅರ್ಥಾತ್ ಅಂತೆಯೇ (ಸಃ) ಇದ್ದವರು (ತ್ವಮ್) ತಾವು (ಕವಿರ್ದೇವಃ) ಕವಿರ್ದೇವರು ಆಗಿರುವಿರಿ. ಭಾಷಾ ಭಿನ್ನತೆಯಿಂದ ಇವರನ್ನು ಕಬೀರ್ ಪರಮೇಶ್ವರ ಎಂದೂ ಕರೆಯುತ್ತಾರೆ.

**ಭಾವಾರ್ಥ:– ಯಾರು ಸಕಲವನ್ನು ರಚನೆ ಮಾಡಿರುವರೋ, ಅವರು ಪರಮೇಶ್ವರ ಕವಿರ್ದೇವ ಅರ್ಥಾತ್ ಕಬೀರ್ ಪರಮೇಶ್ವರರು ಎಂಬುದನ್ನು ಈ ಮಂತ್ರದಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಆ ಪರಮೇಶ್ವರ ಅಚಲ ಅರ್ಥಾತ್ ವಾಸ್ತವದಲ್ಲಿ ಅವಿನಾಶಿ (ಗೀತೆಯ 15ನೇ ಅಧ್ಯಾಯದ 16–17ನೇ ಶ್ಲೋಕದಲ್ಲಿ ಇದಕ್ಕೆ ಪ್ರಮಾಣವಿದೆ) ಜಗದ್ಗುರು–ಆತ್ಮೋದ್ಧಾರ, ಅವರು ವಿಧಿವತ್ತಾಗಿ ಸಾಧನೆ ಮಾಡುವವನನ್ನು ಪೂರ್ಣ ಮುಕ್ತರನ್ನಾಗಿಸಿ ಸತ್ಯಲೋಕಕ್ಕೆ ಕರೆದುಕೊಂಡು ಹೋಗುವರು, ಸರ್ವ ಬ್ರಹ್ಮಾಂಡಗಳ ರಚನೆಕಾರ ಕಾಲ ಬ್ರಹ್ಮ ನಂತೆ ಮೋಸಮಾಡುವವರಲ್ಲ. ಅವರು ಕಬೀರ್ ಪ್ರಭುವಾಗಿದ್ದಾರೆ ಈ ಪರಮೇಶ್ವರನನ್ನೇ ತಾಯಿ, ತಂದೆ, ಹಾಗು ಸೊದರ ಎಂದೂ ಸಹ ಕರೆಯುತ್ತಾರೆ. ಏಕೆಂದರೆ ತಮ್ಮ ಶಬ್ದಶಕ್ತಿಯಿಂದ ಸಕಲ ಬ್ರಹ್ಮಾಂಡಗಳನ್ನು, ಸಕಲ ಆತ್ಮಗಳನ್ನು ಸೃಷ್ಠಿಮಾಡಿದ್ದಾರೆ. ವಾಸ್ತವಿಕವಾಗಿ ಇವರೇ ಪರಮೇಶ್ವರ. ಆದ್ದರಿಂದ ಈ ಕಬೀರ ಪರಮೇಶ್ವರರ ಸ್ತುತಿ ಮಾಡುತ್ತಾರೆ. "ತ್ವಮೇವ ಮಾತಾ ಚ ಪಿತಾ ತ್ವಮೇವ, ತ್ವಮೇವ ಬಂಧು ಚ ಸಖಾ ತ್ವಮೇವ, ತ್ವಮೇವ ವಿದ್ಯಾ ಚ ದ್ರವಿಣಮ್ ತ್ವಮೇವ, ತ್ವಮೇವ ಸರ್ವ ಮಮ್ ದೇವ ದೇವ". ಇದೇ ಪರಮೇಶ್ವರನ ಮಹಿಮೆಯು ಪವಿತ್ರ ಋಗ್ವೇದದ 1ನೇ ಮಂಡಲದ 24ನೇ ಸೂಕ್ತದಲ್ಲಿ ವಿಸ್ತಾರವಾದ ವಿವರಣೆ ಇದೆ.**

## "ಪವಿತ್ರ ಋಗ್ವೇದದಲ್ಲಿ ಸೃಷ್ಠಿ ರಚನೆಯ ಪ್ರಮಾಣ (ಆಧಾರ)"

**ಋಗ್ವೇದದ 10ನೇ ಮಂಡಲದ ಸೂಕ್ತ 90ರಲ್ಲಿ 1ನೇ ಮಂತ್ರ.**

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋಂ ವೃತ್ವಾತ್ಯಾತಿಷ್ಠದ್ಧಶಾಂಗುಲಮ್ ॥ 1 ॥

ಸಹಸ್ರಶೀರ್ಷಾ–ಪುರುಷಃ–ಸಹಸ್ರಾಕ್ಷಃ–ಸಹಸ್ರಪಾತ್–ಸ–ಭೂಮಿಮ್–ವಿಶ್ವತಃ–ವೃತ್ವಾ–ಅತ್ಯಾತಿಷ್ಠತ್–ದಶಾಂಗುಲಮ್।

**ಅನುವಾದ:–** (ಪುರುಷಃ) ವಿರಾಟ್ ರೂಪದ ಕಾಲಭಗವಾನ್ ಕ್ಷರ ಪುರುಷ (ಸಹಸ್ರಶೀರ್ಷಾ) ಸಾವಿರ ತಲೆಗಳುಳ್ಳವ ( ಸಹಸ್ರಾಕ್ಷಃ) ಸಾವಿರ ಕಣ್ಣುಗಳುಳ್ಳವ (ಸಹಸ್ರಪಾತ್) ಸಾವಿರ ಕಾಲುಗಳುಳ್ಳವ (ಸ) ಆ ಕಾಲನು (ಭೂಮಿಮ್) ಪೃಥ್ವಿಯ 21 ಬ್ರಹ್ಮಾಂಡವನ್ನು (ವಿಶ್ವತಃ) ಎಲ್ಲ ಕಡೆಯಿಂದ (ದಶಾಂಗುಲಮ್) ಹತ್ತು ಬೆರಳುಗಳಿಂದ ಅರ್ಥಾತ್ ಪೂರ್ಣ ರೂಪದಿಂದ ವಶಕ್ಕೆ ತೆಗೆದು ಕೊಂಡಿರುವನು (ವೃತ್ವಾ) ಗೋಲಾಕಾರದ ಪರಿಧಿಯಿಂದ ಸುತ್ತಿ (ಅತ್ಯಾತಿಷ್ಠತ್) ದೊಡ್ಡದಾದ ತನ್ನ ಕಾಲಲೋಕದಲ್ಲಿ ಎಲ್ಲರಿಂದ ಬೇರೆಯಾಗಿ 21ನೇ ಬ್ರಹ್ಮಾಂಡದಲ್ಲಿ ಮೇಲೆ ಕುಳಿತ್ತಿದ್ದಾನೆ

ಅಂದರೆ ವಾಸಿಸುತ್ತಾನೆ.

**ಭಾವಾರ್ಥ:– ಸಾವಿರ ತಲೆ, ಕೈ–ಕಾಲು ಕಣ್ಣುಗಳನ್ನು ಹೊಂದಿರುವ ವಿರಾಟ್ ರೂಪದ ಕಾಲ ಬ್ರಹ್ಮನ ವರ್ಣನೆಯನ್ನು ಈ ಮಂತ್ರದಲ್ಲಿ ಹೇಳಿದ್ದಾರೆ. (ಗೀತೆಯ 10–11ನೇ ಅಧ್ಯಾಯದಲ್ಲೂ ಸಹ ಕಾಲ ಬ್ರಹ್ಮನ ಇಂತಹದೇ ವರ್ಣನೆ ಇದೆ. ಅಧ್ಯಾಯ 11ರ 46ನೇ ಶ್ಲೋಕದಲ್ಲಿ ಅರ್ಜುನನು ಹೇಳುತ್ತಾನೆ– "ಸಹಸ್ರ ಭುಜಗಳುಳ್ಳ ನೀನು ನಿನ್ನ ಚತುರ್ಭುಜಗಳಿಂದ ದರ್ಶನ ಕೊಡು")**

**ಸಾವಿರ ಸಂಖ್ಯೆಯಲ್ಲಿ ತಲೆ–ಕಾಲು–ಕೈ–ಕಣ್ಣು–ಕಿವಿಗಳಿಂದ ವಿರಾಟ್ ರೂಪಿ ಕಾಲ ಬ್ರಹ್ಮನು ತನ್ನ ಅಧೀನದಲ್ಲಿ ಎಲ್ಲ ಪ್ರಾಣಿಗಳನ್ನು ಇರಿಸಿಕೊಂಡು, 20 ಬ್ರಹ್ಮಾಂಡಗಳನ್ನು ಗೋಲಾಕಾರದ ಪರಿಧಿಯಲ್ಲಿರಿಸಿ. ಸ್ವತಃ ತಾನು ಪ್ರತ್ಯೇಕವಾಗಿ 21ನೇ ಬ್ರಹ್ಮಾಂಡದಲ್ಲಿ ಕಳಿತುಕೊಂಡಿದ್ದಾನೆ.**

**ಋಗ್ವೇದದ 10ನೇ ಮಂಡಲದ 90ನೇ ಸೂಕ್ತದಲ್ಲಿನ 2ನೇ ಮಂತ್ರ.**

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭಾವ್ಯಮ್ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ 2 ॥

ಪುರುಷ–ಏವ–ಇದಂ–ಸರ್ವಂ–ಯತ್–ಭೂತಮ್–ಯತ್–ಚ–ಬಾವ್ಯಮ್–ಉತ್–ಅಮೃತತ್ವಸ್ಯ– ಈಶಾನಃ–ಯತ್–ಅನ್ನೇನ–ಅತಿರೋಹತಿ।

**ಅನುವಾದ:–** (ಏವ) ಈ ಪ್ರಕಾರ ಸ್ವಲ್ಪಮಟ್ಟಿಗೆ (ಪುರುಷ) ಭಗವಂತನಂತೆ ಇರುವವನು ಅಕ್ಷರ ಪುರಷ ಪರಬ್ರಹ್ಮನಾಗಿದ್ದಾನೆ. (ಚ) ಮತ್ತು (ಇದಮ್) ಇಲ್ಲಿ (ಯತ್) ಎನೆಲ್ಲಾ (ಭೂತಮ್) ಉತ್ಪನ್ನವಾಗಿದೆ (ಯತ್) ಎನೆಲ್ಲಾ (ಭಾವ್ಯಮ್) ಭವಿಷ್ಯದಲ್ಲೂ ಉತ್ಪನ್ನವಾಗುತ್ತದೆ (ಸರ್ವಂ) ಎಲ್ಲಾ (ಯತ್) ಶ್ರಮದ ಮೂಲಕ (ಅನ್ನೇನ) ಅನ್ನದಿಂದ (ಅತಿರೋಹತಿ) ವಿಕಾಸಗೊಳ್ಳುವುದು. ಈ ಅಕ್ಷರ ಪುರಷನು ಸಹ (ಉತ್) ಸಂದೇಹಯುಕ್ತಿ (ಅಮೃತತ್ವಸ್ಯ) ಮೋಕ್ಷದ (ಈಶಾನಃ) ಸ್ವಾಮಿಯಾಗಿರುವನು ಆದರೆ ಪೂರ್ಣ ಮೋಕ್ಷದಾಯಕನಲ್ಲ.

**ಭಾವಾರ್ಥ:– ಈ ಮಂತ್ರದಲ್ಲಿ ಪರಬ್ರಹ್ಮ (ಅಕ್ಷರ ಪುರುಷ) ನ ವರ್ಣನೆ ಇದೆ. ಆ ವರ್ಣನೆ ಭಗವಂತನ ಕೆಲವು ಲಕ್ಷಣಗಳಿಂದ ಕೂಡಿದೆ. ಆದರೆ ಇವನ ಭಕ್ತಿಯಿಂದ ಪೂರ್ಣ ಮೋಕ್ಷ ಸಿಗದು. ಆದ್ದರಿಂದ ಇವನನ್ನು ಸಂದೇಹಯುಕ್ತ ಮುಕ್ತಿದಾತನೆನ್ನುವರು. ಇವನನ್ನು ಭಗವಂತನಂತೇ ಎಂದು ಹೇಳಲು ಕಾರಣ– ಇವನು ಕಾಲನ ರೀತಿ ತಪ್ತಶಿಲೆಯ ಮೇಲೆ ಜೀವಿಗಳನ್ನು ಕಾಯಿಸಿ ತಿನ್ನುವುದಿಲ್ಲ. ಆದರೆ ಈ ಪರಬ್ರಹ್ಮನ ಲೋಕದಲ್ಲೂ ಸಹ ಪರಿಶ್ರಮದ, ಕರ್ಮಾಧಾರದಂತೆ ಫಲ ಸಿಗುವುದು ಹಾಗೂ ಅನ್ನದಿಂದಲೇ ಸಕಲ ಪ್ರಾಣಿಗಳ ಶರೀರ ಬೆಳೆಯುವುದು. ಜನ್ಮ–ಮೃತ್ಯುಗಳ ಸಮಯ ಕಾಲನಿಗಿಂತ ಹೆಚ್ಚಾಗಿದೆ. ಆದರೂ ಸಹ ಉತ್ಪತ್ತಿ, ಮರಣ ಹಾಗೂ 84 ಲಕ್ಷ ಯೋನಿಗಳ ಯಾತನೆ ಅಂತೆಯೇ ಇದೆ.**

**ಋಗ್ವೇದದ 10ನೇ ಮಂಡಲದ ಸೂಕ್ತಿ 90 3ನೇ ಮಂತ್ರ.**

ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪುರಷಃ ।
ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥3॥

ಏತಾವಾನ್‌ಅಸ್ಯ–ಮಹಿಮಾ–ಅತಃ–ಜ್ಯಾಯಾನ್‌ಚ–ಪುರುಷಃ–ಪಾದಃ–ಅಸ್ಯ–ವಿಶ್ವಾಃ–ಭೂತಾನಿ–ತ್ರಿ–ಪಾದ–ಅಸ್ಯ–ಅಮೃತಮ್–ದಿವಿ.

**ಅನುವಾದ:–** (ಅಸ್ಯ) ಈ ಪರಬ್ರಹ್ಮನಿಗೆ (ಏತಾವಾನ) ಇಷ್ಟೇ ಮಹಿಮೆ ಇದೆ (ಮಹಿಮಾ) ಪ್ರಭುತ್ವವಿದೆ (ಚ) ಹಾಗೂ (ಪುರುಷ) ಆ ಪೂರ್ಣ ಬ್ರಹ್ಮ ಪರಮೇಶ್ವರನು (ಅತಃ) ಇವನಿಗಿಂತ (ಜ್ಯಾಯಾನ) ದೊಡ್ಡವನು. (ವಿಶ್ವಾ) ಸಮಸ್ತ (ಭೂತಾನಿ) ಲೋಕಗಳಲ್ಲಿ ಎಷ್ಟು ಜೀವಿಗಳಿವೆಯೋ,

(ಅಸ್ಯ) ಅವುಗಳ ಮೇಲೆ ಈ ಪೂರ್ಣ ಪರಮಾತ್ಮ ಪರಮ ಅಕ್ಷರ ಪುರುಷನ (ಪಾದಃ) ಒಂದು ಅಂಶ ಇದೆ. (ಅಸ್ಯ) ಈ ಪರಮೇಶ್ವರನ (ತ್ರಿ) ಮೂರು (ದಿವಿ) ದಿವ್ಯಲೋಕ ಅವು ಸತ್ಯಲೋಕ, ಅಲಖ್‌ಲೋಕ, ಅಗಮ್‌ಲೋಕ (ಅಮೃತಂ) ಅವಿನಾಶಿಯ (ಪಾದ) ಎರಡನೆಯ ಅಂಶವಿದೆ ಅರ್ಥಾತ್ ಯಾರೆಲ್ಲಾ, ಏನೆಲ್ಲಾ ಸಕಲ ಬ್ರಹ್ಮಾಂಡಗಳಲ್ಲಿ ಉತ್ಪನ್ನವಾಗಿದೆ ಇದು ಆ ಸತ್ಯಪುರುಷನ ಅಂಶವೇ ಆಗಿದೆ.

**ಭಾವಾರ್ಥ:– ಈ ಮೇಲಿನ 2ನೇ ಮಂತ್ರದಲ್ಲಿ ವರ್ಣಿತವಾಗಿರುವ ಅಕ್ಷರ ಪುರುಷ (ಪರಬ್ರಹ್ಮ) ನಿಗೆ ಎಷ್ಟು ಮಹಿಮೆ ಇದೆಯೋ, ಅದಕ್ಕಿಂತಲೂ ಅಧಿಕವಾಗಿ ಪೂರ್ಣ ಪುರುಷ ಕವಿರ್ದೇವರ ಮಹಿಮೆ ಇದೆ. ಇವರು ಸರ್ವಶಕ್ತಿಮಾನ್ ಹಾಗೂ ಸಕಲ ಬ್ರಹ್ಮಾಂಡವೂ, ಇವರ ಅಂಶದಿಂದಲೇ ಆಗಿವೆ. ಈ ಮಂತ್ರದಲ್ಲಿ ಮೂರು ಲೋಕಗಳ ವರ್ಣನೆ ಇದೆ ಏಕೆಂದರೆ ನಾಲ್ಕನೆಯ ಅನಾಮಿಲೋಕ ಬೇರೆ ಲೋಕಗಳ ರಚನೆಗೂ ಮೊದಲೇ ಆಗಿದೆ. ಇದೇ ವಿವರಣೆಯು ಭಗವದ್ಗೀತೆಯ 15ನೇ ಅಧ್ಯಾಯದ 16–17 ನೇ ಶ್ಲೋಕಗಳಲ್ಲಿದೆ. ಇದಕ್ಕೆ ಪ್ರಮಾಣವನ್ನು ಗೌರವಾನ್ವಿತ ಗರೀಬ್‌ದಾಸರು ನೀಡಿದ್ದಾರೆ:–**

ಗರೀಬ್, ಜಾಕೆ ಅರ್ಧ ರೂಮ್ ಪರ್ ಸಕಲ್ ಪಸಾರಾ, ಐಸಾ ಪೂರ್ಣಬ್ರಹ್ಮ ಹಮಾರಾ ।
ಗರೀಬ್, ಅನಂತ ಕೋಟಿ ಬ್ರಹ್ಮಾಂಡ ಕಾ, ಏಕ್ ರತಿ ನಹೀ ಭಾರ ।
ಸತ್‌ಗುರು ಪುರುಷ ಕಬೀರ್ ಹೈ, ಕುಲ್ ಕೆ ಸೃಜನ್ ಹಾರ ॥

**ಇದರ ಪ್ರಮಾಣವನ್ನು ಗೌರವಾನ್ವಿತ ದಾದೂ ರವರು ಹೇಳುತ್ತಿದ್ದಾರೆ:**

ಜಿನ್ ಮೋಕು ನಿಜನಾಮ್ ದಿಯಾ, ಸೋಯಿ ಸತ್‌ಗುರು ಹಮಾರ ।
ದಾದೂ ದೂಸರಾ ಕೋಯಿ ನಹೀ, ಕಬೀರ್ ಸೃಜನ್ ಹಾರ ॥

**ಇದರ ಪ್ರಮಾಣವನ್ನು ಗೌರವಾನ್ವಿತ ಗುರು ನಾನಕ್ ರವರು ಕೊಡುತ್ತಾರೆ:**

ಯಕ ಅರ್ಜ ಗುಫತಮ್ ಪೇಶ್ ತೋ ದರ್ ಕೂನ್ ಕರತಾರ್ ।
ಹಕ್ಕಾ ಕಬೀರ್ ಕರೀಮ್ ತೂ, ಬೇಯೆಬ್ ಪರವರದಿಗಾರ್ ॥

**(ಶ್ರೀ ಗುರುಗ್ರಂಥ ಸಾಹೇಬದ ಪುಟ ಸಂಖ್ಯೆ 721, ಮಹಲಾ 1 ರಾಗ ತಿಲಂಗ)**

**'ಕೂನ್ ಕರತಾರ'ದ ಅರ್ಥ ಎಲ್ಲವನ್ನೂ ರಚಿಸುವವನು ಎಂದಾಗಿದೆ. ಅರ್ಥಾತ್ ಶಬ್ದ ಶಕ್ತಿಯಿಂದ ರಚನೆಮಾಡುವ ಶಬ್ದ ಸ್ವರೂಪ ಪ್ರಭು. 'ಹಕ್ಕಾ ಕಬೀರ್' ನ ಅರ್ಥ ಸತ್ಯ ಕಬೀರ್ ಎಂದಾಗಿದೆ. 'ಕರೀಮ್'ದ ಅರ್ಥ ದಯಾಲು ಎಂದಾಗಿದೆ. 'ಪರವರದಿಗಾರ್' ನ ಅರ್ಥ ಪರಮಾತ್ಮ ಎಂದಾಗಿದೆ.**

**ಋಗ್ವೇದದ 10ನೇ ಮಂಡಲದ 90ನೇ ಸೂಕ್ತಿಯ 4ನೆ ಮಂತ್ರ.**

ತ್ರಿ ಪಾದೂರ್ಧ್ವ ಉದೈತ್ಪುರುಷಃ ಪಾದೋಸೇಹಾಭವತ್ಪುನಃ ।
ತತೋ ವಿಶ್ವ ಡವ್ಯಕ್ರಾಮತ್ಸಾಶನಾನಶನೆ ಅಭಿ ॥4॥

ತ್ರಿ–ಪಾದ–ಊರ್ಧ್ವಃ–ಉದೈತ್–ಪುರುಷಃ–ಪಾದಃ–ಅಸ್ಯ–ಇಹ–ಅಭವತ್ ಪೂನಃ–ತತಃ–ವಿಶ್ವಡ–ವ್ಯಕ್ರಾಮತ–ಸಃ–ಅಶನಾನಶನೆ–ಅಭಿ.

**ಅನುವಾದ:–** (ಪುರುಷಃ) ಈ ಅವಿನಾಶಿ ಪರಮಾತ್ಮಾ (ಊರ್ಧ್ವಃ) ಮೇಲಿನ (ತ್ರಿ) ಮೂರು ಲೋಕಗಳಾದ ಸತ್ಯಲೋಕ, ಅಲಖ್‌ಲೋಕ, ಆಗಮ್‌ಲೋಕ ಗಳಲ್ಲಿ (ಪಾದ) ಒಂದು ಅಂಶದಲ್ಲಿ (ಉದೈತ್) ಪ್ರಕಟವಾಗುತ್ತಾನೆ. (ಅಸ್ಯ) ಇದೇ ಪರಮೇಶ್ವರ ಪೂರ್ಣಬ್ರಹ್ಮನ (ಪಾದಃ) ಒಂದು ಅಂಶ ಜಗತ್ತಿನ ಬೇರೆ ಭಾಗದಲ್ಲಿ (ಪುನರ್) ಪುನಃ( ಇಹ) ಇಲ್ಲಿ (ಅಭವತ್) ಪ್ರಕಟವಾಗುತ್ತದೆ. (ತತಃ) ಅದ್ದರಿಂದ (ಸಃ) ಆ ಅವಿನಾಶಿ ಪೂರ್ಣ ಬ್ರಹ್ಮನು (ಅಶನಾನಸನೆ)

ತಿನ್ನುವ ಕಾಲ ಬ್ರಹ್ಮ ಮತ್ತು ತಿನ್ನದೆ ಇರುವ ಪರಬ್ರಹ್ಮನ (ಅಭಿ) ಮೇಲೂ (ವಿಶ್ವಡ) ಸರ್ವತ್ರ (ವ್ಯಕ್ರಾಮಾತ್) ಅವನ ಪ್ರಭುತ್ವ ಎಲ್ಲಾ ಬ್ರಹ್ಮಾಂಡ ಹಾಗೂ ಎಲ್ಲಾ ಪ್ರಭುಗಳ ಮೇಲೂ ಇದೆ. ಅವನೇ ಎಲ್ಲರ ನಾಯಕ. ಅವನು ತನ್ನ ಶಕ್ತಿಯನ್ನು ಎಲ್ಲರ ಮೇಲೆ ಪ್ರಯೋಗಿಸುತ್ತಾನೆ.

**ಭಾವಾರ್ಥ: ಇವನೇ ಸಕಲ ಸೃಷ್ಟಿಯ ರಚನಾಕಾರನು ತಾನು ರಚಿಸಿದ ಮೂರು ಲೋಕಗಳಲ್ಲಿ (ಸತ್ಯಲೋಕ, ಅತಖ್‌ಲೋಕ, ಅಗಮ್‌ಲೋಕ) ಮೂರು ರೂಪಗಳಲ್ಲಿ ಪ್ರಕಟವಾಗಿದ್ದಾನೆ. ಇಲ್ಲಿ ಅನಾಮಿಲೋಕದ ರಚನೆ ಬಗ್ಗೆ ಹೇಳಲಾಗಿಲ್ಲ. ಏಕೆಂದರೆ ಈ ಲೋಕದಲ್ಲಿ ಯಾವುದೇ ರಚನೆ ಇಲ್ಲ. ಇದು ಪೂರ್ವದಿಂದಲ್ಲೇ ಇರುವಂತಹದ್ದು. ಅದೇ ಪರಮಾತ್ಮನು ಸತ್ಯಲೋಕದಿಂದ ಬೇರೆಯಾಗಿ ಕೆಳಗಿನ ಕಾಲ ಬ್ರಹ್ಮ ಮತ್ತು ಪರಬ್ರಹ್ಮರ ಲೋಕಗಳಲ್ಲಿ ಉತ್ಪನ್ನವಾಗುತ್ತಾನೆ. ಅಂದರೆ ಪೂರ್ಣ ಪರಮಾತ್ಮನ ಪ್ರಭುತ್ವ ಎಲ್ಲೆಡೆ ಇರುತ್ತದೆ. ಹೇಗೆ ಸೂರ್ಯನು ಮೇಲೆ ಇದ್ದು ತನ್ನ ಪ್ರಕಾಶ–ಪ್ರಭಾವವನ್ನು ಎಲ್ಲರ ಮೇಲೂ ಬೀರುತ್ತಾನೋ, ಹಾಗೆ ಪೂರ್ಣ ಪರಮಾತ್ಮನಿರುತ್ತಾನೆ. ಹೇಗೆ ಮೊಬೈಲ್ ಟವರ್ ಒಂದೆಡೆ ಇದ್ದು ಎಲ್ಲ ಕಡೆಗೂ ವಾಣಿಯ ಸಂದೇಶ ಕಳುಹಿಸುತ್ತದೋ, ಹಾಗೆ ಪೂರ್ಣಬ್ರಹ್ಮನು ತನ್ನ ಶಕ್ತಿಯಿಂದ ಎಲ್ಲ ಬ್ರಹ್ಮಾಂಡಗಳನ್ನು ನಿಯಂತ್ರಿಸುತ್ತಾನೆ.**

**ಇದರ ಪ್ರಮಾಣವನ್ನು ಗೌರವಾನ್ವಿತ ಗರೀಬ್‌ದಾಸರು ಕೊಟ್ಟಿದ್ದಾರೆ. (ಅಮೃತವಾಣಿ, ರಾಗ ಕಲ್ಯಾಣ)**

ತೀನ್ ಚರಣ್ ಚಿಂತಾಮಣೀ ಸಾಹೇಬ್, ಶೇಷ ಬದನ್ ಪರ್ ಛಾಯೆ ।
ಮಾತಾ, ಪಿತಾ ಕುಲ ನ ಬಂಧು, ನಾ ಕಿನ್ಹೆ ಜನನೀ ಜಾಯೇ ॥

**ಋಗ್ವೇದದ ಮಂಡಲ 10ರ ಸೂಕ್ತಿ 90ರ 5ನೇ ಮಂತ್ರ.**

ತಸ್ಮಾದ್ವಿರಾಳಜಾಯತ್ ವಿರಾಜೋ ಅಧಿ ಪುರುಷಃ ।
ಸ ಜಾತೋ ಅತ್ಯರಿಚ್ಯತ್ ಪಶ್ಚಾದ್‌ಭೂಮಿಮಥೋ ಪುರಃ ॥5॥

ತಸ್ಮಾತ್–ವಿರಾಟ್–ಅಜಾಯತ–ವಿರಾಜಃ–ಅಧಿ–ಪುರುಷಃ–ಸ–ಜಾತಃ–ಅತ್ಯರಿಚ್ಯತ್–ಪಶ್ಚಾತ್–ಭೂಮಿಮ್–ಅಥಃ–ಪುರಃ

**ಅನುವಾದ:**– (ತಸ್ಮಾತ್) ಅದಾದ ನಂತರ ಆ ಪರಮೇಶ್ವರನು ಶಬ್ದ ಶಕ್ತಿಯಿಂದ (ವಿರಾಟ್) ಕಾಲ ಬ್ರಹ್ಮ, ಇವನನ್ನು ಕ್ಷರ ಪುರುಷ ಎಂದೂ ಸಹ ಕರೆಯುತ್ತಾರೆ. (ಅಜಾಯತ) ಇವನ ಉತ್ಪನ್ನವಾಯಿತು. (ಪಶ್ವಾತ್) ಅದಾದ ನಂತರ (ವಿರಾಜಃ) ಕಾಲ ಬ್ರಹ್ಮನಿಗಿಂತ (ಅಧಿ) ದೊಡ್ಡ (ಪುರಷಃ) ಪರಮೇಶ್ವರನು (ಭೂಮಿಮ್) ಪೃಥ್ವಿ, ಕಾಲ ಬ್ರಹ್ಮ ಹಾಗೂ ಪರಬ್ರಹ್ಮ ಲೋಕಗಳನ್ನು ಉತ್ತಮವಾಗಿ (ಅತ್ಯರಿಚ್ಯತ್) ನಿರ್ಮಿಸಿದ. (ಅರ್ಥ) ಪುನಃ (ಪುರ) ಚಿಕ್ಕ–ಚಿಕ್ಕ ಲೋಕಗಳನ್ನು (ಸ) ಆ ಪೂರ್ಣ ಪರಮೇಶ್ವರರೆ ಉತ್ಪನ್ನ ಮಾಡಿದ.

**ಭಾವಾರ್ಥ:– 4ನೇ ಮಂತ್ರದಲ್ಲಿ ಹೇಳಿರುವಂತೆ ಪೂರ್ಣ ಪರಮಾತ್ಮನು ಮೂರು (ಅಗಮಲೋಕ, ಅಲಖ್ ಲೋಕ, ಸತ್ಯಲೋಕ) ಲೋಕಗಳ ಉತ್ಪತ್ತಿಯ ನಂತರ ಕಾಲ ಬ್ರಹ್ಮನನ್ನು ಉತ್ಪತ್ತಿ ಮಾಡಿದರು. ಇದಕ್ಕೆ ಪ್ರಮಾಣ ಗೀತೆಯ 3ನೇ ಅಧ್ಯಾಯದ 15ನೇ ಶ್ಲೋಕದಲ್ಲಿ ವಿವರಣೆ ಇದೆ. ಇದೆ ಪ್ರಮಾಣ ಅಥರ್ವವೇದದ 4ನೇ ಕಾಂಡದ, 1ನೇ ಅನುವಾಕ, ಸೂಕ್ತಿ 3ರಲ್ಲಿನ ಮಂತ್ರದಲ್ಲಿದೆ. ಪೂರ್ಣ ಬ್ರಹ್ಮನಿಂದ ಭೂಮಿಯ ಮೊದಲಾದ ಚಿಕ್ಕ–ದೊಡ್ಡ ಲೋಕಗಳ ಸೃಷ್ಟಿಯಾಯಿತು. ಪೂರ್ಣಬ್ರಹ್ಮನು ಎಲ್ಲಾ ಬ್ರಹ್ಮಾಂಡಗಳ ನಾಯಕ (ಪ್ರಭು) ರಾಗಿದ್ದಾರೆ.**

**ಋಗ್ವೇದದ 10ನೇ ಮಂಡಲದ 90ನೇ ಸೂಕ್ತಿಯ 15ನೇ ಮಂತ್ರ:–**

ಸಪ್ತಾಸ್ಯಾಸಪ್ನರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನಂಪರುಷಂ ಪಶುಮ್ ॥ 15 ॥

ಸಪ್ತ–ಅಸ್ಯ–ಆಸನ–ಪರಿಧಯಃ–ತ್ರಿಸಪ್ತ–ಸಮಿಧಃ–ಕೃತಾಃ–ದೇವಾ–ಯತ್–ಯಜ್ಞಮ್–ತನ್ವಾನಾಃ–ಅಬಘ್ನನ್–ಪುರುಷಮ್ –ಪಶುಮ್ ।

**ಅನುವಾದ:–** (ಸಪ್ತ) 7 ಸಂಖ ಬ್ರಹಾಂಡವು ಪರಬ್ರಹ್ಮನ ಹಾಗೂ (ತ್ರಿಸಪ್ತ್) ಕಾಲಬ್ರಹ್ಮನ 21 ಬ್ರಹ್ಮಾಂಡಗಳ (ಸಮಿಧಃ) ಕರ್ಮದಂಡದ ದುಃಖ ರೂಪದ ಬೆಂಕಿಯಿಂದ (ಕೃತಾಃ) ಮಾಡಿರುವ (ಪರಿಧಃ) ಗೋಲಾಕಾರದ ಸೀಮೆಯಲ್ಲಿ (ಆಸನ್) ಸ್ಥಿರವಾಗಿದೆ (ಯತ್ ಪುರುಷಮ್) ಯಾರು ಪೂರ್ಣಪರಮಾತ್ಮನ (ಯಜ್ಞಮ್) ಶಾಸ್ತ್ರಬದ್ಧವಾಗಿ ಧಾರ್ಮಿಕ ಕರ್ಮ ಅಂದರೆ ಪೂಜೆ ಮಾಡುತ್ತಾರೋ (ಪಶುಮ್) ಬಲಿಯ ಪಶುರೂಪದ ಕಾಲನಜಾಲ (ಸೆರೆ) ದಲ್ಲಿ ಕರ್ಮ ಬಂಧನದಲ್ಲಿ ಬಂಧಿಸಿದ (ದೇವಾ) ಭಕ್ತಾತ್ಮಗಳನ್ನು (ತನ್ವಾನಾಃ) ಕಾಲನ ಮೂಲಕ ಹರಡಿಸಿದ ಪಾಪ ರೂಪದ ಕರ್ಮ ಬಂಧನದ ಜಾಲದಿಂದ (ಅಬಧ್ನನ್) ಮುಕ್ತಗೊಳಿಸುತ್ತಾನೆ. ಅಂದರೆ ಬಂಧನದಿಂದ ಮುಕ್ತ ಮಾಡುವ ಬಂದಿ ಛೋಡ್ ಇದ್ದಾರೆ ಈ ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರ.

**ಭಾವಾರ್ಥ:– 7 ಶಂಖ ಬ್ರಹ್ಮಾಂಡ ಹಾಗೂ 21 ಬ್ರಹ್ಮಾಂಡಗಳು ಕ್ರಮವಾಗಿ ಪರಬ್ರಹ್ಮ ಹಾಗೂ ಕಾಲ ಬ್ರಹ್ಮನ ಬ್ರಹ್ಮಾಂಡಗಳಾಗಿವೆ. ಇವು ಪಾಪ ಕರ್ಮದ ಬೆಂಕಿಯಿಂದ ಉರಿಯುತ್ತಿವೆ. ಪಾಪ ಕರ್ಮದ ಗೋಲಾಕಾರದ ಪರಿಧಿಯಲ್ಲಿವೆ. ಈ ಬ್ರಹ್ಮಾಂಡಗಳಲ್ಲಿ ಸಿಲುಕಿರುವ ಜೀವಿಗಳಿಗೆ, ಶಾಸ್ತ್ರ ವಿಧಿತವಾದ ಧರ್ಮ ಪೂಜಾ ವಿಧಾನಗಳನ್ನು ತಿಳಿಸಿ, ಅವುಗಳನ್ನು ಕರ್ಮ ಬಂಧನದಿಂದ ಬಿಡಿಸುವ ಕೆಲಸವನ್ನು ಪೂರ್ಣ ಬ್ರಹ್ಮ ಕಬೀರರು ಮಾಡುತ್ತಾರೆ ಆದ್ದರಿಂದ ಅವರೇ (ಬಂದೀಛೋಡ್) ಬಂಧನದಿಂದ ಮುಕ್ತಗೊಳಿಸುವ ಮುಕ್ತಿದಾತರು. ಜೀವಿಗಳನ್ನು (ಬಂಧಿತ ಆತ್ಮಗಳು) ತಪ್ತಶಿಲೆಯ ಶಿಕ್ಷೆಯಿಂದ ಬಿಡಿಸುತ್ತಾರೆ. ಕಾಲನ ಮೂಲಕ ಹರಡಿಸಿದ ಪಾಪ ರೂಪದ ಕರ್ಮ ಬಂಧನದ ಜಾಲದಿಂದ ಬಂಧನ ಮುಕ್ತಗೊಳಿಸುತ್ತಾರೆ. ಇದಕ್ಕೆ ಪ್ರಮಾಣ ಯಜುರ್ವೇದದ 5ನೇ ಅಧ್ಯಾಯದ 32ನೇ ಮಂತ್ರದಲ್ಲಿದೆ :– ಕವಿರಂಘಾರಿಸಿ (ಕವಿರ್) ಕಬೀರ್ ಪರಮೇಶ್ವರ (ಅಂಘ) ಪಾಪಗಳ (ಅರಿ) ಶತ್ರು (ಅಸಿ) ಇದ್ದಾರೆ ಅಂದರೆ ಪಾಪವಿನಾಶಕವಾಗಿದ್ದಾರೆ. ಬಂಭಾರಿಸಿ (ಬಂಭಾರಿ) ಅಂದರೆ ಬಂಧನಗಳ ಶತ್ರು ಬಂದಿಛೋಡ್ ಕಬೀರ್ ಪರಮೇಶ್ವರರಾಗಿದ್ದಾರೆ.**

**<u>ಋಗ್ವೇದದ 10ನೇ ಮಂಡಲದ 90ನೇ ಸೂಕ್ತಿಯ 16ನೇ ಮಂತ್ರ.</u>**

ಯಜ್ಞೇನ ಯಜ್ಞಮಯಜನ್ತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚನ್ತ ಯತ್ರ ಪೂರ್ವೇ ಸಾಧ್ಯಾಃ– ಸಂತಿ ದೇವಾಃ ॥ 16 ॥

ಯಜ್ಞೇನ–ಯಜ್ಞಮ–ಅ–ಯಜನ್ತ–ದೇವಾಃ–ತಾನಿ–ಧರ್ಮಾಣಿ–ಪ್ರಥಮಾನಿ–ಆಸನ್–ತೇ ಹ–ನಾಕಂ–ಮಹಿಮಾನಃ–ಸಚನ್ತ–ಯತ್ರ–ಪೂರ್ವೇ–ಸಾಧ್ಯಾಃ– ಸಂತಿ–ದೇವಾಃ.

**ಅನುವಾದ:–** ಯಾವ (ದೇವಾಃ) ನಿರ್ವಿಕಾರ ದೇವ ಸ್ವರೂಪದ ಭಕ್ತಾತ್ಮಗಳು (ಆಯಜ್ಞಮ್) ಅಪೂರ್ಣ ತಪ್ಪು ಧಾರ್ಮಿಕ ವಿಧಿತ ಪೂಜೆಯ ಬದಲಾಗಿ (ಯಜ್ಞೇನ) ಸತ್ಯ ಭಕ್ತಿಯನ್ನು ಧಾರ್ಮಿಕ ಕರ್ಮದ ಆಧಾರದಿಂದ (ಅಯಜಂತ) ಪೂಜೆ ಮಾಡುತ್ತಾರೆ (ತಾನಿ) ಅವರು (ಧರ್ಮಾಣಿ) ಧಾರ್ಮಿಕ ಶಕ್ತಿ ಸಂಪನ್ನ (ಪ್ರಥಮಾನಿ) ಮುಖ್ಯ ಅರ್ಥಾತ್ ಉತ್ತಮ (ಆಸನ್) ವಾಗಿದ್ದಾರೆ. (ತೇ ಹ) ಅವುಗಳೇ ವಾಸ್ತವದಲ್ಲಿ (ಮಹಿಮಾನಶಿ) ಮಹಾನ್ ಭಕ್ತಿ–ಶಕ್ತಿ–ಯುಕ್ತವಾಗಿದೆ (ಸಾಧ್ಯಾಃ) ಸಫಲ ಭಕ್ತಜನರು (ನಾಕಮ್) ಪೂರ್ಣ ಸುಖದಾಯಕ ಪರಮೇಶ್ವರನನ್ನು (ಸಚಂತ್) ಸದ್ಭಕ್ತಿಯ ಸಂಪಾದನೆಯಿಂದ ಪಡೆಯುತ್ತಾರೆ ಹಾಗೂ ಅವನಲ್ಲಿಗೆ ಹೋಗುತ್ತಾರೆ. (ಯತ್ರ) ಎಲ್ಲಿ (ಪೂರ್ವೇ) ಮೊದಲನೇ ಸೃಷ್ಟಿಯ (ದೇವಾಃ) ಪಾಪ ರಹಿತ ಭಕ್ತ ಆತ್ಮಗಳಿವೆಯೋ ಅಲ್ಲಿ (ಸಂತಿ) ಇರುತ್ತಾರೆ.

ಭಾವಾರ್ಥ:– ಯಾರೂ ನಿರ್ವಿಕಾರ ದೇವಸ್ವರೂಪ ಭಕ್ತಾತ್ಮರೋ, (ಮದ್ಯ–ತಂಬಾಕು, ಮಾಂಸ ಇತ್ಯಾದಿ ದುಶ್ಚಟಗಳಿಲ್ಲದ) ಅವರು ಶಾಸ್ತ್ರ ವಿರುದ್ಧ ಪೂಜೆಯನ್ನು ಬಿಟ್ಟು ಶಾಸ್ತ್ರಾನುಕೂಲ ಸಾಧನೆ ಮಾಡುತ್ತಾರೆ. ಅವರು ಭಕ್ತಿಯ ದುಡಿಮೆಯಿಂದ ಧನಿಕರಾಗುತ್ತಾರೆ. ಕಾಲನ ಋಣದಿಂದ ಮುಕ್ತರಾಗಿ (ಹುಟ್ಟು–ಸಾವು ಕರ್ಮಬಂಧನಗಳಿಂದ ಬಿಡುಗಡೆ) ತಮ್ಮ ಭಕ್ತಿಧನ ಸಂಪನ್ನತೆಯಿಂದ ಎಲ್ಲಿ ಪಾಪರಹಿತ ಹಂಸಾತ್ಮಗಳು ಇವೆಯೋ, ಅಲ್ಲಿಗೆ ಹೋಗಿ ಪೂರ್ಣ ಸುಖದಾಯಕ ಪರಮಾತ್ಮನಲ್ಲಿ ಸೇರುತ್ತಾರೆ ಅಂದರೆ ಸತ್ಯಲೋಕಕ್ಕೆ ಸೇರುತ್ತಾರೆ.

ಕೆಲವು ಆತ್ಮಗಳು ಕಾಲನ ಜಾಲದಲ್ಲಿ ಸಿಕ್ಕಿಕೊಂಡು ಹಾಗೂ ಕೆಲವು ಪರಬ್ರಹ್ಮನ ಜೊತೆ 7 ಸಂಖ ಬ್ರಹ್ಮಾಂಡಗಳಲ್ಲಿ ಬಂದವು. ಇನ್ನು ಹಲವು ಆತ್ಮಗಳು ಯಾರಿಗೆ ಪೂರ್ಣಪರಮಾತ್ಮನಲ್ಲಿ ಪೂರ್ಣ ವಿಶ್ವಾಸ ಸ್ಥಿರವಾಗಿತ್ತೊ ಅವು ಸತ್ಯಲೋಕದಲ್ಲೆ ಉಳಿದವು. ಇದಕ್ಕಾಗಿ ಇದೇ ವರ್ಣನೆಯನ್ನು ಪವಿತ್ರವೇದಗಳಲ್ಲೂ ಮಾಡಲಾಗಿದೆ. ಇದಕ್ಕೆ ಪ್ರಮಾಣ ಗೀತೆಯ 8ನೇ ಅಧ್ಯಾಯದ 8 ರಿಂದ 10ನೇ ಶ್ಲೋಕಗಳಲ್ಲಿದೆ "ಯಾವ ಭಕ್ತನು ಪೂರ್ಣ ಪರಮಾತ್ಮನ ಸಾಧನೆಯನ್ನು ಶಾಸ್ತ್ರವಿಧಿಯಂತೆ ಮಾಡುತ್ತಾನೋ, ಅವನು ತನ್ನ ಭಕ್ತಿ ಬಲದಿಂದ ಪೂರ್ಣ ಪರಮಾತ್ಮನಲ್ಲಿಗೆ ಹೋಗುತ್ತಾನೆ. ಇದರಿಂದ ದೃಢವಾದ ವಿಚಾರವೆನೆಂದರೆ ಮೂವರು ಪ್ರಭುಗಳಿದ್ದಾರೆ. ಕಾಲ ಬ್ರಹ್ಮ–ಪರಬ್ರಹ್ಮ–ಪೂರ್ಣಬ್ರಹ್ಮ ಇವರನ್ನೇ

1. ಬಹ್ಮ / ಈಶ್/ ಕ್ಷರಪುರುಷ/ ಕ್ಷರಬ್ರಹ್ಮ / ಕಾಲ

2. ಪರಬ್ರಹ್ಮ / ಅಕ್ಷರಪುರುಷ/ ಅಕ್ಷರಬ್ರಹ್ಮ / ಈಶ್ವರ ಹಾಗೂ.

3. ಪೂರ್ಣಬ್ರಹ್ಮ / ಕವಿರ್ದೇವ/ ಕಬೀರ್/ ಪರಮ ಅಕ್ಷರ ಬ್ರಹ್ಮ / ಪರಮೇಶ್ವರ–ಸತ್ಯಪುರುಷ ಮುಂತಾದ ಪರ್ಯಾಯವಾಚಿ ಶಬ್ದಗಳಿಂದ ತಿಳಿಯಲಾಗುತ್ತದೆ.

ಇದೇ ಪ್ರಮಾಣ ಋಗ್ವೇದ 91ನೇ ಮಂಡಲದ, 96ನೇ ಸೂಕ್ತಿಯ 17ರಿಂದ 20ನೇಯ ಮಂತ್ರಗಳಲ್ಲಿ ಸ್ಪಷ್ಟವಾಗಿದೆ. ಏನೆಂದರೆ, ಪೂರ್ಣ ಪರಮಾತ್ಮಾ ಕವಿರ್ದೇವ ಶಿಶು ರೂಪ ಧಾರಣೆ ಮಾಡಿ ಪ್ರಕಟವಾಗುತ್ತಾರೆ. ಹಾಗೂ ತಮ್ಮ ನಿರ್ಮಲ ತತ್ವಜ್ಞಾನದ (ಕವಿರ್ಗೀರ್ಭಿಃ) ಕಬೀರ್ ವಾಣಿಯ ಮೂಲಕ ತಮ್ಮ ಅನುಯಾಯಿಗಳಿಗೆ ತಿಳಿಸುತ್ತಾ ವರ್ಣನೆ ಮಾಡುತ್ತಾರೆ. ಆ ಕವಿರ್ದೇವರು ಕಾಲ ಬ್ರಹ್ಮನ ಧಾಮ ಹಾಗೂ ಪರಬ್ರಹ್ಮರ ಧಾಮಕ್ಕಿಂತ ಭಿನ್ನವಾದ ಧಾಮ ಹಾಗೂ ಪೂರ್ಣಬ್ರಹ್ಮರ ಮೂರನೆಯ ಋತಧಾಮ ಅಂದರೆ ಸತ್ಯಲೋಕದಲ್ಲಿ ಮನುಷ್ಯನ ಆಕಾರ ದಲ್ಲಿ ಇದ್ದಾರೆ ಹಾಗೂ ಸತ್ಯಲೋಕದಿಂದ ನಾಲ್ಕನೆಯದು ಅನಾಮಿ ಲೋಕವಿದೆ. ಅದರಲ್ಲೂ ಇದೇ ಕವಿರ್ದೇವರು ಅನಾಮಿ ಪುರುಷ ರೂಪದಲ್ಲಿ, ಮನುಷ್ಯ ಸದೃಶ್ಯ ಆಕಾರದಲ್ಲಿ ವಿರಾಜಮಾನರಾಗಿದ್ದಾರೆ.

## "ಪವಿತ್ರ ಶ್ರೀಮದ್ ದೇವಿಮಹಾಪುರಾಣದಲ್ಲಿ ಸೃಷ್ಠಿ ರಚನೆಯ "ಪ್ರಮಾಣ"

(ದುರ್ಗಾ ಮತ್ತು ಬ್ರಹ್ಮರ ಸಂಯೋಗದಿಂದ ಬ್ರಹ್ಮಾ–ವಿಷ್ಣು–ಶಿವರ ಜನ್ಮ)

ಇದರ ಪ್ರಮಾಣವು "ಶ್ರೀಮದ್ದೇವಿಮಹಾಪುರಾಣದ ಮೂರನೇ ಸ್ಕಂದ ಅಧ್ಯಾಯ 1–3 ಪುಟ ಸಂಖ್ಯೆ 97–102ರ (ಹಿಂದಿಯಲ್ಲಿ ಪುಟ ಸಂಖ್ಯೆ 114–118) ವರೆಗೆ ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತ, ಇದರ ಸಂಪಾದಕರು ಹನುಮಾನ್ ಪ್ರಸಾದ್ ಪೋದ್ದಾರ್, ಅನುವಾದಕರು ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್) ರ ವರೆಗಿನ ವಿವರಣೆ :– ಬಹಳಷ್ಟು ಆಚಾರ್ಯರು ಭವಾನಿಯನ್ನು ಮನೋರಥವನ್ನು ಪರಿಪೂರ್ಣವಾಗಿ ನೆರವೇರಿಸುವಳೆಂದು ತಿಳಿಸಿದ್ದಾರೆ. ಅವಳನ್ನು ಪ್ರಕೃತಿ ಎಂದು ಕರೆಯಲಾಗಿದೆ. ಬ್ರಹ್ಮನೊಂದಿಗೆ ಅಭೇದ ಸಂಬಂಧ ಇರುವ ಕಾರಣ ಪತ್ನಿ ಅರ್ಧಾಂಗಿ ಎಂದೂ ಕರೆಯುತ್ತಾರೆ. ಒಂದು ಬ್ರಹ್ಮಾಂಡದ ಸೃಷ್ಠಿಯ ರಚನೆ ಬಗ್ಗೆ

ರಾಜ ಪರೀಕ್ಷಿತನು ಮಹರ್ಷಿ ವ್ಯಾಸರನ್ನು ಪ್ರಶ್ನಿಸಿದಾಗ ಮಹರ್ಷಿ ವ್ಯಾಸರು ತಿಳಿಸಿದರು, ನಾನು ನಾರದರನ್ನು ಕೇಳಿದೆ "ಹೇ ದೇವರ್ಷೆ! ಈ ಬ್ರಹ್ಮಾಂಡದ ರಚನೆ ಹೇಗೆ ಆಗಿದೆ? ನನ್ನ ಈ ಪ್ರಶ್ನೆಯ ಉತ್ತರವಾಗಿ ನಾರದರು ಹೇಳಿದ್ದೇನೆಂದರೆ, ನಾನು ನನ್ನ ತಂದೆ ಶ್ರೀ ಬ್ರಹ್ಮಾ ರವರಿಗೆ ಕೇಳಿದೆ "ಹೇ ತಂದೆ ಈ ಬ್ರಹ್ಮಾಂಡದ ರಚನೆ ನೀವು ಮಾಡಿದ್ದಿರೊ? ವಿಷ್ಣುವೋ? ಅಥವಾ ಶಿವನೋ? ದಯೆಮಾಡಿ ಸತ್ಯವನ್ನು ತಿಳಿಸಿ?". ಆಗ ಬ್ರಹ್ಮಾ ರವರು ನಾರದರಿಗೆ ಹೇಳಿದರು ಮಗನೇ, ನಾನು ಒಂದು ಕಮಲದ ಮೇಲೆ ಇದ್ದೆ. ನಾನು ಹೇಗೆ ಆ ಜಲರಾಶಿಯ ಮೇಲೆ ಬಂದೆ? ಎಂಬ ಜ್ಞಾನವಿಲ್ಲ. ಒಂದು ಸಾವಿರ ವರ್ಷಗಳ ವರೆಗೆ ಭೂಮಿಯ ಅನ್ವೇಷಣೆ ಮಾಡಲು ಹೊರಟೆ. ಎಲ್ಲಿ ನೋಡಿದರೂ ನೀರೇ, ನೀರು. ಎಲ್ಲಿಯೂ ನೆಲ ಕಾಣಲಿಲ್ಲ. ಆಗೊಂದು ಆಕಾಶವಾಣಿಯಾಯಿತು. "ತಪಸ್ಸು ಮಾಡು" ಎಂದು ಒಂದು ಸಾವಿರ ವರ್ಷಗಳ ಕಾಲ ತಪಸ್ಸು ಮಾಡಿದೆ. ನಂತರ "ಸೃಷ್ಠಿ ಮಾಡು" ಎಂದು ಆಕಾಶವಾಣಿಯಾಯಿತು. ಅಷ್ಟರಲ್ಲಿ 'ಮಧು ಮತ್ತು ಕೈಟಭ' ಎಂಬ ಇಬ್ಬರು ರಾಕ್ಷಸರು ಬಂದರು. ಅವರ ಭಯದಿಂದ ಕಮಲದ ದಂಟನ್ನು ಹಿಡಿದು ಕೆಳಕ್ಕೆ ಇಳಿದೆ. ಅಲ್ಲಿ ವಿಷ್ಣು ಶೇಷ ಶಯ್ಯೆಯಲ್ಲಿ ಅಚೇತನಾಗಿದ್ದ, ಅವರ ಒಳಗಿಂದ ಒಂದು ಸ್ತ್ರೀ, ಪ್ರೇತದ ಹಾಗೆ ಪ್ರವಿಷ್ಟ ದುರ್ಗೆ ಹೊರಬಂದಳು. ಅವಳು ಆಕಾಶದಲ್ಲಿ ಅಭೂಷಣಗಳನ್ನು ಧರಿಸಿಕೊಂಡು ಇರುವಂತೆ ಕಾಣಿಸಿದಳು. ವಿಷ್ಣುವಿಗೆ ಪ್ರಜ್ಞೆ ಬಂತು. ಆಗ ಅಲ್ಲಿ ಇಬ್ಬರೇ ಇದ್ದೆವು. (ನಾನು ಮತ್ತು ವಿಷ್ಣು) ಅಷ್ಟರಲ್ಲಿ ಅಲ್ಲಿಗೆ ಶಂಕರನೂ ಬಂದನು. ದೇವಿಯು (ದುರ್ಗಾ) ನಮ್ಮನ್ನು ವಿಮಾನದಲ್ಲಿ ಕೂರಿಸಿಕೊಂಡು ಬ್ರಹ್ಮ ಲೋಕಕ್ಕೆ ಕರದುಕೊಂಡು ಹೋದಳು. ಅಲ್ಲಿ ಮತ್ತೊಬ್ಬ ಬ್ರಹ್ಮಾ, ವಿಷ್ಣು, ಶಿವ ಹಾಗೂ ಇನ್ನೊಬ್ಬಳು ದೇವಿಯನ್ನೂ ಕಂಡೆವು. ಅವರನ್ನು ಕಂಡ ವಿಷ್ಣುವು ವಿವೇಕಪೂರ್ಣವಾಗಿ ಈ ಕೆಳಗಿನ ವರ್ಣನೆಯನ್ನು ಮಾಡಿದ. (ಕಾಲ ಬ್ರಹ್ಮನು ಭಗವಾನ್ ವಿಷ್ಣುವಿಗೆ ಚೇತನ ಪ್ರಧಾನ ಮಾಡಿದ ಆಗ ಬಾಲ್ಯಕಾಲದ ನೆನಪು ಬಂದಿತು. ಆಗ ಆ ಬಾಲ್ಯದ ಕಥೆಯನ್ನು ಹೇಳಿದ).

ಪುಟ ಸಂಖ್ಯೆ 103 (ಹಿಂದಿಯಲ್ಲಿ ಪುಟ ಸಂಖ್ಯೆ 118–120)ರಲ್ಲಿ ಶೀ ವಿಷ್ಣುವು, ಶ್ರೀ ಬ್ರಹ್ಮಾ ಹಾಗೂ ಶ್ರೀ ಶಿವನಿಗೆ ಹೇಳಿದ "ಈ ಜಗನ್ಮಾತೆ ಪ್ರಕೃತಿದೇವಿ, ನಮ್ಮ ಮೂವರ ತಾಯಿ. ನಾನು ಚಿಕ್ಕ ಬಾಲಕನಿದ್ದಾಗ ಈ ದೇವಿಯನ್ನು ನೋಡಿದ್ದೆ. ಇವಳು ನನ್ನನ್ನು ತೊಟ್ಟಿಲಲ್ಲಿ ಹಾಕಿ ಆಡಿಸುತ್ತಿದ್ದಳು.

ಮೂರನೇ ಸ್ಕಂದ ದೇವಿಪುರಾಣ ಪುಟ ಸಂಖ್ಯೆ 105 (ಹಿಂದಿಯಲ್ಲಿ ಪುಟ ಸಂಖ್ಯೆ 123) ರಲ್ಲಿ ಶ್ರೀ ವಿಷ್ಣವು ದೇವಿಯನ್ನು ಸ್ತುತಿ ಮಾಡಿದ– ದೇವಿ ನೀನು ಈ ಜಗದ ಜನನಿ. ನಿನ್ನಿಂದಲೇ ಈ ಜಗತ್ತು ಸೃಷ್ಠಿಯಾಗಿದೆ. ನಾವು ಮೂವರೂ ನಿನ್ನಿಂದಲೇ ಉತ್ಪನ್ನರಾಗಿದ್ದೇವೆ. ನಮಗೆ ಅವಿರ್ಭಾವ ಅಂದರೆ ಹುಟ್ಟು ತಿರೋಭಾವ ಅಂದರೆ ಸಾವು ಆಗುತ್ತಿರುತ್ತದೆ. ಕೇವಲ ಶಾಶ್ವತಳು, ಸತ್ಯಳು, ನಿತ್ಯಳು ನೀನೆ ಜಗತ್ ಜನನಿ ಪ್ರಕೃತಿದೇವಿಯಾಗಿರುವೆ.

ಭಗವಾನ್ ಶಂಕರ ಹೇಳಿದನು. "ದೇವಿ ಭಗವಾನ್ ವಿಷ್ಣು ಹಾಗೂ ಬ್ರಹ್ಮಾ ನಿಮ್ಮ ಬಾಲಕರು ಎಂದ ಮೇಲೆ ನಾನು ತಮೋಗುಣಿ ಲೀಲೆ ಮಾಡುವನು ನಿನ್ನ ಸಂತಾನವಲ್ಲವೇ? ಅಂದರೆ ನನ್ನನ್ನು ಉತ್ಪತ್ತಿ ಮಾಡಿದವಳು ನೀನೆ ಅಲ್ಲವೆ?"

ವಿಚಾರ ಮಾಡಬೇಕಾದ ಅಂಶ– ಮೇಲಿನ ವಿವರಣೆಗಳಿಂದ ಅರ್ಥವಾದ ಅಂಶವೇನೆಂದರೆ ಬ್ರಹ್ಮಾ, ವಿಷ್ಣು, ಶಿವ ನಾಶವಾಗುವವರು. ಮೃತ್ಯುಂಜಯರಲ್ಲ, ಸರ್ವೇಶ್ವರರೂ ಅಲ್ಲ. ದುರ್ಗೆಯ ಮಕ್ಕಳು. ಕಾಲ ಬ್ರಹ್ಮ–ಸದಾಶಿವ ಇವರ ತಂದೆ.

ಶ್ರೀಮದ್ ದೇವಿಪುರಾಣದ 3ನೇ ಸ್ಕಂದದ ಪುಟ ಸಂಖ್ಯೆ 107 (ಹಿಂದಿಯಲ್ಲಿ ಪುಟ ಸಂಖ್ಯೆ 125) ರಲ್ಲಿ

ಬ್ರಹ್ಮಾ ಕೇಳಿದ:– ವೇದಗಳಲ್ಲಿ ಹೇಳಿರುವ 'ಬ್ರಹ್ಮ' ತಾವೇಯೋ? ಅಥವಾ ಬೇರೆ ಯಾರಾದರೂ ಪ್ರಭು, ಆಗಿರುವರೂ.?

ದುರ್ಗಾ ಹೇಳಿದಳು:– ನಾನು ಮತ್ತು ಬ್ರಹ್ಮ ಇಬ್ಬರೂ ಒಬ್ಬರೇ ಅನ್ಯರಲ್ಲ. ಮತ್ತೆ ಇದೇ ಸ್ಕಂದದ 6ನೇಯ ಅಧ್ಯಾಯ ಪುಟ ಸಂಖ್ಯೆ 111 (ಹಿಂದಿಯಲ್ಲಿ ಪುಟ ಸಂಖ್ಯೆ 129) ರಲ್ಲಿ.

ದೇವಿ ಹೇಳಿದಳು:– ಈಗ ನನ್ನ ಕಾರ್ಯ ಸಿದ್ಧಿಗಾಗಿ, ವಿಮಾನದಲ್ಲಿ ಕುಳಿತು ಶೀಘ್ರವಾಗಿ ಹೊರಡಿರಿ ಏನಾದರೂ ಕಠಿಣತೆ ಎದುರಾದರೆ ನನ್ನನ್ನು ಸ್ಮರಿಸಿರಿ, ಆಗ ನಾನು ನಿಮ್ಮ ಮುಂದೆ ಬರುವೆ. ದೇವತೆಗಳೇ, ನೀವು ನನ್ನ ಮತ್ತು ಬ್ರಹ್ಮನ ನೆನಪನ್ನು ಸದಾ ಮಾಡಿಕೊಳ್ಳಿ. ನಮ್ಮಿಬ್ಬರ ನೆನೆಸಿಕೊಂಡರೆ, ನಿಮ್ಮ ಕಾರ್ಯಗಳು ಸ್ವಲ್ಪವೂ ಸಂದೇಹ ಇಲ್ಲದೇ ಸಿದ್ಧವಾಗುತ್ತವೆ.

ಮೇಲಿನ ಹೇಳಿಕೆಗಳಿಂದ (ವ್ಯಾಖ್ಯೆ) ದುರ್ಗಾ ಮತ್ತು ಕಾಲ ಬ್ರಹ್ಮನೇ ಮೂರೂ ದೇವರುಗಳ (ಬ್ರಹ್ಮಾ, ವಿಷ್ಣು, ಶಿವ) ತಾಯಿ–ತಂದೆಯರೆಂದು ದೃಢವಾಯಿತು. ಬ್ರಹ್ಮಾ, ವಿಷ್ಣು, ಶಿವ ನಾಶವಾನರಾಗಿದ್ದಾರೆ. ಪೂರ್ಣ ಶಕ್ತಿಯುತರಲ್ಲ.

ಮೂರೂ ದೇವರುಗಳ ಮದುವೆಯನ್ನು ದುರ್ಗಾ ಮಾಡಿಸಿದಳು. ಪ್ರಮಾಣಕ್ಕಾಗಿ 3ನೇ ಸ್ಕಂದದ ಪುಟ ಸಂಖ್ಯೆ 109–110 (ಹಿಂದಿಯಲ್ಲಿ ಪುಟ ಸಂಖ್ಯೆ 128–129) ನೋಡಿರಿ.

<u>ಗೀತೆಯ 7ನೇ ಅಧ್ಯಾಯದ 12ನೇ ಶ್ಲೋಕ.</u>

ಯೆ, ಚ, ಏವ, ಸಾತ್ವಿಕಾಃ, ಭಾವಾಃ, ರಾಜಸಾಃ, ತಾಮಸಾಃ, ಚ, ಯೆ, ।
ಮತಃ, ಏವ, ಇತಿ, ತಾನ, ವಿದ್ಧಿ, ನ, ತು, ಅಹಮ್, ತೇಷು, ತೆ, ಮು ॥

**ಅನುವಾದ:–** (ಚ) ಮತ್ತು (ಏವ) ಸಹ (ಯೆ) ಯಾವ (ಸಾತ್ವಿಕಾಃ) ಸತೋಗುಣ ವಿಷ್ಣುವಿನಿಂದ ಸ್ಥಿತಿ (ಭಾವಾಃ) ಭಾವವಾಗಿದೆ ಮತ್ತು (ಯೆ) ಯಾವ (ರಾಜಸಾಃ) ರಜೋಗುಣ ಬ್ರಹ್ಮಾನಿಂದ ಉತ್ಪತ್ತಿ (ಚ) ಹಾಗೂ (ತಾಮಸಾಃ) ತಮೋಗುಣ ಶಿವನಿಂದ ಸಂಹಾರವಾಗುತ್ತದೆ (ತಾನ್) ಅದನ್ನೆಲ್ಲಾ ನೀನು (ಮತಃ ಏವ), ನನ್ನ ಮೂಲಕ ಸುನಿಯೋಜಿತವಾಗಿ ನಿಯಮಾನುಸಾರವಾಗಿಯೇ ಆಗಲಿದೆ ಎಂದು (ಇತಿ) ಹೀಗೆ (ವಿಧಿ) ತಿಳಿ (ತು) ಆದರೆ ವಾಸ್ತವದಲ್ಲಿ (ತೇಷು) ಅವರಲ್ಲಿ (ಅಹಮ್) ನಾನು ಮತ್ತು (ತೆ) ಅವರು (ಮಯಿ) ನನಲ್ಲಿ (ನ) ಇಲ್ಲ.

## "ಪವಿತ್ರ ಶಿವ ಮಹಾಪುರಾಣದಲ್ಲಿ ಸೃಷ್ಠಿ ರಚನೆಯ ಪ್ರಮಾಣ"

**(ಕಾಲ ಬ್ರಹ್ಮ ಹಾಗೂ ದುರ್ಗಾನಿಂದ ಬ್ರಹ್ಮಾ, ವಿಷ್ಣು ಹಾಗೂ ಶಿವನ ಉತ್ಪತ್ತಿ)**

ಇದರ ಪ್ರಮಾಣವು ಪವಿತ್ರ "ಶ್ರೀ ಶಿವಪುರಾಣ" ಗೀತಾಪ್ರೆಸ್ ಗೋರಖಪುರ ದಿಂದ ಪ್ರಕಾಶಿತ, ಹಿಂದಿ ಸಂಪಾದಕರು ಶ್ರೀಹನುಮಾನ್ ಪ್ರಸಾದ್ ಪೋದ್ದಾರ್, ಕನ್ನಡ ಅನುವಾದಕರು ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್, ಇದರ 6ನೇ ಅಧ್ಯಾಯದ ಪ್ರಥಮ ಸೃಷ್ಠಿ ಖಂಡ 'ರುದ್ರ ಸಂಹಿತೆ'ಯ ಪುಟ 81 (ಹಿಂದಿಯಲ್ಲಿ ಪುಟ ಸಂಖ್ಯೆ 100) ರಲ್ಲಿ ಹೇಳಿದೆ, ಯಾರು ಮೂರ್ತಿ ರಹಿತವಾದ ಪರಬ್ರಹ್ಮರೋ, ಅವರ ಮೂರ್ತಿಯೇ ಸದಾಶಿವ. ಇವರ ಶರೀರದಿಂದ ಒಂದು ಶಕ್ತಿ ಹೊರಹೊಮ್ಮಿತು. ಅದು ಶಕ್ತಿ ಅಂಬಿಕಾ, ಪ್ರಕೃತಿ (ದುರ್ಗಾ) ತ್ರಿದೇವ ಜನನಿ (ಬ್ರಹ್ಮಾ, ವಿಷ್ಣು, ಶಿವನ ಮಾತೆ) ಎಂದು ಹೇಳಲಾಗಿದೆ. ಅವಳಿಗೆ ಎಂಟು ಭುಜಗಳಿವೆ. ಯಾರು ಸದಾಶಿವನೊ, ಅವನನ್ನು ಶಂಭು, ಮಹೇಶ್ವರ ಎಂದೂ ಸಹ ಕರೆಯುತ್ತಾರೆ.

ರುದ್ರ ಸಂಹಿತೆಯ ಪುಟ ಸಂಖ್ಯೆ 82 (ಹಿಂದಿಯಲ್ಲಿ ಪುಟ ಸಂಖ್ಯೆ 101)ರಲ್ಲಿ: ಅವನು ಶರೀರಕ್ಕೆ ಭಸ್ಮಲೇಪನ ಮಾಡಿಕೊಂಡಿರುತ್ತಾನೆ. ಆ ಕಾಲ ರೂಪಿ ಬ್ರಹ್ಮನು 'ಶಿವಲೋಕ' ಎಂಬ ಒಂದು ಕ್ಷೇತ್ರದ ನಿರ್ಮಾಣ ಮಾಡಿದನು. ಪುನಃ ಇಬ್ಬರೂ ಪತಿ–ಪತ್ನಿಯ ವ್ಯವಹಾರ ಮಾಡಿದರು ಇದರಿಂದ (ದುರ್ಗಾ ಹಾಗೂ ಬ್ರಹ್ಮನ ಸಂಯೋಗದಿಂದ) ಒಬ್ಬ ಪುತ್ರ ಹುಟ್ಟಿದ, ಅವನ ಹೆಸರು ವಿಷ್ಣು ಇಡಲಾಯಿತು. ಪುಟ ಸಂಖ್ಯೆ 83 (ಹಿಂದಿಯಲ್ಲಿ ಪುಟ ಸಂಖ್ಯೆ 102) ರಲ್ಲಿ. ಪುನಃ ರುದ್ರ

ಸಂಹಿತೆಯ ಅಧ್ಯಾಯ 7ರ 84ನೇ ಪುಟದಲ್ಲಿ (ಹಿಂದಿಯಲ್ಲಿ ಪುಟ ಸಂಖ್ಯೆ 103) ಬ್ರಹ್ಮಾ ಹೇಳಿದ : "ನನ್ನ ಉತ್ಪತ್ತಿಯು ಕಾಲ ಬ್ರಹ್ಮ ಸದಾಶಿವ ಮತ್ತು ದುರ್ಗೆಯ ಸಂಯೋಗದಿಂದಲೇ ಆಗಿದೆ. ನನ್ನನ್ನು ನಂತರ ಎಚ್ಚರ ತಪ್ಪಿಸಿದರು."

ಪುನಃ ರುದ್ರಸಂಹಿತೆಯ ಅಧ್ಯಾಯ ಸಂಖ್ಯೆ 9 ಪುಟ ಸಂಖ್ಯೆ 90 (ಹಿಂದಿಯಲ್ಲಿ ಪುಟ ಸಂಖ್ಯೆ 110) ರಲ್ಲಿ ಬ್ರಹ್ಮಾ, ವಿಷ್ಣು, ಹಾಗೂ ರುದ್ರ ಈ ಮೂರು ದೇವರುಗಳಲ್ಲಿ ಗುಣ ಇದೆ. ಆದರೆ ಕಾಲ–ಬ್ರಹ್ಮನಿಗೆ ಗುಣಾತೀತ ಎಂದು ಹೇಳಲಾಗಿದೆ.

ಈ ವಿಚಾರಗಳಿಂದ ದೃಢವಾದ ಅಂಶಗಳು (1) ಸದಾಶಿವ (ಕಾಲಬ್ರಹ್ಮ) ಮತ್ತು ಪ್ರಕೃತಿ (ದುರ್ಗಾ) ಯಿಂದ ಬ್ರಹ್ಮಾ, ವಿಷ್ಣು, ಶಿವನ ಉತ್ಪತ್ತಿಯಾಯಿತು. ಈ ಮೂವರ ತಾಯಿ ದುರ್ಗಾ ಹಾಗೂ ತಂದೆ ಕಾಲ ಬ್ರಹ್ಮನಾಗಿದ್ದಾನೆ. (3) ಈ ಮೂವರ ಮೂರು ಗುಣಗಳಿಂದ (ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು, ತಮೋಗುಣ ಶಿವ) ಯುಕ್ತರಿದ್ದಾರೆ.

## "ಪವಿತ್ರ ಭಗವದ್ಗೀತೆಯಲ್ಲಿ ಸೃಷ್ಟಿ ರಚನೆಯ ಪ್ರಮಾಣ"

ಇದರ ಪ್ರಮಾಣವನ್ನು ಗೀತೆಯ 14ನೇ ಅಧ್ಯಾಯದ 3 ರಿಂದ 5ನೇ ಶ್ಲೋಕಗಳಲ್ಲಿ ನೋಡಬಹುದು. ಕಾಲ ಬ್ರಹ್ಮ ಹೇಳುತ್ತಾನೆ: ಪ್ರಕೃತಿ ನನ್ನ ಹೆಂಡತಿ. ನಾನು ಇವಳ ಪತಿ. ನಮ್ಮಿಬ್ಬರ ಸಂಯೋಗದಿಂದ, ಸಕಲ ಪ್ರಾಣಿಗಳು ಹಾಗೂ ಮೂರು ಗುಣಯುಕ್ತ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ ಇವರ) ಉತ್ಪತ್ತಿಯಾಯಿತು. ನಾನು ಎಲ್ಲ ಪ್ರಾಣಿಗಳಿಗೂ ತಂದೆ. ಪ್ರಕೃತಿ ತಾಯಿ, ನಾನು ಅವಳ ಗರ್ಭದಲ್ಲಿ ಬೀಜ ಸ್ಥಾಪನೆ ಮಾಡುತ್ತೇನೆ. ಅದರಿಂದ ಎಲ್ಲ ಪ್ರಾಣಿಗಳು ಉತ್ಪತ್ತಿಯಾಗುತ್ತವೆ. ಪ್ರಕೃತಿಯಿಂದ ಉತ್ಪನ್ನವಾದ ಮೂರೂ ಗುಣಗಳು ಜೀವಿಗಳನ್ನು ಶರೀರದಲ್ಲಿ ಕರ್ಮದ ಆಧಾರದಿಂದ ಕಟ್ಟಿಡುತ್ತಾರೆ.

**ಇದೇ ಪ್ರಮಾಣವು 15ನೇ ಅಧ್ಯಾಯದ 1 ರಿಂದ 4 ಹಾಗೂ 16–17ನೆಯ ಶ್ಲೋಕಗಳಲ್ಲಿದೆ.**

**ಭಗವದ್ಗೀತೆಯ 15ನೇ ಅಧ್ಯಾಯದ 1ನೇ ಶ್ಲೋಕ.**

ಊರ್ಧ್ವ ಮೂಲಮ್, ಅಧಃ, ಶಾಖಮ್, ಅಶ್ವತ್ಥಮ್, ಪ್ರಾಹುಃ, ಅವ್ಯಯಂ,
ಛಂದಾಂಸಿ, ಯಸ್ಯ, ಪರ್ಣಾನಿ, ಯಃ, ತಮ್, ವೇದ, ಸಃ, ವೇದವಿತ್ ॥

**ಅನುವಾದ:–** (ಊರ್ಧ್ವ ಮೂಲಮ್) ಮೇಲೆ ಪೂರ್ಣ ಪರಮಾತ್ಮ ರೂಪೀ ಬೇರು (ಅಧಃ ಶಾಖಮ್) ಕೆಳಗೆ ಮೂರೂ ಗುಣ (ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು ಹಾಗೂ ತಮೋಗುಣ ಶಿವ) ರೂಪಿನ ಕೊಂಬೆಗಳು (ಅವ್ಯಯಂ) ಅವಿನಾಶೀ (ಅಶ್ವತ್ಥಮ್) ವಿಸ್ತಾರವಾದ ಅರಳಿಮರವಿದೆ. (ಯಸ್ಯ) ಅದಕ್ಕೆ (ಛಂದಾಂಸಿ) ವೇದಗಳಲ್ಲಿನ ಛಂಧ (ಭಾಗ) ಗಳಂತೆ, ಸಂಸಾರ ರೂಪಿ ವೃಕ್ಷದ ಭಾಗಗಳಾದ ಚಿಕ್ಕ ಚಿಕ್ಕ ಕೊಂಬೆಗಳು (ಪರ್ಣಾನಿ) ಎಲೆಗಳು ಇವೆ (ಪ್ರಾಹುಃ) ಎಂದು ಹೇಳಲಾಗಿದೆ. (ತಮ) ಆ ಸಂಸಾರ ರೂಪದ ವೃಕ್ಷವನ್ನು (ಯಃ) ಯಾರು (ವೇದ) ವಿಸ್ತಾರವಾಗಿ ತಿಳಿಯುವರೋ, (ಸಃ) ಅವರೇ (ವೇದವಿತ್) ಪೂರ್ಣ ಜ್ಞಾನಿ ಅರ್ಥಾತ್ ತತ್ವದರ್ಶಿಯಾಗಿದ್ದಾರೆ".

**ಗೀತೆಯ 15ನೇ ಅಧ್ಯಾಯದ 2ನೇ ಶ್ಲೋಕ.**

ಅಧಃ, ಚ, ಊರ್ಧ್ವಮ್, ಪ್ರಸೃತಾಃ, ತಸ್ಯ, ಶಾಖಾಃ, ಗುಣಪ್ರವೃದ್ಧಾಃ, ವಿಷಯ ಪ್ರವಾಲಾಃ
ಅಧಃ, ಚ, ಮೂಲಾನಿ, ಅನುಸಂತತಾನಿ, ಕರ್ಮಾನು ಬಂಧೀನಿ, ಮನುಷ್ಯಲೋಕೆ ॥

**ಅನುವಾದ:–** (ತಸ್ಯ) ಆ ವೃಕ್ಷದ (ಅಧಃ) ಕೆಳಗೆ (ಚ) ಮತ್ತು (ಊರ್ಧ್ವಮ್) ಮೇಲೆ (ಗುಣಪ್ರವೃದ್ಧಾಃ) ಮೂರು ಗುಣಗಳ ಬ್ರಹ್ಮಾ–ರಜೋಗುಣ, ವಿಷ್ಣು–ಸತೋಗುಣ, ಶಿವ–

ತಮೋಗುಣ ರೂಪದಲ್ಲಿ (ಪ್ರಸೃತಾ) ಹರಡಿದೆ (ವಿಷಯ ಪ್ರವಾಲಾಃ) ವಿಕಾರ–ಕಾಮ–ಕ್ರೋಧ, ಮೋಹ, ಲೋಭ, ಅಹಂಕಾರ ರೂಪಿನ ಚಿಗುರು (ಶಾಖಾಃ) ಕೊಂಬೆ (ಬ್ರಹ್ಮಾ–ವಿಷ್ಣು–ಶಿವ) ಗಳು (ಕರ್ಮಾನುಬಂಧೀನಿ) ಜೀವಿಗಳನ್ನು ಕರ್ಮಗಳಲ್ಲಿ ಕಟ್ಟಿಹಾಕಲು (ಮೂಲಾನಿ) ಬೇರು ಮುಖ್ಯ ಕಾರಣವಾಗಿವೆ (ಚ) ಹಾಗೂ (ಮನುಷ್ಯಲೋಕೆ) ಭೂಲೋಕದಲ್ಲಿ (ಅಧಃ) ಕೆಳಗೆ ನರಕ 84 ಲಕ್ಷ ಯೋನಿಗಳ್ಲಲಿ (ಊರ್ಧ್ವಮ್) ಮೇಲಿನ ಸ್ವರ್ಗ ಲೋಕ ಮೊದಲಾದವುಗಳಲ್ಲಿ (ಅನುಸಂತತಾನಿ) ವ್ಯವಸ್ಥೆ ಮಾಡಲಾಗಿದೆ.

**<u>ಗೀತೆಯ 15ನೇ ಅಧ್ಯಾಯದ 3ನೇ ಶ್ಲೋಕ.</u>**

ನ, ರೂಪಮ್, ಅಸ್ಯ, ಇಹ, ತಥಾ, ಉಪಲಭ್ಯತೆ, ನ,ಅಂತಃ, ನ, ಚ, ಆದಿಃ ನ, ಚ,
ಸಂಪ್ರತಿಷ್ಠಾ, ಅಶ್ವತ್ಥಮ್, ಏನಮ್, ಸುವಿರೂಢಮೂಲಮ್, ಅಸಂಗಶಸ್ತ್ರೇಣ, ದೃಢೇನ ಛಿತ್ವಾ॥

**ಅನುವಾದ:–** (ಅಸ್ಯ) ಈ ರಚನೆಯ (ನ, ಆದಿಃ) ಪ್ರಾರಂಭವಾಗಲಿ (ಚ) ಮತ್ತು (ನ, ಅಂತಃ) ಅಂತ್ಯವಾಗಲಿ (ತಥಾ) ಹಾಗೆಯೇ (ರುಪಮ್) ಸ್ವರೂಪವಾಗಲಿ (ಉಪಲಭ್ಯತೆ) ಸಿಗುವುದಿಲ್ಲ, (ಚ) ಹಾಗೂ (ಇಹ) ಇಲ್ಲಿ ನನ್ನ ನಿನ್ನ ಸಂಭಾಷಣೆಯಲ್ಲಿ ನನ್ನ ಮೂಲಕ ಈ ಗೀತೆಯ ಜ್ಞಾನವು ಕೊಡಲ್ಪಟ್ಟಿದ್ದರೂ, ನನಗೆ ಅದರ ಸಂಪೂರ್ಣವಾದ ತಿಳವಳಿಕೆಯ ಜ್ಞಾನ ಇಲ್ಲ. (ಸಂಪ್ರತಿಷ್ಠಾ) ಏಕೆಂದರೆ ಎಲ್ಲ ಬ್ರಹ್ಮಾಂಡಗಳ ರಚನೆಯು ಪೂರ್ಣವಾಗಿ ಹೇಗಿದೆ ಎಂದು ನನಗೆ ಗೊತ್ತಿಲ್ಲ (ಏನಮ್) ಈ (ಸುವಿರೂಢಮೂಲ) ಉತ್ತಮರೀತಿಯಲ್ಲಿ ಸ್ಥಿರವಾಗಿರುವ (ಅಶ್ವತ್ಥಮ್) ಅಶ್ವತ್ಥವೃಕ್ಷರೂಪದ ಸಂಸಾರದ ಜ್ಞಾನವನ್ನು (ಅಸಂಗಶಸ್ತ್ರೇಣ) ತತ್ವ ಜ್ಞಾನರೂಪಿ (ಆಯುಧ) ಶಸ್ತ್ರದಿಂದ (ಛಿತ್ವಾ) ಕತ್ತರಿಸಿಹಾಕಬೇಕು. ಅಂದರೆ ಬ್ರಹ್ಮಾ, ವಿಷ್ಣು, ಶಿವ, ದುರ್ಗಾ, ಕಾಲ ಬ್ರಹ್ಮ ಮತ್ತು ಪರಬ್ರಹ್ಮರ ಭಕ್ತಿಯು ಕ್ಷಣಿಕ ಸುಖ ಎಂದು ತಿಳಿದು, ಕೇವಲ ಪೂರ್ಣಬ್ರಹ್ಮನನ್ನು ಮಾತ್ರ ಪೂಜಿಸಬೇಕು.

**<u>ಗೀತೆಯ 15ನೇ ಅಧ್ಯಾಯದ 4ನೇ ಶ್ಲೋಕ.</u>**

ತತಃ, ಪದಂ, ತತ್, ಪರಿಮಾರ್ಗಿತವ್ಯಮ್, ಯಸ್ಮಿನ್, ಗತಾಃ, ನ, ನಿವರ್ತಂತಿ, ಭೂಯಃ,
ತಮ, ಏವ, ಚ, ಆದ್ಯಮ್, ಪುರುಷಮ್, ಪ್ರಪಧ್ಯೇ, ಯತಃ, ಪ್ರವೃತ್ತಿಃ, ಪ್ರಸೃತಾ, ಪುರಾಣಿ।

**ಅನುವಾದ:–** ಯಾವಾಗ ತತ್ವದರ್ಶಿ ಸಂತನು ಸಿಗುವನೋ, (ತತಃ) ತದನಂತರ (ತತ್) ಆ ಪರಮಾತ್ಮನ (ಪದಮ್) ಪದ ಸ್ಥಾನ ಅಂದರೆ ಸತ್ಯಲೋಕವನ್ನು (ಪರಿಮಾರ್ಗಿತವ್ಯಮ್) ಸರಿಯಾದ ರೀತಿಯಲ್ಲಿ ಅರಸಬೇಕು. (ಯಸ್ಮಿನ್) ಯಾವುದರಲ್ಲಿ (ಗತಾಃ) ಹೋಗುವುದರಿಂದ ಸಾಧಕನು (ಭೂಯಃ) ಪುನಃ (ನ, ನಿವರ್ತಂತಿ) ಮರಳಿ ಈ ಸಂಸಾರಕ್ಕೆ ಬರುವುದಿಲ್ಲವೋ, (ಚ) ಮತ್ತು (ಯತಃ) ಯಾವ ಪರಮಾತ್ಮ ಪರಮ ಅಕ್ಷರ ಬ್ರಹ್ಮನಿಂದ (ಪುರಾಣೀ) ಆದಿರಚನೆ (ಸೃಷ್ಠಿ) ಪ್ರಸ್ತುತಾ ಉಂಟಾಗಿದೆ (ತಮ್) ಅಜ್ಞಾತ (ಆಧ್ಯಮ್) ಆದಿಯಮ ಅಂದರೆ ನಾನು ಕಾಲ ನಿರಂಜನ (ಪುರುಷಮ್) ಪೂರ್ಣ ಪರಮಾತ್ಮನನ್ನೆ (ಏವ) ಈ ಪ್ರಕಾರ (ಪ್ರಪದ್ಯೈ) ಶರಣು ಹೊಂದಿದ್ದೇನೆ ಹಾಗೂ ಅವನನ್ನೇ ಪೂಜಿಸುತ್ತೇನೆ.

**<u>ಗೀತೆಯ 15ನೇ ಅಧ್ಯಾಯದ 16ನೇ ಶ್ಲೋಕ.</u>**

ದ್ವೌ, ಇಮೌ, ಪುರಷೌ, ಲೋಕೇ, ಕ್ಷರಃ, ಚ, ಅಕ್ಷರಃ, ಏವ, ಚ,
ಕ್ಷರಃ, ಸರ್ವಾಣಿ, ಭೂತಾನಿ, ಕೂಟಸ್ಥಃ, ಅಕ್ಷರಃ, ಉಚ್ಯತೇ ॥ 16 ॥

**ಅನುವಾದ:–** (ಲೋಕೇ) ಈ ಪ್ರಪಂಚದಲ್ಲಿ (ದ್ವೌ) ಎರಡು ಪ್ರಕಾರದ (ಕ್ಷರಃ) ನಾಶವಾಗುವ, (ಚ) ಮತ್ತು (ಅಕ್ಷರಃ) ನಾಶವಾಗದ (ಪುರುಷೌ) ಭಗವಂತ ಇದ್ದಾರೆ (ಏವ) ಈ ಪ್ರಕಾರ

(ಇಮೌ) ಈ ಇಬ್ಬರೂ ಪ್ರಭುಗಳ ಲೋಕಗಳಲ್ಲಿ (ಸರ್ವಾಣಿ) ಸಂಪೂರ್ಣ (ಭೂತಾನಿ) ಪ್ರಾಣಿಗಳ ಶರೀರಗಳು (ಕ್ಷರಃ) ನಾಶವಾಗುತ್ತವೆ. (ಚ) ಮತ್ತು (ಕೂಟಸ್ಥಃ) ಜೀವಾತ್ಮಗಳು (ಅಕ್ಷರ) ಅವಿನಾಶೀ (ಉಚ್ಯತೆ) ಯಾಗಿರುತ್ತವೆ ಎಂದು ಹೇಳುತ್ತಾರೆ.

<u>ಗೀತೆಯ 15ನೇ ಅಧ್ಯಾಯದ 17ನೇ ಶ್ಲೋಕ.</u>

ಉತ್ತಮಃ ಪುರಷಃ ತು ಅನ್ಯಃ, ಪರಮಾತ್ಮಾ, ಇತಿ, ಉದಾಹೃತಃ
ಯಃ, ಲೋಕತ್ರಯಮ್, ಆವಿಶ್ಯ, ಬಿಭರ್ತಿ, ಅವ್ಯಯಃ, ಈಶ್ವರಃ ॥ 17 ॥

**ಅನುವಾದಃ–** (ಉತ್ತಮಃ) ಉತ್ತಮ (ಪುರಷಃ) ಪ್ರಭು ಅಂದರೆ ಭಗವಂತನೂ (ತು, ಅನ್ಯಃ) ಬೇರೆಯೇ ಆಗಿದ್ದಾನೆ ಕ್ಷರ ಪುರುಷ–ಅಕ್ಷರ ಪುರುಷ ಈ ಇಬ್ಬರಿಗಿಂತ (ಇತಿ) ವಾಸ್ತವದಲ್ಲಿ (ಪರಮಾತ್ಮಾ) ಪರಮಾತ್ಮಾ (ಉದಾಹೃತಃ) ಎನ್ನಲಾಗಿದೆ (ಯಃ) ಇವರೆ (ಲೋಕತ್ರಮಂ) ಮೂರೂ ಲೋಕಗಳಲ್ಲಿ (ಆವಿಷ್ಯ) ಪ್ರವೇಶಮಾಡಿ (ಭಿಬರ್ತಿ) ಎಲ್ಲರ ಧಾರಣೆ ಪೋಷಣೆ ಮಾಡುವವ (ಅವ್ಯಯಃ) ಅವಿನಾಶೀ (ಈಶ್ವರಃ) ಈಶ್ವರ (ಎಲ್ಲ ಪ್ರಭುಗಳಲ್ಲಿ ಶ್ರೇಷ್ಠ ಅಂದರೆ ಸಮರ್ಥ ಪ್ರಭು) ಎಂದು ಹೇಳಲಾಗಿದೆ.

**ಭಾವಾರ್ಥ:– ಗೀತೆಯನ್ನು ನೀಡಿರುವ ಪ್ರಭು ಹೇಳಿದ್ದಾನೆ. "ಈ ಸಂಸಾರವು ತಲೆಕೆಳಗಾಗಿ ನೇತು ಹಾಕಿರುವ ವೃಕ್ಷವಿದ್ದಂತೆ ಎಂದು ತಿಳಿ" ಮೇಲೆ ಬೇರು, ಕೆಳಗೆ ರೆಂಬೆ–ಕೊಂಬೆಗಳು, ಮೇಲಿನ ಬೇರು ಪೂರ್ಣ ಪರಮಾತ್ಮ ಈ ಸಂಸಾರ ರೂಪ ವೃಕ್ಷದ ಪ್ರತಿಯೊಂದು ಬೇರೆ ಬೇರೆ ಭಾಗಗಳ ಬಗ್ಗೆ ಯಾರು ತಿಳಿದಿರುವರೋ, ಅವರೇ ತತ್ವದರ್ಶಿಗಳಾದ ಸಂತರು. ಸ್ವತಃ ಭಗವದ್ಗೀತೆಯನ್ನು ನೀಡಿರುವ ಪ್ರಭು ಹೇಳುತ್ತಾನೆ. ಅದನ್ನು ತಿಳಿಯುವುದಕ್ಕಾಗಿ ಗೀತೆಯ ಅಧ್ಯಾಯ 4ರ 34ನೇ ಶ್ಲೋಕದಲ್ಲಿ ಹೇಳಿದ್ದಾನೆ ಪರಮಾತ್ಮ ತತ್ವವನ್ನು ಚೆನ್ನಾಗಿ ತಿಳಿದಿರುವ ತತ್ವದರ್ಶಿಯನ್ನು ಕೇಳಿ ತಿಳಿದುಕೊ. ಗೀತೆಯಲ್ಲಿನ ವಿಚಾರ ವಿವರಣೆಯನ್ನು ನಾನು ಪುನಃ ತಿಳಿಸಲು ಆಗುವುದಿಲ್ಲ. ಏಕೆಂದರೆ ಈ ಸಂಸಾರದ ಆದಿ–ಅಂತ್ಯಗಳು ನನಗೆ ತಿಳಿದಿಲ್ಲ. ಗೀತೆಯ 15ನೇ ಅಧ್ಯಾಯದ 2–3ನೇ ಶ್ಲೋಕಗಳಲ್ಲಿ ಮೂರು ಗುಣ ರೂಪಿ ಶಾಖೆಗಳಿವೆ ಎಂದು ಮಾತ್ರ ಹೇಳಲಾಗಿದೆ. ಗೀತೆಯ ಅಧ್ಯಾಯ 15ರ 1ನೇ ಶ್ಲೋಕದಲ್ಲಿ ಆ ತತ್ವದರ್ಶಿ ಸಂತನ ಪರಿಚಯ ಈ ಸಂಸಾರ ರೂಪೀ ವೃಕ್ಷದ ಪ್ರತ್ಯೇಕ ಭಾಗದ ಅರಿವು ಇರುವವನೇ ತತ್ವದರ್ಶಿ ಸಂತನೆಂದು ಹೇಳಿದ್ದಾನೆ. ಗೀತೆಯ 15ನೇ ಅಧ್ಯಾಯದ 4ನೇ ಶ್ಲೋಕದಲ್ಲಿ ಹೇಳಿದ್ದಾನೆ. ಆ ಸಂತರು ದೊರೆತ ನಂತರ ಅವರು ತಿಳಿಸುವ ಮಾರ್ಗದಲ್ಲಿ ಸಾಧನೆಮಾಡಿ, ಪರಮಪದ ಪರಮೇಶ್ವರನನ್ನು ಅರಸಬೇಕು. ಹಾಗೂ ಪೂರ್ಣ ಮೋಕ್ಷವನ್ನು ಪಡೆಯಬೇಕು. ಗೀತೆಯ 15ನೇ ಅಧ್ಯಾಯದ 16–17ನೇ ಶ್ಲೋಕಗಳಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾನೆ ಮೂರು ಪ್ರಭುಗಳಿದ್ದಾರೆ. ಒಬ್ಬ ಕ್ಷರಪುರುಷ (ಬ್ರಹ್ಮ) ಎರಡನೆಯವ ಅಕ್ಷರ ಪುರುಷ (ಪರಬ್ರಹ್ಮ) ಮೂರನೆಯವ ಪರಮ ಅಕ್ಷರ ಪುರುಷ (ಪೂರ್ಣ ಬ್ರಹ್ಮ). ಕ್ಷರಪುರುಷ ಮತ್ತು ಅಕ್ಷರ ಪುರುಷ ವಾಸ್ತವದಲ್ಲಿ ಅವಿನಾಶಿ ಅಲ್ಲ. ಆ ಅವಿನಾಶಿ ಪರಮಾತ್ಮಾನು ಈ ಇಬ್ಬರನ್ನು ಬಿಟ್ಟು ಬೇರೆಯವ ಎಲ್ಲ ಲೋಕಗಳಲ್ಲಿ ಪ್ರವೇಶಿಸಿ ಸರ್ವವನ್ನು ಧಾರಣೆ–ಪೋಷಣೆ ಮಾಡುತ್ತಾರೆ.**

**ಮೇಲೆ ಹೇಳಿರುವ ಗೀತೆಯ 15ನೇ ಅಧ್ಯಾಯದ 1ರಿಂದ 4ನೇ ಹಾಗೂ 16–17ನೇ ಶ್ಲೋಕಗಳಲ್ಲಿ ಪ್ರಮಾಣಿತವಾಯಿತು ತಲೆಕೆಳಗಾಗಿರುವ ಸಂಸಾರ ರೂಪೀ ವೃಕ್ಷದ ಬೇರು "ಪರಮ ಅಕ್ಷರ ಬ್ರಹ್ಮ" ಅಂದರೆ ಪೂರ್ಣ ಬ್ರಹ್ಮ ಇದ್ದಾರೆ ಇದರಿಂದ ಪೂರ್ಣ ವೃಕ್ಷದ ಪಾಲನೆ ಆಗುತ್ತದೆ. ಯಾವ ಭಾಗ ಭೂಮಿಯಿಂದ ತಕ್ಷಣ ಕಾಂಡ ಇರುತ್ತದೆ ಅದನ್ನು ಅಕ್ಷರ ಪುರಷ ಅರ್ಥಾತ್ ಪರಬ್ರಹ್ಮ ಎಂದು ತಿಳಿಯಿರಿ. ಆ ಕಾಂಡದಿಂದ ಹೊರಬರುವ ಬೇರೆ ದಪ್ಪ ಕೊಂಬೆ ಇದೆ. ಅದರಲ್ಲಿನ ಒಂದು ಕೊಂಬೆಯನ್ನು ಬ್ರಹ್ಮ ಅರ್ಥಾತ್ ಕ್ಷರ ಪುರಷ ಎಂದು ತಿಳಿಯಿರಿ, ಅದೇ ಕೊಂಬೆಯಿಂದ**

ಮೂರು ಕವಲುಗಳು ಹರಡಿವೆ. ಅವುಗಳನ್ನು ಬ್ರಹ್ಮಾ, ವಿಷ್ಣು, ಮಹೇಶ್ವರ ಎಂದು ತಿಳಿಯಿರಿ. ಶಾಖೆಯಲ್ಲಿನ ಎಲೆಗಳನ್ನು ಸಾಂಸಾರಿಕ ಪ್ರಾಣಿಗಳೆಂದು ತಿಳಿಯಿರಿ. ಗೀತೆಯ 15ನೇ ಅಧ್ಯಾಯದ 16–17ನೇ ಶ್ಲೋಕಗಳಲ್ಲಿ ಸ್ಪಷ್ಟವಾಗಿದೆ–ಕ್ಷರಪುರುಷ (ಬ್ರಹ್ಮ), ಅಕ್ಷರ ಪುರುಷ (ಪರಬ್ರಹ್ಮ) ಇವರ ಎರಡೂ ಲೋಕಗಳಲ್ಲಿ ಎಷ್ಟು ಪ್ರಾಣಿಗಳಿವೆಯೋ, ಅವುಗಳ ಸ್ಥೂಲಶರೀರ ನಾಶವುಳ್ಳದ್ದಾಗಿದೆ. ಅದರಲ್ಲಿನ ಜೀವಾತ್ಮ (ಸೂಕ್ಷ್ಮ ಶರೀರ) ಅವಿನಾಶಿಯಾಗಿದೆ. ಕ್ಷರ–ಅಕ್ಷರ ಎರಡೂ ಪ್ರಭುಗಳ ಲೋಕದಲ್ಲಿನ ಸಕಲ ಪ್ರಾಣಿಗಳು, ನಾಶವಾಗುವಂತಹವು. ಅಕ್ಷರ ಪುರುಷನನ್ನು ಅವಿನಾಶೀ ಎಂದು ಹೇಳಿದ್ದಾರೆ. ಆದರೆ ಅವಿನಾಶಿಯಲ್ಲ, ಅವಿನಾಶಿ ಪರಮಾತ್ಮಾ ಬೇರೆಯೇ ಇದ್ದಾನೆ. ಅವನು ಮೂರು ಲೋಕಗಳಲ್ಲಿ ಪ್ರವೇಶ ಮಾಡುತ್ತಾನೆ. ಸಕಲ ಜೀವಿಗಳನ್ನು ಪಾಲನೆ ಪೋಷಣೆ ಮಾಡುತ್ತಾನೆ. ಮೇಲಿನ ವಿವರಣೆಯಲ್ಲಿ ಮೂರು ಪ್ರಭುಗಳ ಬೇರೆ ಬೇರೆ ವಿವರಣೆ ಕೊಟ್ಟಿದೆ.

## "ಪವಿತ್ರ ಬೈಬಲ್ ಹಾಗೂ ಪವಿತ್ರ ಕುರಾನ್ ಶರೀಫ್‌ನಲ್ಲಿ ಸೃಷ್ಠಿ ರಚನೆಯ ಪ್ರಮಾಣ"

ಇದರ ಪ್ರಮಾಣವು ಪವಿತ್ರ ಬೈಬ್‌ಲ್ ಹಾಗೂ ಪವಿತ್ರ ಕುರಾನ್ ಶರೀಫ್ ನಲ್ಲೂ ಇದೆ.

**ಕುರಾನ್ ಶರೀಫ್‌ನಲ್ಲಿ ಪವಿತ್ರ ಬೈಬಲ್‌ನ ಜ್ಞಾನವೂ ಇದೆ. ಆದ್ದರಿಂದ ಈ ಎರಡೂ ಪವಿತ್ರ ಸದ್ ಗ್ರಂಥಗಳು ಸೇರಿ ಪ್ರಮಾಣಿತಗೊಳಿಸಿವೆ. ಯಾರು ಮತ್ತು ಹೇಗೆ ಸೃಷ್ಠಿಯ ರಚನೆ ಮಾಡಿದರು ? ಅವರ ವಾಸ್ತವಿಕ ಹೆಸರು ಯಾವುದು?**

**ಪವಿತ್ರ ಬೈಬಲ್ (ಉತ್ಪತ್ತಿಗ್ರಂಥ ಪುಟ ಸಂಖ್ಯೆ 2 ರಲ್ಲಿ ಅ. 1:20– 2:5 ರಲ್ಲಿ)**

**6ನೇಯ ದಿನ:– ಪ್ರಾಣಿ ಮತ್ತು ಮನುಷ್ಯ.**

ಬೇರೆ ಪ್ರಾಣಿಗಳ ರಚನೆ ಮಾಡಿ (26). ನಂತರ ಪರಮೇಶ್ವರನು ಹೇಳಿದನು, ಮನುಷ್ಯರನ್ನು ನಮ್ಮ ಸ್ವರೂಪದಂತೆಯೇ ನಮ್ಮ ಸಮಾನತೆಯಲ್ಲಿ ಮಾಡೋಣ. ಅವರು ಬೇರೆ ಎಲ್ಲ ಪ್ರಾಣಿಗಳನ್ನು ವಶದಲ್ಲಿ ಇರಿಸುವರು (27). ಅಗ ಪರಮೇಶ್ವರ ತನ್ನ ಸ್ವರೂಪದಂತೆಯೇ ಮನುಷ್ಯರನ್ನು ಉತ್ಪನ್ನ ಮಾಡಿದನು. ನರ ಮತ್ತು ನಾರಿ ಉತ್ಪತ್ತಿ ಮಾಡಿ ಮನುಷ್ಯರ ಸೃಷ್ಠಿ ಮಾಡಿದನು.

(29). ಪ್ರಭುವು ಮನುಷ್ಯನಿಗೆ ಆಹಾರಕ್ಕಾಗಿ ಬಹಳ ಬೀಜಗಳುಳ್ಳ ಚಿಕ್ಕ ಮರಗಳು ಹಾಗೂ ಬೀಜಗಳಿಂದ ಕೂಡಿದ ಫಲಗಳನ್ನು ಉತ್ಪತ್ತಿ ಮಾಡಿದ. (ಮಾಂಸ ತಿನ್ನಲು ಹೇಳಲಿಲ್ಲ)

**7ನೇಯ ದಿನ:– ವಿಶ್ರಾಮದ ದಿನ.**

ಪರಮೇಶ್ವರನು ಆರು ದಿನಗಳಲ್ಲಿ ಸೃಷ್ಠಿಯ ರಚನೆ ಮಾಡಿ, ಏಳನೇ ದಿನ: ವಿಶ್ರಾಂತಿ ಪಡೆದನು.

**ಪವಿತ್ರ ಬೈಬಲ್‌ನಲ್ಲಿನ ಅಂಶಗಳು ದೃಢಪಡಿಸಿವೆ ಪರಮಾತ್ಮನು ಮಾನವ ಸದೃಶ್ಯ ಸಶರೀರವುಳ್ಳವನಾಗಿದ್ದಾನೆ. ಅವನು ಆರು ದಿನಗಳಲ್ಲಿ ಸಂಪೂರ್ಣ ಸೃಷ್ಠಿಯ ರಚನೆ ಮಾಡಿದನು. ನಂತರ ಏಳನೇ ದಿನ ವಿಶ್ರಾಂತಿ ಪಡೆದನು.**

**"ಪವಿತ್ರ ಕುರಾನ್ ಶರೀಫ್ (ಸುರತ್ ಫುರ್ಕಾನಿ 25, ಆಯತ್ ಸಂಖ್ಯೆ 52, 58, 59)**

**ಆಯತ 52:–** ಫಲಾ ತುತಿಅಲ್–ಕಾಫಿರನ್ ವ ಜಹಿದಹುಮ್ ಬಿಹೀ ಜಿಹಾದಾನ್ ಕಬೀರಾ (ಕಬೀರನ್) ॥52॥

**ಇದರ ಭಾವಾರ್ಥ ಹೀಗಿದೆ:– ಹಜರತ್ ಮಹಮ್ಮದ್ ರವರ ಖುದಾ(ಪ್ರಭು) ಹೇಳುತ್ತಾರೆ. ನೀವು ಕಾಫಿರರು (ಯಾರು ಒಬ್ಬ ಪ್ರಭುವಿನ ಭಕ್ತಿಯನ್ನು ತ್ಯಜಿಸಿ, ಅನ್ಯ ದೇವ–ದೇವತೆಯರ**

ಹಾಗೂ ಮೂರ್ತಿ, ಮಕಬರಾ ಮುಂತಾದವುಗಳ ಪೂಜೆ ಮಾಡುತ್ತಾರೆ) ಹೇಳುವುದುದನ್ನು ಒಪ್ಪಬೇಡಿರಿ. ಏಕೆಂದರೆ ಅವರು ಕಬೀರರನ್ನು ಪೂರ್ಣ ಪರಮಾತ್ಮ ಎಂದು ಒಪ್ಪುವುದಿಲ್ಲ. ನೀವು ನನ್ನಿಂದ ಕೊಡಲಾಗಿರುವ ಕುರಾನಿನ ಜ್ಞಾನದ ಆಧಾರದಲ್ಲಿ ದೃಢವಾಗಿರಿ. ಕಬೀರರೇ ಪೂರ್ಣ ಪ್ರಭುವಾಗಿದ್ದಾರೆ. ಹಾಗೂ ಕಬೀರ್ ಅಲ್ಲಾಹನಿಗಾಗಿ ಸಂಘರ್ಷ ಮಾಡಿ (ಜಗಳವಾಡಬೇಡಿರಿ).

**ಆಯತ 58 :–** ವ ತವಕ್ಕಲ್ ಅಲಲ್–ಹರಿಲ್ಲಜೀ ಲಾ ಯಮೂತು ವ ಸಬ್ಬಿಹ್ ಬಿಹಮ್ದಿಹೀ ವ ಕಫಾ ಬಿಃಹಿ ಬಿಜುನುಬಿ ಅಬಾದಿಹೀ ಖಬೀರಾ (ಕಬೀರಾ) ॥58॥

**ಭಾವಾರ್ಥ:–** ಹಜರತ್ ಮಹಮ್ಮದ್ ರವರು ಯಾರನ್ನು ತಮ್ಮ ಪ್ರಭು ಎಂದು ಒಪ್ಪಿರುತ್ತಾರೋ ಆ ಅಲ್ಲಾಹ (ಪ್ರಭು) ಬೇರೆ ಒಬ್ಬ ಪೂರ್ಣ ಪ್ರಭುವಿನತ್ತ ಸಂಕೇತ ಮಾಡುತ್ತಿದ್ದಾನೆ ಮತ್ತು ಹೇಳುತ್ತಿದ್ದಾನೆ. "ಹೇ ಪೈಗಂಬರ್ ಯಾರು ಜಿಂದಾ ಮಹಾತ್ಮನ ರೂಪದಲ್ಲಿ ಬಂದು ನಿನ್ನನ್ನು ಭೇಟಿ ಮಾಡಿದ್ದರೋ, ಆ ಕಬೀರ್ ಪರಮಾತ್ಮನಲ್ಲಿ ವಿಶ್ವಾಸವಿಡು. ಅವರು ಎಂದೂ ಮರಣ ಹೊಂದುವುದಿಲ್ಲ ಅಂದರೆ ಅವಿನಾಶೀಯಾಗಿದ್ದಾರೆ. ಹೊಗಳಿಕೆಯೊಂದಿಗೆ ಅವರ ನಿರ್ಮಲತೆ (ಪವಿತ್ರ) ಯ ಗುಣಗಾನ ಮಾಡುತ್ತಲಿರು. ಆ ಕಬೀರ್ ಅಲ್ಲಾಹರು ಈ ಪೂಜೆಗೆ ಯೋಗ್ಯರಾಗಿದ್ದಾರೆ ಹಾಗೂ ತಮ್ಮ ಉಪಾಸಕರ ಸಕಲ ಪಾಪಗಳನ್ನೂ ನಾಶಮಾಡುವವರಾಗಿದ್ದಾರೆ.

**ಆಯತ 59:–** "ಅಲ್ಲಜೀ ಖಲಕಸ್ಮಮಾವಾತಿ ವಲಅರ್ಜ್ ವ ಮಾ ಬೈನಹುಮಾ ಫೀ ಸಿತ್ತತಿ ಅಯ್ಯಾಮಿನ್ ಸುಮ್ಮಸ್ತವಾ ಅಲಲ್ ಅರ್ಶಿ ಅರ್ ಹಮಾನು ಫಸಅಲ್ ಬಿಹೀ ಖಬೀರನ್" (ಕಬೀರನ್ ) ॥ 59 ॥

**ಭಾವಾರ್ಥ:–** ಹಜರತ್ ಮಹಮ್ಮದರಿಗೆ ಕುರಾನ್ ಶರೀಫ್‌ನ್ನು ಬೋಧಿಸಿದ ಪ್ರಭು (ಅಲ್ಲಾಹ) ಹೇಳುತ್ತಿದ್ದಾನೆ. ಭೂಮಿ ಮತ್ತು ಆಕಾಶಗಳ ನಡುವಿನಲ್ಲಿ ಏನೆಲ್ಲಾ ಇದೆಯೋ, ಅದನ್ನೆಲ್ಲಾ ಸೃಷ್ಟಿಮಾಡಿದವರು ಕಬೀರ್ ಅಲ್ಲಾಹ ಇದ್ದಾರೆ. ಅವರು ಈ ಸೃಷ್ಟಿಕಾರ್ಯವನ್ನು ಆರು ದಿನಗಳಲ್ಲಿ ಮುಗಿಸಿ, ಏಳನೆಯ ದಿನ ತಮ್ಮ ಸತ್ಯಲೋಕದ ಸಿಂಹಾಸನದಲ್ಲಿ ವಿರಾಜಮಾನ (ಕುಳಿತರು) ರಾದರು. ಆ ಪೂರ್ಣ ಪರಮಾತ್ಮನ ಪ್ರಾಪ್ತಿ ಹೇಗೆ ಆಗುವುದು ಹಾಗೂ ಅವರ ಬಗ್ಗೆ ವಾಸ್ತವಿಕ ಜ್ಞಾನ ಪಡೆಯಲು ಪೂರ್ಣ ಜ್ಞಾನಿಯಾದ (ಬಾಖಬರ) ತತ್ವದರ್ಶಿ ಸಂತರನ್ನು ಕೇಳಿ ತಿಳಿದುಕೊ ನನಗೆ ಅವರ ಬಗ್ಗೆ ಏನೂ ತಿಳಿದಿಲ್ಲ.

ಮೇಲೆ ಹೇಳಿರುವ ಎರಡು ಪವಿತ್ರ ಗ್ರಂಥಗಳಿಂದ ದೃಢಪಟ್ಟಿರುವ ವಿಷಯಗಳು: ಸಕಲ ಸೃಷ್ಟಿಯನ್ನು ರಚಿಸಿದವರು, ಸರ್ವಪಾಪ ವಿನಾಶಕ, ಸರ್ವಶಕ್ತಿಮಾನ, ಅವಿನಾಶಿ, ಪರಮಾತ್ಮ ಮಾನವ ಸದೃಶ್ಯ ಶರೀರದಲ್ಲಿ ಸತ್ಯಲೋಕದಲ್ಲಿ ಇರುವವರು, ಕಬೀರರೇ ಆಗಿದ್ದಾರೆ. ಅವರನ್ನೇ ಅಲ್ಲಾಹು ಅಕಬರ್ ಎಂದೂ ಸಹ ಕರೆಯುತ್ತಾರೆ.

ಗೌರವಾನ್ವಿತ ಧರ್ಮ್‌ದಾಸರು, ಪೂಜ್ಯ ಕಬೀರರನ್ನು ಕೇಳಿದರು ಹೇ ಸರ್ವಶಕ್ತಿಮಾನ್ ! ಈವರೆಗೆ ಯಾರೂ ಸಹ ಈ ತತ್ವಜ್ಞಾನವನ್ನು ತಿಳಿಸಿಲ್ಲ. ವೇದಗಳನ್ನು ಬಲ್ಲ ಜ್ಞಾನಿಗಳೂ ಸಹ ತಿಳಿಸಿಲ್ಲ. ಇದರಿಂದ ದೃಢವಾಯಿತು. ನಾಲ್ಕು ಪವಿತ್ರ ವೇದಗಳು ನಾಲ್ಕು ಪವಿತ್ರ ಕತೇಬ್ (ಕುರಾನ್ ಶರೀಫ್ ಮುಂತಾದವು) ಗಳು ಸುಳ್ಳಾಗಿವೆ.

ಪೂರ್ಣ ಪರಮಾತ್ಮ ಕಬೀರರು ಹೇಳಿದರು.

"ಕಬೀರ್, ಬೇದ ಕತೇಬ್ ಝೂಠೆ ನಹೀ ಭಾಯಿ, ಝೂಠೆ ಹೈ ಜೋ ಸಮಝೆ ನಾಹಿ।"

**ಭಾವಾರ್ಥ:–** ನಾಲ್ಕು ಪವಿತ್ರ ವೇದಗಳು (ಋಗ್ವೇದ, ಯಜುರ್ವೇದ, ಅಥರ್ವವೇದ, ಸಾಮವೇದ) ಹಾಗೂ ನಾಲ್ಕು ಕತೇಬ್ (ಕುರಾನ್ ಶರೀಫ್, ಜಬೂರ, ತೌರಾತ, ಇಂಜಿಲ) ಗಳು ತಪ್ಪಾಗಿಲ್ಲ. ಆದರೆ ಯಾರು ಇವುಗಳನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ.

## “ಪೂಜ್ಯ ಕಬೀರ್ ಪರಮೇಶ್ವರರ ಅಮೃತಮಯ ವಾಣಿಯಲ್ಲಿ ಸೃಷ್ಠಿ ರಚನೆ”

ವಿಶೇಷ :– ಕಬೀರ್ ಪರಮೇಶ್ವರ ಲೀಲಾಮಯ ಶರೀರ 5 ವರ್ಷದವರಿದ್ದಾಗ ಈ ಕೆಳಗಿನ ಅಮೃತವಾಣಿಯನ್ನು ಸನ್ 1403 ರಿಂದ ಸನ್ 1518 (ಮಗಹರ ಸ್ಥಾನದಿಂದ ಸಶರೀರ ಸತ್ಯಲೋಕಕ್ಕೆ ಹೋದಾಗ) ರ ನಡುವೆ, ಸುಮಾರು 600 ವರ್ಷಗಳ ಹಿಂದೆ ಪರಮ ಪೂಜ್ಯ ಕಬೀರ್ ಪರಮೇಶ್ವರರು ತಮ್ಮ ಆತ್ಮೀಯ ಸೇವಕ ಗೌರವಾನ್ವಿತ ಧರ್ಮದಾಸ್ ರಿಂದ ಆ ಅಮೃತ ವಾಣಿಯನ್ನು ಹೇಳಿ ಬರೆಸಿದರು. ಆದರೆ ಆ ಸಮಯದಲ್ಲಿನ ಪವಿತ್ರ ಹಿಂದೂ ಹಾಗೂ ಪವಿತ್ರ ಮುಸಲ್ಮಾನರ ತತ್ವಜ್ಞಾನವಿಲ್ಲದ ಗುರುಗಳೆನಿಸಿ ಕೊಂಡಿದ್ದವರು “ಈ ನೇಕಾರ ಕಬೀರನು ಸುಳ್ಳುಗಾರ” ಎಂದು ಹೇಳಿದರು. “ಯಾವುದೇ ಸದ್‌ಗ್ರಂಥದಲ್ಲಿ ಶ್ರೀ ಬ್ರಹ್ಮಾ, ಶ್ರೀ ವಿಷ್ಣು ಹಾಗೂ ಶ್ರೀ ಶಿವ ರವರ ತಾಯಿ–ತಂದೆಯ ಹೆಸರು ಇಲ್ಲ. ಈ ಮೂರು ಪ್ರಭುಗಳು ಅವಿನಾಶೀ ಇವರಿಗೆ ಮರಣವಿಲ್ಲ. ಪವಿತ್ರ ವೇದಗಳಲ್ಲಾಗಲಿ ಪವಿತ್ರ ಕುರಾನ್ ಶರೀಫ್ ಮುಂತಾದವುಗಳಲ್ಲಾಗಲಿ ಕಬೀರ್ ಪರಮೇಶ್ವರರ ಪ್ರಮಾಣ (ಸಾಕ್ಷಿ) ಇಲ್ಲ. ಹಾಗೂ ಪರಮಾತ್ಮನನ್ನು ನಿರಾಕಾರ ಎಂದು ಬರೆದಿದೆ. ನಾವು ಪ್ರತಿ ದಿನ ಓದುತ್ತೇವೆ. ಮುಗ್ಧ ಆತ್ಮಗಳು (ಜೀವಿಗಳು) ಈ ಚತುರ ಗುರುಗಳ ಮೇಲೆ ವಿಶ್ವಾಸ ಇಟ್ಟಿದ್ದರು. ಇವರು ಸತ್ಯ ಹೇಳುತ್ತಿದ್ದಾರೆಂದು. ಈ ಕಬೀರ್ ನೇಕಾರನು ಖಂಡಿತಾ ಅಶಿಕ್ಷಿತನು ಹಾಗೂ ಗುರುಗಳು ಶಿಕ್ಷಿತರಾಗಿದ್ದಾರೆ. ಇವತ್ತು ಅದೆ ಸತ್ಯತೆ ಕಬೀರ್ ಪರಮೇಶ್ವರರು ಹೇಳಿದ ಸತ್ಯ ವಿಚಾರಗಳು ಇಂದು ಬೆಳಕಿಗೆ ಬಂದಿವೆ. ಅದಕ್ಕೆ ಪವಿತ್ರ ಧರ್ಮಗಳ, ಪವಿತ್ರ ಧರ್ಮಗ್ರಂಥಗಳಲ್ಲಿ ಸಾಕ್ಷಿ ಸಹ ದೊರೆತಿವೆ.

ಇದರಿಂದ ದೃಢ ಪಟ್ಟಿರುವ ವಿಚಾರಗಳೆಂದರೆ, ಪೂರ್ಣ ಪರಮೇಶ್ವರ, ಸರ್ವ ಸೃಷ್ಠಿಯ ರಚನಾಕಾರ, ಪೂರ್ಣ ಬ್ರಹ್ಮ, ಹಾಗೂ ಸರ್ವಜ್ಞ ಕವಿರ್ದೇವ (ಕಬೀರ್ ಪರಮೇಶ್ವರ)ರೇ ಆಗಿದ್ದಾರೆ. ಇವರು ಕಾಶೀ (ಬನಾರಸ್) ಯಲ್ಲಿ ಕಮಲದ ಹೂವಿನ ಮೇಲೆ ಪ್ರಕಟಗೊಂಡಿದ್ದರು. 120 ವರ್ಷಗಳವರೆಗೆ ತಮ್ಮ ವಾಸ್ತವಿಕ ತೇಜೋಮಯ ಶರೀರವಲ್ಲದ ಮಾನವ ಸದೃಶ್ಯವಾದ ಸಾಮಾನ್ಯ ಶರೀರದೊಂದಿಗೆ ಇದ್ದರು. ತಮ್ಮ ಮೂಲಕ ರಚಿಸಿದ್ದ ಸೃಷ್ಠಿ ರಚನೆಯ ಸರಿಯಾದ ವಾಸ್ತವಿಕ ತತ್ವಜ್ಞಾನವನ್ನು ನೀಡಿ, ಸಶರೀರವಾಗಿ ಸತ್ಯಲೋಕಕ್ಕೆ ಹೋದರು. ದಯವಿಟ್ಟು ವಾಚಕ ಪ್ರೇಮಿಗಳು ಕೆಳಗಿನ ಕಬೀರ್ ಪರಮೇಶ್ವರರ ಅಮೃತ ವಾಣಿಯನ್ನು ಓದಿರಿ.

(ಇವು ಕಬೀರ್ ಪರಮೇಶ್ವರರರಿಂದಲೇ ಉಚ್ಛಾರಿತ ವಾಣಿಗಳಾಗಿವೆ)

ಧರ್ಮದಾಸ್ ಯಹ್ ಜಗ್ ಬೌರಾನಾ । ಕೊಯಿ ನ ಜಾನೆ ಪದ ನಿರವಾನಾ ॥
ಯಹೀ ಕಾರಣ್ ಮೈ ಕಥಾ ಪಸಾರಾ । ಜಗಸೆ ಕಹಿಯೊ ರಾಮ ನಿಯಾರಾ ॥
ಯಹೀ ಜ್ಞಾನ್ ಜಗ್ ಜೀವ ಸುನಾವೋ । ಸಬ್ ಜೀವೋಂಕಾ ಭರಮ್ ನಶಾವೊ ॥
ಅಬ್ ಮೈ ತುಮಸೆ ಕಹೊ ಚಿತಾಯಿ । ತ್ರಯದೇವನ್ ಕೀ ಉತ್ಪತ್ತಿ ಭಾಯಿ ॥
ಕುಛ್ ಸಂಕ್ಷೇಪ್ ಕಹೊ ಗುಹರಾಯಿ । ಸಬ್ ಸಂಶಯ್ ತುಮ್ಹಾರೆ ಮಿಟ್ ಜಾಯಿ ॥
ಭರಮ ಗಯೆ ಜಗ್ ವೇದ್ ಪುರಾನಾ । ಆದಿ ರಾಮ್ ಕಾ ಭೇದ್ ನ ಜಾನಾ ॥
ರಾಮ್–ರಾಮ್ ಸಬ್ ಜಗತ್ ಬಖಾನೆ । ಆದಿ ರಾಮ್ ಕೋಯಿ ಬಿರಾಲಾ ಜಾನೆ ॥
ಜ್ಞಾನಿ ಸುನೆ ಸೊ ಹಿರದೈ ಲಗಾಯಿ । ಮೂರ್ಖ ಸುನೆ ಸೊ ಗಮ್ಯ ನಾ ಪಾಯಿ ॥
ಮಾ ಅಷ್ಠಂಗಿ ಪಿತಾ ನಿರಂಜನ್ । ವೆ ಜಮ ದಾರುಣ ವಂಶನ ಅಂಜನ ॥
ಪಹಿಲೆ ಕೀನ್ಹ ನಿರಂಜನ ರಾಯಿ ॥ ಪೀಛೆಸೆ ಮಾಯಾ ಉಪಜಾಯಿ ॥
ಮಾಯಾ ರೂಪ್ ದೇಖ್ ಅತಿ ಶೋಭಾ । ದೇವ ನಿರಂಜನ್ ತನ್– ಮನ್ ಲೋಭಾ ॥
ಕಾಮದೇವ ಧರ್ಮರಾಯ ಸತ್ತಾಯೆ । ದೇವಿ ಕೊ ತುರಂತ ಹೀ ಧರ್ ಖಾಯೆ ॥
ಪೇಟ್ ಸೆ ದೇವಿ ಕರೀ ಪುಕಾರಾ । ಸಾಹಬ್ ಮೇರಾ ಕರೋ ಉಬಾರಾ ॥

ಟೇರ್ ಸುನೀ ತಬ್ ಹಮ್ ತಹಾ ಆಯೆ । ಅಷ್ಟಂಗೀ ಕೊ ಬಂದ್ ಛುಡಾಯೆ ॥
ಸತ್ ಲೋಕ್ ಮೇ ಕೀನ್ಹಾ ದುರಾಚಾರಿ । ಕಾಲ ನಿರಂಜನ್ ದಿನ್ಹಾ ನಿಕಾರಿ ॥
ಮಾಯಾ ಸಮೇತ್ ದಿಯಾ ಭಗಾಯಿ । ಸೋಲಹ್ ಸಂಖ್ ಕೋಸ್ ದೂರಿಪರ್ ಆಯಿ ॥
ಅಷ್ಟಂಗೀ ಔರ್ ಕಾಲ್ ಅಬ್ ದೋಯಿ । ಮಂದ ಕರ್ಮಸೆ ಗಏ ಬಿಗೋಯಿ ॥
ಧರ್ಮರಾಯ್ ಕೊ ಹಿಕಮತ್ ಕೀನ್ಹಾ । ನಖ್ ರೇಖಾ ಸೆ ಭಗಕರ್ ಲೀನ್ಹಾ ॥
ಧರ್ಮರಾಯ್ ಕಿನ್ಹಾ ಭೋಗ್ ವಿಲಾಸಾ । ಮಾಯಾ ಕೊ ರಹೀ ತಬ್ ಆಸಾ ॥
ತೀನ್ ಪುತ್ರ ಅಷ್ಠಂಗೀ ಜಾಯೆ । ಬ್ರಹ್ಮಾ, ವಿಷ್ಣು, ಶಿವ ನಾಮ್ ಧರಾಯೆ ॥
ತೀನ್ ದೇವ್ ವಿಸ್ತಾರ್ ಚಲಾಯೆ । ಇನಮೆ ಯಹ್ ಜಗ್ ದೋಖಾ ಖಾಯೆ ॥
ಪುರುಷ ಗಮ್ಯ ಕೈಸೆ ಕೋ ಪಾವೈ । ಕಾಲ ನಿರಂಜನ್ ಜಗ ಭರಮಾವೈ ॥
ತೀನ್ ಲೋಕ್ ಅಪನೇ ಸುತ್ ದೀನ್ಹಾ । ಸುನ್ನ ನಿರಂಜನ್ ಬಾಸಾ ಲೀನ್ಹಾ ॥
ಅಲಖ್ ನಿರಂಜನ್ ಸುನ್ನ ಠಿಕಾನಾ । ಬ್ರಹ್ಮಾ–ವಿಷ್ಣು–ಶಿವ ಭೇದ ನ ಜಾನಾ ॥
ತೀನ್ ದೇವ್ ಸೊ ಉನಕೊ ಧಾವೈ । ನಿರಂಜನ್ ಕಾ ವೆ ಪಾರ್ ನಾ ಪಾವೆಂ ॥
ಅಲಖ್ ನಿರಂಜನ್ ಬಡಾ ಬಟಪಾರಾ । ತೀನ ಲೋಕ ಜೀವ ಕಿನ ಆಹಾರಾ ॥
ಬ್ರಹ್ಮಾ ವಿಷ್ಣು ಶಿವ ನಹೀಂ ಬಚಾಯೆ । ಸಕಲ ಕಾಯ ಪುನ ಧೂರ ಉಡಾಯೆ ॥
ತಿನಕೆ ಸುತ ಹೈ ತೀನೋ ದೇವಾ । ಆಂಧರ ಜೀವ ಕರತ್ ಹೈ ಸೇವಾ ॥
ಅಕಾಲ ಪುರುಷ ಕಾಹೂ ನಹಿ ಚೀನ್ಹಾ । ಕಾಲ್ ಪಾಯ ಸಬಹಿ ಗಹ ಲೀನ್ಹಾ ॥
ಬ್ರಹ್ಮ ಕಾಲ ಸಕಲ ಜಗ ಜಾನೆ । ಆದಿ ಬ್ರಹ್ಮ ಕೊ ನಾ ಪಹಿಚಾನೆ ॥
ತೀನೋ ದೇವ್ ಔರ್ ಔತಾರಾ । ತಾಕೊ ಭಜೆ ಸಕಲ ಸಂಸಾರಾ ॥
ತೀನೋ ಗುಣ ಕಾ ಯಹ್ ವಿಸ್ತಾರಾ । ಧರ್ಮ ದಾಸ್ ಮೈ ಕಹೊ ಪುಕಾರಾ ।
ಗುಣ ತೀನೋಂ ಕೀ ಭಕ್ತಿ ಮೇ, ಭೂಲ್ ಪರೋ ಸಂಸಾರ್ ।
ಕಹೈ ಕಬೀರ್ ನಿಜ ನಾಮ ಬಿನ, ಕೈಸೆ ಉತರೈಂ ಪಾರ್ ॥

**ಮೇಲೆ ಹೇಳಿರುವ ಅಮೃತ ವಾಣಿಯಲ್ಲಿ ಕಬೀರ್ ಪರಮೇಶ್ವರರು ತನ್ನ ಆತ್ಮೀಯ ಸೇವಕನಾದ, ಗೌರವಾನ್ವಿತ ಧರ್ಮದಾಸ್ ರವರಿಗೆ ಹೇಳುತ್ತಿದ್ದಾರೆ. ಧರ್ಮದಾಸ! ಈ ಸಕಲ ವಿಶ್ವವೂ ತತ್ವಜ್ಞಾನದ ಕೊರತೆಯಿಂದ ವಿಚಲಿತವಾಗಿವೆ. ಯಾರಿಗೂ, ಪೂರ್ಣವಾದ ಮೋಕ್ಷ ಮಾರ್ಗದ ಹಾಗೂ ಸೃಷ್ಠಿ ರಚನೆಯ ಜ್ಞಾನವಿಲ್ಲ. ಆದ್ದರಿಂದ ನಾನು ನಿನಗೆ ನನ್ನಿಂದಲೇ ರಚಿತವಾಗಿರುವ ಸೃಷ್ಠಿಯ ಕಥೆಯನ್ನು ಹೇಳುತ್ತೇನೆ. ಬುದ್ಧಿವಂತರು ಕೂಡಲೆ ತಿಳಿಯಲು ಸಮರ್ಥರಾಗಿರುತ್ತಾರೆ. ಆದರೆ ಸಕಲ ಪ್ರಮಾಣಗಳನ್ನು ನೋಡಿಯೂ ಕೂಡ ತಿಳಿಯಲಾರದ ಜೀವಿಗಳಂತು ಕಾಲನ ಪ್ರಭಾವದಿಂದ ಪ್ರಭಾವಿತರಾಗಿದ್ದಾರೆ. ಅವರು ಭಕ್ತಿಗೆ ಯೋಗ್ಯರಾದವರಲ್ಲ. ಈಗ ನಾನು ಮೂರು ದೇವತೆಗಳಾದ ಬ್ರಹ್ಮಾ, ವಿಷ್ಣು, ಶಿವನ ಉತ್ಪತ್ತಿಯ ಬಗ್ಗೆ ತಿಳಿಸುತ್ತೇನೆ. ಇವರ ತಂದೆ ಬ್ರಹ್ಮನ ಉತ್ಪತ್ತಿಯು ಮೊಟ್ಟೆಯಿಂದ ಆಯಿತು. ನಂತರ ತಾಯಿ ದುರ್ಗೆಯ ಉತ್ಪತ್ತಿಯಾಯಿತು. ದುರ್ಗೆಯ ರೂಪಕ್ಕೆ ಮೋಹಿತನಾಗಿ ಬ್ರಹ್ಮನು ತಪ್ಪು ಮಾಡಿದನು. ಆಗ ದುರ್ಗೆಯು ಮಾನ ರಕ್ಷಣೆಗಾಗಿ ಅವನ ಹೊಟ್ಟೆಯಲ್ಲಿ ಅಡಗಿ ನನ್ನಿಂದ ರಕ್ಷಿಸುವ ಪ್ರಾರ್ಥನೆ ಮಾಡಿದಳು. ನಾನು ಬ್ರಹ್ಮನ ಬಳಿಗೆ ಹೋದೆನು. ಆಗ ದುರ್ಗೆಯನ್ನು ಬ್ರಹ್ಮನ ಹೊಟ್ಟೆಯಿಂದ ಹೊರ ತೆಗೆದೆ. 21 ಬ್ರಹ್ಮಾಂಡಗಳ ಸಹಿತವಾಗಿ, 16 ಸಂಖ ಮೈಲು ದೂರದವರೆಗೆ ಕಳುಹಿಸಿದೆ. ಬ್ರಹ್ಮನು ದುರ್ಗೆಯೊಂದಿಗೆ ಭೋಗ–ವಿಲಾಸ ಮಾಡಿದನು. ಈ ಇಬ್ಬರ ಸಂಯೋಗದಿಂದ ಬ್ರಹ್ಮಾ–ವಿಷ್ಣು–ಶಿವ ಇವರು ಕ್ರಮವಾಗಿ ರಜಗುಣ–ಸತ್‌ಗುಣ–ತಮಗುಣ–ಗಳೊಂದಿಗೆ ಉತ್ಪತ್ತಿಯಾದರು. ಈ ಮೂರು ಗುಣಗಳ ಸಾಧನೆ ಮಾಡಿ ಎಲ್ಲಾ ಜೀವಿಗಳು ಕಾಲ**

ಬ್ರಹ್ಮನ ಬಲೆಯಲ್ಲಿ ಸಿಲುಕಿ ಕೊಂಡಿದ್ದಾರೆ. ವಾಸ್ತವಿಕ ಮಂತ್ರ ಸಿಗುವವರೆಗೂ ಪೂರ್ಣ ಮೋಕ್ಷ ಹೇಗೆ ಸಾಧ್ಯವಾದೀತು.

ವಿಶೇಷ :– ಪ್ರಿಯ ಓದುಗರೆ ವಿಚಾರ ಮಾಡಿರಿ, ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಹಾಗೂ ಶಿವ ಇವರನ್ನು ಹಿಂದೂ ಸಮಾಜದ ಸರ್ವರೂ ಈವರೆಗೂ ಈ ಮೂರು ಪರಮಾತ್ಮರನ್ನು ಅಜರ, ಅಮರ, ಅರ್ಥಾತ್ ಹುಟ್ಟು–ಸಾವು ಇಲ್ಲದವರು ಎಂದು ನಂಬುತ್ತಾ ಬಂದಿದ್ದಾರೆ. ಆದರೆ ಈ ಮೂವರೂ ನಾಶವಾನರು. ಇವರ ತಂದೆ ಕಾಲ ರೂಪಿ ಬ್ರಹ್ಮ ಹಾಗೂ ತಾಯಿ ದುರ್ಗಾ ಇದ್ದಾಳೆ. ತಾವೆಲ್ಲರು ಈಗಾಗಲೇ ಮೇಲಿನ ಪ್ರಮಾಣಗಳನ್ನು ಓದಿ ತಿಳಿದಿದ್ದಿರಿ. ಈ ತತ್ವಜ್ಞಾನ ನಮ್ಮ ಶಾಸ್ತ್ರಗಳಲ್ಲಿ ವಿದ್ಯಮಾನವಾಗಿದೆ. ಆದರೆ ಕಲಿಯುಗದ ಗುರುಗಳು, ಋಷಿಗಳು, ಸಂತರು ತಿಳಿಯಲಿಲ್ಲ. ಯಾವ ಶಿಕ್ಷಕರಿಗೆ ಪಠ್ಯ ಕ್ರಮದ ಬಗ್ಗೆ ಸರಿಯಾದ ಜ್ಞಾನವಿಲ್ಲವೋ, ಅವರು ವಿದ್ಯಾರ್ಥಿಗಳ ಭವಿಷ್ಯದ ಶತ್ರು. ಹಾಗೆಯೇ ಈ ಋಷಿಗಳಿಗೆ, ಗುರುಗಳಿಗೆ, ಸಂತರಿಗೆ ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಶ್ರೀ ಶಿವ ಇವರ ತಂದೆ–ತಾಯಿ ಯಾರು ಎಂಬ ಜ್ಞಾನವಿಲ್ಲ ಎಂದರೆ ಇವರು ತತ್ವಜ್ಞಾನ ಹೀನರು. ಈ ಕಾರಣದಿಂದಾಗಿ ಸಮಸ್ತ ಭಕ್ತ ಸಮಾಜವನ್ನು, ಶಾಸ್ತ್ರ ವಿರುದ್ಧವಾದ ಜ್ಞಾನವನ್ನು ತಿಳಿಸುತ್ತಾ, (ದಂತ ಕಥೆಗಳನ್ನು ಹೇಳುತ್ತಾ) ಅವರನ್ನು ಅಜ್ಞಾನದ ಕತ್ತಲಲ್ಲಿ ಇಟ್ಟಿದ್ದಾರೆ. ಶಾಸ್ತ್ರ ವಿರುದ್ಧವಾದ ಭಕ್ತಿ ಮಾಡಿಸಿ ಪರಮಾತ್ಮನ ವಾಸ್ತವಿಕ ಲಾಭ (ಪೂರ್ಣ ಮೋಕ್ಷ) ದಿಂದ ವಂಚಿತರನ್ನಾಗಿಸಿ ಮಾನವ ಜನ್ಮವನ್ನು ವ್ಯರ್ಥಗೊಳಿಸಿದ್ದಾರೆ. ಭಗವದ್ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳಲ್ಲಿ ಇದಕ್ಕೆ ಪ್ರಮಾಣವಿದೆ. ಯಾರು ಶಾಸ್ತ್ರ ವಿರುದ್ಧವಾದ ಆಚರಣೆ ಮಾಡುತ್ತಾ ಮನಸ್ಸಿಗೆ ಬಂದಂತೆ ಪೂಜೆ ಮಾಡುತ್ತಾರೆ. ಅವರಿಗೆ ಯಾವುದೆ ಲಾಭ ಆಗುವುದಿಲ್ಲ. ಜೀವನವನ್ನೇ ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಪೂರ್ಣ ಪರಮಾತ್ಮ ಕಬೀರರು 1403 ರಿಂದಲೇ ಸರ್ವಶಾಸ್ತ್ರಯುಕ್ತ ಜ್ಞಾನವನ್ನು ತಮ್ಮ ಅಮೃತವಾಣಿಯಲ್ಲಿ ತಿಳಿಸಲು ಪ್ರಾರಂಭ ಮಾಡಿದರು. ಆದರೆ ಅಜ್ಞಾನಿ ಗುರುಗಳು ಈ ತತ್ವಜ್ಞಾನವನ್ನು ಭಕ್ತ ಸಮಾಜಕ್ಕೆ ತಲುಪಿಸಲು ಬಿಡಲಿಲ್ಲ. ಅದು ವರ್ತಮಾನದಲ್ಲಿ ಸ್ಪಷ್ಟವಾಗುತ್ತಲಿದೆ. ಪೂರ್ಣ ಪರಮಾತ್ಮ ಕವಿರ್ದೇವರು ತತ್ವದರ್ಶಿ ಸಂತರ ರೂಪದಲ್ಲಿ ಸ್ವಯಂ ಧರೆಗೆ ಬಂದಿದ್ದರು.

## "ಗೌರವಾನ್ವಿತ ಗರೀಬ್‌ದಾಸ್ ರವರ ಅಮೃತ ವಾಣಿಯಲ್ಲಿ ಸೃಷ್ಠಿ ರಚನೆಯ ಪ್ರಮಾಣ"

**ಆದಿ ರಮೈಣೀ (ಸದ್‌ಗ್ರಂಥ ಪುಟ ಸಂಖ್ಯೆ 690 ರಿಂದ 692ರವರೆಗೆ)**

ಆದಿ ರಮೈಣೀ ಅದಲೀ ಸಾರಾ । ಜಾ ದಿನ್ ಹೋತೆ ಧುಂಧುಕಾರಾ ॥ 1 ॥
ಸತ್ಪುರುಷ ಕೀನ್ಹಾ ಪ್ರಕಾಶಾ । ಹಮ್ ಹೋತೆ ತಖತ್ ಕಬೀರ್ ಖವಾಸಾ ॥ 2 ॥
ಮನ ಮೋಹಿನಿ ಸಿರಜೀ ಮಾಯಾ । ಸತ್ಪುರುಷ ಏಕ ಖ್ಯಾಲ್ ಬನಾಯಾ ॥ 3 ॥
ಧರ್ಮರಾಯ ಸಿರಜೇ ದರಬಾನೀ । ಚೌಸಠ್ ಜುಗ ತಪ ಸೇವಾ ಠಾನೀ ॥ 4 ॥
ಪುರುಷ ಪೃಥವೀ ಜಾಕೂ ದೀನ್ಹೀ । ರಾಜ ಕರೋ ದೇವಾ ಆಧೀನೀ ॥ 5 ॥
ಬ್ರಹ್ಮಾಂಡ ಇಕೀಸ್ ರಾಜ ತುಮ್ಹ ದೀನ್ಹಾ । ಮನ್ ಕೀ ಇಛ್ಛಾ ಸಬ್ ಜುಗ ಲೀನ್ಹಾ ॥ 6 ॥
ಮಾಯಾ ಮೂಲ ರೂಪ ಏಕ್ ಛಾಜಾ । ಮೋಹಿ ಲಿಯೆ ಜಿನಹೂ ಧರ್ಮರಾಜಾ ॥ 7 ॥
ಧರ್ಮ ಕಾ ಮನ ಚಂಚಲ ಚಿತ ಧಾರಯಾ । ಮನ ಮಾಯಾ ಕಾ ರೂಪ ವಿಚಾರಾ ॥ 8
॥ಚಂಚಲ ಚೇರಿ ಚಪಲ್ ಚಿರಾಗಾ । ಯಾ ಕೆ ಪರಸೆ ಸರಬಸ ಜಾಗಾ ॥ 9 ॥
ಧರ್ಮರಾಯ ಕೀಯಾ ಮನ ಕಾ ಭಾಗೀ । ವಿಷಯ ವಾಸನಾ ಸಂಗ ಸೆ ಜಾಗೀ ॥ 10 ॥

ಆದಿ ಪುರುಷ ಅದಲೀ ಅನರಾಗೀ । ಧರ್ಮರಾಯ ದಿಯಾ ದಿಲ ಸೆ ತ್ಯಾಗಿ ॥ 11 ॥
ಪುರುಷ ಲೋಕ ಸೆ ದಿಯಾ ಢಹಾಹೀ । ಅಗಮ್ ದೀಪ ಚಲಿ ಆಯೆ ಭಾಯಿ ॥ 12 ॥
ಸಹಜ ದಾಸ್ ಜಿಸ ದೀಪ ರಹಂತಾ । ಕಾರಣ ಕೌನ್–ಕೌನ್ ಕುಲ ಪಂಥಾ ॥ 13 ॥
ಧರ್ಮರಾಯ ಬೋಲೆ ದರಬಾನೀ । ಸುನೋ ಸಹಜ ದಾಸ್ ಬ್ರಹ್ಮಜ್ಞಾನಿ ॥ 14 ॥
ಚೌಸಠ ಜುಗ ಹಮ್ ಸೇವಾ ಕೀನ್ಹೀ । ಪುರುಷ ಪೃಥಿವೀ ಹಮ ಕೂ ದಿನ್ಹೀ ॥ 15 ॥
ಚಂಚಲ ರೂಪ ಭಯಾ ಮನ ಬೌರಾ । ಮನ ಮೋಹಿನಿ ಠಗಿಯಾ ಭೌರಾ ॥ 16 ॥
ಸತ್‌ಪುರುಷ ಕೆ ನಾ ಮನ ಭಾಯೆ । ಪುರುಷ ಲೋಕ್ ಸೆ ಹಮ ಚಲೀ ಆಯೆ ॥ 17 ॥
ಅಗರ ದೀಪ ಸುನತ ಬಡ ಭಾಗೀ । ಸಹಜ ದಾಸ್ ಮೇಟೋ ಮನ ಪಾಗೀ ॥ 18 ॥
ಬೋಲೆ ಸಹಜದಾಸ್ ದಿಲ ದಾನೀ । ಹಮ ತೋ ಚಾಕರ ಸತ್ ಸಹದಾನೀ ॥ 19 ॥
ಸತ್‌ಪುರುಷ ಸೆ ಅರಜ ಗುಜಾರೂ । ಜಬ್ ತುಮ್ಹಾರಾ ಬಿವಾಣ ಉತಾರೂ ॥ 20 ॥
ಸಹಜದಾಸ್ ಕೊ ಕೀಯಾ ಪೀಯಾನಾ । ಸತ್ಯಲೋಕ ಲೀಯಾ ಪ್ರವಾನಾ ॥ 21 ॥
ಸತ್‌ಪುರುಷ ಸಾಹಿಬ್ ಸರಬಂಗೀ । ಅವಿಗತ ಅದಲೀ ಅಚಲ ಅಭಂಗೀ ॥ 22 ॥
ಧರ್ಮರಾಯ ತುಮ್ಹಾರಾ ದರಬಾನೀ । ಅಗರ ದೀಪ ಚಲಿ ಗಯೆ ಪ್ರಾನೀ ॥ 23 ॥
ಕೌನ್ ಹುಕುಮ ಕರೀ ಅರಜ ಅವಾಜಾ । ಕಹಾ ಪಠಾವೌ ಉಸ್ ಧರ್ಮರಾಜಾ ॥ 24 ॥
ಭಯಿ ಅವಾಜ ಅದಲೀ ಏಕ್ ಸಾಚಾ । ವಿಷಯ ಲೋಕ ಜಾ ತೀನ್ಯೂ ಬಾಚಾ ॥ 25 ॥
ಸಹಜ ವಿಮಾನ ಚಲೆ ಅಧಿಕಾಯಿ । ಛಿನ್ ಮೆ ಅಗರ ದೀಪ ಚಲಿ ಆಯಿ ॥ 26 ॥
ಹಮತೋ ಅರಜ ಕರೀ ಅನುರಾಗೀ । ತುಮ್ಹ್ ವಿಷಯ ಲೋಕ ಜಾವೋ ಬಡಭಾಗಿ ॥ 27॥
ಧರ್ಮರಾಯ ಕೆ ಚಲೆ ವಿಮಾನಾ । ಮಾನಸರೋವರ ಆಯೆ ಪ್ರಾನಾ ॥ 28 ॥
ಮಾನ ಸರೋವರ ರಹನ ನ ಪಾಯೆ । ದರ್ರೈ ಕಬೀರಾ ಥಾನಾ ಲಾಯೆ ॥ 29 ॥
ಬಂಕನಾಲ ಕೀ ವಿಷಮಿ ಬಾಂಟಿ । ತಹಾ ಕಬೀರಾ ರೋಕೀ ಘಾಟಿ ॥ 30 ॥
ಇನ ಪಾಂಚೋ ಮಿಲಿ ಜಗತ್ ಬಂಧಾನಾ । ಲಖ್ ಚೌರಾಸಿ ಜೀವ ಸಂತಾನಾ ॥ 31 ॥
ಬ್ರಹ್ಮಾ, ವಿಷ್ಣು, ಮಹೇಶ್ವರ ಮಾಯಾ ಧರ್ಮರಾಜ ಕಾ ರಾಜ ಪಠಾಯಾ ॥ 32 ॥
ಯೌಹ ಖೊಖಾ ಪುರ ಝುಠಿ ಬಾಜಿ ಭಿಸ್ತಿ ಬೈಕುಂಠ ದಗಾಸಿ ಸಾಜಿ ॥33॥
ಕೃತಿಮ ಜೀವ ಭುಲಾನೆ ಭಾಯಿ । ನಿಜ ಘರ್ ಕೀ ತೋ ಖಬರಿ ನ ಪಾಯಿ ॥ 34 ॥
ಸವಾ ಲಾಖ ಉಪಜೆ ನಿತ ಹಂಸಾ । ಏಕ್ ಲಾಬ್ ವಿನಶೆ ನಿತ ಅಂಸಾ ॥ 35 ॥
ಉಪತಿ ಖಪತಿ ಪ್ರಲಯ ಫೇರೀ । ಹರ್ಷ ಶೋಕ ಜೌರಾ ಜಮಜೇರಿ ॥ 36 ॥
ಪಾಂಚೊ ತತ್ವ ಹೈ ಪ್ರಲಯ ಮಾಹೀ । ಸತ್ವಗುಣ ರಜಗುಣ ತಮಗುಣ ಝಾಂಯಿ ॥ 37 ॥
ಆಠೋ ಅಂಗ ಮಿಲೀ ಹೈ ಮಾಯಾ । ಪಿಂಡ ಬ್ರಹ್ಮಾಂಡ ಸಕಲ ಭರಮಾಯಾ ॥ 38 ॥
ಯಾ ಮೇ ಸುರತಿ ಶಬ್ದ ಕೀ ಡೋರೀ । ಪಿಂಡ ಬ್ರಹ್ಮಾಂಡ ಲಗೀ ಹೈ ಖೋರಿ ॥ 39 ॥
ಶ್ವಾಂಸಾ ಪಾರಸ ಮನ ಗಹ ರಾಖೋ । ಖೋಲ್ಹಿ ಕಪಾಟ ಅಮೀರಸ ಚಾಖೋ ॥ 40 ॥
ಸುನಾಊ ಹಂಸ ಶಬ್ದ ಸುನ ದಾಸಾ । ಅಗಮ್ ದೀಪ ಹೈ ಅಗ ಹೈ ಬಾಸಾ ॥ 41 ॥

ಭವಸಾಗರ ಜಮ ದಂಡ ಜಮಾನಾ । ಧರ್ಮರಾಯ್ ಕಾ ಹೈ ತಲಬಾಂನಾ ॥ 42 ॥
ಪಾಂಚೊ ಊಪರ್ ಪದ ಕೀ ನಗರೀ । ಬಾಟ ವಿಹಂಗಮ ಬಂಕೀ ಡಗರೀ ॥ 43
ಹಮಾರಾ ಧರ್ಮರಾಯ ಸೋ ದಾವಾ । ಭವಸಾಗರ ಮೆ ಜೀವ ಭರಮಾವಾ ॥ 44 ॥
ಹಮ ತೊ ಕಹೈ ಅಗಮ್ ಕೀ ಬಾನೀ । ಜಹಾ ಅವಿಗತ ಅದಲೀ ಆಪ ಬಿನಾನೀ ॥ 45 ॥
ಬಂದೀಛೋಡ್ ಹಮಾರಾ ನಾಮಂ । ಅಜರ ಅಮರ ಹೈ ಅಸ್ಥೀರ ಠಾಮಂ ॥ 46 ॥
ಜುಗನ ಜುಗನ ಹಮ ಕಹತೆ ಆಯೇ । ಜಮ ಜೌರಾಸೆ ಹಂಸ ಛುಟಾಯೇ ॥ 47 ॥
ಜೋ ಕೋಯಿ ಮಾನೆ ಶಬ್ದ ಹಮಾರಾ । ಭವಸಾಗರ ನಹೀ ಭರಮೆ ಧಾರಾ ॥ 48 ॥
ಯಾ ಮೇ ಸುರತಿ ಶಬ್ದ ಕಾ ಲೇಖಾ । ತನ ಅಂದರ ಮನ ಕಹೊ ಕಿನ್ಹಿ ದೇಖಾ ॥ 49 ॥
ದಾಸ್ ಗರೀಬ್ ಅಗಮ್ ಕೀ ಬಾನೀ । ಖೋಜಾ ಹಂಸಾ ಶಬ್ದ ಸಹದಾನೀ ॥ 50 ॥

**ಭಾವಾರ್ಥ :– ಮೇಲಿನ ವಾಣಿಯ ಭಾವಾರ್ಥ ಹೀಗಿದೆ ಗೌರವಾನ್ವಿತ ಗರೀಬ್‌ದಾಸ್ ರವರು ಹೇಳುತ್ತಿದ್ದಾರೆ:– ಇಲ್ಲಿ ಮೊದಲು ಕತ್ತಲೆ ಮಾತ್ರ ಇತ್ತು. ಹಾಗೂ ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರರು ಸತ್ಯ ಲೋಕದಲ್ಲಿ ಸಿಂಹಾಸನದ ಮೇಲೆ ವಿರಾಜಮಾನರಾಗಿದ್ದರು. ನಾವು ಅಲ್ಲಿ ನೌಕರರಾಗಿದ್ದೆವು. ಪರಮಾತ್ಮನು ಬ್ರಹ್ಮ (ಧರ್ಮರಾಯ) ನನ್ನು ಉತ್ಪತ್ತಿ ಮಾಡಿದರು. ನಂತರ ಅವನ ತಪಸ್ಸಿನ ಪ್ರತಿಫಲವಾಗಿ 21 ಬ್ರಹ್ಮಾಂಡಗಳನ್ನು ನೀಡಿದರು. ನಂತರ (ಮಾಯಾ) ದುರ್ಗೆಯ ಉತ್ಪತ್ತಿ ಮಾಡಿದರು. ಯುವತಿ ದುರ್ಗಾಳ ಮೋಹಕ್ಕೆ ಒಳಗಾಗಿ ಬ್ರಹ್ಮನು ಅವಳನ್ನು ಬಲಾತ್ಕರಿಸಿದನು. ಬ್ರಹ್ಮನಿಗೆ ಇದಕ್ಕೆ ಶಿಕ್ಷೆ ಆಯಿತು. ಅವರನ್ನು ಸತ್ಯಲೋಕದಿಂದ ಹೊರ ಹಾಕಿದರು. ಒಂದು ಲಕ್ಷ ಮಾನವ ಪ್ರಾಣಿಗಳನ್ನು ಪ್ರತಿದಿನ ಆಹಾರವಾಗಿ ತಿನ್ನಬೇಕು. ಒಂದೂಕಾಲು ಲಕ್ಷ ಉತ್ಪತ್ತಿ ಮಾಡಬೇಕು ಎಂದು ಶಾಪ ಕೊಟ್ಟರು. ಇಲ್ಲಿ ಎಲ್ಲ ಪ್ರಾಣಿಗಳೂ ಕಷ್ಟ ಪಡುತ್ತಿವೆ. ಯಾರ್‍ಯಾರು ಪೂರ್ಣ ಪರಮಾತ್ಮನ ನಾಮದೀಕ್ಷೆಯಾಗಿ ವಾಸ್ತವಿಕ ಶಬ್ದ (ಸತ್ಯ ನಾಮದ ಮಂತ್ರ) ವನ್ನು ನಮ್ಮಿಂದ ಪಡೆಯುವರೋ, ಅವರನ್ನು ಕಾಲನ ಬಂಧನದಿಂದ ಬಿಡಿಸುವೆನು. ನಮ್ಮ ಹೆಸರು ಮುಕ್ತಿ ದಾತ (ಬಂದೀಛೋಡ) ಎಂದು. ಗೌರವಾನ್ವಿತ ಗರೀಬ್‌ದಾಸರು, ತಮ್ಮ ಗುರು ಹಾಗೂ ಪರಮಾತ್ಮ, ಕಬೀರರ ಆಧಾರದಿಂದ ಹೇಳುತ್ತಿದ್ದಾರೆ ಸತ್ಯನಾಮ ಹಾಗೂ ಸಾರನಾಮವನ್ನು ನಮ್ಮಿಂದ ಉಪದೇಶ ಪಡೆದು ಭಕ್ತಿ ಮಾಡಿದರೆ ಪೂರ್ಣ ಮೋಕ್ಷ ಪ್ರಾಪ್ತಿಯಾಗುತ್ತದೆ. ಇಲ್ಲವಾದರೆ ನಕಲಿ ನಾಮ ಕೊಡುವ ಸಂತ ಹಾಗೂ ಮಹಂತರ ಸಿಹಿ–ಸಿಹಿಯಾದ ಮಾತಿನಲ್ಲಿ ಸಿಕ್ಕಿಕೊಂಡು ಶಾಸ್ತ್ರ ವಿರುದ್ಧವಾದ ಸಾಧನೆ ಮಾಡಿ, ಕಾಲನ ಜಾಲದಲ್ಲಿ ಸಿಕ್ಕಿ ಕೊಳ್ಳುವಿರಿ. ನಂತರ ಕಷ್ಟದ ಮೇಲೆ ಕಷ್ಟ ಪಡುವಿರಿ.**

## [ಗೌರವಾನ್ವಿತ ಗರೀಬ್‌ದಾಸರ ವಾಣಿ]
## [ಸದ್‌ಗ್ರಂಥ ಪುಟ ಸಂ. ೬೯೦ ರಿಂದ ಆಯ್ದ ಭಾಗಗಳು]

ಮಾಯಾ ಆದಿ ನಿರಂಜನ್ ಭಾಯಿ, ಅಪನೆ ಜಾಏ ಆಪೈ ಖಾಯಿ ।
ಬ್ರಹ್ಮಾ ವಿಷ್ಣು ಮಹೇಶ್ವರ ಚೇಲಾ, ಓಂ–ಸೋಹಂ ಕಾ ಹೈ ಖೇಲಾ ॥
ಸಿಖರ್ ಸುನ್ನ ಮೆ ಧರ್ಮ್ ಅನ್ಯಾಯೀ, ಜಿನ ಶಕ್ತಿ ಡಾಯನ ಮಹಲ ಪಠಾಯಿ ।
ಲಾಖ ಗ್ರಾಸ ನಿತ ಉಠ ದೂತೀ, ಮಾಯಾ ಆದಿ ತಖ್ತ ಕೀ ಕುತೀ ॥
ಸವಾ ಲಾಖ್ ಘಡಿಯೆ ನಿತ ಭಾಂಡೆ, ಹಂಸಾ ಉತ್ಪತ್ತಿ ಪರಲಯ ಡಾಂಡೆ ।
ಯೇ ತೀನೋ ಚೇಲಾ ಬಟಪಾರೀ, ಸಿರಜೆ ಪುರುಷಾ ಸಿರಜೀ ನಾರೀ ॥




ಯೊಹ ಹರಹಟ ಕಾ ಕುಂಆ ಲೋಈ, ಯಾ ಗಲ ಬಂಧ್ಯಾ ಹೈ ಸಬ್ ಕೋಈ।
ಕೀಡೀ ಕುಂಜರ ಔರ ಅವತಾರಾ, ಹರಹಟ ಡೋರಿ ಬಂಧೆ ಕಈ ಬಾರಾ॥

'ಕಾಲ'ನ ಲೋಕದಲ್ಲಿ ಜನನ–ಮರಣ ರೂಪಗಳ ಹರಹಟ (ಚಕ್ರ)

ಖೋಖಾಪುರ ಮೇ ಜೀವ ಭುಲಾಯೆ, ಸ್ವಪನಾ ಬಹಿಸ್ತ ವೈಕುಂಠ ಬನಾಯೆ ।
ಯೊ ಹರಹಟ ಕಾ ಕುಆ ಲೋಯಿ, ಯಾಗಲ್ ಬಂಧ್ಯಾ ಹೈ ಸಬ್ ಕೋಯಿ ॥

ಕೀಡೀ ಕುಂಜರ ಔರ ಅವತಾರಾ, ಹರಹಟ ಡೋರೀ ಬಂಧೆ ಕಯಿ ಬಾರಾ ।
ಅರಬ ಅಲೀಲ ಇಂದ್ರ ಹೈ ಭಾಯಿ, ಹರಹಟ ಡೋರೀ ಬಂಧೆ ಸಬ್ ಆಯಿ ॥

ಶೇಷ ಮಹೇಶ ಗಣೇಶ್ವರ ತಾಹಿ । ಹರಹಟ ಡೋರಿ ಬಂಧೆ ಸಬ್ ಆಹಿ ।
ಶುಕ್ರಾದಿಕ ಬ್ರಹ್ಮಾಧಿಕ ದೇವಾ, ಹರಹಟ ಡೋರಿ ಬಂಧೆ ಸಬ್ ಖೇವಾ ॥

ಕೋಟಿಕ ಕರ್ತಾ ಫಿರತಾ ದೇಖ್ಯಾ, ಹರಹಟ ಡೋರಿ ಕಹೂ ಸುನ್ ಲೇಖಾ ।
ಚುತುರ್ಭುಜಿ ಭಗವಾನ್ ಕಹಾವೈ , ಹರಹಟ ಡೋರಿ ಬಂಧೆ ಸಬ್ ಆವೈ ॥

ಯೋ ಹೈ ಖೋಖಾಪುರ ಕಾ ಕುವಾ , ಯಾ ಮೆ ಪಡಾ ಸೋ ನಿಶ್ಚಯ ಮುವಾ ।

**ಈ ಮೂರು ದೇವರುಗಳು (ಬ್ರಹ್ಮಾ ವಿಷ್ಣು, ಶಿವ) ಜ್ಯೋತಿ ನಿರಂಜನನ (ಕಾಲ ಬ್ರಹ್ಮ) ವಶದಲ್ಲಿದ್ದಾರೆ. ತಮ್ಮ ಮಹಿಮೆಯನ್ನು ತೋರಿಕೊಳ್ಳುತ್ತಾ, ಜೀವಿಗಳಿಗೆ ಸ್ವರ್ಗ–ನರಕ ಹಾಗೂ ಈ ಭವಸಾಗರದಲ್ಲಿ (84 ಲಕ್ಷ ಯೋನಿಗಳಲ್ಲಿ) ಅಲೆದಾಡಿಸುತ್ತಾರೆ. ಜ್ಯೋತಿ ನಿರಂಜನ ತನ್ನ ಮಾಯೆಯಿಂದ ನಾಗಿಣಿಯಂತೆ ಜೀವಿಗಳನ್ನು ಹುಟ್ಟಿಸುತ್ತಾನೆ, ಪುನಃ ಸಾಯಿಸುತ್ತಾನೆ. ನಾಗಿಣಿಯು ತನ್ನ ಮೊಟ್ಟೆಗಳ ಸುತ್ತ ಮಂಡಲ ಹಾಕಿ ಕುಳಿತು, ನಂತರ ಮೊಟ್ಟೆಗಳನ್ನು ಹೆಡೆಯಿಂದ ಹೊಡೆಯುತ್ತದೆ. ಅದರಿಂದ ಹೊರ ಬಂದ ನಾಗರ ಮರಿಗಳನ್ನು ಅದು ತಿಂದು ಹಾಕುತ್ತದೆ. ನಾಗಿಣಿಯ ಮಂಡಲದಿಂದ ಒಂದು ವೇಳೆ ಹೊರಗುಳಿದ ಮೊಟ್ಟೆಯಿಂದ ಹೊರಬಂದ ನಾಗ ಮರಿ ಮಾತ್ರ ಉಳಿಯುತ್ತದೆ.**

ಮಾಯಾ ಕಾಲೀ ನಾಗಿನೀ, ಅಪನೆ ಜಾಯೆ ಖಾತ್ ।
ಕುಂಡಲೀ ಮೆ ಛೋಡ್ಯೈ ನಹೀ ಸೌ ಬಾತೋಂ ಕೀ ಬಾತ್ ॥

**ಇದೇ ರೀತಿ ಈ ಸಂಸಾರ ಕಾಲ ಬ್ರಹ್ಮನ ಜಾಲವಾಗಿದೆ. ಅನ್ಯ ಸಂತರಿಂದ ನಾಮೋಪದೇಶ ಪಡೆದು ನಿರಂಜನನ ವರೆಗಿನ ಭಕ್ತಿ ಮಾಡಿದರು, ಅವರು ನಿರಂಜನ ಕುಂಡಲಿ (21 ಬ್ರಹ್ಮಾಂಡಗಳು) ಯಿಂದ ಹೊರ ಬರಲು ಸಾದ್ಯವಿಲ್ಲ. ಸ್ವಯಂ ಬ್ರಹ್ಮಾ, ವಿಷ್ಣು, ಮಹೇಶ್, ಆದಿ ಮಾಯಾ (ದುರ್ಗೆ) ಎಲ್ಲ ಮಹನೀಯರು ನಿರಂಜನನ ಕುಂಡಲಿಯಲ್ಲಿ ಸಿಲುಕಿದ್ದಾರೆ. ಇವರುಗಳು ಹುಟ್ಟು–ಸಾವುಗಳ ಚಕ್ರದಲ್ಲಿ ಸಿಲುಕಿದ್ದಾರೆ. ಆದ್ದರಿಂದ ವಿಚಾರ ಮಾಡಬೇಕು ಸೊಹಂ ಮಂತ್ರವನ್ನು ಧ್ರುವ, ಪ್ರಹ್ಲಾದ, ಸುಖ್‌ದೇವ ಋಷಿ ಎಲ್ಲರೂ ಜಪ ಮಾಡಿದರು. ಆದರೂ ಸಂಸಾರದಿಂದ ಪಾರಾಗಲು ಆಗಲಿಲ್ಲ. ಏಕೆಂದರೆ ಶ್ರೀ ವಿಷ್ಣು ಪುರಾಣದ ಪ್ರಥಮ ಅಂಶದ 12ನೇ ಅಧ್ಯಾಯದ 93ನೇ ಶ್ಲೋಕ, ಪುಟ 51ರಲ್ಲಿ ಹೀಗೆ ಬರೆದಿದೆ. 'ದ್ರುವ'ನಿಗೆ ಒಂದು ಕಲ್ಪದವರೆಗೆ (ಒಂದು ಸಾವಿರ ಚತುರ್ಯುಗ) ಮಾತ್ರ ಮುಕ್ತಿ ದೊರಕಿದೆ. ಆದ್ದರಿಂದ ಕಾಲ ಲೋಕದಲ್ಲಿಯೆ ಉಳಿದುಕೊಂಡನು. "ಓಂ ನಮೋ ಭಗವತೆ ವಾಸುದೇವಾಯ" ಎಂದು ಜಪ ಮಾಡಿದ ಭಕ್ತರು ಸಹ ಕೃಷ್ಣನ ವರೆಗಿನ ಭಕ್ತಿ ಮಾಡುತ್ತಿದ್ದಾರೆ. ಇವರೂ ಸಹ 84 ಲಕ್ಷ ಯೋನಿಗಳಲ್ಲಿ ಹುಟ್ಟಿ ಬರುವುದರಿಂದ ಪಾರಾಗುವುದಿಲ್ಲ. ಇಲ್ಲಿ ಗೌರವಾನ್ವಿತ ಗರೀಬ್ ದಾಸ್ ಹಾಗೂ ಕಬೀರ್ ಪರಮೇಶ್ವರರ ವಾಣಿಯಲ್ಲಿ ಪ್ರತ್ಯಕ್ಷ ಪ್ರಮಾಣ ಇದೆ.**

ಅನಂತ ಕೋಟಿ ಅವತಾರ ಹೈ, ಮಾಯಾ ಕೆ ಗೋವಿಂದ ।
ಕರ್ತಾ ಹೊ ಹೊ ಅವತರೆ, ಬಹುರ ಪಡೆ ಜಗ ಫಂದ ॥

**ಸತ್ಯಪುರುಷ ಕಬೀರ್ ಪರಮೇಶ್ವರರ ಭಕ್ತಿಯಿಂದಲೇ ಜೀವಾತ್ಮ ಮೋಕ್ಷ ಪಡಯುತ್ತಾನೆ. ಎಲ್ಲಿಯವರೆಗೆ ಜೀವ ಸತ್ಯಲೋಕದಲ್ಲಿ ಮರಳಿ ಹೋಗುವುದಿಲ್ಲ ಅಲ್ಲಿಯವರೆಗೆ ಕಾಲನ ಲೋಕದಲ್ಲಿ ಹೀಗೆಯೆ ಕರ್ಮ ಮಾಡುವನು ಮತ್ತು ದಾನ ಧರ್ಮದ ಗಳಿಕೆಯನ್ನು ಸ್ವರ್ಗರೂಪಿ ಹೊಟೇಲ್‌ಗಳಲ್ಲಿ**

**ಖರ್ಚು ಮಾಡಿ ಮರಳಿ ಕರ್ಮದ ಆಧಾರದಿಂದ 84 ಲಕ್ಷ ಪ್ರಕಾರದ ಪ್ರಾಣಿಗಳ ಶರೀರದಲ್ಲಿ ಕಷ್ಟ ಹೊಂದುವ ಈ ಕಾಲ ಲೋಕದಲ್ಲಿ ಸುತ್ತುತ್ತಿರುವನು. ಕೋಟಿಗಳಷ್ಟು (ಗೋವಿಂದ) ಬಹ್ಮಾ, ವಿಷ್ಣು, ಮಹೇಶ್ವರರು ದುರ್ಗೆ (ಮಾಯಾ) ಯಿಂದ ಉತ್ಪನ್ನರಾಗಿ ಮರಣಿಸಿದ್ದಾರೆ. ದೇವರ ಅವತಾರಗಳಾಗಿ ಆಗಮಿಸಿ ಪುನಃ ಕರ್ಮಗಳ ಬಂಧನದಲ್ಲಿ ಬಂಧಿತರಾಗಿ ಕರ್ಮವನ್ನು ಭೋಗಿಸಿ 84 ಲಕ್ಷ ಯೋನಿಗಳಲ್ಲಿ ಹೋದರು. ಹೇಗೆ ಶ್ರೀ ವಿಷ್ಣುವಿಗೆ ನಾರದರ ಶಾಪ ತಗುಲಿ ಅಯೋಧ್ಯಾದಲ್ಲಿ ಶ್ರೀರಾಮಚಂದ್ರನ ರೂಪದಲ್ಲಿ ಆಗಮಿಸಿ ಸುಗ್ರಿವನ ಅಣ್ಣ ವಾಲಿಯನ್ನು ಕೊಂದನು. ಈ ಕರ್ಮದ ಶಿಕ್ಷೆಯನ್ನು ಅನುಭವಿಸಲು ಶ್ರೀ ಕಷ್ಣನಾಗಿ ಜನನವಾಯಿತು. ಆಗ ವಾಲಿಯ ಆತ್ಮ ಬೇಟೆಗಾರನಾಗಿ ತನ್ನ ಪತೀಕಾರ ತಿರಿಸಿಕೊಂಡನು. ಶ್ರೀ ಕೃಷ್ಣನ ಕಾಲಿಗೆ ವಿಷಯುಕ್ತ ಬಾಣ ಹೊಡೆದು ವಧೆ ಮಾಡಿದನು.**

**ಗೌರವಾನ್ವಿತ ಗರೀಬ್‌ದಾಸರು ತಮ್ಮ ವಾಣಿಯಲ್ಲಿ ಹೇಳಿದ್ದಾರೆ.**

ಬ್ರಹ್ಮಾ-ವಿಷ್ಣು-ಮಹೇಶ್ವರ ಮಾಯಾ, ಔರ್ ಧರ್ಮರಾಯ ಕಹಿಯೆ ।
ಇನ್ ಪಾಂಚೋ ಮಿಲ್ ಪರಪಂಚ್ ಬನಾಯಾ, ವಾಣಿ ಹಮಾರಿ ಲಹಿಯೇ ॥

ಇನ್ ಪಾಂಚೋ ಮಿಲ್ ಜೀವ ಅಟಕಾಯೆ, ಜುಗನ್-ಜುಗನ್ ಹಮ್ ಆನ್ ಛುಟಾಯೆ ।
ಬಂದೀ ಛೋಡ್ ಹಮಾರಾ ನಾಮ್ಂ ಅಜರ, ಅಮರ ಹೈ ಅಸ್ಥಿರ ಠಾಮ್ಂ ॥

ಪೀರ್ ಪೈಗಂಬರ್ ಕುತುಬ್ ಔಲಿಯಾ, ಸುರ-ನರ ಮುನಿ ಜನ ಜ್ಞಾನಿ ।
ಯೆತಾ ಕೊ ತೋ ರಾಹ ನ ಪಾಯಾ, ಜಮ ಕೆ ಬಂಧೆ ಪ್ರಾಣೀ ॥

ಧರ್ಮರಾಯ ಕೀ ಧೂಮಾ-ಧಾಮೀ, ಜಮ ಪರ್ ಜಂಗ್ ಚಲಾವು ।
ಜೋರಾ ಕೊ ತೊ ಜಾನ್ ನ ದೂಂಗಾ, ಬಾಂದ್ ಅದಲ್ ಘರ್ ಲಾವು ॥

ಕಾಲ-ಅಕಾಲ ದೋಹೂ ಕೊ ಮೋಸೂ, ಮಹಾಕಾಲ ಸಿರ ಮೂಂಡೂ ।
ಮೈ ತೊ ತಖ್ತ ಹಜೂರಿ ಹುಕಮೀ, ಚೋರ್ ಖೋಜ ಕೂ ಢೂಂಡೂ ॥

ಮೂಲಾ ಮಾಯಾ ಮಗ ಮೆ ಬೈಠೀ, ಹಂಸಾ ಚುನ್-ಚುನ್ ಖಾಯಿ ।
ಜ್ಯೋತಿ ಸ್ವರೂಪಿ ಭಯಾ ನಿರಂಜನ್, ಮೈ ಹೀ ಕರ್ತಾ ಭಾಯಿ ॥

ಸಂಹಸ ಅಠಾಸೀ ದೀಪ ಮುನೀಶ್ವರ್, ಬಂಧೇ ಮೂಲಾ ಡೋರೀ ।
ಏತ್ಯಾ ಮೆ ಜಮ ಕಾ ತಲಬಾನಾ, ಚಲಿಯೆ ಪುರುಷ ಕೀಶೋರಿ ॥

ಮೂಲಾ ಕಾ ತೊ ಮಾಥಾ ದಾಂಗೂ, ಸತಕಿ ಮೊಹರ್ ಕರೂಂಗಾ ।
ಪುರುಷ ದೀಪ್ ಕೂ ಹಂಸ ಚಲಾಊ, ದರಾನ ರೋಕನ್ ದೂಂಗಾ ॥

ಹಮ್ ತೊ ಬಂದೀ ಛೋಡ್ ಕಹಾವಾ, ಧರ್ಮರಾಯ್ ಹೈ ಚಕವೈ ।
ಸತ್‌ಲೋಕ್ ಕೀ ಸಕಲ ಸುನಾವಾ, ವಾಣಿ ಹಮರಿ ಅಖವೈ ॥

ನೌ ಲಖ್ ಪಟ್ಟಣ ಊಪರ ಖೇಲೂ, ಸಾಹದರೆ ಕೂ ರೋಕೂಂ ।
ದ್ವಾದಶ ಕೋಟಿ ಕಟಕ ಸಬ್ ಕಾಟೂ, ಹಂಸ ಪಠಾವು ಮೋಖು ॥

ಚೌದಹ ಭುವನ ಗಮನ ಹೈ ಮೇರಾ,ಜಲ-ಥಲ ಮೆ ಸರಬಂಗೀ ।
ಖಾಲೀಕ್ ಖಲಕ್ ಖಲಕ್ ಮೇ ಖಾಲಿಕ್, ಅವಿಗತ್ ಅಚಲ ಅಭಂಗಿ ॥

ಅಗರ ಅಲೀಲ ಚಕ್ರ ಹೈ ಮೇರಾ, ಜಿತ್ ಸೆ ಹಮ್ ಚಲ ಆಯೆ ।
ಪಾಂಚೋಪರ್ ಪ್ರವಾನಾ ಮೇರಾ, ಬಂಧಿ ಛುಟಾವನ್ ಧಾಯೆ ॥

ಜಹಾ ಓಂಕಾರ ನಿರಂಜನ ನಾಹೀ, ಬ್ರಹ್ಮಾ ವಿಷ್ಣು ವೇದ ನಹೀ ಜಾಹೀ ।

ಜಹಾ ಕರತಾ ನಹೀ ಜಾನ ಭಗವಾನಾ, ಕಾಯಾ ಮಾಯಾ ಪಿಂಡ ನ ಪ್ರಾಣಾ ॥

ಪಾಂಚ ತತ್ವ ತೀನೋ ಗುಣ ನಾಹೀ, ಜೋರಾ ಕಾಲ ದೀಪ ನಹೀ ಜಾಹೀ ।
ಅಮರ ಕರೂ ಸತ್‌ಲೋಕ್ ಪಠಾಂವು, ತಾತ್ಯೆ ಬಂದೀಛೋಡ್ ಕಹಾಂವು ॥

**ಗೌರವಾನ್ವಿತ ಗರೀಬ್‌ದಾಸರು, ಕಬೀರ್ ಪರಮೇಶ್ವರರ ಮಹಿಮೆಯನ್ನು ವರ್ಣಿಸುತ್ತಾ ಹೇಳುತ್ತಾರೆ, ನಮ್ಮ ಪ್ರಭು ಕವಿರ್ದೇವರು ಮುಕ್ತಿದಾತರು. ಮುಕ್ತಿದಾತರೆಂದರೆ ಕಾಲನ ಸೆರೆಯಿಂದ ಬಿಡುಗಡೆ ಮಾಡಿ ಮುಕ್ತಿಕೊಡುವರು, ಕಾಲ ಬ್ರಹ್ಮನ 21 ಬ್ರಹ್ಮಾಂಡಗಳಲ್ಲಿ ಎಲ್ಲ ಪ್ರಾಣಿಗಳು, ಪಾಪದ ಕಾರಣ ಕಾಲನ ಸೆರೆಯಲ್ಲಿವೆ. ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರರು ಪಾಪ ನಾಶ ಮಾಡುವರು. ಪಾಪವನ್ನು ಬ್ರಹ್ಮಾ, ವಿಷ್ಣು, ಶಿವ, ದುರ್ಗೆ, ಕಾಲ ಬ್ರಹ್ಮ, ಪರಬ್ರಹ್ಮ ಈ ಯಾರಿಂದಲೂ ನಾಶ ಮಾಡಲಾಗುವುದಿಲ್ಲ. ಯಾರ ಕರ್ಮ ಹೇಗಿದೆಯೊ, ಹಾಗೇಯೆ ಫಲವೂ ದೊರೆಕುತ್ತದೆ. ಯಜುರ್ವೇದದ 5ನೇ ಅಧ್ಯಾಯದ 32ನೇ ಮಂತ್ರದಲ್ಲಿ ಹೀಗೆ ಬರೆದಿದೆ. ಕವಿರಂಘಾರಿರಸಿ ಕವಿರ್ದೇವ (ಕಬೀರ್ ಪರಮೇಶ್ವರರು) ಪಾಪಗಳ ಶತ್ರು. ಬಂಭಾರಿರಸಿ ಅಂದರೆ ಬಂಧನದಿಂದ ಮುಕ್ತ ಮಾಡುವ ಮುಕ್ತಿ ದಾತರೂ (ಬಂದೀಛೋಡ್) ಆಗಿದ್ದಾರೆ.**

**ಈ ಐವರ ಮೇಲೆ (ಬ್ರಹ್ಮಾ, ವಿಷ್ಣು, ಶಿವ ಮಾಯಾ, ಧರ್ಮರಾಯ) ಸತ್ಯಪುರುಷ (ಕವಿರ್ದೇವ) ಪರಮಾತ್ಮ ನಿರುವನು. ಇವನೇ ಸತ್ಯಲೋಕದ ಪ್ರಭು. ಉಳಿದ ಸಕಲ ಪರಬ್ರಹ್ಮ, ಕಾಲ ಬ್ರಹ್ಮ (ಧರ್ಮರಾಯ), ಮಾಯಾ (ದುರ್ಗಾ) ಹಾಗೂ ಬ್ರಹ್ಮಾ, ವಿಷ್ಣು, ಶಿವ ಇವರುಗಳು ನಾಶವಾಗುವ ದೇವರಾಗಿದ್ದಾರೆ. ಮಹಾಪ್ರಳಯದಲ್ಲಿ ಇವರು ಹಾಗೂ ಇವರ ಎಲ್ಲ ಲೋಕಗಳು ಸಮಾಪ್ತವಾಗುತ್ತವೆ. ಸಾಮಾನ್ಯ ಜೀವಿಗಿಂತ ಇವರ ಆಯಸ್ಸು ಎಷ್ಟೋ ಸಾವಿರ ಪಟ್ಟು ಹೆಚ್ಚಾಗಿದೆ. ಆದರೆ ಯಾವ ಸಮಯ ನಿರ್ಧಾರಿತವಾಗಿದೆ ಆಗ ಒಂದು ದಿನ ನಿಶ್ಚಿತವಾಗಿ ಎಲ್ಲ ನಾಶವಾಗುತ್ತದೆ.**

**ಗೌರವಾನ್ವಿತ ಗರೀಬ್‌ದಾಸರು ಹೀಗೆ ಹೇಳಿದ್ದಾರೆ.**

ಶಿವ ಬ್ರಹ್ಮಾ ಕಾ ರಾಜ, ಇಂದ್ರ ಗಿನತೀ ಕಹಾ ।
ಚಾರ್ ಮುಕ್ತಿ ವೈಕುಂಠ ಸಮಝ್, ಯೆತಾ ಲಹ್ಮಾ ॥

ಸಂಖ ಜುಗನ್ ಕೀ ಜುನೀ, ಉಮ್ರ ಬಡ ಧಾರಿಯಾ ।
ಜಾ ಜನನಿ ಕುರ್ಬಾನ್, ಸು ಕಾಗಜ ಪಾರಿಯಾ ॥

ಯೆತಿ ಉಮ್ರ ಬುಲಂದ್ ಮರ್ರೈಗಾ ಅಂತ ರೆ ।
ಸತ್‌ಗುರು ಲಗ್ಯೆ ನ ಕಾನ ನ ಭ್ಯೆಂಟೆ ಸಂತ ರೆ ॥

**ಸಂಖ ಯುಗ (ಬಹಳ ವರ್ಷಗಳು) ಆಯಸ್ಸು ಇದ್ದರೂ ಸಹ ಒಂದು ದಿನ ಖಂಡಿತ ಮುಗಿಯುತ್ತದೆ. ಆದರೆ ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರರ ಸೇವಕ ಪರಮ ಸಂತ ರವರು ಮೂರು ನಾಮ (ಅದರಲ್ಲಿ ಒಂದು ಓಂ ಹಾಗೂ ತತ್+ಸತ್ ಸಾಂಕೇತಿಕವಾಗಿವೆ) ಕೊಡುತ್ತಾರೆ. ಹಾಗೂ ಅವರಿಗೆ ನಾಮೋಪದೇಶ ಕೊಡುವ ಅಪ್ಪಣೆ ಆಗಿದ್ದರೆ, ಅಂತಹ ಪೂರ್ಣ ಸಂತರ ಮುಖಾಂತರ ಉಪದೇಶ ಪಡೆದು ನಾಮ ಜಪದ ಗಳಿಕೆ ಮಾಡಿದರೆ, ನಾವು ಸತ್ಯಲೋಕದ ಅಧಿಕಾರಿ ಹಂಸರಾಗುತ್ತೆವೆ. ಸತ್ಯ ಸಾಧನೆ ಮಾಡದ, ದೀರ್ಘ ಆಯಸ್ಸಿನಿಂದ ಪ್ರಯೋಜನವೇನು ನಿರಂಜನ ಲೋಕದಲ್ಲಿ ದುಃಖವೇ ದುಃಖವಿದೆ.**

ಕಬೀರ್, ಜೀವನಾ ತೊ ಥೋಡಾ ಹೀ ಭಲಾ, ಜ್ಯೆ ಸತ್ ಸುಮಿರನ್ ಹೋಯ ।
ಲಾಖ್ ವರ್ಷ ಕಾ ಜೀವನಾ, ಲಖ್ಯೆ ಧರ್ಯೆ ನಾ ಕೋಯ್ ॥

**ಕಬೀರ್ ಪರಮೇಶ್ವರರು ತಮ್ಮ ಪರಿಚಯವನ್ನು ಸ್ವತಃ ತಿಳಿಸಿದ್ದಾರೆ. ಈ ದೇವರುಗಳಿಗಿಂತ**

ಮೇಲೆ ಅಸಂಖ್ಯೆ ಭುಜಗಳುಳ್ಳ ಸತ್ಯಪುರುಷನಿದ್ದಾನೆ. ಅವನು ಸತ್ಯಲೋಕ (ಸತ್ಯ ಖಂಡ, ಸತ್ಯಧಾಮ್) ದಲ್ಲಿರುತ್ತಾನೆ. ಅವನ ಅಧಿನ ಎಲ್ಲಾ ಲೋಕಗಳು [ಪರಬ್ರಹ್ಮನ 7 ಸಂಖ ಬ್ರಹ್ಮಾಂಡ, ಕಾಲ ಬ್ರಹ್ಮನ 21 ಬ್ರಹ್ಮಾಂಡಗಳು, ಶಕ್ತಿ (ದುರ್ಗಾ), ಬ್ರಹ್ಮಾ, ವಿಷ್ಣು, ಶಿವನ ಲೋಕಗಳು ಹಾಗೂ ಅನ್ಯ ಸರ್ವ ಬ್ರಹ್ಮಾಂಡ] ಇವೆ. ಯಾರು ಸತ್ಯನಾಮ/ ಸಾರನಾಮವನ್ನು ಸಂಪೂರ್ಣ ಜ್ಞಾನಿ ಅಂದರೆ ಪೂರ್ಣ ಗುರುವಿನಿಂದ ಪಡೆದು ಜಪಿಸಿದರೆ ಸತ್ಯಲೋಕಕ್ಕೆ ಹೋಗುತ್ತಾರೆ, ಅಂತಹ ಆತ್ಮಗಳಿಗೆ ಪುನಃ ಹುಟ್ಟು ಇಲ್ಲ. ಕವಿರ್ದೇವರು ಸ್ವತಃ ಎಲ್ಲ ಬೇರೆ–ಬೇರೆ ಲೋಕಗಳಲ್ಲಿ ಬೇರೆ–ಬೇರೆ ನಾಮಗಳಿಂದ ನೆಲೆಸಿದ್ದಾರೆ. ಹೇಗೆಂದರೆ ಅಲಖ್‌ಲೋಕದಲ್ಲಿ 'ಅಲಖ್ ಪುರುಷ', ಅಗಮ್‌ಲೋಕದಲ್ಲಿ 'ಅಗಮ್‌ಪುರುಷ', ಅಕಹ/ ಅನಾಮಿ ಲೋಕದಲ್ಲಿ ಅನಾಮಿ ಪುರುಷ ರೂಪದಲ್ಲಿ ವಿರಾಜಮಾನರಿದ್ದಾರೆ. ಇವಂತು ಅವರ ಉಪನಾಮಗಳಿವೆ ಆ ಪೂರ್ಣ ಪುರುಷನ ವಾಸ್ತವಿಕ ನಾಮ 'ಕವೀರ್' (ಕವಿರ್ದೇವ) (ಭಾಷೆಯ ಭಿನ್ನತೆಯಿಂದ ಕಬೀರ್) ಇದೆ.

## "ಗೌರವಾನ್ವಿತ ಗುರು ನಾನಕ್ ರವರ ವಾಣಿಯಲ್ಲಿ ಸೃಷ್ಠಿ ರಚನೆಯ ಸಂಕೇತ"

**ಶ್ರೀ ಗುರು ನಾನಕ್ ರವರ ಅಮೃತವಾಣಿ, ಮಹಲಾ–1, ರಾಗಬಿಲಾವಲು, ಅಂಶ–1 ("ಗುರು ಗ್ರಂಥ" ಪುಟ 839)**

ಆಪೆ ಸಚು ಕೀಆ ಕರ ಜೋಡಿ । ಅಂಡಜ ಫೋಡಿ ಜೋಡಿ ವಿಛೌಡ್ ॥
ಧರತೀ ಆಕಾಶ್ ಕೀಯೆ ಬೈಸಣ ಕವು ಥಾವು ।
ರಾತಿ ದಿನಂತು ಕೀ ಯೆ ಭವು–ಭಾವು॥ ರಾತಿ ದಿನಂತು ಕೀ ಯೆ ಭವು–ಭಾವು ॥
ಜಿನ ಕೀಯೆ ಕರಿ ವೆಖಣ ಹಾರಾ (3)
ತ್ರಿತೀಆ ಬ್ರಹ್ಮಾ–ಬಿಸನು–ಮಹೇಸಾ । ದೇವಿ ದೇವ ಉಪಾಯೆ ವೇಸಾ । (4)
ಪವುಣ ಪಾಣೀ  ಅಗನೀ ಬಿಸರಾವು । ತಾಹೀ ನಿರಂಜನ ಸಾಚೊ ನಾವು ।
ತಿಸು ಮಹಿ ಮನು ಆ ರಹಿಆ ಲಿವ ಲಾಯಿ । ಪ್ರಣವತಿ ನಾನಕು ಕಾಲು ನ ಖಾಯಿ ॥10॥

**ಭಾವಾರ್ಥ :– ಸತ್ಯಪುರುಷನು ಸ್ವತಃ ತನ್ನ ಕೈಯಿಂದಲೇ ಸಮಸ್ತ ಸೃಷ್ಠಿಯ ರಚನೆ ಮಾಡಿರುವನು. ಅವನೇ ಮೊಟ್ಟೆಯನ್ನು ಮಾಡಿದನು. ನಂತರ ಅದರಿಂದ ಜ್ಯೋತಿ ನಿರಂಜನನು ಹೊರಬಂದನು. ಅದೇ ಪೂರ್ಣ ಪರಮಾತ್ಮನು ಸರ್ವ ಪ್ರಾಣಿಗಳಿಗೆ ವಾಸಿಸಲು, ಭೂಮಿ, ಆಕಾಶ, ಗಾಳಿ, ನೀರು, ಅಗ್ನಿ, ಎಂಬ ಪಂಚ ತತ್ವಗಳನ್ನು ರಚಿಸಿದ. ತನ್ನಿಂದ ರಚಿತವಾದ ಸೃಷ್ಠಿಗೆ, ಸ್ವಯಂ ಸಾಕ್ಷಿಯಾಗಿರುವನು. ಬೇರೆ ಯಾರೂ ಸರಿಯಾದ ತಿಳುವಳಿಕೆಯನ್ನು ಕೊಡಲಾರರು. ನಂತರ ಜೋತಿ ನಿರಂಜನ ಹಾಗು ದುರ್ಗಾಳ ಪತಿ ಪತ್ನಿ ಸಂಭೋಗದಿಂದ ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಹಾಗೂ ಶ್ರೀ ಶಿವ ಇವರ ಉತ್ಪತ್ತಿ ಆಯಿತು. ಆದಾದ ನಂತರ ಅನ್ಯ ದೇವ–ದೇವತೆಯರನ್ನು ಉತ್ಪತ್ತಿ ಮಾಡಿದ. ಆ ಅನ್ಯ ದೇವರುಗಳ ಜೀವನ ಚರಿತ್ರೆ, ಹಾಗೂ ಅನ್ಯ ಋಷಿಗಳ ಅನುಭವದ 6 ಶಾಸ್ತ್ರ ಹಾಗೂ 18 ಪುರಾಣಗಳಾದವು. ಪೂರ್ಣ ಪರಮಾತ್ಮನ ನಿಜ ನಾಮ. (ಸತ್ಯನಾಮ) ಸಾಧನೆಯನ್ನು ಅನನ್ಯ ಮನದಿಂದ (ದೃಢಚಿತ್ತದಿಂದ) ಮಾಡುವುದರಿಂದ ಗುರು ಮರ್ಯಾದೆಯಲ್ಲಿ, (ಪ್ರಣವತಿ) ಇದ್ದರೆ ಕಾಲನು ಭಕ್ಷಿಸುವುದಿಲ್ಲ ಎಂದು ಗುರು ನಾನಕ್ ರವರು ಹೇಳಿದ್ದಾರೆ.**

**ರಾಗ ಮಾರು (ಅಂಶ) ಅಮೃತವಾಣಿ ಮಹಲಾ 1 (ಗು. ಗ್ರಂ. ಪು. 1037)**

ಸುನಹು ಬ್ರಹ್ಮಾ, ಬಿಸನು ಮಹೇಸು, ಉಪಾಯೆ । ಸುನೆ ವರತೆ ಜುಗ ಸಭಾಯೆ ॥
ಇಸು ಪದ ಬಿಚಾರೆ ಸೊ ಜನು ಪುರಾ । ತಿಸ ಮಿಲಿಯೆ  ಭರಮು ಚುಕಾಯಿದಾ ॥ 3 ॥

ಸಾಮ ವೇದು, ರುಗು, ಜುಜರು, ಅಥರಬಣು ।
ಬ್ರಹಮೆ ಮುಖ ಮಾಯಿಆ ಹೈ ತ್ರೈಗುಣ ತಾ ಕೀ ಕೀಮತ ಕಹಿ ನ ಸಕೈ ।
ಕೊ ತಿವು ಬೋಲೆ ಜಿವು ಬುಲಾಯಿದಾ । (9)

**ಮೇಲಿನ ಅಮೃತ ವಾಣಿಯ ಸಾರಾಂಶ ಹೀಗಿದೆ "ಮೊಟ್ಟೆ ಎರಡು ಭಾಗವಾದಾಗ ಯಾರು ಹೊರ ಬಂದನು? ಯಾರು ಶೂನ್ಯ ಸ್ಥಾನದಲ್ಲಿ ಬ್ರಹ್ಮ ಲೋಕವನ್ನು ಸೃಷ್ಟಿಸಿದನು? ಯಾರು ಗುಪ್ತ ಸ್ಥಾನದಿಂದ (ರಹಸ್ಯ ಸ್ಥಾನ) ಬ್ರಹ್ಮಾ, ವಿಷ್ಣು, ಶಿವ ರವರ ಉತ್ಪತ್ತಿ ಮಾಡಿದ? ಆ ಪರಮಾತ್ಮ ಯಾರು ಕಾಲನ ಬಾಯಿಯಿಂದ ನಾಲ್ಕು ವೇದಗಳನ್ನ (ಪವಿತ್ರ ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವವೇದ) ಹೇಳಿಸಿದನು. ಯಾರಿಗೆ ಸಕಲ ಪ್ರಾಣಿಗಳನ್ನು ತಾನು ಬಯಸಿದಂತೆ ಕರೆಸಿಕೊಳ್ಳುವ ಶಕ್ತಿ ಇದೆ? ಈ ಎಲ್ಲಾ ಪ್ರಶ್ನೆಗಳಿಗೆ ಯಾವುದೆ ಅನುಮಾನವಿಲ್ಲದೆ (ಸಂಶಯವಿಲ್ಲದೆ) ಉತ್ತರ ಕೊಡುವನೋ, ಯಾವ ಸಂತನು ಪೂರ್ಣ ಸೃಷ್ಟಿಯ ರಚನೆಯನ್ನು ಸವಿಸ್ತಾರ ತಿಳಿಸುವನೋ, ಆ ತತ್ವಜ್ಞಾನಿಯೇ ಪೂರ್ಣ ಸಂತ ಅರ್ಥಾತ್ ತತ್ವದರ್ಶಿ ಸಂತ.**

**ಗೌರವಾನ್ವಿತ ಗುರು ನಾನಕ್ ರವರ ಅಮೃತವಾಣಿ. ಶ್ರೀ ಗುರು ಗ್ರಂಥದ ಪುಟ. 929 ರಾಮಕಲಿ ಮಹಲಾ 1, ದಖಣೀ ಓಅಂಕಾರ ।**

ಓಅಂಕಾರಿ ಬ್ರಹ್ಮಾ ಉತಪತಿ । ಓ ಅಂಕಾರೂ ಕೀಆ ಜಿನಿ ಚಿತ । ಓಅಂಕಾರಿ ಸೈಲ ಜುಗ ಭಯೆ । ಓ ಅಂಕಾರಿ ಬೇದ ನಿರಮಯೆ। ಓಅಂಕಾರಿ ಸಬದಿ ಉಧರೆ । ಓ ಅಂಕಾರಿ ಗುರುಮುಖಿ ತರೆ । ಓನಮ ಅಖರ ಸುಣಹೂ ಬೀಚಾರು । ಓ ನಮ ಅಖರು ತ್ರಿಭವಣ ಸಾರು ।

**ಮೇಲಿನ ಅಮೃತ ವಾಣಿಯಲ್ಲಿ ಶ್ರೀ ಗುರು ನಾನಕ್ ರವರು ಹೇಳುತ್ತಿದ್ದಾರೆ:- ಓಂ ಕಾರ ಅರ್ಥಾತ್ ಜ್ಯೋತಿ ನಿರಂಜನ (ಕಾಲ) ನಿಂದ, ಬ್ರಹ್ಮಾ ರವರ ಉತ್ಪತ್ತಿಯಾಯಿತು. ಆನೇಕ ಯುಗಗಳವರೆಗೆ ಸ್ವೇಚ್ಛೆಯಿಂದ ಇದ್ದು, ಓಂ ಕಾರನು (ಬ್ರಹ್ಮನು) ವೇದಗಳನ್ನು ಉತ್ಪತ್ತಿ ಮಾಡಿದ. ಅದು ಬ್ರಹ್ಮಾ ರವರಿಗೆ ಪ್ರಾಪ್ತವಾಯಿತು. ಮೂರು ಲೋಕಗಳ ಭಕ್ತಿಯ ಏಕ ಮಾತ್ರ ಮಂತ್ರ 'ಓಂ' ಕಾರವಾಗಿದೆ. ವಾಸ್ತವದಲ್ಲಿ ಜಪ ಮಾಡುವ ಮೂಲ ಮಂತ್ರವೇ 'ಓಂ' ಕಾರವಾಗಿದೆ. ಈ 'ಓಂ' ಕಾರ ಮಂತ್ರದ ಉಪದೇಶವನ್ನು ಯಾರಾದರೂ ಸದ್ಗುರುವಿನಿಂದ ಪಡೆದು ಜಪ ಮಾಡಿದರೆ, ಉದ್ದಾರವಾಗುತ್ತಾರೆ. ಜೀವಿಗಳ ಉದ್ಧಾರಕ್ಕೆ 'ಓಂ' ಕಾರ ಮಂತ್ರದ ಜಪ ಅಗತ್ಯ.**

**ವಿಶೇಷ :- ಶ್ರೀ ಗುರು ನಾನಕ್ ರವರು ಮೂರು ಮಂತ್ರಗಳ (ಓಂ-ತತ್-ಸತ್) ಸ್ಥಾನ-ಸ್ಥಾನಗಳಲ್ಲಿನ ರಹಸ್ಯವನ್ನು ವಿವರಿಸಿದ್ದಾರೆ, ಇದನ್ನು ಕೇವಲ ಪೂರ್ಣ ಸಂತರು ಮಾತ್ರ ತಿಳಿಯಬಲ್ಲರು ಹಾಗೂ ಈ ಮೂರು ಮಂತ್ರಗಳನ್ನು ಉಪದೇಶ ಪಡೆಯುವವರಿಗೆ ಜಪ ಮಾಡಲು ಉಪದೇಶಿಸುತ್ತಾರೆ. (ಪು 1038)**

ಉತ್ತಮ ಸತಿಗುರು ಪುರುಷ ನಿರಾಲೆ, ಸಬದಿ ರತೆ ಹರಿ ರಸ ಮತವಾಲೆ ।
ರಿಧಿ, ಬುಧಿ, ಸಿಧಿ, ಗಿಆನ ಗುರು ತೆ ಪಾಇಯೆ । ಪೂರೆ ಭಾಗ ಮಿಲಾಯಿದಾ ॥ 15 ॥

ಸತಿಗುರು ತೆ ಪಾಯೆ ಬೀಚಾರಾ, ಸುನ ಸಮಾಧಿ ಸಚೆ ಘರಬಾರಾ ।
ನಾನಕ ನಿರಮಲ ನಾದು ಸಬದ ಧುನಿ, ಸಚು ರಾಮೈ ನಾಮಿ ಸಮಾಯಿದಾ ॥ 17) ॥ 5, 17॥

**ಮೇಲಿನ ಅಮೃತ ವಾಣಿಯ ಭಾವಾರ್ಥ : ಈ ವಾಸ್ತವಿಕ ಜ್ಞಾನದಾತ ಗುರು ದಯಾಮಯನಾಗಿರುತ್ತಾನೆ. ಅವರು ಕೇವಲ ನಾಮ ಜಪವನ್ನು ಜಪಿಸಲು ಕೊಡುತ್ತಾರೆ ಮತ್ತು ಜಪಿಸುತ್ತಾರೆ. ಬೇರೆ ಹಠಯೋಗ ಸಾಧನೆಯನ್ನು ತಿಳಿಸುವುದಿಲ್ಲ. ನಿಮಗೆ ಹಣ, ಸಂಪತ್ತು, ಪದವಿ,**

ಬುದ್ಧಿ ಅಥವಾ ಭಕ್ತಿಯ ಶಕ್ತಿಯೂ ಬೇಕಾಗಿದ್ದರೆ ಅದನ್ನು ಪೂರ್ಣ ಜ್ಞಾನಿ ಸಂತರು ಪ್ರಧಾನ ಮಾಡುವರು. ಇಂತಹ ಪೂರ್ಣ ಸಂತರು ಬಹಳ ಭಾಗ್ಯವಂತರಿಗೆ ದೊರೆಯುತ್ತಾರೆ. ಆ ಪೂರ್ಣ ಸಂತರು ಮಾತ್ರ ಉಪದೇಶಿಸಬಲ್ಲರು ವಿವರಿಸಬಲ್ಲರು ಸತ್ಯಲೋಕದಲ್ಲಿರುವ ಪೂರ್ಣ ಪರಮೇಶ್ವರನು ತಮ್ಮ ವಾಸ್ತವಿಕ ಮನೆಯನ್ನು ಮೇಲೆ ಸತ್ಯಲೋಕದಲ್ಲಿ ರಚಿಸಿದ್ದಾರೆ.

ಅಲ್ಲಿ ಒಂದು ವಾಸ್ತವಿಕ ಸಾರನಾಮದ ಧ್ವನಿಯಾಗುತ್ತಿದೆ. ಆ ಆನಂದದಲ್ಲಿ ಅವಿನಾಶೀ ಪರಮೇಶ್ವರನ ಸಾರ ಶಬ್ದದಿಂದ ಸೇರಬಹುದು ಅಂದರೆ ಆ ವಾಸ್ತವಿಕ ಸುಖದ ಸ್ಥಾನದಲ್ಲಿ ವಾಸವಿರಬಲ್ಲರು. ಬೇರೆ ನಾಮಗಳಿಂದಾಗಲಿ, ಬೇರೆ ಅರ್ಧ ಜ್ಞಾನಿ ಗುರುಗಳಿಂದಾಗಲಿ, ಇದು ಸಾಧ್ಯವಿಲ್ಲ.

**ಆಂಶಿಶ ಅಮೃತವಾಣಿ ಮಹಲಾ ಪಹಲಾ (ಶ್ರೀ ಗುರು ಗ್ರಂಥ. ಪುಟ 359–360)**

ಸಿವ ನಗರೀ ಮಹಿ ಆಸಣಿ ಬೈಸಉ ಕಲಪ ತ್ಯಾಗೀ ವಾದಂ । (1)

ಸಿಂಙೀ ಸಬದ ಸದಾ ಧುನಿ ಸೋಹೈ ಅಹಿನಿಸಿ ಪೂರೈ ನಾದಂ । (2)

ಹರಿ ಕೀರತಿ ರಹ ರಾಸಿ ಹಮಾರಿ ಗುರು ಮುಖ ಪಂಥ ಅತೀತ । (3)
ಸಗಲೀ ಜ್ಯೋತಿ ಹಮಾರಿ ಸಂಮಿಆ ನಾನಾ ವರಣ ಅನೇಕಂ ।
ಕಹ ನಾನಕ ಸುಣಿ ಭರಥರೀ ಜೋಗೀ ಪಾರ್‌ಬ್ರಹ್ಮ ಲಿವ ಏಕಂ । (4)

**ಮೇಲಿನ ಅಮೃತವಾಣಿಯ ಭಾವಾರ್ಥ:– ಶ್ರೀ ಗುರು ನಾನಕ್ ರವರು ಹೇಳುತ್ತಿದ್ದಾರೆ–ಹೇ ಭರ್ಥರಿ ಯೋಗೀ! ನಿಮ್ಮ ಸಾಧನೆಯು ಭಗವಂತ ಶಿವನವರೆಗೆ ಇದೆ. ಇದರಿಂದ ನಿಮಗೆ ಶಿವನಗರಿಯಲ್ಲಿ ಸ್ಥಾನ ಸಿಕ್ಕಿದೆ. ಶರೀರದಲ್ಲಿ ಶೃಂಗದ ಶಬ್ದ (ಕೊಂಬಿನಿಂದ ಮಾಡುವ ಶಬ್ದ) ಮೊದಲಾದವು ಆಗುತ್ತಿದೆ. ಅದು ಈ ಕಮಲಗಳ ಶಬ್ದ. ಟೆಲಿವಿಷನ್ ರೀತಿಯಲ್ಲಿ ಪ್ರತ್ಯೇಕ ದೇವರ ಲೋಕದಿಂದ ಶರೀರಗಳಲ್ಲಿ ಕೇಳಿಸುತ್ತಲಿದೆ.**

**ನಾನಂತೂ, ಒಬ್ಬನೇ ಪರಮಾತ್ಮ ಪಾರ್‌ಬ್ರಹ್ಮ ಯಾರು ಎಲ್ಲರಿಂದಲೂ ಬೇರೆಯಾದ ಪೂರ್ಣ ಪರಮಾತ್ಮನೋ, ಅವನಲ್ಲಿ ಮನಸ್ಸಿಟ್ಟು ಭಕ್ತಿ ಮಾಡುತ್ತೇನೆ.**

**ನಾವು ಡಾಂಬಿಕರಂತೆ ತೋರಿಸಿಕೊಳ್ಳುವುದಿಲ್ಲ. (ಕೈಯಲ್ಲಿ ದಂಡಧರಿಸಿ, ಬಸ್ಮಲೇಪನ ಮಾಡಿಕೊಳ್ಳುವುದು) ನಾನಂತೂ ಸರ್ವ ಪ್ರಾಣಿಗಳನ್ನು ಒಬ್ಬ ಪೂರ್ಣ ಪರಮಾತ್ಮನ ಸಂತಾನವೆಂದು ತಿಳಿದಿದ್ದೇನೆ. ಎಲ್ಲವೂ ಆ ಶಕ್ತಿಯಿಂದಲೇ ನಡೆಯುತ್ತಲಿವೆ. ನಮ್ಮ ಮುದ್ರೆಯು ಗುರುವಿನಿಂದ ಉಪದೇಶ ಪಡೆದ ಸತ್ಯನಾಮ ಜಪವೇ ಆಗಿದೆ. ನಮ್ಮ ವೇಷ ಭೂಷಣವು ಕ್ಷಮೆಯೇ ಆಗಿದೆ. ನಾನಂತೂ ಪೂರ್ಣ ಪರಮಾತ್ಮನ ಉಪಾಸಕ ಪೂರ್ಣ ಸದ್ಗುರುವಿನ ಭಕ್ತಿ ಮಾರ್ಗ ಇದಕ್ಕಿಂತ ಭಿನ್ನವಾಗಿದೆ.**

**ಅಮೃತವಾಣಿ ರಾಗ ಆಸಾ ಮಹಲಾ 1 (ಶ್ರೀ ಗುರು ಗ್ರಂಥ ಪುಟ 420)**

॥ ಆಸಾ ಮಹಲಾ 1 ॥ ಜಿನಿ ನಾಮು ವಿಸಾರಿಆ ದೂಜೈ ಭರಮಿ ಭುಲಾಯಿ । ಮೂಲು ಛೋಡಿ ಡಾಲೀ ಲಗೆ । ಕಿಆ ಪಾವಹಿ ಛಾಯಿ ॥ 1 ॥ ಸಾಹಿಬು ಮೆರಾ ಏಕು ಹೈ ಅವರು ನಹೀ ಭಾಯಿ । ಕಿರಪಾ ತೆ ಸುಖು ಪಾಯಿಆ ಸಾಚೆ ಪರಥಾಯಿ ॥3॥ ಗುರ ಕೀ ಸೇವಾ ಸೋ ಕರೆ ಜಿಸು ಆಪಿ ಕರಾಯೆ ।
ನಾನಕ್ ಸಿರು ದೆ ಛೂಟೀಯೆ ದರಗಹ ಪತಿ ಪಾಯೆ ॥ 8 ॥

**ಮೇಲಿನ ವಾಣಿಯ ಭಾವಾರ್ಥ :– ಶ್ರೀ ಗುರು ನಾನಕ್ ರವರು ಹೇಳುತ್ತಿದ್ದಾರೆ, ಯಾರು ಪೂರ್ಣ ಪರಮಾತ್ಮನ ವಾಸ್ತವಿಕ ನಾಮವನ್ನು ಮರೆತು ಬೇರೆ ಭಗವಂತನ ನಾಮ ಜಪ**

**ಮಾಡುತ್ತಾರೋ, ಅವರು ಭ್ರಮೆಯಲ್ಲಿದ್ದಾರೆ. ಬೇರನ್ನು (ಪೂರ್ಣ ಪರಮಾತ್ಮ) ಬಿಟ್ಟು ಕೊಂಬೆಗಳಿಗೆ ನೀರನೆರೆದಂತೆ (ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು, ತಮೋಗುಣ ಶಿವ) ಹೀಗೆ ಮಾಡಿದರೆ ಗಿಡ ಒಣಗುತ್ತದೆ. ಅದರ ನೆರಳಿನಲ್ಲಿ ಕೂರಲೂ ಆಗುವುದಿಲ್ಲ ಇದರ ಸಾರವಿಷ್ಟೆ, ಶಾಸ್ತ್ರ ವಿಧಿಯನ್ನು ಬಿಟ್ಟು ಮಾಡುವ ಸಾಧನೆಯು ವ್ಯರ್ಥ ಪ್ರಯತ್ನವಾಗುವುದು ಯಾವುದೇ ಲಾಭವಿಲ್ಲ, ಇದಕ್ಕೆ ಪ್ರಮಾಣವು ಪವಿತ್ರ ಗೀತೆಯ 16ನೇ ಅಧ್ಯಾಯದ 23-24ನೇ ಶ್ಲೋಕದಲ್ಲಿದೆ. ಆ ಪೂರ್ಣ ಪರಮಾತ್ಮನನ್ನು ಪಡೆಯಲು, ಮನಬಂದಂತೆ ಸಾಧನೆ ಮಾಡುವುದನ್ನು ಬಿಟ್ಟು, ಪೂರ್ಣ ಗುರುದೇವರನ್ನು ಆಶ್ರಯಿಸಿ. ಅವರಿಂದ ಸತ್ಯನಾಮ ಜಪದ ಉಪದೇಶ ಪಡೆದಲ್ಲಿ ಮೋಕ್ಷ ಸಂಭವವಿದೆ. ಇಲ್ಲವಾದರೆ ಮೃತ್ಯುವಿನ ನಂತರ ನರಕಕ್ಕೆ ಹೋಗಬೇಕಾಗುವುದು.**

**ಶ್ರೀ ಗುರು ಗ್ರಂಥ ಪುಟ ಸಂ. 843-844.**

ಬಿಲಾವಲು ಮಹಲಾ 1 ॥ ಮೈ ಮನ ಚಾಹು ಘಣಾ ಸಾಚಿ ವಿಗಾಸೀ ರಾಮ । ಮೋಹಿ ಪ್ರೇಮ ಪಿರೆ ಪ್ರಭು ಅಬಿನಾಸಿ ರಾಮ ॥ ಅವಿಗತತೊ ಹರಿ ನಾಥು ನಾಥಹ್ ತಿಸೈ ಭಾವೈ ಸೋ ಥೀಯೆ। ಕಿರಪಾಲು ಸದಾ ದಯಿಆಲು ದಾತಾ ಜೀಆ ಅಂದರಿ ತೂ ಜೀಯೆ । ಮೈ ಆಧಾರು ತೇರಾ ತು ಖಸಮು ಮೇರಾ ಮೈ ತಾಣು ತಕೀಆ ತೆರವೊ । ಸಾಚಿ ಸೂಚಾ ಸದಾ ನಾನಕ್ ಗುರಸಬದಿ ಝುಗರು ನಿಬೇರಜ ॥ 4 ॥ 2॥

**ಮೇಲಿನ ಅಮೃತವಾಣಿಯಲ್ಲಿ ಶ್ರೀ ಗುರು ನಾನಕ್ ರವರು ಹೀಗೆ ಹೇಳುತ್ತಿದ್ದಾರೆ. ಅವಿನಾಶೀ ಪೂರ್ಣ ಪರಮಾತ್ಮನು ಮಾಲಿಕರಿಗೆ ಮಾಲಿಕ ಅರ್ಥಾತ್ ದೇವರಿಗೆ ದೇವರು. ಸಕಲ ದೇವರುಗಳು ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಶ್ರೀ ಶಿವ, ಶ್ರೀ ದುರ್ಗಾ, ಕಾಲ ಬ್ರಹ್ಮ ಹಾಗೂ ಪರಬ್ರಹ್ಮನಿಗೂ ಮಾಲಿಕರು. ನಾನಂತೂ ಸತ್ಯನಾಮವನ್ನು ಹೃದಯದಲ್ಲಿ ಧಾರಣೆ ಮಾಡಿರುವೆ. ಹೇ ಪರಮಾತ್ಮ! ಸಕಲ ಪ್ರಾಣಿಗಳ ಜೀವನಾಧಾರ ನೀನೇ. ನಾನು ನಿಮ್ಮ ಆಶ್ರಿತ, ತಾವು ನನ್ನ ಸ್ವಾಮಿ, ತಾವೇ ಗುರುವಿನ ರೂಪದಲ್ಲಿ ಬಂದು, ಸತ್ಯ ಭಕ್ತಿಯ ನಿರ್ಣಾಯಕ ಜ್ಞಾನ ಪ್ರಧಾನ ಮಾಡಿ, ಎಲ್ಲ ಜಗಳಗಳನ್ನು ನಿವಾರಿಸಿದಿರಿ. ಅರ್ಥಾತ್ ಸಂಶಯಗಳಿಗೆ ಸಮಾಧಾನ ಮಾಡಿದಿರಿ.**

**(ಶ್ರೀ ಗುರು ಗ್ರಂಥ ಪುಟ ಸಂ. 721 ರಾಗ ತಿಲಂಗ ಮಹಲಾ 1)**

ಯಕ ಅರ್ಜ್ ಗುಫತಮ್ ಪೇಶ್ ತೊ ದರ ಕೂನ ಕರತಾರ್ ।
ಹಕ್ಕಾ ಕಬೀರ್ ಕರೀಮ್ ತೂ ಬೇಯೆಬ್ ಪರವರದಿಗಾರ್ ।
ನಾನಕ್ ಬುಗೋಯದ ಜನ ತುರಾ ತೇರೆ ಚಾಕರಾಂ ಪಾಖಾಕ್ ।

**ಮೇಲಿನ ಅಮೃತವಾಣಿಯು ಸ್ಪಷ್ಟ ಪಡಿಸುತ್ತಿದೆ (ಹಕ್ಕಾ ಕಬೀರ್ ) ತಾವು ಸತ್ಯ ಕಬೀರ್ (ಕೂನ ಕರತಾರ) ಶಬ್ದ ಶಕ್ತಿಯಿಂದ ರಚನೆ ಮಾಡಿರುವ ಶಬ್ದ ಸ್ವರೂಪಿ ಪ್ರಭು. ಅರ್ಥಾತ್ ಸಕಲ ಸೃಷ್ಟಿಯ ರಚನಾಕಾರ ತಾವೇ ಊನವಿಲ್ಲದ ನಿರ್ವಿಕಾರ, ಸರ್ವರ ಪಾಲಿನ ಕರ್ತಾ, ದಯಾಳು ಪ್ರಭು, ನಾನು ನಿಮ್ಮ ದಾಸರ-ದಾಸ.**

**(ಶ್ರೀ ಗುರು ಗ್ರಂಥ ಪುಟ ಸಂಖ್ಯೆ 24 ರಾಗ ಸೀರೀ ಮಹಲಾ 1)**

ತೇರಾ ಏಕ್ ನಾಮ ತಾರೆ ಸಂಸಾರ, ಮೈ ಐಹಾ ಆಸ್ ಐಹೋ ಆಧಾರ ।
ನಾನಕ್ ನೀಚ್ ಕಹೈ ಬಿಚಾರ, ದಾಣಕ ರೂಪ ರಹಾ ಕರತಾರ್ ।

**ಮೇಲೆ ಹೇಳಿರುವ ಅಮೃತವಾಣಿಯಲ್ಲಿ, ಪ್ರಮಾಣ ಗೋಳಿಸಿದೆ ಯಾರು ಕಾಶಿಯಲ್ಲಿನ ಧಾಣಕರೋ, (ಜುಲಾಹಾ) ಅವರೇ ಸೃಷ್ಠಿಕರ್ತರು. ಶ್ರೀ ಗುರು ನಾನಕ ರವರು ಹೇಳುತ್ತಿದ್ದಾರೆ. ನಾನು ಸತ್ಯ ಹೇಳುತ್ತಿದ್ದೇನೆ. ಈ ಧಾಣಕ (ನೇಕಾರ) ಅರ್ಥಾತ್ ಕಬೀರ್ ನೇಕಾರನೇ ಪೂರ್ಣ ಬ್ರಹ್ಮ 'ಸತ್ಯಪುರುಷ'ರಾಗಿದ್ದಾರೆ.**

**ವಿಶೇಷ :– ಮೇಲಿನ ಸಾಂಕೇತಿಕ ಪ್ರಮಾಣಗಳಿಂದ ಧೃಡಗೊಳ್ಳುವ ಅಂಶಗಳೆಂದರೆ, ಸೃಷ್ಠಿಯ ರಚನೆ ಹೇಗೆ ಆಯಿತು. ಈಗ ಪೂರ್ಣ ಪರಮಾತ್ಮರನ್ನು ಪ್ರಾಪ್ತಿಮಾಡಿಕೊಳ್ಳಬೇಕು. ಈ ಕಾರ್ಯ ಪೂರ್ಣ ಸಂತರಿಂದ ನಾಮೋಪದೇಶ ಪಡೆದಲ್ಲಿ ಸಾಧ್ಯವಿದೆ.**

## "ಬೇರೆ ಸಂತರ ಮೂಲಕ ಸೃಷ್ಠಿ ರಚನೆಯ ದಂತ ಕಥೆ"

**ಅನ್ಯ ಸಂತರು ಸೃಷ್ಠಿ ರಚನೆಯ ಜ್ಞಾನವನ್ನು ಹೇಳಿದ್ದಾರೆ. ಅದು ಹೇಗಿದೆ? ದಯವಿಟ್ಟು ಓದಿರಿ ಕೆಳಗಿನಂತಿದೆ :– ರಾಧಾಸ್ವಾಮಿ ಪಂಥದ ಸಂತರ ಹಾಗೂ ಧನ–ಧನ ಸದ್ಗುರು ಪಂಥದ ಸಂತರ ವಿಚಾರ.**

**ಪವಿತ್ರ ಪುಸ್ತಕ 'ಜೀವನ ಚರಿತ್ರ' ಪರಮ ಸಂತ ಬಾಬಾ ಜಯಮಲ ಸಿಂಹ ರವರ ಪು.ಸಂ 102–103 ರಿಂದ ಸೃಷ್ಠಿ ರಚನೆ (ಸಾವನ ಕೃಪಾಲ ಪಬ್ಲಿಕೇಶನ್, ದೆಹಲಿ)**

ಮೊದಲು ಸತ್ಯಪುರುಷನು ನಿರಾಕಾರನಾಗಿದ್ದನು. ನಂತರ ಆಕಾರದಲ್ಲಿ ಬಂದರು ಮೇಲಿನ ಮೂರು ನಿರ್ಮಲ ಮಂಡಲಗಳು (ಸತ್ಯಲೋಕ, ಅಲಖ್‌ಲೋಕ, ಅಗಮ್‌ಲೋಕ) ರಚಿಸಿದ್ದವು ಹಾಗೂ ಪ್ರಕಾಶ, ಮಂಡಲಗಳ ಧ್ವನಿಯು (ಧುನ್) ಆಯಿತು.

**ಪವಿತ್ರ ಪುಸ್ತಕ ಸಾರವಚನ (ನಸರ) ಪ್ರಕಾಶಕ:– ರಾಧಾಸ್ವಾಮಿ ಸತ್ಸಂಗ ಸಭಾ ದಯಾಲಬಾಗ್ ಆಗರಾ "ಸೃಷ್ಠಿ ಕೀ ರಚನಾ" ಪುಟ 81,**

ಮೊದಲು ಧೂಂದೂಕಾರ ವಿತ್ತು. ಅದರಲ್ಲಿ ಪುರುಷ ಸುನ್ನ ಸಮಾಧಿಯಲ್ಲಿದ್ದ. ಆಗ ಯಾವ ರಚನೆಯೂ ಆಗಿರಲಿಲ್ಲ. ನಂತರ ಶಬ್ದ ಪ್ರಕಟವಾಯಿತು ಮತ್ತು ಅದರಿಂದ ಎಲ್ಲಾ ರಚನೆ ಆಯಿತು. ಮೊದಲು ಸತ್ಯಲೋಕ ನಂತರ ಸತ್ಪುರುಷನ ಕಲೆಯಿಂದ 3 ಲೋಕ, ಎಲ್ಲಾ ವಿಸ್ತಾರವಾಯಿತು.

**ಈ ಜ್ಞಾನ ಹೀಗಿದೆ ಒಬ್ಬನು ನೌಕರಿಗೆ ಹೋಗುವ ಮೊದಲು ಸಂದರ್ಶನ (ಇಂಟರ್ ವ್ಯೂ) ಕ್ಕಾಗಿ ಹೋದ. ನೀನು ಮಹಾಭಾರತ ಓದಿರುವೆಯಾ? ಎಂದು ಅಧಿಕಾರಿಯು ಕೇಳಿದಾಗ, ಬೆರಳುಗಳ ಮೇಲೆ (ನೆನಪಾಗುವಂತೆ) ಗುರುತಿಸಿಕೊಂಡು ಬಾಯಿಪಾಠ ಮಾಡಿದ್ದೇನೆ. ಅಧಿಕಾರಿ ಕೇಳಿದರು ಐದು ಜನ ಪಾಂಡವರ ಹೆಸರನ್ನು ಹೇಳು, ಆಗ ಆ ವ್ಯಕ್ತಿ ಉತ್ತರ ಕೊಟ್ಟ ಒಬ್ಬ ಭೀಮ ಇನ್ನೊಬ್ಬ ಅವರ ಅಣ್ಣ. ಇನ್ನೊಬ್ಬ ಅವನ ತಮ್ಮ, ಇನ್ನಿಬ್ಬರು ಇದ್ದರು, ಅವರ ಹೆಸರನ್ನು ಮರೆತಿರುವೆ ಎಂದ. ಮೇಲೆ ಹೇಳಿರುವ ಸೃಷ್ಠಿ ರಚನೆಯ ಜ್ಞಾನ ಹೀಗೆಯೇ ಇದೆ.**

**ಸತ್ಯಪುರುಷ ಹಾಗೂ ಸತ್ಯಲೋಕದ ಮಹಿಮೆ ಹೇಳುವ ಹಾಗೂ ಐದು ನಾಮ (ಓಂಕಾರ, ಜ್ಯೋತಿ ನಿರಂಜನ, ರರಂಕಾರ, ಸೋಹಂ, ಸತ್ಯನಾಮ) ಕೊಡುವವರು ಹಾಗೂ ಮೂರು ಹೆಸರು (ಅಕಾಲಮೂರ್ತಿ–ಸತ್ಯಪುರುಷ–ಶಬ್ದ ಸ್ವರೂಪಿ ರಾಮ) ನಾಮ ಕೊಡುವ ಸಂತರಿಂದ ರಚಿತವಾದ ಪುಸ್ತಕಗಳಿಂದ ನಿಷ್ಕರ್ಶೆ.**

**ಸಂತಮತ ಪ್ರಕಾಶ ಭಾಗ 3 ಪುಟ 76ರಲ್ಲಿ ಬರೆದಿದೆ –**

**"ಸತ್ಯಖಂಡ ಅಥವಾ ಸತ್ಯನಾಮ್ ನಾಲ್ಕನೆಯ ಲೋಕ" ಇಲ್ಲಿ "ಸತ್ಯನಾಮ"ಕ್ಕೆ ಸ್ಥಾನ ಎಂದು ಹೇಳಿದ್ದಾರೆ. ನಂತರ ಈ ಪುಸ್ತಕದ 79ನೇ ಪುಟದಲ್ಲಿ ಹೀಗೆ ಬರೆದಿದ್ದಾರೆ– "ಒಬ್ಬ ರಾಮ ದಶರಥನ ಮಗ. ಎರಡನೆಯವ 'ಮನಸ್ಸು' ಮೂರನೆಯವ ಬ್ರಹ್ಮ, ನಾಲ್ಕನೆಯವನು 'ಸತ್ಯನಾಮ' ಇವನೇ ವಾಸ್ತವವಾದ ರಾಮ. ನಂತರ ಈ ಪುಸ್ತಕದ ಮೊದಲನೆಯ ಭಾಗ ಪುಟ ಸಂಖ್ಯೆ 17 ರಲ್ಲಿ ಬರೆದಿದೆ. "ಯಾವುದನ್ನು ಸತ್ಯನಾಮ" ಎನ್ನುತ್ತೇವೇಯೊ ಅದೇ ಸತ್ಯಲೋಕ." ಪವಿತ್ರ ಪುಸ್ತಕ**

5. ಹುಜುರೆ ಅಕ್ದಸ್ ಸಲ್ಲಲ್ಲಾಹು ಅಲೈಹಿ ವ ಸಲ್ಲಮ್ ಕಾ ಇರ್ಶಾದ್ : ಅಂದರೆ ಇವರ ಆಸೆ ಹೀಗಿದೆ ಯಾರಾದರೂ ಭಕ್ತರು "ಲಾಇಲಾ–ಹ ಇಲ್ಲಲ್ಲಾಹ" ಎಂದು ಹೇಳಿದರೆ, ಅವರಿಗಾಗಿ ಆಕಾಶದ ಬಾಗಿಲುಗಳು ತೆರೆಯದೆ ಇರದು. ಈ ಸ್ತೋತ್ರವು ನೇರವಾಗಿ ಆಕಾಶವನ್ನು ತಲುಪುತ್ತದೆ. ಕಬೀರಾ ಯಾವುದೇ ಅಡ್ಡಿಬಾರದಂತೆ, ಭಕ್ತರನ್ನು ಪಾಪಗಳಿಂದ ಪಾರು ಮಾಡುತ್ತಿರಲಿ.

ಫ : ಎಷ್ಟು ದೊಡ್ಡ ಕಾರ್ಯ (ಕರ್ಮ) ವಿದು, ಮತ್ತು ಸ್ವೀಕರಿಸುವ ಬಗೆಗಿನ ಪರೀಕ್ಷೆಯಿದು. ಈ ಸ್ತೋತ್ರವು (ಕಲಮಾ) ತಪ್ಪಿದ ಹಾದಿಯವರನ್ನೂ ಪವಿತ್ರ ಮಾರ್ಗ ತೋರಿಸಿ ಪವಿತ್ರ ಗಗನವನ್ನು ಸೇರಿಸುತ್ತದೆ ಮತ್ತು ಇದು ಈಗಲೆ ಗೊತ್ತಾಗಿದೆ ಒಂದು ವೇಳೆ 'ಕಬೀರಾ' (ಕಬೀರ್) ಪಾಪ ಮಾಡುತ್ತಾ ಹೇಳಿದರು, ಪಾಪಿಗಳಿಗೂ ಸಹ ಈ ಪವಿತ್ರ ಸ್ತೋತ್ರವನ್ನು ಹೇಳಿದರೆ ಲಾಭವಾಗದೆ ಇರದು.

ಮುಲ್ಲಾ ಅಲೀ ಕಾರಿ ರಹಂರವರ ಅಭಿಪ್ರಾಯ ಹೀಗಿದೆ : ಕಬೀರರಿಂದ (ಕಬಾ ಇರ್) ಪವಿತ್ರ ಉಪದೇಶದ (ವಚನ್ ಕೀ ಶರ್ತ್‌ನ) ವಾಕ್ಯಗಳನ್ನು ಒಪ್ಪಿ ಸ್ವೀಕರಿಸಿದರೆ, ಆಕಾಶದ ಎಲ್ಲ ಬಾಗಿಲುಗಳು ತೆರೆಯಲು ಕಾತರದಿಂದ ಇರುತ್ತದೆ. ಕಬೀರರ ಜೊತೆಗೆ ಇರುವ ಪುಣ್ಯ ಮತ್ತು ಭಾಗ್ಯವೂ ದೊರೆವುದು.

ಬಾಜ ಉಲೇಮಾರು ಈ ಶ್ಲೋಕದ ಅರ್ಥವನ್ನು ಹೀಗೆ ವಿವರಿಸಿದ್ದಾರೆ : ಇಂತಹ ವ್ಯಕ್ತಿಯು (ಯಾರು ಕಬೀರರ ಉಪದೇಶದಂತೆ ನಡೆವರೋ) ಗತಿಸಿದ ನಂತರ, ಅವರ ಆತ್ಮವು ಆಕಾಶದ ಎಲ್ಲಾ ಬಾಗಿಲುಗಳಲ್ಲಿ ಪ್ರವೇಶ ಮಾಡುತ್ತದೆ. ಆ ಆತ್ಮಕ್ಕೆ ಎಲ್ಲಾ ಬಾಗಿಲುಗಳೂ ಪ್ರವೇಶ ನೀಡುತ್ತವೆ. ಒಂದು ಅಧ್ಯಾಯದಲ್ಲಿ ಎರಡು ಶ್ಲೋಕಗಳು ಹೀಗಿವೆ ಅವುಗಳಲ್ಲಿ ಒಂದು ಆಕಾಶದ ಕೆಳಗಿನ ಯಾವುದೇ ದೋಷ ಅಂಟುವುದಿಲ್ಲ. ಎರಡನೆಯದು ಭೂಮಿ–ಆಕಾಶಗಳಲ್ಲಿ ತನ್ನ ಪ್ರಕಾಶವನ್ನು ತುಂಬುತ್ತದೆ.

ಒಂದು "ಲಾಇಲಾ ಹ ಇಲ್ಲಲ್ಲಾಹ" ಆಗಿದೆ. ಇನ್ನೊಂದು "ಅಲ್ಲಾಹು ಅಕಬರ್" (ಕಬೀರ್) ಆಗಿದೆ.

## "ಪವಿತ್ರ ವೇದಗಳಿಂದ ಪ್ರಮಾಣ"

ಕವಿರ್ದೇವ ತನ್ನ ಜ್ಞಾನದ ದೂತನಾಗಿ ಸ್ವತಃ ಅವರೇ ಬರುತ್ತಾರೆ. ಅವರ ಬಗೆಗಿನ ವಾಸ್ತವ ಜ್ಞಾನವನ್ನು ಸ್ವತಃ ಅವರೇ ಮಾಡಿಸುತ್ತಾರೆ. ಸ್ವಯಂ ಕವಿರ್ದೇವರು (ಕಬೀರ್) ತಮ್ಮ ಅಮೃತವಾಣಿಯಲ್ಲಿ ಹೇಳಿದ್ದಾರೆ:–

ಶಬ್ದ :– ಅವಿಗತ ಸೆ ಚಲ್ ಆಏ, ಕೋಯಿ ಮೇರಾ ಭೇದ ಮರ್ಮ ನಹೀ ಪಾಯಾ । (ಟೇಕ) ನ ಮೇರಾ ಜನ್ಮನ ಗರ್ಭ್ ಬಸೇರಾ, ಬಾಲಕ್ ಹೋ ದಿಖಲಾಯಾ । ಕಾಶೀ ನಗರ್

ಜಲ್ ಕಮಲ ಪರ್ ಡೇರಾ, ವಹಾ ಜುಲಾಹೇ ನೇ ಪಾಯಾ । ಮಾತಾ–ಪಿತಾ ಮೇರೇ ಕುಛ್ ನಾಹೀ, ನಾ ಮೇರೇ ಘರ್ ದಾಸೀ (ಪತ್ನೀ) ಜುಲಹಾ ಕಾ ಸುತ್ ಆನ ಕಹಾಯಾ, ಜಗತ್ ಕರೆ ಮೇರೀ ಹಾಂಸಿ । ಪಾಂಚ ತತ್ವ ಕಾ ಧಡ ನಹೀ ಮೇರಾ, ಜಾನು ಜ್ಞಾನ ಅಪಾರಾ । ಸತ್ಯ ಸ್ವರೂಪಿ । (ವಾಸ್ತವಿಕ) ನಾಮ ಸಾಹೇಬ್ (ಪೂರ್ಣ ಪ್ರಭು) ಕಾ ಸೋಯಿ ನಾಮ ಹಮಾರಾ ಅದರ ದ್ವೀಪ (ಊಪರ್ ಸತ್ಯಲೋಕ್ ಮೆ) ಗಗನ್ ಗುಫಾ ಮೆ ತಹಾ ನಿಜ ವಸ್ತು ಸಾರಾ । ಜ್ಯೋತ ಸ್ವರೂಪಿ ಅಲಖ್ ನಿರಂಜನ್ (ಬ್ರಹ್ಮ) ಭೀ ಧರತಾ ಧ್ಯಾನ ಹಮಾರಾ । ಹಾಡ ಚಾಮ ಲಹು ನಾ ಮೇರೇ ಕೋಯಿ ಜಾನೇ ಸತ್ಯ ನಾಮ ಉಪಾಸೀ । ತಾರನ್ –ತರನ್ ಅಭಯ ಪದ ದಾತಾ, ಮೈ ಹೂಂ ಕಬೀರ್ ಅವಿನಾಶೀ ॥

**ಮೇಲಿನ ಶಬ್ದದಲ್ಲಿ ಕಬೀರ್ ಪರಮೇಶ್ವರರು ಹೇಳುತ್ತಿದ್ದಾರೆ :–**

**ನನಗೆ ಯಾರು ಹೆಂಡತಿ ಇಲ್ಲ. ನನ್ನದು ಪಂಚ ತತ್ವಗಳ ಶರೀರವಲ್ಲ (ಮೂಳೆ, ಚರ್ಮ, ರಕ್ತ, ನರನಾಡಿಗಳ ಶರೀರ) ನಾನು ಸ್ವಯಂಭೂ (ಸ್ವ ಉದ್ಭವ) ಆಗಿದ್ದೇನೆ. ಕಾಶೀಯ ಲಹರತಾರಾ ಹೆಸರಿನ ಕೆರೆಯ ಜಲದಲ್ಲಿನ ಕಮಲದ ಹೂವಿನ ಮೇಲೆ ಸ್ವಯಂ ಪ್ರಕಟವಾಗಿ, ಬಾಲಕ ರೂಪ ತಾಳಿದ್ದೆ, ಅಲ್ಲಿಂದ ನನ್ನನ್ನು ನೀರೂ–ನೀಮಾ ಎಂಬ ಹೆಸರಿನ ನೇಕಾರ ದಂಪತಿಗಳು ಎತ್ತಿಕೊಂಡು ಹೋದರು. ನನ್ನ ವಾಸ್ತವಿಕ ಹೆಸರು ವೇದಗಳಲ್ಲಿ ಕವಿರ್ದೇವ, ಗುರುಗ್ರಂಥ ಸಾಹೇಬದಲ್ಲಿ ಹಕ್ಕಾ ಕಬೀರ್ ಹಾಗೂ ಕುರಾನ್ ಶರೀಫ್‌ನಲ್ಲಿ ಅಲ್ಲಾಹ ಕಬೀರನ್ ಅದೇ ಹೆಸರು ನನ್ನದು. ನಾನು ಮೇಲೆ "ಋತಧಾಮ" (ಸತ್ಯಲೋಕ) ದಲ್ಲಿ ಇರುವೆನು. ಹಾಗೂ ನಿಮ್ಮ ದೇವರು ಜ್ಯೋತಿ ನಿರಂಜನ (ಬ್ರಹ್ಮ) ಸಹ ನನ್ನ ಪೂಜೆ ಮಾಡುತ್ತಾನೆ. ಇದರ ಪ್ರಮಾಣ ಸತ್ಯಾರ್ಥ ಪ್ರಕಾಶದ ಏಳನೇ ಸಮುಲ್ಲಾಸ (ಪುಟ 152–153 ದೀನಾನಗರ ಪಂಜಾಬದಿಂದ ಪ್ರಕಾಶಿತವಾಗಿರುವುದು) ದಲ್ಲೂ ಸಹ ಇದೆ. ಸ್ವಾಮಿ ದಯಾನಂದ ರವರು ಯಜುರ್ವೇದದ 13ನೇ ಅಧ್ಯಾಯದ 4ನೇ ಮಂತ್ರ ಹಾಗೂ ಋಗ್ವೇದದ 10ನೇ ಮಂಡಲದ 49ನೇ ಸೂಕ್ತಿಯ 1ನೇ ಮಂತ್ರಗಳ ಅನುವಾದ ಮಾಡಿದ್ದಾರೆ. ಇದರಲ್ಲಿ ವೇದಗಳನ್ನು ಹೇಳಿರುವ ಬ್ರಹ್ಮ ಹೇಳುತ್ತಿದ್ದಾನೆ. (5=ಋಗ್ವೇದದ ಮಂಡಲ 10ರ, ಸೂಕ್ತಿ 49ರ, 1ನೇ ಹಾಗೂ 6ನೇ ಮಂತ್ರ =ಯಜುರ್ವೇದದ 13ನೇ ಅಧ್ಯಾಯದ 4ನೇ ಮಂತ್ರದಲ್ಲಿ) ಮನುಷ್ಯರೆ! ಯಾರು ಸೃಷ್ಠಿಯ ಮೊದಲು ಎಲ್ಲವನ್ನೂ ಉತ್ಪತ್ತಿ ಮಾಡುತ್ತಾ ಹಾಗೂ ಎಲ್ಲದರ ಸ್ವಾಮಿಯಾಗಿದ್ದಾನೋ, ಆಗಿರುವನೋ, ಆಗುವನೋ ಅವನೇ ಎಲ್ಲ ಸೃಷ್ಠಿಯನ್ನು ಮಾಡಿ ಪಾಲನೆ–ಪೋಷಣೆ ಮಾಡುತ್ತಿದ್ದಾನೆ. ಆ ಸುಖ ಸ್ವರೂಪದ ಪರಮಾತ್ಮನ ಭಕ್ತಿಯನ್ನು ಹೇಗೆ ನಾವು ಮಾಡುತ್ತೇವೆಯೋ, ಹಾಗೆಯೇ ನೀವೂ ಸಹ ಮಾಡಿರಿ.**

<u>ಪ್ರಮಾಣ 1 ಪವಿತ್ರ ಯಜುರ್ವೇದದ 29ನೇ ಅಧ್ಯಾಯದ 25ನೇ ಮಂತ್ರ.</u>

ಸಮಿದ್ಧೋ ಅಧ್ಯ ಮನುಷೋ ದುರೋಣೆ ದೇವೋ ದೇವಾನ್ಯಜಸಿ ಜಾತವೇದಃ।
ಆ ಚ ವಹ ಮಿತ್ರಮಹಶ್ಚಿಚ ಕಿತ್ವಾಂತ್ವಂ ದೂತಃ ಕವಿರಸಿ ಪ್ರಚೇತಾಃ ॥ 25 ॥

**ಸಮಿದ್ಧಃ–ಅಧ್ಯ–ಮನುಷಃ–ದುರೋಣೆ–ದೇವಃ–ದೇವಾನ್–ಯಜ–ಅಸಿ–ಜಾತ–ವೇದಃ–**

**ಆ–ಚ–ವಹ–ಮಿತ್ರಮಃ–ಚಿಕಿತ್ವಾನ್–ತ್ವಮ್–ದೂತಃ–ಕವಿರ–ಅಸಿ–ಪ್ರಚೇತಾಃ।**

**ಅನುವಾದ:–** (ಅಧ್ಯ) ಈ ವರ್ತಮಾನಕಾಲದಲ್ಲಿ (ದುರೋಣೆ) ಶರೀರದ ರೂಪದ ಮಹಲಿ(ಭವನ)ನಲ್ಲಿ, ದುರಾಚಾರ ಪೂರ್ವಕವಾಗಿ (ಮನುಷಃ) ಅಸತ್ಯವಾದ ಪೂಜೆಯಲ್ಲಿ ಮನಸ್ಸಿಟ್ಟಿರುವ ವ್ಯಕ್ತಿಗಳನ್ನು (ಸಮಿದ್ಧಃ) ಅಗ್ನಿಯು ಸುಟ್ಟು ಭಸ್ಮ ಮಾಡುತ್ತದೆ. ಏಕೆಂದರೆ ಶಾಸ್ತ್ರ ವಿರುದ್ಧದ ಪೂಜೆಯು ಹಾನಿಯನ್ನುಂಟು ಮಾಡುತ್ತದೆ. ಅದರ ಸ್ಥಾನದಲ್ಲಿ (ದೇವಾನ್) ದೇವರುಗಳ

(ದೇವಃ) ದೇವರು (ಜಾತವೇದಃ) ಆಗಿರುವ ವಾಸ್ತವಿಕ ಸತ್ಯಪುರುಷ ಪೂರ್ಣ ಪರಮಾತ್ಮನ (ಯಜ) ಪೂಜೆ (ಅಸಿ) ಮಾಡಿರಿ. (ಆ) ದಯಾಳು (ಮಿತ್ರಮಃ) ವಾದ ಅವನು ವಾಸ್ತವಿಕವಾದ ಜೊತೆಗಾರ ಪೂರ್ಣ ಪರಮಾತ್ಮನಾಗಿರುವನು. (ಚಿಕಿತ್ವಾನ) ಯಥಾರ್ಥ ಜ್ಞಾನವನ್ನು (ದುತಃ) ಸಂದೇಶವಾಹಕ ರೂಪದಲ್ಲಿ (ವಹ,ಚ,ಪ್ರಚೆತಾಃ) ತಾನೇ ಬಂದು ಬೋಧಿಸುವನು. ಅವರೇ (ತ್ವಮ್) ಕವಿರ್ದೇವ (ಕಬೀರ್ ಪರಮೇಶ್ವರ) ರಾಗಿದ್ದಾರೆ.

**ಭಾವಾರ್ಥ :– ಯಾವ ಸಮಯದಲ್ಲಿ ಭಕ್ತ ಸಮಾಜವು ಶಾಸ್ತ್ರವಿಧಿಯನ್ನು ತ್ಯಜಿಸಿ, ಮನಬಂದಂತೆ ಆಚರಣೆ ಮಾಡುತ್ತದೋ, ಆ ಸಮಯದಲ್ಲಿ ಕವಿರ್ದೇವರು (ಕಬೀರ್ ಪರಮೇಶ್ವರರು) ತತ್ವಜ್ಞಾನವನ್ನು ಪ್ರಕಟ ಗೊಳಿಸುತ್ತಾರೆ.**

**ಪ್ರಮಾಣ 2, ಪವಿತ್ರ ಸಾಮವೇದ ಸಂಖ್ಯೆ 1400 ರಲ್ಲಿ ಸಂಖ್ಯೆ 359 ಸಾಮವೇದದ 4ನೇ ಅಧ್ಯಾಯದ, 25ನೇ ಕಾಂಡದ, 8ನೇ ಶ್ಲೋಕ :**

ಪುರಾಂ ಭಿಂದುರ್ಯುವಾ ಕವಿರಮಿತೌಜಾ ಅಜಾಯತ್ ।
ಇಂದ್ರೋ ವಿಶ್ವಸ್ಯ ಕರ್ಮಣೋ ಧರ್ತಾ ವಜ್ರೀ ಪುರುಷ್ಟುತಃ ॥ 4 ॥

**ಪುರಾಮ್–ಭಿಂದುಃ–ಯುವಾ–ಕವಿರ–ಅಮಿತ–ಔಜೌ–ಅಜಾಯತ್–ಇಂದ್ರಃ–ವಿಶ್ವಸ್ಯ–ಕರ್ಮಣಃ–ಧರ್ತಾ–ವಜ್ರೀ–ಪುರುಷ್ಟುತಃ ।**

**ಶಬ್ದಾರ್ಥ :–** (ಯುವಾ) ಪೂರ್ಣ ಸಮರ್ಥ (ಕವಿರ) ಕವಿರ್ದೇವ ಅರ್ಥಾತ್ ಕಬೀರ್ ಪರಮೇಶ್ವರ (ಅಮಿತೊಔಜಾ) ವಿಶಾಲ ಶಕ್ತಿ–ಯುಕ್ತ ಅರ್ಥಾತ್ ಸರ್ವ ಶಕ್ತಿಮಾನ್ ಆಗಿರುತ್ತಾನೆ. (ಅಜಾಯತ್) ತೇಜಃಪುಂಜ ಶರೀರದ ಮಾಯಾರೂಪನಾಗಿ (ಧರ್ತಾ) ಪ್ರಕಟಗೊಂಡು, ಅರ್ಥಾತ್ ಅವತಾರ ಧರಿಸಿ (ವಜ್ರೀ) ತನ್ನ ಸತ್ಯಶಬ್ದದ ಹಾಗೂ ಸತ್ಯನಾಮ ರೂಪಿನ ಶಸ್ತ್ರದಿಂದ (ಪುರಾಮ) ಕಾಲ–ಬ್ರಹ್ಮನ ಪಾಪ ರೂಪದ ಬಂಧನ ರೂಪೀ ಕೀಲಿಯನ್ನು (ಭಿಂಧುಃ) ಮುರಿಯುವವ, ಚೂರುಚೂರು ಮಾಡುವವ (ಇಂದ್ರಃ) ಸರ್ವ ಸುಖದಾಯಕ ಪರಮೇಶ್ವರ (ವಿಶ್ವಸ್ಯ) ಸರ್ವ ಜಗತ್ತಿನ ಸರ್ವ ಪ್ರಾಣಿಗಳನ್ನು (ಕರ್ಮಣಃ) ಮನಸಾ–ವಾಚಾ–ಕರ್ಮಣಾ ಅರ್ಥಾತ್ ಪೂರ್ಣ ನಿಷ್ಠೆಯೊಂದಿಗೆ ಅನನ್ಯ ಮನದಿಂದ ಧಾರ್ಮಿಕ ಕರ್ಮಗಳ ಮೂಲಕ ಸತ್ಯ–ಭಕ್ತಿಯಿಂದ (ಪುರುಷ್ಟುತಃ) ಸ್ಥುತಿಸಲು, ಉಪಾಸನೆ ಮಾಡಲು ಯೋಗ್ಯವಾಗಿದ್ದಾರೆ. {ಹೇಗೆ ಮಕ್ಕಳು ಹಾಗೂ ವೃದ್ದರು ಸರ್ವ ಕೆಲಸಗಳನ್ನು ಮಾಡಲು ಸಮರ್ಥವಾಗಿರುವದಿಲ್ಲವೋ, ಯುವಕರು ಸರ್ವ ಕೆಲಸಗಳನ್ನು ಮಾಡಲು ಸಮರ್ಥರಾಗಿರುತ್ತಾರೆಯೋ ಹಾಗೆ ಪರಬ್ರಹ್ಮ, ಬ್ರಹ್ಮ ಹಾಗೂ ಮೂರು ಲೋಕಗಳ ಬ್ರಹ್ಮಾ, ವಿಷ್ಣು, ಶಿವ ಹಾಗೂ ಅನ್ಯ ದೇವ–ದೇವತೆಯರನ್ನು, ಮಕ್ಕಳು ಹಾಗು ವೃದ್ಧರೆಂದು ತಿಳಿಯಿರಿ. ಆದ್ದರಿಂದಲೇ ಕಬೀರ್ ಪರಮೇಶ್ವರರನ್ನು ಯುವಕರ ಉಪಮೆ (ಯುವ ಕಬೀರ್) ಯೊಂದಿಗೆ ವೇದದಲ್ಲಿ ಕೊಡಲಾಗಿದೆ.}

**ಭಾವಾರ್ಥ :– ಯಾವ ಕವಿರ್ದೇವನು (ಕಬೀರ್ ಪರಮೇಶ್ವರ) ತತ್ವ ಜ್ಞಾನವನ್ನು ತೆಗೆದುಕೊಂಡು ಈ ಪ್ರಪಂಚಕ್ಕೆ ಆಗಮಿಸುತ್ತಾನೋ, ಅವನು ಸರ್ವಶಕ್ತಿಮಾನ್ ಆಗಿರುತ್ತಾನೆ. ಹಾಗೂ ಕಾಲನ (ಬ್ರಹ್ಮನ) ಕರ್ಮ ರೂಪಿನ ಕೋಟೆಯನ್ನು ಮುರಿಯುವವನಾಗಿರುತ್ತಾನೆ. ಅವನು ಸರ್ವರಿಗೂ ಸುಖ ನೀಡುವನು ಸರ್ವರ ಪೂಜೆಗೆ ಯೋಗ್ಯವಾಗಿರುವನು.**

**ಸಂಖ್ಯೆ ನಂ. 1400 ಸಾಮವೇದ ಉತಾರ್ಚಿಕ ಅಧ್ಯಾಯ 12ರ, 3ನೇ ಖಂಡದ, 5ನೇ ಶ್ಲೋಕ.**

ಭದ್ರಾ ವಸ್ತ್ರಾ ಸಮನ್ಯಾಶ್ವಸಾನೋ ಮಹಾನ್ ಕವಿ ರ್ನಿವಚನಾನಿ ಶಂಸನ್

ಆ ವಚ್ಯಸ್ವ ಚಮ್ವೋಃ ಪೂಯಮಾನೋ ವಿಚಕ್ಷಣೋ ಜಾಗೃವಿರ್ದೇವವೀತೌ ॥ 5 ॥

**ಭದ್ರಾ–ವಸ್ತ್ರಾ–ಸಮನ್ಯಾ–ವಸಅನಃ–ಮಹಾನ್–ಕವಿರ–ನಿವಚನಾನಿ–ಶಂಸನ್–ಆವಚ್ಯಸ್ವ ಚಮ್ವೋಃ–ಪೂಯಮಾನಃ–ವಿಚಕ್ಷಣಃ–ಜಾಗೃವಿಃ–ದೇವ–ವೀತೌ.**

**ಅನುವಾದ :–**(ವಿಚಕ್ಷಣಃ) ಚತುರ ವ್ಯಕ್ತಿಗಳು (ಆವಚ್ಯಸ್ವ) ತಮ್ಮ ವಚನಗಳ ಮೂಲಕ, ಪೂರ್ಣ ಬ್ರಹ್ಮನ ಪೂಜೆಯನ್ನು ತಿಳಿಸದೆ, ವಾಮೋಪಾಸ (ಆನುಪಾಸನೆ) ನೆಯ ಮಾರ್ಗ ದರ್ಶನ ಮಾಡಿಸಿ, ಅಮೃತದ ಸ್ಥಾನದಲ್ಲಿ (ಪೂಯಮಾನಃ) ಭೂತ ಪ್ರೇತಗಳ ಪೂಜೆ, ಪಿತೃ ಪೂಜೆ, ಮೂರು ಗುಣಗಳ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ ಹಾಗೂ ಕಾಲ–ಬ್ರಹ್ಮನ ಪೂಜೆ) ಶಾಸ್ತ್ರ ವಿರುದ್ಧ (ಬ್ರಹ್ಮ) ರೂಪಿನ ವಿಧಾನಗಳನ್ನು (ಚಮ್ವೋಃ) ಆದರದ ಜೊತೆ ತಪ್ಪಾದ ಜ್ಞಾನವನ್ನು ಆಚಮನ ಮಾಡಿಸುತ್ತಿದ್ದಾರೆ. (ಭದ್ರಾ) ಪರಮ ಸುಖದಾಯಕ (ಮಹಾನ್ ಕವೀರ) ಪೂರ್ಣ ಪರಮಾತ್ಮ ಕಬೀರ್ (ವಸ್ತ್ರಾ) ಸಶರೀರವಾಗಿ ಸಾಧಾರಣ ವೇಷ–ಭೂಷಣದಲ್ಲಿ ಅರ್ಥಾತ್ ವಸ್ತ್ರ ಶಬ್ದದ ಅರ್ಥ ವೇಶಭೂಷಾ, ಅಂದರೆ ಸಂತರ ಭಾಷೆಯಲ್ಲಿ ಇದನ್ನು ಚೋಲಾ (ಹೊರ (ಶರೀರ) ಕವಚ) ಎಂದು ಹೇಳುತ್ತಾರೆ. ಅಂದರೆ ಶರೀರ (ಆತ್ಮದ ಹೊರ ಕವಚ) ಯಾರಾದರೂ ಸಂತರ ದೇಹಾಂತ್ಯವಾದರೆ ಚೋಲ ಬಿಟ್ಟು ಹೋದರು ಎಂದು ಹೇಳುತ್ತಾರೆ. (ಸಮನ್ಯಾ) ತಮ್ಮ ಸತ್ಯಲೋಕದ ಶರೀರದಂತೆ ಇರುವ ಅನ್ಯ ಶರೀರ, ಅಕಾಂತಿಯುತವಾದುದನ್ನು ಧರಿಸಿ (ವಸಾನಃ) ಸಾಧಾರಣ ವ್ಯಕ್ತಿಯ ರೀತಿಯಲ್ಲಿ ಬದುಕುತ್ತಾ, ಕೆಲವು ದಿನಗಳು ಈ ಸಂಸಾರದಲ್ಲಿ ಇರುತ್ತಾ (ನಿವಚನಾನಿ) ತಮ್ಮ ಶಬ್ದ ಮುಂತಾದ ಮಾಧ್ಯಮದಿಂದ ಸತ್ಯ ಜ್ಞಾನದ (ಶಂಸನ್) ವರ್ಣನೆ ಮಾಡಿ (ದೇವ) ಪೂರ್ಣ ಪರಮಾತ್ಮನ ಮುಚ್ಚಿರುವ ಸಗುಣ–ನಿರ್ಗುಣ ಜ್ಞಾನವನ್ನು (ಜಾಗೃವಿಃ) ಜಾಗ್ರತ ಮಾಡುತ್ತಾರೆ.

**ಭಾವಾರ್ಥ :– ಶಾಸ್ತ್ರ ವಿಧಿಗೆ ವಿರುದ್ಧ ರೀತಿಯ ಸಾಧನೆಯಲ್ಲಿರುವ ಭಕ್ತ ಸಮಾಜಕ್ಕೆ ಕವಿರ್ದೇವರು (ಕಬೀರ್ ಪರಮೇಶ್ವರ) ತತ್ವಜ್ಞಾನ ತಿಳಿಸಿಕೊಡಲು ಈ ಸಂಸಾರದಲ್ಲಿ ಪ್ರಕಟವಾಗುತ್ತಾರೆ. ಆ ಸಮಯದಲ್ಲಿ ತಮ್ಮ ತೇಜೋಮಯ ಶರೀರದ ಮೇಲೆ ಬೇರೆ ಕಡಿಮೆ ಪ್ರಕಾಶದ ಶರೀರ ರೂಪದ ವಸ್ತ್ರವನ್ನು ಧರಿಸಿಕೊಂಡು ಬರುತ್ತಾರೆ. (ಏಕೆಂದರೆ ಪರಮೇಶ್ವರರ ವಾಸ್ತವವಾದ ತೇಜೋಮಯ ಶರೀರವನ್ನು ಚರ್ಮ ದೃಷ್ಠಿ (ಚಕ್ಷು) ಗಳಿಂದ ನೋಡಲು ಸಾಧ್ಯವಾಗುವುದಿಲ್ಲ) ಕೆಲ ಸಮಯಗಳವರೆಗೆ ಸಾಮಾನ್ಯ ಜನರಂತೆ ಜೀವನ ನಡೆಸುತ್ತಾರೆ. ತಮ್ಮ ಲೀಲೆ ತೋರಿಸುತ್ತಾರೆ ಪರಮೇಶ್ವರನನ್ನು ಪ್ರಾಪ್ತಿ ಮಾಡಿಕೊಳ್ಳುವ ಜ್ಞಾನವನ್ನು ಪ್ರಕಾಶ ಗೊಳಿಸುತ್ತಾರೆ.**

**ಋಗ್ವೇದದ 9ನೇ ಮಂಡಲದ 96ನೇ ಸೂಕ್ತಿಯ 17ನೇ ಮಂತ್ರ.**

ಶಿಶುಂ ಜಜ್ಞಾನಂ ಹರ್ಯ ತಮ್ ಮೃಜಂತಿ ಶುಂಭಂತಿ ವಹಿನ ಮರುತಃ ಗಣೇನ
ಕವಿರ್ಗೀರ್ಭಿ ಕಾವ್ಯೇನಾ ಕವೀರ ಸಂತ್ ಸೋಮಃ ಪವಿತರ್ಂ ಮತ್ಯೇತಿ ರೇಭನ್ ॥ 17 ॥

**ಶುಂ–ಜಜ್ಞಾನಮ್–ಹರ್ಯ–ತಮ್–ಮೃಜಂತಿ–ಶುಂಭಂತಿ–ವಹಿನ–ಮರುತಃ–ಗಣೇನ–ಕವಿರ್ಗೀರ್ಭಿ–ಕಾವ್ಯೆನಾ–ಕವಿರ–ಸಂತ–ಸೋಮಃ–ಪವಿತ್ರಂ–ಅತ್ಯೇತಿ–ರೇಭನ್.**

**ಅನುವಾದ :–** ಪೂರ್ಣ ಪರಮಾತ್ಮ (ಹರ್ಯ ಶಿಶುಮ್ ) ವಿಲಕ್ಷಣ ಮನುಷ್ಯನ ಮಗುವಿನ ರೂಪದಲ್ಲಿ (ಜಜ್ಞಾನಮ್) ಬೇಕಂತಲೆ ತಿಳಿದೂ ಪ್ರಕಟವಾಗುತ್ತಾರೆ. ಹಾಗೂ ತನ್ನ ತತ್ವವನ್ನು (ತಮ) ಆ ಸಮಯ (ಮೃಜಂತಿ) ನಿರ್ಮಲತೆಯೊಂದಿಗೆ (ಶುಂಭಂತಿ) ಉಚ್ಚಾರಣೆ ಮಾಡುತ್ತಾರೆ. (ವಹ್ನಿಃ) ಪ್ರಭು ಪ್ರಾಪ್ತಿಗಾಗಿ ವಿರಹದಿಂದಿರುವ (ಮರುತಃ) ಭಕ್ತರ (ಗಣೇನ) ಸಮೂಹಕ್ಕಾಗಿ (ಕಾವ್ಯೇನಾ) ಕವಿತೆಗಳ ಮೂಲಕ ಕವಿತ್ವದಿಂದ (ಪವಿತ್ರಮ್ ಅತ್ಯೇತಿ) ಅತ್ಯಧಿಕ

ವಾಣಿ ನಿರ್ಮಲತೆಯೊಂದಿಗೆ (ಕವಿರ್ಗೀರ್ಭಿ) ಕವೀರ ವಾಣಿ ಅರ್ಥಾತ್ ಕಬೀರ್ ವಾಣಿ ಮೂಲಕ (ರೇಭನ್) ಎತ್ತರದ ಸ್ವರದಲ್ಲಿ ಸಂಬೋಧಿಸುತ್ತಾ ಹೇಳುತ್ತಾರೆ. (ಕವಿರ ಸಂತ ಸೊಮಃ) ಆ ಅಮರ ಪುರುಷರೆ ಅರ್ಥಾತ್ ಸತ್ಯಪುರುಷರೇ ಸಂತರ ರೂಪದಲ್ಲಿರುವ ಕವಿರ್ದೇವರು ಆಗಿದ್ದಾರೆ. ಆದರೆ ಆ ಪರಮಾತ್ಮನನ್ನು ಗುರುತಿಸಲು ಆಗದೆ ಕವಿ ಎಂದು ಹೇಳ ತೊಡಗುತ್ತಾರೆ ಅವರೇ ಪೂರ್ಣ ಪರಮಾತ್ಮ. ಅವರ ವಾಸ್ತವಿಕ ಹೆಸರು ಕವಿರ್ದೇವ ಎಂದಾಗಿದೆ.

**ಭಾವಾರ್ಥ :– ಬನ್ನಿರಿ ಪೂರ್ಣ ಪರಮಾತ್ಮನ ವಾಸ್ತವಿಕ ನಾಮವನ್ನು ತಿಳಿಯೋಣ. ಋಗ್ವೇದದ 9ನೇ ಮಂಡಲದ 96ನೇ ಸೂಕ್ತಿಯ 16 ಮತ್ತು 17ನೇ ಮಂತ್ರದಲ್ಲಿ ಪರಮಾತ್ಮನ ನಾಮ ಹಾಗೂ ಪರಿಪೂರ್ಣ ಪರಿಚಯವನ್ನು ನೀಡಲಾಗಿದೆ. ವೇದವನ್ನು ಹೇಳುವ ಬ್ರಹ್ಮನು ಹೇಳುತ್ತಿದ್ದಾನೆ ಪೂರ್ಣ ಪರಮಾತ್ಮನು ವಿಲಕ್ಷಣ ಮಗುವಿನ ರೂಪದಲ್ಲಿ ಪ್ರಕಟವಾಗುವನು. ತನ್ನ ವಾಸ್ತವಿಕ ಜ್ಞಾನವನ್ನು ತನ್ನ (ಕಬೀರ್) ವಾಣಿಯ ಮೂಲಕ, ಕವಿತೆಗಳ ಮೂಲಕ, ನಾಣ್ನುಡಿ (ನಾಲ್ಕುನುಡಿ), (ಲೋಕೋಕ್ತಿ) ಗಳ ಮೂಲಕ, ವರ್ಣನೆ ಮಾಡಿದ್ದಾರೆ. ಈ ತತ್ವಜ್ಞಾನದ ಅಭಾವದಿಂದ ಆ ಸಮಯ ಪ್ರಕಟವಾದ ಪರಮಾತ್ಮನನ್ನು ಗುರುತಿಸಲಾರರು. ಈ ಪರಮಾತ್ಮನನ್ನು ಋಷಿ ಅಥವಾ ಸಂತ, ಕವಿ ಎಂದಷ್ಟೇ ತಿಳಿಯುತ್ತಿದ್ದರು. ಸ್ವತಃ ಅವರೇ ಹೇಳುತ್ತಿದ್ದರು. "ನಾನೇ ಪೂರ್ಣ ಬ್ರಹ್ಮ" ಎಂದು ಆದರೆ ಲೋಕವೇದದ ಆಧಾರದಲ್ಲಿ ಪರಮಾತ್ಮನನ್ನು ನಿರಾಕಾರ ಎಂದು ತಿಳಿದಿದ್ದ ಜನರು ಗುರುತಿಸಲಿಲ್ಲ. ಗರೀಬ್ ದಾಸರು ಕಾಶಿಯಲ್ಲಿ ಪ್ರಕಟವಾದ ಪರಮಾತ್ಮನನ್ನು ಗುರುತಿಸಿದರು. ಅವರ ಮಹಿಮೆಯನ್ನು ಹೇಳಿದರು ಹಾಗೂ ಆ ಪರಮೇಶ್ವರರು ಸ್ವತಃ ತಮ್ಮ ಮಹಿಮೆಯನ್ನು ತಿಳಿಸಿದ್ದು, ಅದರ ಯಥಾವತ್ ವರ್ಣನೆಯನ್ನು ಗರೀಬ್ ದಾಸರು ಅವರ ವಾಣಿಯಲ್ಲಿ ತಿಳಿಸಿದ್ದಾರೆ.**

ಗರೀಬ್, ಜಾತಿ ಹಮಾರೀ ಜಗತ್ ಗುರು, ಪರಮೇಶ್ವರ್ ಹೈ ಪಂಥ್ ।
ದಾಸ್ ಗರೀಬ್ ಲಿಖ್ ಪಡೆ, ನಾಮ ನಿರಂಜನ ಕಂತ ॥

ಗರೀಬ್, ಹಮ್ ಹೀ ಅಲಖ್ ಅಲ್ಲಾಹ್ ಹೈ, ಕುತೂಬ್ ಗೋಸ ಔರ್ ಪೀರ್ ।
ಗರೀಬ್ ದಾಸ್ ಖಾಲಿಕ ಧನೀ ಹಮರಾ ನಾಮ್ ಕಬೀರ್ ॥

ಗರೀಬ್, ಏ ಸ್ವಾಮೀ ಸೃಷ್ಟಾ ಮೈ, ಸೃಷ್ಠಿ ಹಮರೆ ತೀರ್ ।
ದಾಸ್ ಗರೀಬ್ ಅಧರ್ ಬಸೂ, ಅವಿಗತ ಸತ್ ಕಬೀರ್ ॥

**ಇಷ್ಟು ಸ್ಪಷ್ಟವಾಗಿ ಹೇಳಿದ ನಂತರವೂ, ಅವರನ್ನು ಸಂತ, ಭಕ್ತ ಅಥವಾ ನೇಕಾರ ಎನ್ನುತ್ತಿದ್ದರು. ಆದರೆ ಅವರೇ ಪೂರ್ಣ ಪರಮಾತ್ಮರು, ತತ್ವಜ್ಞಾನ ಹೀನ ಋಷಿಗಳು ಹಾಗೂ ಸಂತರು ಗುರುಗಳು ತಮ್ಮ ಅಜ್ಞಾನ ಸಿದ್ಧಾಂತದ ಆಧಾರದ ಮೇಲೆ ತಿಳಿಸಿದ್ದ ನಿರಾಕಾರ ಪರಮಾತ್ಮವೆಂಬ ನಂಬಿಕೆಯಿಂದ ಇವರನ್ನು ಗುರುತಿಸಲು ಜನತೆಗೆ ಸಾಧ್ಯವಾಗಲಿಲ್ಲ.**

**ಋಗ್ವೇದದ 9ನೇ ಮಂಡಲದ 96ನೇ ಸೂಕ್ತಿಯ 18ನೇ ಮಂತ್ರ.**

ಋಷಿಮನಾ ಯ ಋಷಿ ಕೃತ್ಸವರ್ಷಾಃ ಸಹಸ್ತ್ರಣೀತಃ ಪದವೀಃ ಕವೀನಾಮ್ ।
ತೃತೀಯಂ ಧಾಮ ಮಹಿಷಃ ಸಿಷಾಸಂತ್ಸೋಮೊ ವಿರಾಜಮನು ರಾಜತಿ ಷ್ಟುಪ ॥ 18 ॥

**ಋಷಿಮನಾ–ಯ–ಋಷಿಕೃತ–ಸ್ವರ್ಷಾಃ–ಸಹಸ್ತ್ರಾಣೀಥ–ಕವೀನಾಮ್–**
**ತೃತೀಯಮ್–ಧಾಮ–ಮಹಿಷಃ–ಸಿಷಾ–ಸಂತ–ಸೋಮಃ–ವಿರಾಜಮಾನು–ರಾಜತಿ–ಸ್ಟುಪ ।**

**ಅನುವಾದ :–** ವೇದವನ್ನು ಹೇಳುವ ಬ್ರಹ್ಮನು ಹೇಳುತ್ತಿದ್ದಾನೆ. ಯಾವ ಪೂರ್ಣ ಪರಮಾತ್ಮ ವಿಲಕ್ಷಣ ಮಗುವಿನ ರೂಪದಲ್ಲಿ ಬಂದು (ಕವೀನಾಮ್) ಪ್ರಸಿದ್ಧ ಕವಿಗಳ (ಪದವಿಃ) ಉಪಾಧಿಗಳನ್ನು ಪಡೆದುಕೊಂಡು, ಅರ್ಥಾತ್ ಒಬ್ಬ ಸಂತ ಅಥವಾ ಋಷಿಗಳಂತೆ ಇರುತ್ತಾರೆ. ಪ್ರಭುವಿನಿಂದ

ರಚಿತವಾದ (ಸಹ ಪ್ರಾಣೀಥಃ) ಸಾವಿರಾರು ವಾಣಿಯು (ಋಷಿಮನಾ) ಸಂತ ಸ್ವಭಾವವುಳ್ಳ ವ್ಯಕ್ತಿಗಳಿಗೆ (ಸ್ವರ್ಷಾಃ) ಸ್ವರ್ಗ ಸಮಾನವಾಗಿ ಆನಂದದಾಯಕವಾಗಿರುತ್ತದೆ. (ಸೋಮ) ಅಮರ ಪುರುಷ ಅರ್ಥಾತ್ ಸತ್ಯಪುರುಷ (ತೃತೀಯಾ) ಮೂರನೆಯ (ಧಾಮ) ಮುಕ್ತಿ ಲೋಕ ಅರ್ಥಾತ್ ಸತ್ಯಲೋಕದ (ಮಹಿಷಃ) ಸದೃಢ ಪೃಥ್ವಿಯನ್ನು (ಸಿಷಾ) ಸ್ಥಾಪಿತ ಮಾಡಿ (ಅನು) ನಂತರ (ಸಂತ) ಮಾನವ ಸದೃಶ ಸಂತ ರೂಪದಲ್ಲಿರುತ್ತಾ (ಸ್ಟುಪ) ಎತ್ತರದ ಸಿಂಹಾಸನದ ಮೇಲೆ (ವಿರಾಜಮಾನು ರಾಜತಿ) ಉಜ್ವಲ ಸ್ಥೂಲ ಆಕಾರದಲ್ಲಿ, ಅರ್ಥಾತ್ ಮಾನವ ಸದೃಶ ತೇಜೋಮಯ ಶರೀರದಲ್ಲಿ ವಿರಾಜಮಾನರಾಗಿದ್ದಾರೆ.

**ಭಾವಾರ್ಥ :– ಮಂತ್ರ 17ರಲ್ಲಿ ಹೀಗೆ ಹೇಳಿದೆ : ಕವಿರ್ದೇವರು ಶಿಶು ರೂಪವನ್ನು ಧಾರಣೆ ಮಾಡುತ್ತಾರೆ. ಲೀಲೆಯನ್ನು ಮಾಡುತ್ತಾ ದೊಡ್ಡವರಾಗುತ್ತಾರೆ. ಕವಿತೆಗಳ ಮೂಲಕ ತತ್ವಜ್ಞಾನವನ್ನು ವರ್ಣನೆ ಮಾಡಿದ ಕಾರಣ ಕವಿಯೆಂಬ ಪದವಿಯನ್ನು ಪಡೆದರು. ಅವರನ್ನು ಋಷಿ ಸಂತ, ಕವಿ, ಎಂದೆಲ್ಲಾ ಕರೆಯಲಾಗಿದೆ. ವಾಸ್ತವದಲ್ಲಿ ಅವರೇ ಪರಮಾತ್ಮ ಕವೀರರು. (ಕವಿರ್ದೇವರು) ಅವರಿಂದ ರಚಿತವಾದ ಅಮೃತವಾಣಿಯನ್ನು ಕಬೀರವಾಣಿ ಎಂದು ಕರೆಯಲಾಗಿದೆ. ಅದು ಭಕ್ತರಿಗೆ ಸ್ವರ್ಗ ಸಮಾನ ಸುಖದಾಯಕವಾಗಿದೆ. ಅದೇ ಪರಮಾತ್ಮರು ಮೂರನೆಯ ಮುಕ್ತಿಧಾಮ ಅಂದರೆ ಸತ್ಯಲೋಕದಲ್ಲಿ, ಒಂದು ಗುಂಬದ ಮೇಲೆ ಸಿಂಹಾಸನದ ಮೇಲೆ ತೇಜೋಮಯ (ಸ್ವಪ್ರಕಾಶಿತ) ಮಾನವ ಶರೀರದಲ್ಲಿ ವಿರಾಜಮಾನರಾಗಿದ್ದಾರೆ.**

**ಈ ಮಂತ್ರದಲ್ಲಿ ಮೂರನೆಯ ಧಾಮವನ್ನು ಸತ್ಯಲೋಕ (ಮುಕ್ತಿಲೋಕ) ವೆಂದು ಹೇಳಿದೆ. ಹೇಗೆಂದರೆ ಒಂದನೆಯದು ಬ್ರಹ್ಮನ 21 ಬ್ರಹ್ಮಾಂಡಗಳು, ಎರಡನೆಯದು ಪರಬ್ರಹ್ಮನ 7 ಸಂಖ ಬ್ರಹ್ಮಾಂಡ, ಮೂರನೆಯದು ಪೂರ್ಣ ಬ್ರಹ್ಮನ ಸತ್ಯಲೋಕ ಏಕೆಂದರೆ ಪೂರ್ಣ ಬ್ರಹ್ಮನೇ ಸತ್ಯಲೋಕದಲ್ಲಿ ಸತ್ಯಪುರುಷನ ರೂಪದಲ್ಲಿ ವಿರಜಮಾನರಾಗಿದ್ದಾರೆ. ಅವರೇ ಕೆಳಗಿನ ಲೋಕಗಳ ರಚನೆ ಮಾಡಿದ್ದಾರೆ. ಆದ್ದರಿಂದ ಕೆಳಗಿನ ಲೋಕಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.**

ಇದನ್ನೇ ಕಣ್ಣಿನಿಂದ ನೋಡಿದ ಗರೀಬ್ ದಾಸರು ಹೇಳಿದ್ದಾರೆ :–

ಅರ್ಸ್ ಕುರ್ಸ್ ಪರ್ ಸಫೇದ್ ಗುಂಬಜ್ ಹೈ ಜಹಾ ಸತ್‌ಗುರು ಕಾ ಡೇರಾ ।

**ಭಾವಾರ್ಥ :– ಮೇಲಿನ ಆಕಾಶದ ಮೇಲ್ಭಾಗದ ಶಿಖರದಲ್ಲಿ ಕಬೀರ್ ಪರಮೇಶ್ವರರು ಬಿಳಿಯ ಗುಂಬಜದಲ್ಲಿ ಇದ್ದಾರೆ.**

**ಋಗ್ವೇದದ 9ನೇ ಮಂಡಲದ 96ನೇ ಸೂಕ್ತಿಯ 19ನೇ ಮಂತ್ರ.**

ಚಮೂಷಚ್ಛೇನಃ ಶಕುನೋ ವಿಭೃತ್ವಾ ಗೋವಿಂದುರ್ದ್ರುಪ್ಸ ಆಯುಧಾನಿ ಬಿಭ್ರತ್ ।
ಅಪಾಮೂರ್ಭಿ ಸಚಮಾನಾಃ ಸಮುದ್ರಂ ತುರೀಯಂ ಧಾಮ ಮಹಿಷೋ ವಿವಕ್ತಿ ॥ 19 ॥

**ಚಮೂಸತ್–ಶ್ವೇನಃ–ಶಕುನಃ–ವಿಭೃತ್ವಾ–ಗೋವಿಂದುಃ–ದ್ರಪ್ಸ–ಆಯುಧಾನಿ–ಬಿಭ್ರತ್–ಅಪಾಮೂರ್ಭಿಃ–ಸಚಮಾನಃ– ಸಮುದ್ರಮ್–ತುರೀಯಮ್–ಧಾಮ–ಮಹಿಷಃ–ವಿವಕ್ತಿ ।**

**ಅನುವಾದ :–** (ಚಮೂಸತ್) ಪವಿತ್ರ (ಗೋವಿಂದುಃ) ಕಾಮಧೇನುವಿನ ರೂಪದಲ್ಲಿ ಎಲ್ಲ ಮನೋ ಕಾಮನೆಗಳನ್ನು ಪೂರ್ಣ ಮಾಡುವ ಪೂರ್ಣ ಪರಮಾತ್ಮ ಕವಿರ್ದೇವ (ವಿಭೃತ್ವಾ) ಎಲ್ಲರನ್ನು ಪಾಲಿಸುವವನು ಆಗಿದ್ದಾನೆ. (ಶ್ಯೇನಃ) ಬಿಳಿಬಣ್ಣದಿಂದ ಕೂಡಿದ, (ಶಕುನಃ) ಶುಭ ಲಕ್ಷಣಯುಕ್ತ (ಚಮೂಸತ್) ಶಕ್ತಿವಂತನಾಗಿರುವನು. (ದ್ರಪ್ಸಃ) ಹಾಲಿನಿಂದ ಮೊಸರು ಮಾಡುವ ವಿಧಾನದಂತೆ, ಶಾಸ್ತ್ರಾನುಕೂಲವಾದ ಸಾಧನೆಯಿಂದ ಮೊಸರಿನ ರೂಪದ ಮುಕ್ತಿದಾತ (ಆಯುಧಾನಿ) ತತ್ವಜ್ಞಾನರೂಪಿ, ಕಾಲ ಜಾಲ ವಿನಾಶಕ ಧನುಷ್ ಯುಕ್ತನಾಗಿರುವ, ಸಾರಂಗ ಪಾಣಿಯಾಗಿರುವನು ಪ್ರಭು (ಸಚಮಾನಃ) ವಾಸ್ತವಿಕವಾಗಿ (ಭಿಭ್ರತ) ಎಲ್ಲರ ಪಾಲನೆ–ಪೋಷಣೆ ಮಾಡುತ್ತಾನೆ. (ಅಪಾಮೂರ್ಭಿಃ) ಆಳವಾದ ಜಲಯುಕ್ತ (ಸಮುದ್ರಮ್) ಸಾಗರೋಪಾದಿಯಲ್ಲಿ

ಆಳವೂ, ಗಂಭೀರವೂ ಅರ್ಥಾತ್ ವಿಶಾಲ (ತುರೀಯಮ್) ನಾಲ್ಕನೆಯ (ಧಾಮ) ಲೋಕ ಅರ್ಥಾತ್ ಅನಾಮಿಲೋಕದಲ್ಲಿ (ಮಹಿಷಃ) ಉಜ್ವಲ ಸದೃಢ ಭೂಮಿಯ ಮೇಲೆ (ವಿವಕ್ತಿ) ಬೇರೆ–ಬೇರೆ ಸ್ಥಾನಗಳಲ್ಲಿ ಭಿನ್ನವಾಗಿರುತ್ತಾನೆ, ಈ ಜ್ಞಾನವನ್ನು ಕವಿರ್ದೇವನು ಸ್ವಯಂ ಭಿನ್ನ–ಭಿನ್ನವಾಗಿ, ವಿಸ್ತಾರವಾಗಿ ತಿಳಿಸುತ್ತಾರೆ.

**ಭಾವಾರ್ಥ:– ಮಂತ್ರ 18ರಲ್ಲಿ ಹೇಳಿರುವ ಅಂಶಗಳು ಪೂರ್ಣ ಪರಮಾತ್ಮ ಕವಿರ್ದೇವರು (ಕಬೀರ್ ಪರಮೇಶ್ವರ) ಮೂರನೆ ಮುಕ್ತಿಧಾಮ ಅರ್ಥಾತ್ ಸತ್ಯಲೋಕದಲ್ಲಿ ಒಂದು ಗುಂಬಜದಲ್ಲಿ ಇದ್ದಾರೆ. ಮಂತ್ರ 19ರಲ್ಲಿ ಹೇಳಿರುವಂತೆ, ಅತ್ಯಧಿಕ ಬಿಳಿ ಬಣ್ಣದ ಪೂರ್ಣ ಪ್ರಭುವು ಕಾಮಧೇನುವಿನಂತೆ ಸರ್ವ ಮನೋಕಾಮನೆಯನ್ನು ಪೂರ್ಣಗೊಳಿಸುವನಾಗಿದ್ದಾನೆ. ಅವನೇ ವಾಸ್ತವದಲ್ಲಿ ಎಲ್ಲರ ಪಾಲನೆ–ಪೋಷಣೆ ಮಾಡುತ್ತಾನೆ. ಆ ಕವಿರ್ದೇವರು ಮೃತಲೋಕದಲ್ಲಿ (ಭೂಲೋಕದಲ್ಲಿ) ಶಿಶುರೂಪದಲ್ಲಿ ಬರುತ್ತಾರೆ. ಹೇಗೆ ಹಾಲಿನಿಂದ ಮೊಸರು ಮಾಡುವ ವಿಧಾನವಿದೆಯೋ ಹಾಗೆ, ಪೂರ್ಣ ಮೋಕ್ಷ ಹೊಂದಲು ಶಾಸ್ತ್ರಗಳ ಅನುಗುಣ ಸಾಧನೆಯನ್ನು ತಿಳಿಸಿ, ಮೊಸರಿನಂತಹ ಮೋಕ್ಷವನ್ನು ಪ್ರಧಾನಮಾಡುವವರಾಗಿದ್ದಾರೆ. ತತ್ವಜ್ಞಾನರೂಪಿ ಶಾಸ್ತ್ರ ಅರ್ಥಾತ್ ಧನುಷ್ ಯುಕ್ತವಾಗಿರುವ ಸಾರಂಗಪಾಣಿಯೇ ಆಗಿದ್ದಾರೆ. ಸಮುದ್ರದಂತೆ (ಸಕಲ ಜಲ ಸ್ತೋತ್ರದಂತೆ) ಸಕಲವನ್ನು ಉತ್ಪತ್ತಿ ಮಾಡಿರುತ್ತಾರೆ. ಗೀತೆಯ 15ನೇ ಅಧ್ಯಾಯದ 3ನೇ ಶ್ಲೋಕದಲ್ಲಿ ಹೇಳಿದೆ. ಸಂಸಾರ ರೂಪದ ವೃಕ್ಷವನ್ನು ಸಾಂಸಾರಿಕ ವ್ಯಾಮೋಹವನ್ನು ತತ್ವಜ್ಞಾನ ರೂಪದ ಶಸ್ತ್ರದಿಂದ ಕತ್ತರಿಸಬೇಕು. ತತ್ವಜ್ಞಾನದ ಮೂಲಕ ಸಂಶಯ ದೂರವಾದ ಮೇಲೆ ಆ ಪರಮ ಪದ ಪರಮೇಶ್ವರನನ್ನು ಹುಡುಕಬೇಕು. ಆ ಪರಮಪದ ಪರಮಾತ್ಮನನ್ನು ಪಡೆದ ಮೇಲೆ ಸಾಧಕನು ಪುನಃ ಈ ಸಂಸಾರಕ್ಕೆ ಬರುವುದಿಲ್ಲ, ಮೋಕ್ಷ ಪ್ರಾಪ್ತಿಯಾಗುತ್ತದೆ. ಯಾವ ಪರಮೇಶ್ವರನಿಂದ ಈ ಸಂಸಾರ ರೂಪದ ವೃಕ್ಷವು ವಿಸ್ತಾರತೆಯನ್ನು ಪಡೆದಿದೆಯೋ, ಆ ಪರಮೇಶ್ವರನು (ಪೂರ್ಣ ಪ್ರಭು) ನಾಲ್ಕನೆಯ ಲೋಕವಾದ ಅನಾಮಿ ಲೋಕದಲ್ಲೂ ಇರುತ್ತಾನೆ. ಮೊದಲು ಸತ್ಯಲೋಕ, ಎರಡನೆಯದು ಅಲಖ್‌ಲೋಕ, ಮೂರನೆಯದು ಅಗಮ್‌ಲೋಕ, ನಾಲ್ಕನೆಯದು ಅನಾಮಿಲೋಕವಿದೆ. ಆದ್ದರಿಂದ ಈ ಮಂತ್ರ 19ರಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಕವಿರ್ದೇವರೇ (ಕಬೀರ್ ಪರಮೇಶ್ವರ) ಅನಾಮೀ ಪುರುಷರು, ನಾಲ್ಕನೆಯ ಲೋಕದಲ್ಲಿ ಅಂದರೆ ಅನಾಮಿಲೋಕದಲ್ಲಿ. ತೇಜೋಮಯ ರೂಪಧಾರಣೆ ಮಾಡಿಕೊಂಡಿರುತ್ತಾರೆ.**

**<u>ಋಗ್ವೇದದ 9ನೇ ಮಂಡಲದ 96ನೇ ಸೂಕ್ತಿಯ 20ನೇ ಮಂತ್ರ.</u>**

ಮರ್ಯೋನ ಶುಭ್ರಸ್ತನ್ವಂ ಮೃಜಾನೋತ್ಯೋ ನ ಸೃತ್ವಾ ಸನಯೆ ಧನಾನಾಮ ।
ವೃಷೇವ ಯೂಥಾ ಪರಿ ಕೋಶ ಮರ್ಷನ ಕನಿಕ್ರದಚ್ಚಂ ಬೋರಾ ವಿವೇಶ ॥ 20 ॥

**ಮರ್ಯಃ–ನ–ಶುಭ್ರಸ್ತನ್ವಮ್–ಮೃಜಾನಃ–ಅತ್ಯಃ–ನ–ಸೃತ್ವಾ–ಸನಯೆ–ಧನಾನಾಮ್–ವೃಷೇವ–ಯೂಥಾ– ಪರಿಕೋಶಮ್–ಅರ್ಷನ್–ಕನಿಕ್ರದತ್–ಚಂವೋಃ–ಇರಾ–ವಿವೇಶ ।**

**ಅನುವಾದ :–** ಪೂರ್ಣ ಪರಮಾತ್ಮ ಕವಿರ್ದೇವರು ಯಾವ ನಾಲ್ಕನೆಯ ಧಾಮ ಅರ್ಥಾತ್ ಅನಾಮಿ ಲೋಕದಲ್ಲಿ ಹಾಗೂ ಮೂರನೆಯ ಧಾಮ ಅರ್ಥಾತ್ ಸತ್ಯಲೋಕದಲ್ಲಿ ಇರುತ್ತಾರೆ. ಆ ಪರಮಾತ್ಮ (ನ ಮರ್ಯಃ) ಮನುಷ್ಯ ಸದೃಶ್ಯರಾಗಿದ್ದಾರೆ. ಆದರೆ ನಾಶ ರಹಿತ ಅರ್ಥಾತ್ ಅಮರ (ಮೃಜನಃ) ನಿರ್ಮಲ ಮುಖಮಂಡಲ ಯುಕ್ತ ಆಕಾರದಲ್ಲಿ (ಅತ್ಯಃ) ಬಹಳ (ಶುಭ್ರಸ್ತವಮ್) ವಿಶಾಲ ಶ್ವೇತ ಶರೀರ ಧಾರಣೆ ಮಾಡುತ್ತಾ ಮೇಲಿನ ಲೋಕದಲ್ಲಿ ಇದ್ದಾರೆ ಹಾಗೂ ಅಲ್ಲಿಂದ (ಸೃತ್ವಾ) ನಡೆದು, ಯಾರಿಗೂ ಗೊತ್ತಾಗದಂತಹ, ಅದೇ ಸಮ ರೂಪೀ ಪರಮಾತ್ಮ (ಇರಾ) ಭೂಮಿಯ ಮೇಲೆ (ವಿವೇಶ) ಅನ್ಯ ವೇಷ–ಭೂಷಣದಿಂದ ಬರುತ್ತಾರೆ. ಸತ್ಯಲೋಕ ಹಾಗೂ

ಭೂಲೋಕದಲ್ಲಿ ಲೀಲೆ ಮಾಡುತ್ತಾರೆ. (ಯಥಾ) ಬಹು ದೊಡ್ಡ ಸಮೂಹವನ್ನು ವಾಸ್ತವಿಕ (ಸನಯೆ) ಸನಾತನ ಪೂಜೆಯ (ವೃಷೇವ) ವರ್ಷಧಾರೆ ಮಾಡುತ್ತಾರೆ. (ನಧನಾನಾಮ) ಆ ರಾಮನಾಮದ ದುಡಿಮೆಯ ನಿರ್ಧನರನ್ನು (ಕನಿಕ್ರದತ್) ಶ್ವಾಸಗಳ ಮೂಲಕ, ಮಂದ ಸ್ವರದಿಂದ ಅರ್ಥಾತ್ ಮನಸ್ಸಿನಲ್ಲೇ ಉಸಿರಿನಿಂದ ಉಚ್ಚಾರಣೆ ಮಾಡಿಸುತ್ತಾ ಪೂಜೆ ಮಾಡಿಸುತ್ತಾರೆ. ಇದರಿಂದ ಲೆಕ್ಕವಿಲ್ಲದಷ್ಟು ಅನುಯಾಯಿಗಳ (ಪರಿ ಕೋಶಮ್) ಸಂಘವು ಮೊದಲಿನ ಸುಖಸಾಗರ ರೂಪದ ಅಮೃತ ಖಜಾನೆಯಾದ ಸತ್ಯಲೋಕವನ್ನು (ಅರ್ಷನ್) ಸೇರುತ್ತಾರೆ.

**ಭಾವಾರ್ಥ :– ಪೂರ್ಣ ಪರಮಾತ್ಮ ಕವಿರ್ದೇವರು (ಕಬೀರ್ ಪರಮೇಶ್ವರ) ಮೇಲಿನ ಮೂರನೆ ಧಾಮ ಅರ್ಥಾತ್ ಸತ್ಯಲೋಕದಲ್ಲಿದ್ದಾರೆ. ಹಾಗೂ ಆ ಪರಮೇಶ್ವರರು ಮನುಷ್ಯ ರೂಪ ಧಾರಣೆ ಮಾಡಿ ನಾಲ್ಕನೆಯ ಧಾಮ ಅರ್ಥಾತ್ ಅನಾಮಿ ಲೋಕದಲ್ಲಿರುತ್ತಾರೆ. ಅದೇ ಪರಮಾತ್ಮನು ಅದೇ ರೀತಿಯ ಮನುಷ್ಯರೂಪದಿಂದ, ಸುಂದರ ಮುಖಮಂಡಲಯುಕ್ತ ಶ್ವೇತ ಶರೀರವುಳ್ಳವರಾಗಿ ಈ ಭೂಮಿಯ ಮೇಲೆ ಬರುತ್ತಾರೆ. ತಮ್ಮ ವಾಸ್ತವಿಕ ಪೂಜಾ ವಿಧಿಯನ್ನು ತಿಳಿಸಿ, ಬಹಳಷ್ಟು ಜನ ಸಮೂಹವನ್ನು ಸತ್ಯ ಭಕ್ತಿಯ ಧನಿಕರನ್ನಾಗಿಸುತ್ತಾರೆ. ಅಸಂಖ್ಯ ಅನುಯಾಯಿಗಳು ಸುಖಸಾಗರ ರೂಪದ ಅಮೃತ ಖಜಾನೆಯಾದ ಸತ್ಯಲೋಕವನ್ನು ತಮ್ಮ ಸಾಧನೆಯನ್ನು ಮಾಡಿಸುವ ಮೂಲಕ ಪ್ರಾಪ್ತಿಮಾಡಿಸುತ್ತಾರೆ.**

**<u>ಅಥರ್ವಣ ವೇದದ 4ನೇ ಕಾಂಡದ, ಅನುವಾಕ 1ರ, 7ನೇ ಮಂತ್ರ.</u> (ಸಂತ ರಾಮ್‌ಪಾಲ್ ದಾಸರಿಂದ ಭಾಷ್ಯೆ ಬರೆಯಲ್ಪಟ್ಟಿದೆ)**

ಯೋಥರ್ವಾಣಂ ಪಿತ್ತರಂ ದೇವಬಂಧುಂ ಬೃಹಸ್ಪತಿಂ ನಮಸಾವ ಚ್ ಗಚ್ಛಾತ ।
ತ್ವಂ ವಿಶ್ವೇಷಾಂ ಜನಿತಾ ಯಥಾಸಃ, ಕವಿರ್ದೇವೋ ನ ದಭಾಯತ್ ಸ್ವಧಾವಾನ ॥

**ಯಃ–ಅಥರ್ವಾಣಮ್–ಪಿತ್ತರಂ–ದೇವಬಂಧುಂ–ಬೃಹಸ್ಪತಿಮ್–ನಮಸಾ–ಅವ–ಚ–ಗಚ್ಛಾತ್–ತ್ವಮ್–ವಿಶ್ವೇಷಾಮ್–ಜನಿತಾ–ಯಥಾ–ಸಃ–ಕವಿರ್ದೇವಃ–ನ–ದಭಾಯತ್–ಸ್ವಧಾವಾನ್.**

**ಅನುವಾದ :–** (ಯಃ) ಯಾರು (ಅಥರ್ವಾಣಮ್) ಅಚಲ ಅರ್ಥಾತ್ ಅವಿನಾಶಿ (ಪಿತ್ತರಮ್) ಜಗತ್ ಪಿತಾ (ದೇವ ಬಂಧುಮ್) ಭಕ್ತರ ವಾಸ್ತವಿಕ ಜೊತೆಗಾರ ಅರ್ಥಾತ್ ಆತ್ಮನ ಆಧಾರ (ಬೃಹಸ್ಪತಿಮ್) ಎಲ್ಲರಿಗಿಂತ ದೊಡ್ಡ ಸ್ವಾಮಿ ಜ್ಞಾನ ದಾತ ಜಗದ್ಗುರು (ಚ) ಹಾಗೂ (ನಮಸಾ) ವಿನಮ್ರ ಪೂಜಾರಿ ಅರ್ಥಾತ್ ಸಾಧಕನನ್ನು (ಅವ) ಸುರಕ್ಷೆಯ ಜೊತೆಗೆ (ಗಚ್ಛಾತ್) ಯಾರು ಸತ್ಯಲೋಕಕ್ಕೆ ಕರೆದುಕೊಂಡು ಹೋಗುತ್ತಾರೋ (ವಿಶ್ವೇಷಾಮ್) ಸರ್ವ ಬ್ರಹ್ಮಾಂಡಗಳನ್ನು (ಜನಿತಾ) ರಚಿಸಿದವನು, (ನ ದಭಾಯತ್) ಕಾಲನಂತೆ ಮೋಸ ಮಾಡದವನು (ಸ್ವಧಾವಾನ್) ಸ್ವಭಾವ ಅರ್ಥಾತ್ ಗುಣವಿರುವ (ಯಥಾ) ಹೇಗೆ ಇದೆಯೋ ಹಾಗೆ (ಸಃ) ಅವರು, (ತ್ವಮ್) ತಾವು (ಕವಿರ್ದೇವ ಕವೀರ/ದೇವಃ) ಕಬೀರ್ ಪರಮೇಶ್ವರರು. ಕವಿರ್ದೇವರು ಆಗಿರುವಿರಿ.

**ಭಾವಾರ್ಥ :– ಪರಮೇಶ್ವರನ ವಿಷಯದಲ್ಲಿ ಹೇಳಲಾಗುತ್ತದೆ. "ತ್ವಮೇವ ಮಾತಾ ಚ ಪಿತಾ ತ್ವಮೇವ, ತ್ವಮೇವ ಬಂಧು ಚ ಸಖಾ ತ್ವಮೇವ, ತ್ವಮೇವ ವಿಧ್ಯಾ ಚ ದ್ರವಿಣಮ್, ತ್ವಮೇವ ಸರ್ವಮ್ ಮಮ್ ದೇವ ದೇವ'. ಅವಿನಾಶಿಯಾದ ಕವಿರ್ದೇವರು (ಕಬೀರ್ ಪರಮೇಶ್ವರರು) ಸಕಲ ಜಗತ್ತಿನ ತಂದೆ, ತಾಯಿ, ಬಂಧು, ಸ್ನೇಹಿತ ವಿದ್ಯೆ, ಹಣ ಎಲ್ಲವೂ ಆಗಿದ್ದಾರೆ. ಎಲ್ಲರ ದೇವರ ದೇವರಾಗಿದ್ದಾರೆ. ಕಾಲ ಬ್ರಹ್ಮನ ಹಾಗೆ ಮೋಸ ಮಾಡುವವರಲ್ಲ ಸಕಲ ಬ್ರಹ್ಮಾಂಡಗಳನ್ನು ರಚನೆ ಮಾಡಿದವರು ಕವಿರ್ದೇವರೇ ಆಗಿದ್ದಾರೆ.**

## ೫. ಕಬೀರ್ ಪರಮೇಶ್ವರರು ನಾಲ್ಕೂ ಯುಗಗಳಲ್ಲಿ ಬರುತ್ತಾರೆ.

ಸದ್ಗುರು ಪುರುಷ ಕಬೀರ್ ಹೈ, ಚಾರೋ ಯುಗ್ ಪ್ರವಾನ್ ।
ಝೂಠೆ ಗುರುವಾ ಮರ್ ಗಯೆ, ಹೋ ಗಯೆ ಭೂತ ಮಸಾನ್ ॥

### "ಸತ್ಯಯುಗದಲ್ಲಿ ಕವಿರ್ದೇವ (ಕಬೀರ್ ಪರಮೇಶ್ವರ)ರು ಸತ್ಯಸುಕೃತ ನಾಮದಿಂದ ಪ್ರಕಟ"

ತತ್ವಜ್ಞಾನದ ಅಭಾವದಿಂದ ಶ್ರದ್ಧಾಳುಗಳು ಸಂಶಯವನ್ನು ವ್ಯಕ್ತ ಪಡಿಸುತ್ತಾರೆ. ನೇಕಾರರ ರೂಪದಲ್ಲಿ ಕಬೀರ್ ರವರು ವಿ. ಸಂ. **1455** (ಸನ್ **1398**) ರಲ್ಲಿ ಕಾಶಿಗೆ ಬಂದರು. ವೇದಗಳಲ್ಲಿನ ಕವಿರ್ದೇವ ಇದೇ ಕಾಶಿಯ ನೇಕಾರ (ದಾಣಕ), ಹೇಗೆ ಪೂರ್ಣ ಪರಮಾತ್ಮನಾಗಲು ಸಾಧ್ಯವಾಯಿತು?

ಈ ವಿಷಯದಲ್ಲಿ ದಾಸನ (ಸಂತ ರಾಮ್‌ಪಾಲ್ ದಾಸ್) ಪ್ರಾರ್ಥನೆ ಏನೆಂದರೆ, ಈ ಪೂರ್ಣ ಪರಮಾತ್ಮ ಕವಿರ್ದೇವ (ಕಬೀರ್ ಪರಮೇಶ್ವರ) ವೇದಗಳ ಜ್ಞಾನಕ್ಕಿಂತಲೂ ಮೊದಲು ಸತ್ಯಲೋಕದಲ್ಲಿದ್ದರು. ತಮ್ಮ ವಾಸ್ತವಿಕ ತತ್ವಜ್ಞಾನವನ್ನು ಕೊಡಬೇಕೆಂದು ನಾಲ್ಕೂ ಯುಗಗಳಲ್ಲಿ ಸ್ವಯಂ ಪ್ರಕಟವಾಗಿದ್ದಾರೆ. ಸತ್ಯಯುಗದಲ್ಲಿ, ಸತ್ಯ-ಸುಕೃತ ನಾಮದಿಂದ, ತ್ರೇತಾಯುಗದಲ್ಲಿ ಮುನೀಂದ್ರ ನಾಮದಿಂದ, ದ್ವಾಪರ ಯುಗದಲ್ಲಿ ಕರುಣಾಮಯ ನಾಮದಿಂದ ಹಾಗೂ ಕಲಿಯುಗದಲ್ಲಿ ಕವಿರ್ದೇವ (ಕಬೀರ್ ಪ್ರಭು) ನಾಮದಿಂದ ಪ್ರಕಟವಾಗಿದ್ದಾರೆ. ಇದಲ್ಲದೆ ಕಲಿಯುಗದಲ್ಲಿ ಅನ್ಯ ರೂಪವನ್ನು ಧಾರಣೆ ಮಾಡಿ ಪ್ರಕಟವಾಗಿ ತಮ್ಮ ಲೀಲೆಗಳನ್ನು ಮಾಡಿ ಅಂತರ್ಧ್ಯಾನರಾಗಿದ್ದಾರೆ. ಆ ಸಮಯದಲ್ಲಿ ಲೀಲೆ ತೋರಲು ಬಂದ ಪರಮೇಶ್ವರನನ್ನು ಇಚ್ಛಿಸುವ ಶ್ರದ್ಧಾಳುಗಳು ಗುರುತಿಸಲಿಲ್ಲ. ಏಕೆಂದರೆ ಎಲ್ಲ ಮಹರ್ಷಿಗಳು, ಹಾಗೂ ಸಂತರೆನಿಸಿಕೊಂಡವರು ಪ್ರಭುವನ್ನು ನಿರಾಕಾರ ಎಂದು ಹೇಳಿದ್ದಾರೆ. ವಾಸ್ತವದಲ್ಲಿ ಪರಮೇಶ್ವರ ಸಾಕಾರವಾಗಿದ್ದಾರೆ. ಮನುಷ್ಯ ಸದೃಶ ಶರೀರವಿರುವವನಾಗಿದ್ದಾರೆ. ಆದರೆ ಪರಮೇಶ್ವರನ ಶರೀರವು ರಕ್ತ-ಮಾಂಸ-ಚರ್ಮ-ನರನಾಡಿಗಳ ಪಂಚತತ್ವದ ಶರೀರವಲ್ಲ. ಒಂದು ಪ್ರಕಾಶ ತತ್ವದಿಂದ ಮಾಡಿದ್ದಾಗಿದೆ. ಪೂರ್ಣ ಪರಮಾತ್ಮನು ಇಚ್ಛಿಸಿದಾಗ ಪ್ರಕಟವಾಗುತ್ತಾರೆ. ಅವರು ಯಾವುದೇ ತಾಯಿಯ ಹೊಟ್ಟೆಯಿಂದ ಹುಟ್ಟಿ ಬರುವುದಿಲ್ಲ. ಏಕೆಂದರೆ ಅವರೇ ಸರ್ವವನ್ನೂ ಉತ್ಪತ್ತಿ ಮಾಡಿದ್ದಾರೆ.

ಪೂರ್ಣ ಪ್ರಭು ಕಬೀರರು (ಕವಿರ್ದೇವ) ಸತ್ಯಯುಗದಲ್ಲಿ 'ಸತ್ಯಸುಕೃತ್' ನಾಮದಿಂದ ಸ್ವಯಂ ಪ್ರಕಟವಾಗಿದ್ದರು. ಆ ಸಮಯದಲ್ಲಿ ಶ್ರೀ ಬ್ರಹ್ಮಾ , ಶ್ರೀ ವಿಷ್ಣು, ಶ್ರೀ ಶಿವ ಹಾಗೂ ಗರುಡ ಮುಂತಾದವರಿಗೆ ಸತ್ಯಜ್ಞಾನವನ್ನು ತಿಳಿಸಿದರು. ಶ್ರೀ ಮನು ಮಹರ್ಷಿಗಳಿಗೂ ತತ್ವಜ್ಞಾನ ತಿಳಿಸಲು ಇಚ್ಛಿಸಿದರು. ಆದರೆ ಶ್ರೀ ಮನು ರವರು ಪರಮೇಶ್ವರರ ಜ್ಞಾನವನ್ನು ಸತ್ಯವಲ್ಲವೆಂದು ತಿಳಿದು ಬ್ರಹ್ಮಾ ರವರಿಂದ ಕೇಳಿದ ವೇದ ಜ್ಞಾನದ ಮೇಲೆ ಆಧಾರಿತರಾಗಿ ಹಾಗೂ ತಮ್ಮಿಂದ ಹೊರ ಹೊಮ್ಮಿದ ವೇದಗಳ ನಿಷ್ಕರ್ಷೆಯಲ್ಲಿ ತೊಡಗಿಕೊಂಡರು. ಇಷ್ಟೇ ಅಲ್ಲದೆ, ಪರಮೇಶ್ವರ ಸತ್ಯ ಸುಕೃತ್ ರವರ ವ್ಯಂಗ್ಯ ಮಾಡತೊಡಗಿದರು. ನೀವಂತೂ ಎಲ್ಲವನ್ನು ವಿರುದ್ಧ ಜ್ಞಾನವೆಂದು ಹೇಳುತ್ತಿರುವಿರಿ. ಆದ್ದರಿಂದ ಪರಮೇಶ್ವರ ಸತ್ಯ ಸುಕೃತರ ಮತ್ತೊಂದು ಹೆಸರು (ಉರ್ಫ ನಾಮ) "ವಾಮದೇವ" ಎಂದು ಆಯಿತು. (ಇದರ ಅರ್ಥ ವಿರುದ್ಧ (ಉಲ್ಟಾ) ವಿಪರೀತ ಹೇಗೆಂದರೆ ಎಡಗೈಯನ್ನು ವಾಮಹಸ್ತ, ಅರ್ಥಾತ್ ವಿರುದ್ಧ ಹಸ್ತವೆಂದೂ ಹೇಳುತ್ತಾರೆ. ಹಾಗೆಯೇ ಬಲಗೈಯನ್ನು ಸೀದಾಹಸ್ತ (ನೇರಕ್ಕೆ) ಎಂದೂ ಕರೆಯುತ್ತಾರೆ.)

ಈ ಪ್ರಕಾರವಾಗಿ ಸತ್ಯಯುಗದಲ್ಲಿ ಪರಮೇಶ್ವರ ಕವಿರ್ದೇವ ರವರು ಸತ್ಯ ಸುಕೃತ್ ಹೆಸರಿನಿಂದ

ಬಂದಿದ್ದರು. ಆ ಸಮಯದ ಋಷಿಗಳಿಗೆ ಹಾಗೂ ಸಾಧಕರಿಗೆ, ವಾಸ್ತವಿಕ ಜ್ಞಾನವನ್ನು ತಿಳಿಸುತ್ತಲಿದ್ದರು. ಆದರೆ ಋಷಿಗಳು ಸ್ವೀಕಾರ ಮಾಡಲಿಲ್ಲ. "ಸತ್ಯ ಸುಕೃತ್ "ರ ಸ್ಥಾನದಲ್ಲಿ, ಪರಮೇಶ್ವರನನ್ನು "ವಾಮದೇವ" ಎಂದು ಕರೆಯತೊಡಗಿದರು.

ಇದೇ ಕಾರಣ ಯಜುರ್ವೇದದ 12ನೇ ಅಧ್ಯಾಯದ 4ನೇ ಮಂತ್ರದಲ್ಲಿ ಹೀಗೆ ವಿವರಣೆ ಇದೆ. ಯಜುರ್ವೇದದ ವಾಸ್ತವಿಕ ಜ್ಞಾನವನ್ನು ವಾಮದೇವ ಋಷಿಯು ಸರಿಯಾಗಿ ತಿಳಿದುಕೊಂಡಿದ್ದು, ಬೇರೆಯವರಿಗೂ ತಿಳಿಸಿದರು. ಪವಿತ್ರ ವೇದಗಳ ಜ್ಞಾನವನ್ನು ತಿಳಿದುಕೊಳ್ಳಲು ದಯವಿಟ್ಟು ವಿಚಾರ ಮಾಡಿರಿ ಉದಾ:– ಯಜುರ್ವೇದ ಒಂದು ಪವಿತ್ರ ಪುಸ್ತಕವಾಗಿದೆ. ಇದರ ವಿಷಯದಲ್ಲಿ ಎಲ್ಲಾ ಸಂಸ್ಕೃತ ಭಾಷೆಯಲ್ಲಿ ವಿವರಣೆ ಮಾಡಿದ್ದಾರೆ. ಎಲ್ಲಿ ಯಜುಃ ಅಥವಾ ಯಜುಮ್ ಮುಂತಾದ ಶಬ್ದ ಬರೆದಿದ್ದರೂ, ಸಹ ಪವಿತ್ರ ಪುಸ್ತಕ ಯಜುರ್ವೇದದ್ದೇ ಜ್ಞಾನವೆಂದು ತಿಳಿಯಲಾಗುತ್ತಿದೆ. ಇದೇ ಪ್ರಕಾರ ಪೂರ್ಣ ಪರಮಾತ್ಮನ ವಾಸ್ತವಿಕ ಹೆಸರು ಕವಿರ್ದೇವ ಆಗಿದೆ. ಇದನ್ನೇ ಬೇರೆ ಬೇರೆ ಭಾಷೆಯಲ್ಲಿ ಕಬೀರ್ ಸಾಹೇಬ್, ಕಬೀರ್ ಪರಮೇಶ್ವರ ಎಂದು ಕರೆಯತೊಡಗಿದರು. ಅನೇಕ ಶ್ರದ್ಧಾಳುಗಳು ಅನುಮಾನ ವ್ಯಕ್ತಿಪಡಿಸಿದ್ದಾರೆ. "ಕವಿರ" ಶಬ್ಧವನ್ನು "ಕಬೀರ್" ಎಂದು ಹೇಗೆ ಧೃಢಪಡಿಸುವಿರಿ, ವ್ಯಾಕರಣ ದೃಷ್ಟಿಕೋನದಿಂದ "ಕವಿಃ" ಶಬ್ಧದ ಅರ್ಥ "ಸರ್ವಜ್ಞ" ಎಂದಾಗುತ್ತದೆ. ದಾಸನ ಪ್ರಾರ್ಥನೆ ಏನೆಂದರೆ, ಪ್ರತ್ಯೇಕ ಶಬ್ಧದ ಅರ್ಥವು ಯಾವುದಾದರೂ ಆಗಿಯೇ ಇರುತ್ತದೆ. ವ್ಯಾಕರಣ ಮಾತು ಇರಲಿ, ಭಾಷೆ ಮೊದಲು ಆಗಿರುವುದು, ಏಕೆಂದರೆ ವೇದವಾಣಿಯು ಪ್ರಭುವಿನ ಮೂಲಕ ಹೇಳಲ್ಪಟ್ಟಿದೆ ಹಾಗೂ ವ್ಯಾಕರಣವು ನಂತರ ಋಷಿಗಳಿಂದ ಆದದ್ದು. ಇದು ದೋಷ ಯುಕ್ತವಾಗಬಲ್ಲದು. ಹೇಗೆಂದರೆ ವೇದದ ಅನುವಾದವು (ಭಾಷಾ–ಭಾಷ್ಯ) ವ್ಯಾಕರಣದ ವ್ಯತ್ಯಯವಾಗಿದೆ ಹಾಗೂ ಅಸಂಗತ ವಿರೋಧ ಭಾವವಾಗಿದೆ. ಏಕೆಂದರೆ ವೇದವಾಣಿ ಮಂತ್ರಗಳ ಮೂಲಕ ಪದಗಳಲ್ಲಿ ಇದೆ. ಹೇಗೆಂದರೆ ಪಲವಲ ಪಟ್ಟಣದ ಅಕ್ಕ–ಪಕ್ಕದ ಜನರು 'ಪಲವಲವನ್ನು 'ಪರವರ' ಎನ್ನುತ್ತಾರೆ. ಯಾರಾದರು ಕೇಳಿದರೆ, 'ಪಲವಲ'ವನ್ನು ಪರವರ ಎಂದು ಹೇಗೆ ದೃಢಪಡಿಸುವಿರಿ? ಎಂದು ಅದೂ ಅಂತೆಯೇ ಕವೀರರನ್ನು ಕಬೀರ್ ಎಂದು ಹೇಗೆ ವ್ಯಕ್ತ ಪಡಿಸಿದ ಮಾತು. ಕ್ಷೇತ್ರೀಯ (ಸ್ಥಳೀಯ) ಭಾಷೆಯಲ್ಲಿ 'ಪಲವಲ' ಪಟ್ಟಣದ ಹೆಸರನ್ನು 'ಪರವರ' ಎಂದು ಕರೆಯುತ್ತಾರೆ. ಇದೇ ಪ್ರಕಾರ ಕವೀರರನ್ನು 'ಕಬೀರ್' ಎನ್ನುತ್ತಾರೆ. ಪ್ರಭು ಅವರೇ ಆಗಿದ್ದಾರೆ. ಮಹರ್ಷಿ ದಯಾನಂದರು "ಸತ್ಯಾರ್ಥ ಪ್ರಕಾಶ" ಸಮುಲ್ಲಾಸ 4ರ, 100ನೇ ಪುಟದಲ್ಲಿ (ದಯಾನಂದ ಮಠ ದೀನಾನಗರ, ಪಂಜಾಬ್ ನಿಂದ ಪ್ರಕಾಶಿತ) "ದೇವುಕಾಮಾ"ದ ಅರ್ಥವನ್ನು ದೇವರ ಕಾಮನೆ ಮಾಡುವುದು ಎಂದು ಮಾಡಿದ್ದಾರೆ. ದೇವುವನ್ನು ಪೂರ್ಣ 'ರ' ಎಂದು ಬರೆದು 'ದೇವರ' ಮಾಡಿದ್ದಾರೆ. 'ಕವೀರ'ರನ್ನು "ಕಬೀರ್" ಎಂದು ಹೇಳಲು/ ಬರೆಯಲು ಯಾವುದೇ ಆಪತ್ತಾಗಲಿ, ವ್ಯಾಕರಣದ ದೋಷವಾಗಲೀ ಇರುವುದಿಲ್ಲ. ಪೂರ್ಣ ಪರಮಾತ್ಮರು ಕವಿರ್ದೇವರು, ಇದಕ್ಕೆ ಪ್ರಮಾಣ ಯಜುರ್ವೇದ 29ನೇ ಅಧ್ಯಾಯದ 25ನೇ ಮಂತ್ರ ಹಾಗೂ ಸಾಮವೇದದ ಸಂಖ್ಯಾ 1400ರಲ್ಲಿ ಕೂಡ ಈ ಕೆಳಗಿನಂತೆ ಇದೆ.

<u>ಯಜುರ್ವೇದದ 29ನೇ ಅಧ್ಯಾಯದ 25ನೇ ಶ್ಲೋಕ.</u> (ಸಂತ ರಾಮ್‌ಪಾಲ್ ದಾಸ್ ಮಹಾರಾಜರು ಭಾಷ್ಯ ಬರೆದಿರುತ್ತಾರೆ)

ಸಮಿದ್ಧೋಽಅದ್ಯ ಮನುಷೋ ದುರೋಣೆ ದೇವೋ ದೇವಾನ್ಯಜಸಿ ಜಾತವೇದಃ ।
ಆ ಚ ವಹ ಮಿತ್ರ ಮಿತ್ರಮಹಶ್ಚಿಕಿತ್ವಾಂತ್ವಂ ದೂತಃ ಕವಿರಸಿ ಪ್ರಚೇತಾಃ ॥ 25 ॥

ಸಮಿದ್ಧಃ–ಅದ್ಯ–ಮನುಷಃ–ದುರೋಣೆ–ದೇವಃ–ದೇವಾನ್–ಯಜ–ಅಸಿ–ಜಾತವೇದಃ–ಆ–ಚ–ವಹ–ಮಿತ್ರಮಃ–ಚಿಕಿತ್ವಾನ್–ತ್ವಮ್–ದೂತಃ–ಕವಿರ–ಅಸಿ–ಪ್ರಚೇತಾಃ

**ಅನುವಾದ :–** (ಅದ್ಯ) ಈ ದಿನ ಅಂದರೆ ವರ್ತಮಾನದಲ್ಲಿ (ದುರೋಣೆ) ಶರೀರರೂಪದ ಮಹಲಿನಲ್ಲಿ, ದುರಾಚಾರಪೂರ್ವಕ (ಮನುಷಃ) ಸುಳ್ಳು ಪೂಜೆಯಲ್ಲಿ ತೊಡಗಿರುವ ಮನಬಂದಂತೆ ವರ್ತಿಸುವ ವ್ಯಕ್ತಿಗಳನ್ನು (ಸಮಿದ್ಧಃ) ಬೆಂಕಿ ಹತ್ತಿಕೊಂಡಂತೆ ಅಂದರೆ ಶಾಸ್ತ್ರ ವಿರುದ್ಧ ಪೂಜೆಯು ಹಾನಿಕಾರಕವಾಗಿರುತ್ತದೆ. ಅದರ ಜಾಗದಲ್ಲಿ (ದೇವಾನ್) ದೇವರುಗಳ (ದೇವಃ) ದೇವರು (ಜಾತವೇದಃ) ಪೂರ್ಣ ಪರಮಾತ್ಮ ಸತ್ಯಪುರುಷನ ವಾಸ್ತವಿಕ (ಯಜ) ಪೂಜೆ ಯೋಗ್ಯ (ಅಸಿ) ಇದೆ (ಆ) ದಯಾಳು (ಮಿತ್ರ ಮಹಃ) ಜೀವಗಳ ವಾಸ್ತವಿಕ ಜೊತೆಗಾರ ಪೂರ್ಣ ಪರಮಾತ್ಮನೇ ತನ್ನ (ಚಿಕಿತ್ವಾನ್) ಸರಿಯಾದ ಜ್ಞಾನ ಅಂದರೆ ಯಥಾರ್ತ ಭಕ್ತಿಯನ್ನು (ದೂತಃ) ಸಂದೇಶವಾಹಕ ರೂಪದಲ್ಲಿ (ವಹ್) ತೆಗೆದುಕೊಂಡು ಹೋಗುವ (ಚ) ಹಾಗೂ (ಪ್ರಚೇತಾಃ) ತಿಳಿಯಪಡಿಸುವವನು (ತ್ವಮ್) ತಾನೇ (ಕವಿರಸಿ) ಕವಿರ್ದೇವ ಅರ್ಥಾತ್ ಕಬೀರ್ ಪರಮೇಶ್ವರರೆ ಆಗಿದ್ದಾರೆ.

**ಭಾವಾರ್ಥ :– ಯಾವ ಸಮಯದಲ್ಲಿ ಕಬೀರ್ ಪ್ರಭು ಸ್ವಯಂ ಪ್ರಕಟವಾಗುತ್ತಾರೆ. ಆ ಸಮಯ ಎಲ್ಲ ಋಷಿಗಳು ಮತ್ತು ಸಂತರು ಶಾಸ್ತ್ರ ವಿಧಿಯನ್ನು ಬಿಟ್ಟು ಮನಬಂದಂತೆ ಆಚರಣೆ ಅಂದರೆ ಪೂಜೆಯ ಮೂಲಕ ಸರ್ವ ಭಕ್ತ ಜನರಿಗೆ ಮಾರ್ಗದರ್ಶನ ಮಾಡಿಸುತ್ತಾ, ಇರುವಾಗ ತಮ್ಮ ತತ್ವ ಜ್ಞಾನದ ಸಂದೇಶವಾಹಕರಾಗಿ ಸ್ವಯಂ ಅಂದರೆ ಕಬೀರ್ ಪರಮೇಶ್ವರ ಬರುತ್ತಾರೆ. ವಾಸ್ತವಿಕ ಜ್ಞಾನವನ್ನು ಭೋದಿಸುತ್ತಾರೆ.**

**<u>ಸಾಮವೇದದ ಸಂಖ್ಯಾ ನಂ 1400 ಉತಾರ್ಚಿಕ 12ನೇ ಅಧ್ಯಾಯದ, 3ನೇ ಖಂಡದ, 5ನೇ ಶ್ಲೋಕ :</u> (ಸಂತ ರಾಮ್‌ಪಾಲ್ ದಾಸರು ಭಾಷ್ಯ ಬರೆದಿರುತ್ತಾರೆ)**

ಭದ್ರಾ ವಸ್ತ್ರಾಸಮನ್ಯಾಶ್ವಸಾನೋ ಮಹಾನ್ ಕವಿರ್ನವಚನಾನಿ ಶಂಸನ್ ।
ಆ ವಚ್ಯಸ್ವ ಚಮ್ವೋಃ ಪೂಯಮಾನೋ ವಿಚಕ್ಷಣೋ ಜಾಗೃವಿರ್ದೇವವೀತೌ ॥ 5 ॥

**ಭದ್ರಾ–ವಸ್ತ್ರಾ–ಸಮನ್ಯಾ–ವಸಾನಃ–ಮಹಾನ್–ಕವಿರ–ನಿವಚನಾನಿ–ಶಂಸನ್–ಆವಚೈಸ್ವ–ಚಮ್ವೋಃ–ಪೂಯಮಾನಃ–ವಿಚಕ್ಷಣಃ–ಜಾಗೃವಿಃ–ದೇವ–ವೀತೌ.**

**ಅನುವಾದ :–** (ವಿಚಕ್ಷಣಃ) ಚತುರ ವ್ಯಕ್ತಿಗಳು (ಆವಚ್ಯಸ್ವ) ತಮ್ಮ ವಚನಗಳ ಮೂಲಕ ಹೇಳುತ್ತಾರೆ. "ನಾವು ಪ್ರವಚನ ಮಾಡಿದಂತೆ ಅನುಸರಣೆಯನ್ನು ಮಾಡಿರಿ" ಆ ಚತುರ ವ್ಯಕ್ತಿಗಳು ಪೂರ್ಣ ಬ್ರಹ್ಮನ ಪೂಜೆಯನ್ನು ತಿಳಿಸದೆ, ವಾಮ (ತಪ್ಪು) ಮಾರ್ಗದ ಉಪಾಸನೆಯನ್ನು ತಿಳಿಸುತ್ತಾ (ಪೂಯಮಾನಃ) ಅಮೃತದ ಸ್ಥಾನದಲ್ಲಿ ವಾಮ ಮಾರ್ಗ ಉಪಾಸನೆ (ಭೂತ–ಪ್ರೇತ ಪೂಜಾ, ಪಿತೃ ಪೂಜಾ, ಮೂರುಗುಣಗಳ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ ಶಂಕರ) ಪೂಜೆ, ಕಾಲ ಬ್ರಹ್ಮನ ಪೂಜೆಯನ್ನು (ಚಮ್ವೋಃ) ಆದರದಿಂದ ಮಾಡಿಸುತ್ತಾರೆ. ಶಾಸ್ತ್ರವಿರುದ್ಧವಾದ ತಪ್ಪು ತಿಳುವಳಿಕೆಯನ್ನು ತೊಡೆದು ಹಾಕಲು (ಭದ್ರಾ) ಪರಮಸುಖದಾಯಕ (ಮಹಾನ್ ಕವೀರ) ಮಹಾನ್ ಕವೀರ ಅರ್ಥಾತ್ ಪೂರ್ಣ ಪರಮಾತ್ಮ ಕಬೀರ್ (ವಸ್ತ್ರಾ) ಸಶರೀರರಾಗಿ ವೇಷ–ಭೂಷಣಧಾರಣೆಯೊಂದಿಗೆ ಇದನ್ನು ಚೋಲಾ ಎಂದೂ ಹೇಳುತ್ತಾರೆ (ಸಮನ್ಯಾ) ತಮ್ಮ ಸತ್ಯಲೋಕದ ಶರೀರದಂತೆ, ಅನ್ಯ ಶರೀರವನ್ನು ಧರಿಸಿ, (ವಸಾನಃ) ಸಾಮಾನ್ಯ ವ್ಯಕ್ತಿಗಳಂತೆ ಈ ಸಂಸಾರದಲ್ಲಿ ಜೀವಿಸುತ್ತಾ. (ಕೆಲದಿನಗಳು ಅತಿಥಿಗಳಂತೆ) (ನಿವಚನಾನಿ) ತಮ್ಮ ಶಬ್ದಾವಳಿ, ಕಬೀರ್ ವಾಣಿ ಮೊದಲಾದ ಮಾಧ್ಯಮದಿಂದ, ಸತ್ಯಜ್ಞಾನವನ್ನು (ಶಂಸನ್) ವರ್ಣನೆ ಮಾಡುತ್ತಾ (ದೇವ) ಪೂರ್ಣ ಪರಮಾತ್ಮನು (ವೀತೌ) ಅಡಗಿರುವ ಸಗುಣ–ನಿರ್ಗುಣ ರೂಪಿಧನವನ್ನು (ಜಾಗೃವಿಃ) ಜಾಗೃತ ಮಾಡುತ್ತಾರೆ.

**ಭಾವಾರ್ಥ:– ಯಜುರ್ವೇದದ 5ನೇ ಅಧ್ಯಾಯದ ಒಂದನೆಯ ಮಂತ್ರದಲ್ಲಿ ಹೇಳಿರುವಂತೆ**

**"ಅಗ್ನೇಃ ತನಃ ಅಸಿ" ಪರಮೇಶ್ವರ ಸಶರೀರವಾಗಿದ್ದಾನೆ. "ವಿಷ್ಣವೆ ತ್ವಾ ಸೋಮಸ್ಯ ತನುಃ ಅಸಿ" ಆ ಅಮರ ಪ್ರಭು ಪಾಲನೆ ಪೋಷಣೆಗಾಗಿ, ಅನ್ಯ ಶರೀರವನ್ನು ಧರಿಸಿ (ಅತಿಥಿ ರೂಪದಲ್ಲಿ) ಕೆಲವು ದಿನಗಳವರೆಗೆ ಈ ಪ್ರಪಂಚದಲ್ಲಿ ಬರುತ್ತಾರೆ. ತತ್ವಜ್ಞಾನದಿಂದ, ಅಜ್ಞಾನ ನಿದ್ರೆಯಲ್ಲಿ ಮಲಗಿದ್ದ, ಪ್ರಭುವನ್ನು ಇಚ್ಛಿಸುವ ಪ್ರೇಮಿಗಳನ್ನು ಜಾಗೃತಗೊಳಿಸುತ್ತಾರೆ. ಅದೇ ಪ್ರಮಾಣವು, ಈ ಮಂತ್ರದಲ್ಲಿದೆ. ಕೆಲವು ಸಮಯಗಳವರೆಗೆ ಸಾಮಾನ್ಯ ಜನರಂತೆ ರೂಪವನ್ನು ಧರಿಸಿ ಭೂಮಿಯ ಮೇಲೆ ಪ್ರಕಟವಾಗುತ್ತಾರೆ ಹಾಗೂ ಕವಿವಾಣಿಯನ್ನು ಹೇಳುತ್ತಾರೆ. ಆ ಕಾಲದಲ್ಲಿ ಮಹರ್ಷಿ ಎಂದು ಕರೆಸಿಕೊಳ್ಳುವ ಚತುರರು ಮಿಥ್ಯಾ ಜ್ಞಾನದ ಮೂಲಕ, ಭಕ್ತ ಸಮಾಜವನ್ನು ಅಮೃತ ಸಮಾನ ಶಾಸ್ತ್ರ ವಿಧಿಯ ಬದಲು ವಾಮ (ತಪ್ಪು) ಮಾರ್ಗದ ಪೂಜೆಯನ್ನು ಮಾಡುವಂತೆ ಮಾಡಿದರು. ಇದು ಶಾಸ್ತ್ರ ವಿರುದ್ಧವಾಗಿತ್ತು. ಆ ಸಮಯದಲ್ಲಿ ಪೂರ್ಣ ಪರಮಾತ್ಮ ಸ್ವಯಂ ಪ್ರಕಟವಾಗಿ ತತ್ವಜ್ಞಾನದ ಮೂಲಕ ಶಾಸ್ತ್ರ ವಿಧಿಗೆ ಅನುಸಾರವಾಗಿ, ಸಾಧನೆ ಮಾಡುವ ಜ್ಞಾನ ಪ್ರಧಾನ ಮಾಡುತ್ತಾರೆ.**

**ಪವಿತ್ರ ಋಗ್ವೇದದ ಈ ಕೆಳಗಿನ ಮಂತ್ರದಲ್ಲೂ ಸಹ ತಿಳಿಸಿದೆ "ಯಾವಾಗ ಪೂರ್ಣ ಪರಮಾತ್ಮನು ಭೂಮಿಯ ಮೇಲೆ ತನ್ನ ಲೀಲೆ ತೋರಿಸಲು ಬರುವನೋ, ಆಗ ಶಿಶುವಿನ ರೂಪ ತಾಳಿ ಬರುತ್ತಾನೆ." ಆಗ ಆ ಪೂರ್ಣ ಪರಮಾತ್ಮನ ಪೋಷಣೆಯು (ಅಧ್ನ್ಯ ಧೆನವ) ಕರುಹಾಕದ ಹಸು (ಕಡಸು) ವಿನ ಮೂಲಕ ಆಗುತ್ತದೆ. ಪುನಃ ಹೆಚ್ಚಿನ ಲೀಲೆ ತೋರಲು ದೊಡ್ಡವನಾಗುತ್ತಾನೆ. ತನ್ನ ಸತ್ಯಲೋಕವನ್ನು ಸೇರುವ ಅರ್ಥಾತ್ ಮೋಕ್ಷ ಹೊಂದುವ ಮಾರ್ಗವನ್ನು, (ಕವಿರ್ಗಿಭೀಃ) ಕಬೀರ್ ವಾಣಿಯನ್ನು ಕವಿತೆಗಳ ಮೂಲಕ ತಿಳಿಸುತ್ತಾನೆ. ಈ ಕಾರಣದಿಂದಾಗಿ ಪ್ರಸಿದ್ಧ ಕವಿ ಎನಿಸಿಕೊಳ್ಳುತ್ತಾನೆ. ಆದರೆ ಅವನು ಸ್ವಯಂ ಕವಿರ್ದೇವ ಪೂರ್ಣ ಪರಮಾತ್ಮನೇ ಆಗಿರುತ್ತಾನೆ. ಅವನು ಮೂರನೆಯ ಮುಕ್ತಿಧಾಮ (ಸತ್ಯಲೋಕ) ದಲ್ಲಿ ಇರುತ್ತಾನೆ.**

**ಋಗ್ವೇದದ 9ನೇ ಮಂಡಲದ, 1ನೇ ಸೂಕ್ತಿಯ, 9ನೇ ಮಂತ್ರ ಹಾಗೂ 96ನೇ ಸೂಕ್ತಿಯ 17–18ನೇ ಮಂತ್ರ :–**

**ಋಗ್ವೇದದ 9ನೇ ಮಂಡಲದ 1ನೇ ಸೂಕ್ತಿಯ 9ನೇ ಮಂತ್ರ.**

ಅಭೀ ಇಮಂ ಅಧ್ನ್ಯಾ ಉತ ಶ್ರೀಣಂತಿ ಧೇನವಃ ಶಿಶುಮ್ । ಸೋಮಮಿಂದ್ರಾಯ ಪಾತವೆ ॥ ೯ ॥

**ಅಭೀ–ಇಮಮ್–ಅಧ್ನ್ಯಾ–ಉತ–ಶ್ರೀಣಂತಿ–ಧೇನವಃ–ಶಿಶುಮ್–ಸೋಮಮ್–ಇಂದ್ರಾಯ–ಪಾತವೆ ।**

**ಅನುವಾದ :–** (ಉತ) ವಿಶೇಷವಾಗಿ (ಇಮಮ್) ಈ (ಶಿಶುಮ್) ಬಾಲಕ ರೂಪದಲ್ಲಿ ಪ್ರಕಟ (ಸೋಮಮ್) ವಾದ ಪೂರ್ಣ ಪ್ರಭುವಿನ (ಇಂದ್ರಾಯ) ಸುಖ–ಸುವಿಧೆಗಳ ಮೂಲಕ ಅರ್ಥಾತ್ ತಿಂದು–ಕುಡಿದು ಮಾಡುವುದರ ಮೂಲಕ ಯಾವ ಶರೀರ ಬೆಳೆಯುತ್ತದೋ, ಅದನ್ನು (ಪಾತವೆ) ಬೆಳೆಸಲು (ಅಭಿ) ಪೂರ್ಣ ತರಹ (ಅಧ್ನ್ಯಾ ಧೇನವಃ) ಯಾವ ಹಸುವು ಹೋರಿಯಿಂದ ಎಂದು ತೊಂದರೆಗೆ ಒಳಗಾಗದ ಕುಮಾರಿ ಹಸು (ಕಡಸು) ತನಗೆ–ತಾನೇ ಹಾಲು ಕೊಡುತ್ತವೆ. (ಶ್ರೀಣಂತಿ) ಇದರಿಂದ ಆ ಪೂರ್ಣ ಪ್ರಭುವಿನ ಮಹಿಮೆ ಪ್ರಕಟವಾಗುತ್ತದೆ.

**ಭಾವಾರ್ಥ :– ಪೂರ್ಣ ಪರಮಾತ್ಮ ಅಮರ ಪುರುಷ ಯಾವಾಗ ಲೀಲೆ ಮಾಡುತ್ತಾ ಬಾಲಕನ ರೂಪ ಧಾರಣೆ ಮಾಡಿ ಸ್ವತಹ ಪ್ರಕಟರಾಗಿದ್ದಾಗ ಆ ಸಮಯ ಕಡಸು ತನ್ನ ತಾನೆ ಹಾಲುಕೊಡುತ್ತದೆ, ಅದರಿಂದ ಪೂರ್ಣ ಪರಮಾತ್ಮರ ಲಾಲನೆ–ಪಾಲನೆ ಆಗುತ್ತದೆ.**

**ಋಗ್ವೇದದ 9ನೇ ಮಂಡಲದ, 96ನೇ ಸೂಕ್ತಿಯ, 17ನೇ ಮಂತ್ರ.**

ಶಿಶುಮ್ ಜಜ್ಞಾನಮ್ ಹರ್ಯತ ತಮ, ಮೃಜಂತಿ ಶುಂಭಂತಿ ವಹಿನ ಮರುತಃ ಗಣೇನ ।

ಕವಿರ್ಗೀರ್ಭಿ ಕಾವ್ಯೇನಾ ಕವಿರ ಸಂತ ಸೋಮಃ ಪವಿತ್ರಮ್ ಅತ್ಯೇತಿ ರೇಭನ್ ॥ 17 ॥

**ಅನುವಾದ :–** ಪೂರ್ಣ ಪರಮಾತ್ಮನು (ಹರ್ಯ ಶಿಶುಮ್) ಮನುಷ್ಯರ ಮಕ್ಕಳ ರೂಪದಲ್ಲಿ (ಜಜ್ಞಾನಮ್) ಬೆಕಂತಲೆ (ತಿಳಿದು–ತಿಳಿದು) ಪ್ರಕಟವಾಗುತ್ತಾನೆ ಹಾಗೂ ತನ್ನ ತತ್ವಜ್ಞಾನವನ್ನು (ತಮ್) ಆ ಸಮಯ (ಮೃಜಂತಿ) ನಿರ್ಮಲತೆಯೊಂದಿಗೆ, (ಶುಂಭಂತಿ) ಉಚ್ಛಾರಣೆ ಮಾಡುತ್ತಾನೆ. (ವಹಿನ್) ಪ್ರಭು ಪ್ರಾಪ್ತಿಗಾಗಿ, ವಿರಹ ಅಗ್ನಿಯಿಂದ ಬೆಂದ (ಮರುತಃ) ವಾಯುವಿನಂತಹ ಶೀತಲ ಭಕ್ತರ (ಗಣೇನ) ಸಮೂಹಕ್ಕಾಗಿ (ಕಾವ್ಯೇನಾ) ಕವಿತೆಗಳ ಮೂಲಕ ಕವಿತ್ವದಿಂದ (ಪವಿತ್ರಮ್ ಅತ್ಯೇತಿ) ಅತ್ಯಧಿಕ ನಿರ್ಮಲತೆಯೊಂದಿಗೆ (ಕವಿರಗೀರ್ಭಿ) ಕವಿರ ವಾಣಿ ಅರ್ಥಾತ್, ಕಬೀರ್ ವಾಣಿಯ ಮೂಲಕ (ರೇಭನ) ಎತ್ತರವಾದ ಸ್ವರದಿಂದ ಸಂಬೋಧಿಸುತ್ತಾ ಹೇಳುತ್ತಾರೆ. (ಕವಿರ ಸಂತ ಸೋಮಃ) ಆ ಅಮರ ಪುರುಷರೆ, ಸತ್ಯಪುರುಷರೆ ಸಂತ ಅರ್ಥಾತ್ ಋಷಿ ರೂಪದಲ್ಲಿರುವ ಸ್ವಯಂ ಕವಿರ್ದೇವ ಆಗಿದ್ದಾರೆ. ಆದರೆ ಈ ಪರಮಾತ್ಮನನ್ನು ಗುರುತಿಸದೆ ಕವಿ ಎಂದು ಕರೆಯ ತೊಡಗುತ್ತಾರೆ.

**ಭಾವಾರ್ಥ :– ವೇದವನ್ನು ಹೇಳುವ ಬ್ರಹ್ಮ ಹೇಳುತ್ತಿದ್ದಾನೆ. ವಿಲಕ್ಷಣ ಮನುಷ್ಯನ ಮಗುವಿನ ರೂಪದಲ್ಲಿ ಪ್ರಕಟವಾಗಿ, ಪೂರ್ಣಪರಮಾತ್ಮನು ಕವಿರ್ದೇವರು ತನ್ನ ವಾಸ್ತವಿಕ ಜ್ಞಾನವನ್ನು (ಕವಿರ್ಗಿರ್ಭಿಃ) ತನ್ನ ಕಬೀರ್ ವಾಣಿಯ ಮೂಲಕ (ನಿರ್ಮಲಜ್ಞಾನ) ತನ್ನ ಹಂಸಾತ್ಮಗಳಿಗೆ (ಪುಣ್ಯಾತ್ಮಗಳಿಗೆ) ಕವಿ ರೂಪದಲ್ಲಿ ಕವಿತೆಗಳು, ಲೋಕೋಕ್ತಿ (ನಾಣ್ನುಡಿ) ಗಳ ಮೂಲಕ ವರ್ಣನೆ ಮಾಡುತ್ತಾರೆ. ಅವರು ಸ್ವಯಂ ಸತ್ಯಪುರುಷ ಕಬೀರರೇ ಆಗಿರುತ್ತಾರೆ.**

**<u>ಋಗ್ವೇದದ 9ನೇ ಮಂಡಲದ, 96ನೇ ಸೂಕ್ತಿಯ, 18ನೇ ಮಂತ್ರ.</u>**

ಋಷಿಮನಾ ಯ ಋಷಿಕೃತ ಸ್ವರ್ಷಾಃ ಸಹಸ್ತ್ರಾಣೀಥಃ ಪದವೀಃ ಕವೀನಾಮ್ ।
ತೃತೀಯಮ್ ಧಾಮ ಮಹಿಷಃ ಸಿಷಾ ಸಂತ ಸೋಮಃ ವಿರಾಜಮಾನು ರಾಜತಿ ಸ್ಟುಪ ॥ 18॥

**ಅನುವಾದ :–** ವೇದವನ್ನು ಹೇಳುವ ಬ್ರಹ್ಮನು ಹೇಳುತ್ತಿದ್ದಾನೆ (ಯ) ಯಾವ ಪೂರ್ಣ ಪರಮಾತ್ಮ ವಿಲಕ್ಷಣ ಮಗುವಿನ ರೂಪದಲ್ಲಿ ಬಂದು (ಕವೀನಾಮ್) ಪ್ರಸಿದ್ಧ ಕವಿಗಳ (ಪದವಿಃ) ಉಪಾಧಿಯನ್ನು ಪಡೆದು, ಅಂದರೆ ಒಬ್ಬ ಋಷಿ ಅಥವಾ ಸಂತನಂತೆ ಇದ್ದು (ಋಷಿಕೃತ) ಅವರಿಂದ ರಚಿತವಾದ (ಸಹಸ್ತ್ರಾಣೀಥಃ) ಸಾವಿರಾರು ವಾಣಿಗಳ (ಋಷಿಮನಾ) ಸಂತ ಸ್ವಭಾವದ ವ್ಯಕ್ತಿಗಳಿಗೆ ಅಂದರೆ ಭಕ್ತರಿಗೆ (ಸ್ವರ್ಷಾಃ) ಸ್ವರ್ಗ ಸಮಾನವಾದ ಆನಂದ ನೀಡುವಂತಾಗುತ್ತವೆ. (ಸಂತ ಸೋಮಃ) ಋಷಿ/ಸಂತ ರೂಪದಲ್ಲಿ ಪ್ರಕಟವಾದ ಆ ಅಮರ ಪುರುಷ/ಸತ್ಯಪುರುಷ ಆಗಿರುತ್ತಾನೆ. ಆ ಪೂರ್ಣ ಪ್ರಭು (ತೃತೀಯಾ) ಮೂರನೆಯ (ಧಾಮ) ಮುಕ್ತಿಲೋಕ/ ಸತ್ಯಲೋಕದಲ್ಲಿ (ಮಹಿಷಃ) ಸದೃಢ ಭೂಮಿಯನ್ನು (ಸಿಷಾ) ಸ್ಥಾಪಿತ ಮಾಡಿ (ಅನು) ನಂತರ ಮಾನವ ಸದೃಶ ಸಂತ ರೂಪದಲ್ಲಿ (ಸ್ಟುಪ) ಗುಂಬದ ಅರ್ಥಾತ್ ಗುಂಬಜದಲ್ಲಿ ಎತ್ತರವಾದ ಸಿಂಹಾಸನದಲ್ಲಿ (ವಿರಾಜಮನು ರಾಜತಿ) ಉಜ್ವಲ ಸ್ಥೂಲ ಆಕಾರದಲ್ಲಿ ವಿರಾಜ ಮಾನನಾಗಿದ್ದಾನೆ.

**ಭಾವಾರ್ಥ :– ಮಂತ್ರ 17ರಲ್ಲಿ ಹೇಳಿರುವಂತೆ ಕವಿರ್ದೇವರು ಶಿಶು ರೂಪಧಾರಣೆ ಮಾಡುತ್ತಾರೆ. ಲೀಲೆ ತೋರುತ್ತಾ ಬೆಳೆಯುತ್ತಾರೆ. ಕವಿತೆಗಳ ಮೂಲಕ ತತ್ವಜ್ಞಾನವನ್ನು ವರ್ಣಿಸುತ್ತಾರೆ. ಈ ಕಾರಣ ಕವೀಯ ಪದವಿಯನ್ನು ಪಡೆಯುತ್ತಾರೆ. ಅಂದರೆ ಅವರನ್ನು ಕವಿ ಎಂದು ಕರೆಯಲಾಗುತ್ತದೆ. ವಾಸ್ತವದಲ್ಲಿ ಅವರೇ ಪೂರ್ಣ ಪರಮಾತ್ಮ ಕಬೀರರು. ಅವರಿಂದ ರಚಿತವಾದ ಕವೀವಾಣಿ "ಕಬೀರ್ ವಾಣಿ" (ಕವಿರ್ಗಿರ್ಭಿಃ ಅರ್ಥಾತ್ ಕವೀರ್ವಾಣಿ) ಎಂದು ಕರೆಯಲಾಗುತ್ತದೆ. ಅದು ಭಕ್ತರಿಗೆ ಸ್ವರ್ಗ ಸಮವಾದ ಸುಖದಾಯಕವಾಗಿರುತ್ತದೆ. ಆ ಪರಮಾತ್ಮನು ಮೂರನೆಯ ಲೋಕದ (ಮುಕ್ತಿಧಾಮ)**

ಅಂದರೆ ಸತ್ಯಲೋಕದ ಸ್ಥಾಪನೆ ಮಾಡಿ, ಅಲ್ಲಿ ಒಂದು ಗುಂಬಜದಲ್ಲಿ, ತೇಜೋಮಯ ಮಾನವ ಸದೃಶ್ಯ ಶರೀರದೊಂದಿಗೆ ವಿರಾಜಮಾನರಾಗಿದ್ದಾರೆ.

ಈ ಮಂತ್ರದಲ್ಲಿ ಮೂರನೆಯ ಧಾಮವನ್ನು ಸತ್ಯಲೋಕ ಎಂದು ಹೇಳಿದೆ. ಒಂದನೆ ಬ್ರಹ್ಮನ ಲೋಕ 21 ಬ್ರಹ್ಮಾಂಡಗಳ ಕ್ಷೇತ್ರ. ಎರಡನೆಯ ಪರಬ್ರಹ್ಮನ ಲೋಕ 7 ಸಂಖ ಬ್ರಹ್ಮಾಂಡಗಳ ಕ್ಷೇತ್ರ. ಮೂರನೆಯ ಪರಮ ಅಕ್ಷರ ಬ್ರಹ್ಮ-ಪೂರ್ಣ ಬ್ರಹ್ಮನ ಲೋಕ ಸತ್ಯಲೋಕವಾಗಿದೆ.

## "ತ್ರೇತಾಯುಗದಲ್ಲಿ ಕವಿರ್ದೇವರು (ಕಬೀರ್ ಪರಮೇಶ್ವರರು) ಮುನೀಂದ್ರ ಎಂಬ ಹೆಸರಿನಲ್ಲಿ ಪ್ರಕಟವಾದುದು."

### (ನಲ ಮತ್ತು ನೀಲರು ಶರಣಾಗುವುದು)

ತ್ರೇತಾಯುಗದಲ್ಲಿ ಸ್ವಯಂಭು (ಸ್ವಯಂ ಪ್ರಕಟವಾಗುವ) ಕವಿರ್ದೇವರು (ಕಬೀರ್ ಪರಮೇಶ್ವರ) ರೂಪಾಂತರ ಹೊಂದಿ, "ಮುನೀಂದ್ರ" ಎಂಬ ಹೆಸರಿನಿಂದ ಬಂದಿದ್ದರು. ಅನಲ ಅರ್ಥಾತ್ 'ನಲ' ಅನೀಲ್ ಅರ್ಥಾತ್ ನೀಲ ಇವರಿಬ್ಬರೂ ದೊಡ್ಡಮ್ಮ-ಚಿಕ್ಕಮ್ಮನ ಮಕ್ಕಳು. ಈ ಮಕ್ಕಳ ತಾಯಿ-ತಂದೆಯರು ಗತಿಸಿದ್ದರು. ನಲ-ನೀಲರು ಶಾರೀರಿಕ ಹಾಗೂ ಮಾನಸಿಕ ರೋಗದಿಂದ ಬಹಳ ಪೀಡೆಗೆ ಒಳಗಾಗಿದ್ದರು. ಎಲ್ಲ ಋಷಿ-ಸಂತರಲ್ಲಿ. ಈ ರೋಗ ನಿವಾರಣೆಗಾಗಿ ಪ್ರಾರ್ಥನೆ ಮಾಡಿದ್ದರು. "ಇದು ನಿಮ್ಮ ಪಾಪ ಕರ್ಮದ ಫಲ, ಇದನ್ನು ನೀವು ಅನುಭವಿಸಲೇ ಬೇಕು". ಎಂದು ಎಲ್ಲ-ಸಂತ-ಋಷಿಗಳು ಹೇಳಿದ್ದರು. ಇದಕ್ಕೆ ಯಾವುದೇ ಪರಿಹಾರವಿಲ್ಲ ಎಂದು ಸಹ ಹೇಳಿದ್ದರು. ಈ ಇಬ್ಬರೂ ಸಹೋದರರು ಜೀವನದಲ್ಲಿ ಬೇಸರ ಹೊಂದಿ, ಸಾವಿನ ನಿರೀಕ್ಷೆಯಲ್ಲಿದ್ದರು.

ಒಂದು ದಿನ 'ಮುನೀಂದ್ರ' (ಪೂರ್ಣ ಪರಮಾತ್ಮ) ರಿಂದ ಸತ್ಸಂಗ ನಡೆಯುತ್ತಿದ್ದಲ್ಲಿಗೆ ಹೋದರು. ಸತ್ಸಂಗದ ಪ್ರವಚನದ ನಂತರ ಇಬ್ಬರೂ ಮುನೀಂದ್ರ ಕವಿರ್ದೇವರ (ಕಬೀರ್ ಪರಮೇಶ್ವರ) ಚರಣಗಳಿಗೆ ನಮಸ್ಕಾರ ಮಾಡಿದರು. ಪರಮೇಶ್ವರ ಮುನೀಂದ್ರರು ಅವರ ತಲೆಯ ಮೇಲೆ ಕೈಯಿಟ್ಟರು. ಅವರ ಸ್ಪರ್ಶ ಮಾತ್ರದಿಂದಲೇ, ನಲ-ನೀಲರ ರೋಗ ದೂರವಾಯಿತು. ಈ ಅದ್ಭುತವನ್ನು ನೋಡಿ. ಇಬ್ಬರೂ ಮುನೀಂದ್ರರ ಚರಣಗಳ ಮೇಲೆ ತಲೆ ಇರಿಸಿ ಅತ್ತರು. "ನಾವು ಇಷ್ಟು ದಿನಗಳವರೆಗೆ ಯಾವ ಪ್ರಭುವನ್ನು ಅರಸುತ್ತಿದ್ದೆವೋ, ಅವರು ಸಿಕ್ಕಿದರು ಎಂದು ಹೇಳುತ್ತಾ ಅವರಿಂದ ನಾಮೋಪದೇಶವನ್ನು ಪಡೆದರು. ಹಾಗೂ ಮುನೀಂದ್ರ ಪರಮೇಶ್ವರರ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮೊದಲು ಸಂತರ ಸಮಾವೇಶಗಳು ನದಿಯ ದಡದಲ್ಲಿ ಆಗುತ್ತಿದ್ದವು. (ನೀರಿನ ವ್ಯವಸ್ಥೆಗೆ ಅನುಕೂಲವೆಂದು) ನಲ-ನೀಲರು ಬಹಳವಾಗಿ ಪ್ರಭುವನ್ನು ಪ್ರೀತಿಸುತ್ತಿದ್ದರು. ಮುಗ್ಧಜೀವಿಗಳು ಇವರು. ಪರಮಾತ್ಮನಲ್ಲಿ ಹೆಚ್ಚಿನಶ್ರದ್ಧೆಯುಳ್ಳವರು. ಹೆಚ್ಚಿನ ಸೇವೆ ಮಾಡುತ್ತಿದ್ದರು. ಸಮಾಗಮಗಳಲ್ಲಿ ರೋಗಿಗಳು, ವೃದ್ಧರು, ವಿಕಲಾಂಗರು ಬಂದಿದ್ದರೆ, ಅವರ ಬಟ್ಟೆ ಒಗೆದು ಪಾತ್ರೆ ತೊಳೆದು ಕೊಡುತ್ತಿದ್ದರು. ಈ ಇಬ್ಬರೂ ಪ್ರಭು-ಚರ್ಚೆಯಲ್ಲಿ ಲೀನವಾಗಿರುತ್ತಿದ್ದರು. ಬಟ್ಟೆ ಒಗೆಯುತ್ತಿರಲಿ, ಪಾತ್ರೆ ತೊಳೆಯುತ್ತಿರಲಿ, ಪ್ರಭುವು ಸತ್ಸಂಗದಲ್ಲಿ ಪ್ರವಚನ ಮಾಡಿದ ವಿಚಾರವನ್ನು ಆಸಕ್ತಿಯಿಂದ ಚರ್ಚಿಸುತ್ತಿದ್ದರು. ಹಾಗಿರುವಾಗ ಭಕ್ತರ ಬಟ್ಟೆ-ಪಾತ್ರೆಗಳು ನದಿಯಲ್ಲಿ ಮುಳುಗಿ ಹೋಗುತ್ತಿದ್ದವು. 4 ಪದಾರ್ಥ ತಂದಿದ್ದರೆ 2 ಮಾತ್ರ ಉಳಿಯುತ್ತಿತ್ತು. ಭಕ್ತರಿಂದ ನಿತ್ಯ ದೂರು ಕೇಳುತ್ತಿದ್ದರು. ಸೋದರರೆ ನೀವು ಸೇವೆಯನ್ನು ಚೆನ್ನಾಗಿ ಮಾಡುತ್ತಿರುವಿರಿ. ಆದರೆ ನಮಗೆ ವಸ್ತುಗಳನ್ನು ಸರಿಯಾಗಿ ಹಿಂತಿರುಗಿಸುತ್ತಿಲ್ಲ. ನಾವು ಕಳೆದುಕೊಂಡ ವಸ್ತುಗಳನ್ನು ಎಲ್ಲಿಂದ ತರುವುದು, ಎಂದು ಹೇಳುತ್ತಿದ್ದರು. ನಮ್ಮ ಕೆಲಸಗಳನ್ನು ನಾವೇ ಮಾಡಿಕೊಳ್ಳುತ್ತೇವೆ. ಎಂದಾಗ ಇಬ್ಬರೂ ಅಳತೊಡಗಿದರು. "ನಮ್ಮ ಸೇವೆಯನ್ನು ಕಿತ್ತುಕೊಳ್ಳಬೇಡಿರಿ" ಎಂದು ಪ್ರಾರ್ಥಿಸಿದರು. ಈ ಬಾರಿ ಯಾವ ವಸ್ತುವನ್ನೂ

ಕಳೆಯುವುದಿಲ್ಲ ಎಂದು ಪ್ರಾರ್ಥಿಸಿದರು. ಈ ಬಾರಿ ಯಾವ ವಸ್ತುವನ್ನೂ ಕಳೆಯುವುದಿಲ್ಲ ಎಂದು ಹೇಳುತ್ತಾ, ಪುನಃ ಅದೇ ಕೆಲಸ ಮಾಡುತ್ತಿದ್ದರು. ಪ್ರಭುವಿನ ಚರ್ಚೆಯಲ್ಲಿ ಲೀನರಾಗುತ್ತಾ. ಭಕ್ತರ ವಸ್ತುಗಳನ್ನು ನದಿಯಲ್ಲಿ ಮುಳುಗಿಸಿ ಬಿಡುತ್ತಿದ್ದರು. ಭಕ್ತರೆಲ್ಲಾ ಮುನೀಂದ್ರರಲ್ಲಿ ಪ್ರಾರ್ಥಿಸಿದರು. "ಗುರುಗಳೇ ನಲ-ನೀಲರಿಗೆ ಸರಿಯಾಗಿ ಬುದ್ಧಿ ಹೇಳಿರಿ." ಎಂದು ಇವರು ಬುದ್ಧಿಮಾತನ್ನು ಒಪ್ಪುತ್ತಿರಲಿಲ್ಲ. ಸೇವೆಯನ್ನು ಬಿಡಲೂ ಸಿದ್ಧರಿರಲಿಲ್ಲ. ಮುನೀಂದ್ರರು ಒಂದೆರಡು ಬಾರಿ ಹೇಳಿದರು. "ನೇಲ-ನೀಲರೆ ಇಂದಿನಿಂದ ಚೆನ್ನಾಗಿ ಸೇವೆ ಮಾಡಿರಿ. ಇನ್ನು ಮುಂದೆ ನಿಮ್ಮ ಕೈ ಸೋಕಿದ ಯಾವುದೇ ವಸ್ತುಗಳೂ (ಕಲ್ಲಾಗಲಿ-ಕಬ್ಬಿಣವಾಗಲಿ) ಮುಳುಗುವುದಿಲ್ಲ. ಅವು ತೇಲುತ್ತವೆ" ಎಂದು ಅಶೀರ್ವಾದ ಮಾಡಿದರು.

ನೀವು ರಾಮಾಯಣ ಕೇಳಿರುವಿರಿ. ಸೀತಾಮಾತೆಯನ್ನು, ರಾವಣನು ಎತ್ತಿಕೊಂಡು ಹೋದ. ಶ್ರೀರಾಮನಿಗೆ ತಿಳಿಯಲೇ ಇಲ್ಲ. ಸೀತೆ ಎಲ್ಲಿದ್ದಾಳೆ ಯಾರು ಎತ್ತಿಕೊಂಡು ಹೋದರು ಎಂದು. ಶ್ರೀರಾಮಚಂದ್ರ ಆ ಕಡೆ-ಈ ಕಡೆ ಹುಡುಕಾಡಿದ. ಶ್ರೀ ಹನುಮಂತನ ಶೋಧದಿಂದ ತಿಳಿಯಿತು. ಮಾತೆಸೀತೆಯನ್ನು ರಾವಣ ಎತ್ತಿಕೊಂಡು ಹೋಗಿ ಸೆರೆಯಲ್ಲಿಟ್ಟಿದ್ದಾನೆ. ಎಂದು ಗೊತ್ತಾದ ಮೇಲೆ ಶ್ರೀರಾಮನು ರಾವಣನಲ್ಲಿಗೆ ಶಾಂತಿಧೂತನನ್ನು ಕಳುಹಿಸಿದನು. "ಸೀತೆಯನ್ನು ಹಿಂದಕ್ಕೆ ಕಳುಹಿಸಿ ಎಂದು" ಪ್ರಾರ್ಥಿಸಿದನು. ಆದರೆ ರಾವಣ ಒಪ್ಪಲಿಲ್ಲ. ಯುದ್ಧದ ತಯಾರಿಯಾಯಿತು. ಆಗ ಸಮಸ್ಯೆ ಒಂದು ಉದ್ಭವಿಸಿತು. "ಸಮುದ್ರವನ್ನು ದಾಟಿ ಸೇನೆಯನ್ನು ಹೇಗೆ ಕರೆದೊಯ್ಯುವುದು ಎಂದು.

ಭಗವಾನ್ ಶ್ರೀರಾಮಚಂದ್ರನು ಮೂರು ದಿನಗಳವರೆಗೆ ಮಂಡಿಯುದ್ದದ ನೀರಿನಲ್ಲಿ ನಿಂತು ಸಮುದ್ರರಾಜನನ್ನು ಪ್ರಾರ್ಥಿಸಿದನು. "ಸಮುದ್ರರಾಜ ರಸ್ತೆಯನ್ನು ಮಾಡಿಕೊಡು." ಎಂದು, ಆದರೆ ಸಮುದ್ರ "ಚಲಿತವಾಗಲಿಲ್ಲ. ಯಾವಾಗ ಸಮುದ್ರ ಒಪ್ಪಲಿಲ್ಲವೋ, ಆಗ ಸಮುದ್ರವನ್ನು ಅಗ್ನಿಬಾಣದಿಂದ ನಾಶ ಮಾಡಲು ಇಚ್ಛಿಸಿದ. ಭಯ ಭೀತನಾದ ಸಮುದ್ರನು ಒಬ್ಬ ಬ್ರಾಹ್ಮಣನ ವೇಷದಲ್ಲಿ ಎದುರಿಗೆ ಬಂದನು. ಮತ್ತು ಹೇಳಿದನು. ಭಗವಾನ್ ಎಲ್ಲರಿಗೂ ಅವರದೇ ಆದ ಮರ್ಯಾದೆ ಇದೆ. "ನನ್ನನ್ನು ಸುಡಬೇಡಿರಿ. ನನ್ನ ಒಳಗೆ ಎಷ್ಟೊಂದು ಜೀವ ಜಂತುಗಳಿವೆಯೋ ನಾನು ಅರಿಯೆ. ಒಂದು ವೇಳೆ ನೀವು ಭಸ್ಮ ಮಾಡಿದ್ದರು, ನಿಮಗೆ ನನ್ನನ್ನು ದಾಟಿ ಹೋಗಲು ಸಾಧ್ಯವಾಗುವುದಿಲ್ಲ. ಈ ಜಾಗದಲ್ಲಿ ಬಹುದೊಡ್ಡ ಕಂದಕ ಏರ್ಪಾಡಾಗುವುದು. ನೀವು ಎಂದಿಗೂ ದಾಟಲಾರಿರಿ."

ಸಮುದ್ರನು ತನ್ನ ಮೇಲೆ ಸೇತುವೆ ಕಟ್ಟಿರಿ. ಇದರಿಂದ ಕೋಲು ಮುರಿಯದು ಹಾವೂ ಸಾಯುತ್ತದೆ. ನನ್ನ ಮರ್ಯಾದೆಗೆ ಭಂಗವೂ ಬರದು ಎಂದನು. ಆಗ "ಅದು ಯಾವ ಉಪಾಯ ಇದೆ ಸೇತುವೆ ಕಟ್ಟಲು? ಎಂದು ಶ್ರೀರಾಮಚಂದ್ರ ಕೇಳಿದ. ನಿಮ್ಮ ಸೇನೆಯಲ್ಲಿ ನಲ-ನೀಲ ಎಂಬ ಇಬ್ಬರು ಸೈನಿಕರಿದ್ದಾರೆ. ಅವರಿಗೆ ಗುರುಗಳಿಂದ ಒಂದು ಶಕ್ತಿ ಪ್ರಾಪ್ತವಾಗಿದೆ. ಅದೇನೆಂದರೆ, ಅವರು ಯಾವುದೇ ವಸ್ತುವನ್ನು ಮುಟ್ಟಿದರೂ ಅದು ಮುಳುಗುವುದಿಲ್ಲ, ತೇಲುತ್ತದೆ ಅವರ ಕೈಯಿಂದ ಕಲ್ಲೂ ಸಹ ಮುಳುಗದೆ ತೇಲುತ್ತದೆ. ಆಗ ನಲ-ನೀಲರನ್ನು ಕರೆಸಿ ಶ್ರೀರಾಮನು ಕೇಳಿದ ಏನು ನಿಮ್ಮ ಬಳಿ ಇಂತಹ ಶಕ್ತಿ ಇದೆಯೇ ಯಾವ ವಸ್ತುವೂ ನಿಮ್ಮ ಕೈಸೋಕಿನಿಂದ ಮುಳಗದೆ ತೇಲುತ್ತದೆಯೇ! ಹೌದು ನಮಗೆ ಆ ಶಕ್ತಿ ಇದೆ ಎಂದರು. ಪರೀಕ್ಷೆ ಮಾಡೋಣ ಎಂದು ಶ್ರೀರಾಮ ಹೇಳಿದ.

ನಲ ನೀಲರು ಯೋಚಿಸಿದರು ಈ ದಿನ ಎಲ್ಲರ ಸಮ್ಮುಖದಲ್ಲಿ ನಮ್ಮ ಮಹಿಮೆ ಪ್ರಕಟವಾಗುತ್ತದೆ, ಏಕೆಂದರೆ ಶ್ರೀ ರಾಮನಿಗೆ ಅನುಮಾನ ಬಂದರೆ "ಇದು ಇವರ ಗುರುವಿನ ಮಹಿಮೆ ಎಂದು" ಯೋಚಿಸಿ ಅವರು ತಮ್ಮಲ್ಲಿರುವ ಶಕ್ತಿ ತೋರಿಸಲು ಗುರುಗಳನ್ನು ಸ್ಮರಿಸಲಿಲ್ಲ. ಅವರು ಕಲ್ಲನ್ನು ಎತ್ತಿ ನೀರಿಗೆ ಹಾಕಿದರು. ಆ ಕಲ್ಲುಗಳು ನೀರಿನಲ್ಲಿ ಮುಳುಗಿದವು. ನಲ-ನೀಲರು ಬಹಳ ಪ್ರಯತ್ನಿಸಿದರು.

ಆದರೆ ಕಲ್ಲುಗಳು ತೇಲಲಿಲ್ಲ. ನೀನು ಸುಳ್ಳು ಹೇಳುತ್ತಿರುವೆ? ಎಂದು ಶ್ರೀ ರಾಮಚಂದ್ರನು ಸಮುದ್ರನನ್ನು ಕೇಳಲು, ಆಗ ಸಮುದ್ರ ನಲ-ನೀಲರಿಗೆ ಹೇಳಿದನು- ನೀವು ನಿಮ್ಮ ಗುರುಗಳನ್ನು ಸ್ಮರಿಸಲಿಲ್ಲ ಆದ್ದರಿಂದ ಹೀಗೆ ಆಯಿತು. ಮೂರ್ಖರೆ ಗುರುಗಳನ್ನು ನೆನಿಯಿರಿ. ಆಗ ನಲ-ನೀಲರಿಗೆ ತಮ್ಮ ತಪ್ಪಿನ ಅರಿವಾಯಿತು. ಆಗ ಅವರು ಸದ್ಗುರು ಮುನೀಂದ್ರ ರನ್ನು ಸ್ಮರಿಸಿದರು. ಸದ್ಗುರು ಮುನೀಂದ್ರರು (ಕಬೀರ್ ಪರಮೇಶ್ವರ) ಆಗ ಅಲ್ಲಿಗೆ ಬಂದರು ಭಗವಾನ್ ಶ್ರೀ ರಾಮಚಂದ್ರ ಸದ್ಗುರು ಮುನೀಂದ್ರರೆ ನನ್ನ ದೌರ್ಭಾಗ್ಯ ನಿಮ್ಮ ಸೇವಕರಿಂದ ಮುಟ್ಟಿಸಿದ ಕಲ್ಲು ತೇಲುತ್ತಿಲ್ಲ. ಮುನೀಂದ್ರರು ಹೇಳಿದರು. "ಈಗ ಇವರ ಕೈ ಮುಟ್ಟಿದ ವಸ್ತುಗಳು ತೇಲುವುದೇ ಇಲ್ಲ. ಏಕೆಂದರೆ ಇವರಿಗೆ ಗರ್ವ ಬಂದಿದೆ. ಸದ್ಗುಗುರುವಿನ ವಾಣಿಯು ಪ್ರಮಾಣ ಮಾಡುತ್ತಿದೆ :-

ಗರೀಬ್, ಜೈಸೆ ಮಾತಾ ಗರ್ಭ್ ಕೋ, ರಾಖೆ ಜತನ್ ಬನಾಯ್ ।
ಠೇಸ್ ಲಗೇ ತೋ ಕ್ಷೀಣ್ ಹೋವೆ, ತೇರೀ ಐಸೆ ಭಕ್ತಿ ಜಾಯ್ ॥

ಅಂದಿನಿಂದ ನಲ ಮತ್ತು ನೀಲರ ಶಕ್ತಿ ಮುಗಿದು ಹೋಯಿತು. ನನಗೆ ಬಹಳ ವಿಪತ್ತು ಬಂದಿದೆ ಎಂದು ಶ್ರೀರಾಮಚಂದ್ರನು ಮುನೀಂದ್ರರಿಗೆ ಹೇಳಿದನು. ಹೇಗಾದರೂ ಸರಿ ಸೇನೆಯು ಸಮುದ್ರ ದಾಟುವಂತೆ ಮಾಡಿರಿ ಎಂದು ಪ್ರಾರ್ಥಿಸಿದನು. "ನೀವು ನಿಮ್ಮ ಸೇವಕರ ಮೇಲೆ ದಯೆ ತೋರಿದ್ದಿರಿ ಶಕ್ತಿ ನೀಡಿದಿರಿ ಎಂದರೆ ಸ್ವಲ್ಪ ದಯೆ ನನ್ನ ಮೇಲು ತೋರಿ ಪ್ರಭು" ಎಂದು ಪುನಃ ಶ್ರೀ ರಾಮಚಂದ್ರನು ಕೇಳಲು ಮುನೀಂದ್ರರು ಹೀಗೆ ಹೇಳಿದರು. ಎದುರಿನಲ್ಲಿ ಒಂದು ಪರ್ವತ ಇದೆ. ಅದರ ಸುತ್ತ ನಾನು ಒಂದು ಗೆರೆ ಹಾಕುತ್ತೇನೆ. ನೀವು ಅದರ ನಡುವಿನ ಕಲ್ಲುಗಳನ್ನು ಎತ್ತಿ ತನ್ನಿರಿ, ಅವು ಮುಳುಗುವುದಿಲ್ಲ. ಶ್ರೀ ರಾಮನು ಪರೀಕ್ಷೆಗಾಗಿ ಕಲ್ಲು ತರಿಸಿ, ನೀರಿಗೆ ಹಾಕಲು ಅವು ತೇಲಿದವು. ನಲ-ನೀಲರು ಸಮುದ್ರ ಸೇತುವೆ ಕಟ್ಟಲು ಕೆಲಸಗಾರ (ಶಿಲ್ಪಕಾರ) ರಾಗಿ ದುಡಿದರು. ಹನುಮಂತನು ನಿತ್ಯವೂ ದೇವರ ಸ್ಮರಣೆ ಮಾಡುತ್ತಾ, ದೈನಂದಿನ ಕೆಲಸದೊಡನೆ ರಾಮ-ರಾಮ ಎಂದು ಬರೆಯುತ್ತಿದ್ದ. ಬೆಟ್ಟವನ್ನೇ ಎತ್ತಿ ಹೊತ್ತು ತರುತ್ತಿದ್ದ. ನಲ-ನೀಲರು ಆ ಕಲ್ಲುಗಳನ್ನು ಜೋಡಿಸಿ ಸೇತುವೆ ನಿರ್ಮಾಣ ಮಾಡುತ್ತಿದ್ದರು. ಈ ರೀತಿ ಸೇತುವೆ ನಿರ್ಮಾಣವಾಯಿತು. ಧರ್ಮದಾಸರು ಹೇಳುತ್ತಾರೆ :-

ರಹೆ ನಲ-ನೀಲ ಜತನ ಕರ್ ಹಾರ್, ತಬ್ ಸತ್ ಗುರು ಸೆ ಕರೀ ಪುಕಾರ್ ।
ಜಾ ಸತ್ ರೇಖಾ ಲಿಖೀ ಅಪಾರ್, ಸಿಂಧು ಪರ್ ಶಿಲಾ ತಿರಾನೆ ವಾಲೆ ।
ಧನ-ಧನ ಸತ್‌ಗುರು ಸತ್ ಕಬೀರ್, ಭಕ್ತ ಕೀ ಪೀರ್ ಮಿಟಾನೆ ವಾಲೆ ।

ಯಾರೋ ಹೇಳುತ್ತಿದ್ದರು, ಹನುಮಂತನು ರಾಮನ ನಾಮವನ್ನು ಕಲ್ಲುಗಳ ಮೇಲೆ ಬರೆದ ಆದ್ದರಿಂದ ಸೇತುವೆ ಆಯಿತು. ಮತ್ತೆ ಯಾರೋ ಹೇಳುತ್ತಿದ್ದರು ನಲ-ನೀಲರೇ ಸೇತುವೆ ಮಾಡಿದರು. ಇನ್ನು ಕೆಲವರು ಹೇಳುತ್ತಾರೆ ಶ್ರೀರಾಮನೇ ಸೇತುವೆ ಮಾಡಿದ ಎಂದು. ಆದರೆ ಇದರ ವಾಸ್ತವಿಕ ಕಥೆ ಮೇಲೆ ತಿಳಿಸಿರುವಂತಿದೆ.

**(ಸಂತ ಕಬೀರ್‌ರ ಸಾಖೀ-ಪುಟ 179 ರಿಂದ 182ರವರೆಗೆ)**

**-: ಪೀವ ಪಿಚಾನ್ ಕೋ ಅಂಗ :-**

ಕಬೀರ್-ತೀನ್ ದೇವ್ ಕೋ ಸಬ್ ಕೋಯಿ ಧ್ಯಾವೈ, ಚೌಥೇ ದೇವ ಕಾ ಮರಮ ನ ಪಾವೈ ।
ಚೌಥಾ ಛಾಡ್ ಪಂಚಮ ಕೋ ಧ್ಯಾವೈ, ಕಹೈ ಕಬೀರ್ ಸೋ ಹಮ್ ಪರ್ ಆವೈ ॥3॥

ಕಬೀರ್-ಓಂಕಾರ ನಿಶ್ಚಯ ಭಯಾ, ಯಹ್ ಕರ್ತಾ ಮತ್ ಜಾನ್ ।
ಸಾಚಾ ಶಬ್ಧ ಕಬೀರ್ ಕಾ, ಪರದೆ ಮಾಂಹಿ ಪಹಚಾನ್ ॥ 5 ॥

ಕಬೀರ್–ರಾಮಕೃಷ್ಣ ಅವತಾರ್ ಹೈ, ಇನಕಾ ನಾಹೀ ಸಂಸಾರ್ ।
ಜಿನ್ ಸಾಹೇಬ್ ಸಂಸಾರ ಕಿಯಾ, ಸೋ ಕಿನ್ಹೂ ನ ಜನ್ಮ್ಯಾನಾರ್ ॥ 17 ॥

ಕಬೀರ್–ಚಾರ್ ಭುಜಾ ಕೆ ಭಜನ್ ಮೆ, ಭೂಲೀ ಪರೆ ಸಬ್ ಸಂತ್ ।
ಕಬಿರಾ ಸುಮಿರೋ ತಾಸು ಕೊ, ಜಾಕೆ ಭುಜಾ ಅನಂತ್ ॥ 23 ॥

ಕಬೀರ್–ಸಮುದ್ರ ಪಾಟ ಲಂಕಾ ಗಯೆ, ಸೀತಾ ಕೋ ಭರತಾರ್ ।
ತಾಹಿ ಅಗಸ್ತ್ಯಮುನಿ ಪೀಯ ಗಯೋ, ಇನಮೆ ಕೊ ಕರತಾರ್ ॥ 26 ॥

ಕಬೀರ್–ಗೋವರ್ಧನಗಿರಿ ಧಾರಿಯೋ ಕೃಷ್ಣಜೀ, ದ್ರೋಣಗಿರಿ ಹನುಮಂತ ।
ಶೇಷ ನಾಗ ಸಬ್ ಸೃಷ್ಠಿ ಸಹಾರಿ, ಇನಮೆ ಕೋ ಭಗವಂತ್॥ 27 ॥

ಕಬೀರ್–ಕಾಟೆ ಬಂಧನ್ ವಿಪತೀ ಮೆ, ಕಠಿಣ ಕಿಯಾ ಸಂಗ್ರಾಮ್ ।
ಚಿನ್ಹೋರೇ ನರಪ್ರಾಣಿಯಾ, ಗರುಡ ಬಡೋ ಕಿ ರಾಮ್ ॥ 28 ॥

ಕಬೀರ್–ಕಹ ಕಬೀರ್ ಚಿತ ಚೇತಹೂ, ಶಬ್ದ ಕರೌ ನಿರೂವಾರ್ ।
ಶ್ರೀರಾಮ ಹೀ ಕರ್ತಾ ಕಹತ್ ಹೈ, ಭೂಲಿ ಪರಯೋ ಸಂಸಾರ್ ॥ 29 ॥

ಕಬೀರ್–ಜಿನ್ ರಾಮಕೃಷ್ಣ ವ ನಿರಂಜನ ಕಿಯೊ, ಸೋ ತೋ ಕರತಾ ನ್ಯಾರ್ ।
ಅಂಧಾ ಜ್ಞಾನ್ ನ ಬೂಝುಯಿ, ಕಹೈ ಕಬೀರ್ ವಿಚಾರ್ ॥ 30 ॥

## "ದ್ವಾಪರ ಯುಗದಲ್ಲಿ ಕವಿರ್ದೇವರು (ಕಬೀರ್ ಪರಮೇಶ್ವರ) ಕರುಣಾಮಯ ಎಂಬ ಹೆಸರಿನಿಂದ ಪ್ರಕಟವಾದದ್ದು"

ಕವಿರ್ದೇವರು ದ್ವಾಪರ ಯುಗದಲ್ಲಿ "ಕರುಣಾಮಯ" ಎಂಬ ಹೆಸರಿನಿಂದ ಪ್ರಕಟವಾಗಿದ್ದರು. ಆ ಸಮಯದಲ್ಲಿ ವಾಲ್ಮೀಕಿ ಜಾತಿಯ ಭಕ್ತ ಸುದರ್ಶನ ಸುಪಚ (ಅನುಸೂಚಿತ ಜಾತಿಯ) ಅವರ ಶಿಷ್ಯನಾದನು. ಇದೇ ಸುದರ್ಶನನಿಂದ ಪಾಂಡವರ ಯಜ್ಞ ಸಫಲವಾಗಿತ್ತು. ಅದು ಶ್ರೀಕೃಷ್ಣ, 33 ಕೋಟಿ ದೇವತೆಗಳು, 88 ಸಾವಿರ ಋಷಿಗಳು, 12 ಕೋಟಿ ಬ್ರಾಹ್ಮಣರು, 9 ನಾಥರು, 84 ಸಿದ್ಧರು, ಮುಂತಾದವರು ಭೋಜನ ಮಾಡಿದ್ದರಿಂದಲು ಸಹ ಸಫಲವಾಗಲಿಲ್ಲ. ಭಕ್ತ ಸುದರ್ಶನ ವಾಲ್ಮೀಕ, ಪೂರ್ಣ ಗುರುವಿನಿಂದ, ವಾಸ್ತವಿಕವಾದ ಮೂರು ಮಂತ್ರಗಳ ಉಪದೇಶ ಪಡೆದಿದ್ದ. ಸತ್ಯ ಸಾಧನೆಯನ್ನು ಗುರು ಮರ್ಯಾದೆಯಲ್ಲಿ ಇದ್ದು ಮಾಡುತ್ತಿದ್ದರು. ಆದ್ದರಿಂದ ಇವನಿಂದ ಯಜ್ಞ ಸಫಲವಾಯಿತು.

## "ದ್ವಾಪರ ಯುಗದಲ್ಲಿ ಇಂದ್ರಮತಿಯು ಶರಣು ಬಂದದ್ದು"

ದ್ವಾಪರ ಯುಗದಲ್ಲಿ ಚಂದ್ರವಿಜಯ ಎಂಬ ರಾಜನಿದ್ದ. ಅವನ ಪತ್ನಿ ಇಂದ್ರಮತಿ, ಬಹಳ ಧಾರ್ಮಿಕ ಪ್ರವೃತ್ತಿಯ ಸ್ತ್ರೀಯಾಗಿದ್ದಳು. ಸಂತ–ಮಹಾತ್ಮರನ್ನು ಬಹಳ ಗೌರವಿಸುತ್ತಿದ್ದಳು. ಅವಳಿಗೆ ಒಬ್ಬ ಗುರುವೂ ಇದ್ದರು. ಸಂತರಿಗೆ ಭೋಜನ ಮಾಡಿಸುವುದರಿಂದ ಬಹಳ ಲಾಭವಿದೆ ಸಾಧು ಸಂತರ ಸೇವೆ ಮಾಡು. ಏಕಾದಶಿಯ ವ್ರತ, ಜಪ ಮಾಡುವುದು ಒಳ್ಳೆಯದು ಎಂದು ಆ ಗುರುಗಳು ತಿಳಿಸಿದ್ದರು. ಅವಳಿಗೆ ಭಗವಂತನಲ್ಲಿ ದೃಢವಾದ ಭಕ್ತಿ ಇತ್ತು. ಸಂತರಿಗೆ ಭೋಜನ ಮಾಡಿಸಿದರೆ ಮುಂದೆಯೂ ರಾಣಿಯಾಗುವೆ, ನಿನಗೆ ಸ್ವರ್ಗ ಸಿಗುವುದೆಂದು ಗುರುಗಳು ಹೇಳಿದ್ದರು. ಆದ್ದರಿಂದ ರಾಣಿಯು ಪ್ರತಿದಿನ ಒಬ್ಬ ಸಂತರಿಗೆ, ತನ್ನ ಊಟಕ್ಕೆ ಮೊದಲು ಊಟ ಹಾಕುತ್ತಾ ಇದ್ದಳು. ಅನೇಕ ವರ್ಷಗಳವರೆಗೆ ಹೀಗೆ ನಡೆಯುತ್ತಾ ಇತ್ತು.

ಒಂದು ಸಮಯದಲ್ಲಿ ಹರಿದ್ವಾರದಲ್ಲಿ ಕುಂಭಮೇಳವಾಯಿತು. ಆಗ ತ್ರಿಮೂರ್ತಿಗಳ/ ತ್ರಿಗುಣಗಳ

(ಬ್ರಹ್ಮಾ,ವಿಷ್ಣು,ಶಿವ) ಉಪಾಸಕರಾದ ಎಲ್ಲಾ ಸಂತರು ಗಂಗಾ ಮೇಳ (ಕುಂಭಮೇಳ) ದಲ್ಲಿ ಭಾಗವಹಿಸಲು ಹೋಗಿದ್ದರು. ರಾಣಿಗೆ ಭೋಜನ ಮಾಡಿಸಲು ಯಾವ ಸಂತರೂ ಸಿಗಲಿಲ್ಲ. ಹಾಗಾಗಿ ರಾಣಿ ಆ ದಿನ ನಿರಾಹಾರಳಾಗಿಯೇ ಇದ್ದಳು. ಇದೇ ರೀತಿ ಮೂರು ದಿನಗಳು ಕಳೆದವು. ಸಂತರು ಸಿಗಲೇ ಇಲ್ಲ. ಆಗ ರಾಣಿ ತನ್ನ ಸೇವಕಿಗೆ ಹೇಳಿದಳು. "ಹೋಗಿ ಯಾರಾದರೂ ಸಂತರನ್ನು ಕರೆದುಕೊಂಡು ಬಾ. ಇಲ್ಲವಾದರೆ ನಿನ್ನ ರಾಣಿ ಬದುಕಿ ಉಳಿಯುವುದಿಲ್ಲ" ಎಂದು, ದೀನದಯಾಳು ಕಬೀರ್ ಪರಮೇಶ್ವರರು ತನ್ನ ಹಿಂದಿನ ಭಕ್ತಳನ್ನು ರಕ್ಷಿಸಲು ಬಿಳಿಯ ಬಟ್ಟೆ ಧರಿಸಿ ಸಂತ ರೂಪದಲ್ಲಿ ಬರುತ್ತಿದ್ದರು. ಸೇವಕಳು ಮಹಡಿಯ ಮೇಲಿನಿಂದ ಈ ಸಂತರನ್ನು ಕಂಡವಳೇ ಕೆಳಗೆ ಬಂದು ತನ್ನ ರಾಣಿಯ ಸಲುವಾಗಿ ಅರಮನೆಗೆ ಸ್ವಾಗತಿಸಿದಳು. ಕರುಣಾಮಯ ರು ಕೇಳಿದರು. ರಾಣಿ ಏಕೆ ನನ್ನನ್ನು ಸ್ಮರಿಸಿದಳು. ನನಗೂ ರಾಣಿಗೂ ಏನು ಸಂಬಂಧ, ಸೇವಕಿಯು ರಾಣಿಯ ವ್ರತದ ಬಗ್ಗೆ ತಿಳಿಸಿದಳು" ನಾನು ಇಲ್ಲೇ ನಿಂತಿರುವೆ.

ನಿನ್ನ ರಾಣಿಗೆ ಅವಶ್ಯಕತೆ ಇದ್ದರೆ ಇಲ್ಲಿಗೆ ಬರಲು ತಿಳಿಸು, ನೀನು ಸೇವಕಿ ಅವಳು ರಾಣಿ. ನಾನು ನಿನ್ನ ಮಾತಿನಂತೆ ಬಂದರೆ ಅವಳು ಕೇಳಬಹುದು– ನಿಮ್ಮನ್ನು ಕರೆದವರು ಯಾರು? ಎಂದು. ಇಲ್ಲ ಅವಳ ರಾಜ ಏನನ್ನಾದರೂ ಹೇಳಬಹುದು. ಸಾಧುಗಳಿಗೆ ಅನಾದರವಾಗಬಹುದು. ಅದು ಮಹಾಪಾಪ. ಆಗ ಸೇವಕಿಯು ಅರಮನೆಗೆ ವಾಪಸ್ ಹೋಗಿ ರಾಣಿಗೆ ಎಲ್ಲಾ ಸಂಗತಿ ತಿಳಿಸದಳು. ನನ್ನ ಕೈ ಹಿಡಿದುಕೊಂಡು ಆ ಸಂತರಲ್ಲಿಗೆ ನನ್ನನ್ನು ಕರೆದುಕೊಂಡು ಹೋಗು ಎಂದು ಸೇವಕಿಗೆ ಹೇಳಿದಳು. ಸೇವಕಿಯೊಡನೆ, ರಾಣಿ ಸಂತನಲ್ಲಿಗ ಬಂದು ದಂಡವತ ನಮಸ್ಕಾರ ಮಾಡಿ ಪ್ರಾರ್ಥಿಸಿದಳು. ಹೇ ಪರಮೇಶ್ವರ! ನನ್ನ ಹೆಗಲ ಮೇಲೆ ತಮ್ಮನ್ನು ಕೂರಿಸಿಕೊಂಡು ಹೋಗುವ ಬಯಕೆ ನನಗಿದೆ. ಆಗ ಕರುಣಾಮಯರು ಹೇಳಿದರು. –ಮಗಳೇ ನಾನು ನೋಡ ಬಯಸಿದ್ದು ಇದನ್ನೇ, ನಿನ್ನಲ್ಲಿ ಶ್ರದ್ಧೆ ಇದೆಯೋ? ಅಥವಾ ಹಾಗೇ ಹಸಿವಿನಿಂದ ಸಾಯಲು ಸಿದ್ಧಳಿರುವೆಯೋ? ಎಂದು. ರಾಣಿ ತನ್ನ ಕೈಯಿಂದಲೇ ಭೋಜನ ತಯಾರಿಸಿದಳು. ಕರುಣಾಮಯರು ಹೇಳಿದರು ನಾನು ಊಟ ಮಾಡುವುದಿಲ್ಲ. ಈ ನನ್ನ ಶರೀರ ಊಟ ಮಾಡುವುದಕ್ಕಿಲ್ಲ. ಹಾಗಾದರೆ ನಾನೂ ಊಟಮಾಡುವುದಿಲ್ಲ ವೆಂದಳು ರಾಣಿ ಆಗಲಿ, ಸರಿ ಮಗಳೆ ಊಟ ತೆಗೆದುಕೊಂಡು ಬಾ ನಾನು ಊಟ ಮಾಡುವೆ ಸಮರ್ಥರೆಂದರೆ ಇವರೇ, ಯಾರು ಏನು ಬಯಸುವರೋ, ಅದನ್ನೇ ಮಾಡುವವರು. ಊಟವಾದ ಮೇಲೆ ಕರುಣಾಸಾಗರ ರವರು ರಾಣಿಯನ್ನು ಕೇಳಿದರು. ನಿನಗೆ ಈ ವ್ರತವನ್ನು ಮಾಡಲು ಯಾರು ಹೇಳಿದರು? ನನ್ನ ಗುರುದೇವರು ತಿಳಿಸಿದ್ದಾರೆ ಎಂದಳು ರಾಣಿ. ನಿನ್ನ ಗುರುವು ನಿನಗೆ ಏನು ಆದೇಶ ಮಾಡಿರುವರು. ಇಂದ್ರಮತಿ ಹೇಳಿದಳು– ಬ್ರಹ್ಮಾ–ವಿಷ್ಣು–ಮಹೇಶ್ವರನ ಪೂಜೆ, ಏಕಾದಶಿಯ ವ್ರತ, ತೀರ್ಥಯಾತ್ರೆ, ದೇವಿ ಪೂಜೆ, ಶ್ರಾದ್ಧ ಮಾಡುವುದು, ದೇವಾಲಯಕ್ಕೆ ಹೋಗುವುದು. ಸಂತರ ಸೇವೆ ಮಾಡುವುದು. ಕರುಣಾಮಯ ರು ಹೇಳಿದರು. ಯಾವ ಆದೇಶವನ್ನು ನಿನ್ನ ಗುರುಗಳು ಹೇಳಿರುವರೋ ಅದನ್ನು ಪಾಲಿಸಿದರೆ, ಜನ್ಮ–ಮೃತ್ಯು, ಸ್ವರ್ಗ–ನರಕದ ಚಕ್ರಗಳಲ್ಲಿರುವೆ. 84 ಲಕ್ಷ ಯೋನಿಗಳಲ್ಲಿ ಹುಟ್ಟಿ ಬರಬೇಕು. ಕಷ್ಟ ತಪ್ಪದು. ಮುಕ್ತಿ ಸಿಗುವುದಿಲ್ಲ. ರಾಣಿ ಹೇಳಿದಳು–ಮಹಾರಾಜ್ ರೇ ಎಷ್ಟು ಸಂತರಿರುವರೋ, ತಮ್ಮ–ತಮ್ಮ ಪ್ರಭುತ್ವವನ್ನು ತಾವೇ ಮಾಡಿಕೊಳ್ಳುತ್ತಾರೆ. ನನ್ನ ಗುರುದೇವರ ಬಗ್ಗೆ ಏನನ್ನೂ ಹೇಳಬೇಡಿ. ನನಗೆ ಮುಕ್ತಿ ಸಿಕ್ಕಲಿ, ಸಿಕ್ಕದಿರಲಿ ಚಿಂತೆ ಇಲ್ಲ.

ಈ ಮುಗ್ಧ ಜೀವಕ್ಕೆ ಹೇಗೆ ತಿಳಿಸುವುದು ಎಂದು ಕರುಣಾಮಯರು ಯೋಚಿಸಿದರು. ಇವರು ಏನನ್ನು ಹಿಡಿದಿರುವರೋ ಬಿಡುವುದಿಲ್ಲ. ಬೇಕಾದರೆ ಸಾಯಲೂ ಸಹ ಸಿದ್ಧ. ಮಗಳೇ ನಿನ್ನ ಇಚ್ಛೆ ನಾನು ಯಾರನ್ನೂ ನಿಂದಿಸುತ್ತಿಲ್ಲ. ನಾನೇನಾದರೂ ನಿನ್ನ ಗುರುಗಳಿಗೆ ಬೈದನೇ!

ಅಥವಾ ಕೆಟ್ಟದಾಗಿ ಹೇಳಿದೆನೇ! ನಾನು ಭಕ್ತಿ ಮಾರ್ಗವನ್ನು ಹೇಳುತ್ತಿರುವೆ. ಈ ಭಕ್ತಿ (ನೀನು ಮಾಡುತ್ತಿರುವುದು) ಶಾಸ್ತ್ರ ವಿರುದ್ಧವಾಗಿದೆ. ನೀನು ಈ ಸಂಸಾರದಿಂದ ಪಾರಾಗಲಾರೆ. ಮುಂದೆ ಬರಲಿರುವ ಕರ್ಮ ದಂಡದ ಶಿಕ್ಷೆಯನ್ನು ನಿನ್ನ ಈ ಭಕ್ತಿ ಸಾಧನೆ, ಕಡಿಮೆ ಮಾಡದು. ಹಾಗೂ ಕೇಳು ಇಂದಿನಿಂದ ಮೂರನೆಯ ದಿನ ನಿನ್ನ ಮೃತ್ಯುವಾಗುವುದು. ನಿನ್ನ ಗುರುವಾಗಲಿ, ನಿನ್ನ ನಕಲಿ ಸಾಧನೆಯಾಗಲಿ, ನಿನ್ನನ್ನು ಉಳಿಸಲು ಆಗುವುದಿಲ್ಲ. (ಸಾವಿನ ವಿಷಯ ಜೀವಕ್ಕೆ ಹೆದರಿಕೆ ತರುತ್ತದೆ) ಈ ಸಂತರು ಸುಳ್ಳು ಹೇಳುವುದಿಲ್ಲ ಎಂದು ರಾಣಿ ಯೋಚಿಸಿದಳು. ನಾಡಿದ್ದು ನಾನು ಸಾಯಬಹುದು. ಈ ಭಯದಿಂದ ಕರುಣಾಮಯರನ್ನು ಕೇಳಿದಳು– ಸ್ವಾಮಿ ನನ್ನ ಪ್ರಾಣವನ್ನು ಉಳಿಸಲು ಸಾಧ್ಯವೇ! ಕರುಣಾಮಯ (ಕಬೀರ್ ಪರಮೇಶ್ವರ)ರು ಹೇಳಿದರು, ನೀನು ಉಳಿಯಬಹುದು. ಒಂದು ವೇಳೆ ನನ್ನಿಂದ ಉಪದೇಶ (ದೀಕ್ಷೆ) ಮಂತ್ರ ಪಡೆದರೆ, ನನ್ನ ಶಿಷ್ಯಳಾದರೆ ಹಿಂದಿನ ಪೂಜೆಗಳನ್ನು ತ್ಯಜಿಸಿದರೆ, ನಿನ್ನ ಪ್ರಾಣ ಉಳಿಯುತ್ತದೆ. ಆದರೆ ಗುರುಗಳನ್ನು ಬದಲಾಯಿಸಬಾರದೆಂದು ನಾನು ಕೇಳಿರುವೆ. ಇದರಿಂದ ಪಾಪ ಬರುವುದಂತೆ. ಅಂದಳು ರಾಣಿ. ಇಲ್ಲ ಮಗಳೇ ಇದು ನಿನ್ನ ಭ್ರಮೆ. ಒಬ್ಬ ವೈದ್ಯರಲ್ಲಿ ರೋಗ ಗುಣವಾಗದಿದ್ದರೆ. ಮತ್ತೊಬ್ಬರ ಬಳಿಗೆ ಹೋಗಿ ಔಷಧ ಪಡೆಯುವುದಿಲ್ಲವೇ! ಒಬ್ಬ ಐದನೆಯ ತರಗತಿಯ ಅಧ್ಯಾಪಕ, ಮತ್ತೊಬ್ಬ ಉನ್ನತ ತರಗತಿಗಳ ಅಧ್ಯಾಪಕ ಇಬ್ಬರು ಇರುತ್ತಾರೆ. ಮಗಳೇ ಮುಂದಿನ ತರಗತಿಗೆ ಹೋಗಬೇಕು.

ಮುಂದಿನ ತರಗತಿಯ ಅಧ್ಯಾಪಕರಲ್ಲಿ ಕಲಿಯಬೇಕು. ನೀನು ಐದನೆ ತರಗತಿಯಲ್ಲೇ ಉಳಿಯಲು ಸಾಧ್ಯವೇ! ಇದನ್ನು ಬಿಡಬೇಕಾಗುವುದು. ನೀನೀಗ ಮುಂದಿನ ತರಗತಿಗೆ ಹೋಗಬೇಕು. ನಾನು ಆ ತರಗತಿಯ ಅಧ್ಯಾಪಕ ಓದಿಸಲು ಬಂದಿರುವೆ. ಹೀಗೆ ಹೇಳುವುದನ್ನು ಕೇಳಿದರೂ ಅವಳು ಒಪ್ಪುವಳಾಗಿರಲಿಲ್ಲ. ಆದರೆ ಮೃತ್ಯುವು ಕಣ್ಣು ಮುಂದೆ ಕಾಣಿಸಿತು. ಈ ಸಂತನ ಮಾತನ್ನು ಕೇಳದಿದ್ದರೆ, ಕಾರ್ಯ ಕೆಡುತ್ತದೆ. ಎಂದು ಒಪ್ಪಿಕೊಂಡಳು. ಕರುಣಾಮಯರು ನಾಮದೀಕ್ಷೆ (ಉಪದೇಶ) ಕೊಟ್ಟರು. ಅವರು ಹೇಳಿದರು : "ಇಂದಿನಿಂದ ಮೂರನೆಯದಿನ ನನ್ನ ರೂಪದಲ್ಲಿ ಕಾಲನು ಬರುವನು, ನೀನು ಅವನನ್ನು ಸತ್ಕರಿಸದೆ, ನಾನು ನಿನಗೆ ಕೊಟ್ಟಿರುವ ನಾಮೋಪದೇಶದ ಜಪವನ್ನು 2 ನಿಮಿಷಗಳವರೆಗೆ ಮಾಡು. ಎರಡು ನಿಮಿಷಗಳಾದ ಮೇಲೆ ಅವನನ್ನು ನೋಡು. ಅವನು ಕಾಲನಿದ್ದರೆ ಅವನ ಸ್ವರೂಪದಲ್ಲಿ ಕಾಣಿಸುವನು. ಒಂದು ವೇಳೆ ಗುರುದೇವರು ಬಂದರೆ ಬೇಗನೆ ಅವರ ಚರಣಗಳಿಗೆ ನಮಸ್ಕರಿಸಬೇಕು'. ಇದಿಷ್ಟು ನನ್ನ ಈ ಬಾರಿಯ ಆದೇಶವಾಗಿದೆ. ರಾಣಿಯು ಹಾಗಿಯೇ ಮಾಡುವುದಾಗಿ ಒಪ್ಪಿದಳು.

ಈಗ ರಾಣಿಗೆ ಚಿಂತೆ ಶುರುವಾಯಿತು. ಶ್ರದ್ಧೆಯಿಂದ ಜಪ ಮಾಡತೊಡಗಿದಳು. ಮೂರನೆ ದಿವಸ ಕರುಣಾಮಯರ (ಕಬೀರ್ ಪರಮೇಶ್ವರರ) ರೂಪದಲ್ಲಿ ಕಾಲನು ಬಂದನು. "ಇಂದ್ರಮತಿ– ಇಂದ್ರಮತಿ" ಎಂದು ಕೂಗಿ ಕರೆದ. ಈಗ ಅವಳಿಗೆ ಭಯವಿತ್ತು. ನಾಮಸ್ಮರಣೆ ಮಾಡಿದಳು. ಕಾಲನ ಕಡೆಗೆ ನೋಡಲಿಲ್ಲ. ಎರಡು ನಿಮಿಷಗಳ ನಂತರ ನೋಡಿದಳು, ಕಾಲನ ಸ್ವರೂಪವು ಬದಲಾಯಿತು. ಅವನಿಗೆ (ಕಾಲನಿಗೆ) ಅರ್ಥವಾಯಿತು. ಇವಳ ಬಳಿ ಯಾವುದೋ ಶಕ್ತಿಯುತ ಮಂತ್ರವಿದೆ ಎಂದು. "ನಿನ್ನನ್ನು ಆಮೇಲೆ ಪುನಃ ನೋಡುವೆ" ಎಂದು ಹೇಳಿ ಹೊರಟು ಹೋದ. ಈಗಂತೂ ಬಚಾವಾದಳು. ರಾಣಿ ಅತಿಯಾದ ಸಂತೋಷದಿಂದ ಉಬ್ಬಿಹೋದಳು. ಅವಳು ತನ್ನ ಬಂಧುಗಳಲ್ಲಿ ಹೇಳಿಕೊಂಡಳು. "ನನಗೆ ಮೃತ್ಯುವಾಗಲಿತ್ತು ಆದರೆ ನನ್ನ ಗುರುಗಳು ಅದರಿಂದ ಪಾರು ಮಾಡಿದರು" ಎಂದು . ರಾಜನ ಬಳಿಯೂ ಇದನ್ನೇ ಹೇಳಿದಳು ರಾಜ ಹೇಳಿದ "ನೀನು ಇಂತಹ ನಾಟಕ ಮಾಡುತ್ತಲೇ ಇರುವೆ" ಕಾಲ ಬಂದಿದ್ದರೆ ಬಿಟ್ಟು ಹೋಗುತ್ತಿದ್ದನೆ? ಈ ಸಂತ ಹೀಗೆ ಏನೋ ಹರಟುತ್ತಾನೆ ಎಂದು" ರಾಜನ ಮಾತಿಗೆ ರಾಣಿ ಒಪ್ಪಿಗೆ ಹೇಗೆ ಕೊಟ್ಟಾಳು? ಅವಳು

ಖುಷಿ-ಖುಷಿಯಾಗಿ ತನ್ನ ಕೊಠಡಿಯಲ್ಲಿ ಹೋಗಿ ಮಲಗಿದಳು. ಕೆಲ ಸಮಯದ ನಂತರ ಕಾಲನು ಸರ್ಪದ ರೂಪಿನಿಂದ ಬಂದನು. ಅದು ರಾಣಿಯನ್ನು ಕಚ್ಚಿತು. ಸರ್ಪ ಕಚ್ಚಿದ ಕೂಡಲೆ ರಾಣಿಯು ಜೋರಾಗಿ ಕೂಗಾಡಿದಳು. ಕೂಗನ್ನು ಕೇಳಿ ನೌಕರರು ಓಡೋಡಿ ಬಂದರು. ಆಗ ಸರ್ಪವು ನೀರು ಹೋಗಲು ಮಾಡಿರುವ ಸಣ್ಣ ರಂಧ್ರದಲ್ಲಿ ಹೊರಟು ಹೋಯಿತು. ತನ್ನ ಗುರುದೇವರನ್ನು ಕರೆಯುತ್ತಾ ರಾಣಿಯು ಮೂರ್ಛೆ ಹೋದಳು. ಆಗ ಕರುಣಾಮಯ ಕಬೀರ್ ಪರಮೇಶ್ವರರು ಅಲ್ಲಿ ಪ್ರಕಟವಾದರು. ಜನರಿಗೆ ತೋರಿಸಿಕೊಳ್ಳಲು ಮಂತ್ರವನ್ನು ಹೇಳಿದರು. (ಅವರು ಯಾವುದೇ ಮಂತ್ರ-ತಂತ್ರದ ಅವಶ್ಯಕತೆ ಇಲ್ಲದೆ, ಬದುಕಿಸಲು ಸಾಮರ್ಥ್ಯವುಳ್ಳವರಾಗಿದ್ದರು) ಇಂದ್ರಮತಿಯನ್ನು ಬದುಕಿಸಿದರು. ರಾಣಿಯು ಧನ್ಯವಾದಗಳನ್ನು ಹೇಳಿದಳು. "ಮುಕ್ತಿದಾತ ನೀವು ಇರದಿದ್ದರೆ ನನ್ನ ಸಾವು ಆಗುತ್ತಿತ್ತು" ಎಂದಳು. ಕಬೀರ್ ಪರಮೇಶ್ವರ ಹೇಳಿದರು. "ನಾನು ಕಾಲನನ್ನು ನಿನ್ನ ಮನೆಯೊಳಗೆ ನುಸುಳಲು ಬಿಡುತ್ತಿರಲಿಲ್ಲ. ನಿನ್ನ ಮೇಲೆ (ಸರ್ಪದ ಕಚ್ಚುವಿಕೆ) ಆಕ್ರಮಣವಾಗಲು ಬಿಡುತ್ತಿರಲಿಲ್ಲ. ಆದರೆ ನಿನಗೆ ವಿಶ್ವಾಸ ಬರುತ್ತಿರಲಿಲ್ಲ. ನೀನಾಗ ಯೋಚಿಸುತ್ತಿದ್ದೆ ನನಗೆ ಯಾವುದೇ ಆಪತ್ತು ಬರುವಂತಿರಲಿಲ್ಲ. ಗುರುಗಳು ಸುಮ್ಮನೆ ಏನೋ ಇಲ್ಲದ್ದನ್ನು ಹೇಳಿ ನಾಮೋಪದೇಶವನ್ನು ಕೊಟ್ಟರು." ಆದ್ದರಿಂದ ನಿನಗೆ ಸ್ವಲ್ಪ ತೊಂದರೆ ನೀಡಿದೆ. ಹೀಗಿಲ್ಲವಾದರೆ ನೀನು ನಂಬುತ್ತಿರಲಿಲ್ಲ.

ಧರ್ಮ್‌ದಾಸ್ ಯಹಾಂ ಘನಾ ಅಂದೇರಾ, ಬಿನ ಪರಿಚಯ ಜೀವ ಜಮ್ ಕಾ ಚೆರಾ.

ಕಬೀರ್ ಪರಮೇಶ್ವರರು ಹೇಳಿದರು ಈಗ ನಾನು ಯಾವಾಗ ಇಚ್ಛಿಸುವೆನೋ, ಆವಾಗ ನಿನ್ನ ಮೃತ್ಯು ಆಗುವುದು. ಗರೀಬ್ ದಾಸರು ಹೇಳುತ್ತಾರೆ :-

ಗರೀಬ್, ಕಾಲ ಡರ್ರೈ ಕರತಾರ ಸೆ, ಜಯ ಜಯ ಜಯ ಜಗದೀಶ ।
ಜೌರಾ ಜೌರೀ ಝಾಡತಿ, ಪಗ್ ರಜ್ ಡಾರೆ ಶೀಶ್ ॥

ಈ ಕಾಲನು ಕಬೀರ್ ಭಗವಾನನಿಗೆ ಹೆದರುತ್ತಾನೆ. ಹಾಗೂ ಈ ಸಾವು ಕಬೀರ್ ಪರಮೇಶ್ವರರ ಚಪ್ಪಲಿಯ ಧೂಳು ಹೊಡೆಯುತ್ತದೆ. ಅರ್ಥಾತ್ ನೌಕರನಿಗೆ ಸಮ ನಂತರ ಆ ಧೂಳನ್ನು ತನ್ನ ತಲೆಯಲ್ಲಿ ಧರಿಸಿ, ನಾನು ನಿಮ್ಮ ಭಕ್ತನ ಬಳಿಗೆ ಹೋಗುವುದಿಲ್ಲ ಎಂದು ಹೇಳುತ್ತದೆ.

ಗರೀಬ್, ಕಾಲ ಜೋ ಪೀಸ್ಯೆ ಪೀಸನಾ, ಜೌರಾ ಹೈ ಪನಿಹಾರ್ ।
ಯೆ ದೊ ಅಸಲ್ ಮಜೂರ್ ಹೈ, ಮೇರೇ ಸಾಹೇಬ್ ಕೆ ದರಬಾರ್ ॥

ಈ ಕಾಲನು ಇಲ್ಲಿನ 21 ಬ್ರಹ್ಮಾಂಡಗಳ ಭಗವಂತ (ಬ್ರಹ್ಮ) ನಾಗಿದ್ದಾನೆ. ಇವನು ಬ್ರಹ್ಮಾ-ವಿಷ್ಣು-ಮಹೇಶ್ವರರ ತಂದೆಯಾಗಿದ್ದಾನೆ. ಇವನು ನಮ್ಮ ಕಬೀರ್ ಪರಮೇಶ್ವರರ ನೌಕರನಾಗಿದ್ದಾನೆ. (ಹಿಟ್ಟು ಬೀಸುತ್ತಾನೆ) ಈ ಮೃತ್ಯು ಕಬೀರ್ ಪರಮೇಶ್ವರರಲ್ಲಿ ನೀರು ತುಂಬಿಸುವವಳು. ಅಂದರೆ ಒಬ್ಬಳು ವಿಶೇಷವಾದ ನೌಕರಳು. ಈ ಇಬ್ಬರು ಕಬೀರ್ ಪರಮೇಶ್ವರರ ದರಬಾರಿನಲ್ಲಿ ನೌಕರರಾಗಿದ್ದಾರೆ. ಕೆಲವು ದಿನಗಳ ನಂತರ ಕಬೀರ್ ಪರಮೇಶ್ವರರು (ಕರುಣಾಮಯಿ) ಪುನಃ ಬಂದರು. ಇಂದ್ರಮತಿಗೆ 'ಸತ್ಯನಾಮ' (ಎರಡನೆ ಮಂತ್ರ) ಉಪದೇಶ ಮಾಡಿದರು.

ಇನ್ನೂ ಕೆಲವು ಸಮಯದ ನಂತರ, ಇಂದ್ರಮತಿಯ ಶ್ರದ್ಧೆಯನ್ನು ನೋಡಿ ಅವಳಿಗೆ ಸಾರನಾಮವನ್ನು ಉಪದೇಶಿಸಿದರು. ಕಬೀರ್ ಪರಮೇಶ್ವರರು ಆಗಾಗ ಇಂದ್ರಮತಿಗೆ ದರ್ಶನ ಕೊಡಲು ಬರುತ್ತಿದ್ದರು. ಆಗ ಇಂದ್ರಮತಿಯು ತನ್ನ ಪತಿಗೆ ತಿಳಿಸಿ ಹೇಳಿ. ಅವರೂ ತಮ್ಮನ್ನು ಒಪ್ಪಿ ಅನುಸರಿಸಲಿ, ರಾಜ ಚಂದ್ರವಿಜಯನಿಗೆ ಕಬೀರರು ಹೇಳಿದರು. "ರಾಜಾ ಇದು ಎರಡು ದಿನ ರಾಜ್ಯ-ವೈಭವ ಪುನಃ 84 ಲಕ್ಷ ಯೋನಿಗಳಲ್ಲಿ ಹುಟ್ಟಿ ಬರಬೇಕು" ಚಂದ್ರ ವಿಜಯನು ಹೇಳಿದನು.

ಭಗವಾನ್ ನಾನಂತೂ ನಾಮೋಪದೇಶವನ್ನು ಪಡೆಯುವುದಿಲ್ಲ. ಆದರೆ ನಿಮ್ಮ ಶಿಷ್ಯಳನ್ನು ತಡೆಯುವುದಿಲ್ಲ. ಅವಳು ಇಷ್ಟ ಪಟ್ಟರೆ ಖಜಾನೆಯನ್ನೇ ದಾನ ಮಾಡಲಿ, ಸತ್ಸಂಗವನ್ನು ಮಾಡಲಿ ನಾನು ಅಡ್ಡಿಪಡಿಸುವುದಿಲ್ಲ. ಕಬೀರ್ ಪರಮೇಶ್ವರರು ಕೇಳಿದರು. (ಕರುಣಾಮಯ) ನೀವು ನಾಮೋಪದೇಶವನ್ನು ಏಕೆ ತೆಗೆದುಕೊಳ್ಳುವುದಿಲ್ಲ? ರಾಜ ಹೇಳಿದ "ನಾನು ದೊಡ್ಡ–ದೊಡ್ಡ ರಾಜರ ಸಭಾ–ಸಮಾರೋಹಗಳಿಗೆ ಹೋಗಬೇಕಾಗುವುದು. ಕಬೀರರು ಕೇಳಿದರು :– ಸಭೆಗೆ ಹೋಗಲು ನಾಮವು ಏನು ಮಾಡುತ್ತದೆ! ಸಭೆಗೆ ಹೋಗು. ಅಲ್ಲಿ ದ್ರಾಕ್ಷಿ–ಬಾದಾಮಿ–ಗೋಡಂಬಿ ತಿನ್ನು, ಹಾಲು ಕುಡಿ ಶರಬತ್ ಕುಡಿಯಿರಿ, ಆದರೆ ಸಾರಾಯಿ (ಮಧ್ಯಪಾನ) ಕುಡಿಯ ಬೇಡ, ಅದು ಮಹಾಪಾಪ, ಆದರೆ ರಾಜ ಒಪ್ಪಲಿಲ್ಲ.

ರಾಣಿಯ ಪ್ರಾರ್ಥನೆ ಕೇಳಿ ಕರುಣಾಮಯ (ಕಬೀರ್)ರು ಪುನಃ ತಿಳಿ ಹೇಳಿದರು ನಾಮೋಪದೇಶವಿರದೆ ಈ ಜೀವನ ಹೀಗೆಯೇ ವ್ಯರ್ಥವಾಗಿ ಹೋಗುವುದು. ನೀವು ನಾಮೋಪದೇಶ ಪಡೆಯಿರಿ. ಎಷ್ಟು ಹೇಳಿದರೂ ರಾಜ ಒಪ್ಪಲಿಲ್ಲ ಆಗ ರಾಣಿಗೆ ಕರುಣಾಮಯರು ಹೇಳಿದರು. ಮಗಳೇ ಈ ಎರಡು ದಿನದ ಸುಖವನ್ನು ಕಂಡು ಇವರ ಬುದ್ಧಿ ಭ್ರಷ್ಟವಾಗಿದೆ. ನೀನು ಪ್ರಭುವಿನಲ್ಲಿ ಭಕ್ತಿ ಇಡು, ನೀನು ನಿನ್ನ ಆತ್ಮ ಕಲ್ಯಾಣ ಮಾಡಿಕೋ, ಇಲ್ಲಿ ಯಾರೂ ಯಾರಿಗೂ ಪತಿ ಅಲ್ಲ. ಯಾರು ಯಾರಿಗೂ ಪತ್ನಿ ಅಲ್ಲ. ಪೂರ್ವ ಜನ್ಮದ ಸಂಸ್ಕಾರದಂತೆ ಎರಡು ದಿನದ ಸಂಬಂಧವಷ್ಟೆ, ನೀನು ನಿನ್ನ ಕರ್ಮವನ್ನು ಮಾಡುತ್ತಿರು ಈಗ ಇಂದ್ರಮತಿ **80** ವರ್ಷಗಳ ಮುದುಕಿಯಾಗಿದ್ದಾಳೆ. ಅವಳು **40** ವರ್ಷದವಳಿರುವಾಗಲೆ ಸಾಯಬೇಕಿತ್ತು. ಯಾವಾಗ ಶರೀರ ನಿತ್ರಾಣದಿಂದ ಕಂಪಿಸತೊಡಗಿತೋ ಆಗ ಕರುಣಾಮಯ ಪರಮೇಶ್ವರರು ಕೇಳಿದರು. ಮಗಳೆ ಇಂದ್ರಮತಿ ನೀನೇನು ಬಯಸುವೆ? ಸತ್ಯಲೋಕಕ್ಕೆ ಹೋಗಲು ಬಯಸುವೆಯೋ? ಆಗ ಇಂದ್ರಮತಿ ಹೇಳಿದರು ನಾನು ತಯಾರಾಗಿದ್ದೇನೆ. ಪ್ರಭು ಖಂಡಿತ ತಯಾರಾಗಿದ್ದೇನೆ. ನಿನ್ನ ಮೊಮ್ಮಗ ಮೊಮ್ಮಗಳಲ್ಲಿ ಏನಾದರೂ ಮಮತೆ ಇದೆಯೇ? ಎಂದರು ಕರುಣಾಮಯರು. ಖಂಡಿತಾ ಇಲ್ಲವೆಂದಳು ರಾಣಿ. ತಾವು ಅಂತಹ ನಿರ್ಮಲವಾದ ಜ್ಞಾನವನ್ನು ನೀಡಿರುವಿರಿ. ಈ ಕೊಳಕಿನ ಲೋಕವನ್ನು ಏಕೆ ಬಯಸಲಿ? ಕಬೀರ್ ಪರಮೇಶ್ವರರು ಹೇಳಿದರು 'ನಡಿ ಮಗಳೆ, ತಕ್ಷಣ ರಾಣಿ ಪ್ರಾಣ ತ್ಯಜಿಸಿದಳು. ಪರಮೇಶ್ವರರು ಮುಕ್ತವಾದ ಇಂದ್ರಮತಿಯ ಆತ್ಮವನ್ನು ಮೇಲಕ್ಕೆ ಕರೆದುಕೊಂಡು ಹೋದರು. ಇದೇ (ಬ್ರಹ್ಮಾಂಡದಲ್ಲಿ) ಒಂದು ಮಾನಸ ಸರೋವರವಿದೆ. ಆ ಮಾನಸ ಸರೋವರದಲ್ಲಿ ಆತ್ಮಕ್ಕೆ ಸ್ನಾನ ಮಾಡಿಸಬೇಕಾಗುತ್ತದೆ. ಈ ಮುಕ್ತಾತ್ಮಳನ್ನು ಆ ಮಾನಸ ಸರೋವರದಲ್ಲಿ ಕೆಲ ಸಮಯದವರೆಗೆ ಇರಿಸಿದರು. ಈ ಆತ್ಮಕ್ಕೆ ತಮ್ಮ ಕಬೀರ್ ಸ್ವರೂಪವನ್ನು ಪ್ರಕಟಗೊಳಿಸಿದರು. (ದರ್ಶನ ಮಾಡಿಸಿದರು) ನಿನಗೇನಾದರೂ ಇಚ್ಛೆ ಇದ್ದರೆ (ಈ ಸಂಸಾರದಲ್ಲಿ) ಪುನಃ ನೀನು ಜನ್ಮ ತಾಳಬೇಕಾಗುತ್ತದೆ. ಇಚ್ಛೆ ಇದೆಯಾ? ಎಂದು ಕೇಳಿದರು.

ಒಂದು ವೇಳೆ ಮನದಲ್ಲಿ ಈ ಸಂಸಾರದ ಬಯಕೆ ಇದ್ದರೆ, ಸತ್ಯಲೋಕಕ್ಕೆ ಹೋಗಲು ಸಾಧ್ಯವಿಲ್ಲ. ಇಂದ್ರಮತಿಯು ಹೇಳಿದಳು. ಸ್ವಾಮಿ ತಾವು ಅಂತರ್ಯಾಮಿ, ನನಗೆ ಯಾವುದೇ ಇಚ್ಛೇ ಇಲ್ಲ. ನಿಮ್ಮ ಚರಣಗಳ ಇಚ್ಛೆ ಇದೆ. ಆದರೆ ನನ್ನ ಮನದಲ್ಲಿ ಒಂದು ಸಂಶಯವಿದೆ. ಯಾರು ನನ್ನ ಪತಿಯಾಗಿದ್ದರೋ, ಅವರು ನನಗೆ ಯಾವುದೇ ಧಾರ್ಮಿಕ ಕರ್ಮ ಮಾಡಲು ಅಡ್ಡಿಪಡಿಸಲಿಲ್ಲ. ಈಗಿನ ಕಾಲದ ಪತಿಯರು ಬಹಳ ಅಡ್ಡಿಪಡಿಸುತ್ತಾರೆ. ಆದರೆ ಇವರು ಹಾಗೆ ಮಾಡಲಿಲ್ಲ. ಆದ್ದರಿಂದ ನನಗೆ ನಿಮ್ಮ ಚರಣಗಳಲ್ಲಿ ಇಚ್ಛೆಯಾಯಿತು. ಅಡ್ಡಿ ಮಾಡಿದ್ದರೆ ತಮ್ಮ ಚರಣ ಭಾಗ್ಯ ನನಗೆ ದೊರೆಯುತ್ತಿರಲಿಲ್ಲ. ನನ್ನ ಕಲ್ಯಾಣವೂ ಆಗುತ್ತಿರಲಿಲ್ಲ. ಅವರ ಈ ಶುಭ ಕರ್ಮಕ್ಕೆ ಏನಾದರೂ ಲಾಭ ಸಿಗುವುದಾದರೆ, ಅದು ಅವರಿಗೂ ದೊರೆಯಲಿ. ದಾತಾ ಕಬೀರ್ ಪರಮೇಶ್ವರರು ನೋಡಿದರು. ಈ ಮುಗ್ಧಳು ಇನ್ನೂ ಇವನ ಹಿಂದೆ ಸಿಲುಕಿದ್ದಾಳೆ ಎಂದು ಯೋಚಿಸಿ ಹೇಳಿದರು. ನೀನು ಇನ್ನೂ

2–3 ವರ್ಷಗಳು ಇಲ್ಲಿಯೇ ಇರು. ಎರಡು ವರ್ಷಗಳು ಕಳೆಯಿತು. ರಾಜನಿಗೆ ಮರಣ ಕಾಲ ಬಂತು. ಏಕೆಂದರೆ ಅವನು ನಾಮೋಪದೇಶವನ್ನು ಪಡೆದಿರಲಿಲ್ಲ. ಯಮನ ದೂತರು ಬಂದರು. ರಾಜಾ ಅಂಗಳದಲ್ಲಿ ತಲೆ ತಿರುಗಿ ಬಿದ್ದ. ಯಮಧೂತರು ಅವನ ಕುತ್ತಿಗೆ ಹಿಸುಕಿದರು. ರಾಜನು ಬಟ್ಟೆಯಲ್ಲಿ ಮಲ–ಮೂತ್ರಗಳನ್ನು ಮಾಡಿಕೊಂಡ. ಕರುಣಾಮಯರು ರಾಣಿಗೆ ತೋರಿಸಿದರು. "ನೋಡು ನಿನ್ನ ರಾಜನನ್ನು" ರಾಣಿ ಬೇಡಿದಳು. ಅವರ ಧರ್ಮಕಾರ್ಯ ಸಹಯೋಗಕ್ಕೆ ಫಲ ಸಿಗುವುದಾದರೆ ದಯಮಾಡಿ ಕೊಡಿಸಿರಿ. ರಾಣಿಗೆ ಇನ್ನೂ ಸ್ವಲ್ಪ ಮಮತೆ ಉಳಿದಿತ್ತು. ಕಬೀರರು ಯೋಚಿಸಿದರು. ಇವಳು ಪುನಃ ಕಾಲನ ಜಾಲಕ್ಕೆ ಸಿಲುಕುವಳು ಎಂದು ಕೊಂಡು ಮಾನಸ ಸರೋವರದಿಂದ ಸೀದಾ ರಾಜನಿದ್ದಲ್ಲಿಗೆ ಬಂದರು. ಇವರನ್ನು ಕಂಡ ಯಮಧೂತರು, ಹೆಣದ ಮೇಲಿನ ಹದ್ದುಗಳು ಹಾರಿದಂತೆ ಹಾರಿ ಹೋದರು. ಚಂದ್ರ ವಿಜಯನಿಗೆ ಪ್ರಜ್ಞೆ ಬಂತು. ಎದುರಿಗೆ ಕರುಣಾಮಯರು ನಿಂತಿದ್ದರು. ಕೇವಲ ಚಂದ್ರವಿಜಯನ ಕಣ್ಣಿಗೆ ಮಾತ್ರ ಕಾಣಿಸಿಕೊಂಡರು. ಬೇರಾರಿಗೂ ಕಾಣಲಿಲ್ಲ. ರಾಜನು ಚರಣಗಳಿಗೆ ಬಿದ್ದು ಕ್ಷಮೆ ಯಾಚಿಸಿದ. ನನ್ನನ್ನು ಉಳಿಸಿರಿ ಎಂದು ಪ್ರಾರ್ಥಿಸಿದ. ಏಕೆಂದರೆ ಅವನಿಗೆ ಅವನ ಜೀವ ಹೋಗುವುದೆಂದು ತಿಳಿದಿತ್ತು. (ಜೀವಿಗೆ ಜೀವ ಹೋಗುವಾಗ ಅರಿವು ಉಂಟಾಗುತ್ತದೆ) ರಾಜಾ ಅಂದೂ ಇದನ್ನೇ ಹೇಳಿದ್ದೆ. ಈಗಲೂ ಹೇಳುತ್ತಿರುವೆ. ನೀನು ನಾಮೋಪದೇಶವನ್ನು ಪಡೆಯಬೇಕಾಗುವುದು. ರಾಜ ಹೇಳಿದ. ನಾನೀಗ ನಾಮೋಪದೇಶ ಪಡೆಯುವೇನು. ಅಂದಾಗ ನಾನು ನಿನಗೆ ಇನ್ನೂ ಎರಡು ವರ್ಷಗಳ ಆಯಸ್ಸನ್ನು ಕೊಟ್ಟಿರುವೆ ಎಂದರು. ಈ ದಿನಗಳಲ್ಲಿ ನಿನ್ನ ಉಸಿರು–ಉಸಿರಿನಲ್ಲೂ ನಾಮ ಜಪವಿರಬೇಕು. ಇಲ್ಲವಾದರೆ ಕರ್ಮದಂಡವಾಗುತ್ತದೆ.

ಕಬೀರ್, ಜೀವನ್ ತೋ ಥೋಡಾ ಭಲಾ, ಜೈ ಸತ್ ಸುಮಿರಣ ಹೊ ।
ಲಾಖ್ ವರ್ಷ್ ಕಾ ಜೀವನಾ, ಲೇಖೇ ಧರೆ ನಾ ಕೊ॥

ಎರಡು ವರ್ಷಗಳಲ್ಲಿನ ನಾಮಸ್ಮರಣೆಯ ಫಲ–ಹಿಂದಿನ ಸುಕರ್ಮಕ್ಕೆ ಸಹಯೋಗ ಕೊಟ್ಟ ಫಲ ಇದರಿಂದಾಗಿ ಚಂದ್ರ ವಿಜಯನನ್ನೂ ಈ ಸಂಸಾರದಿಂದ ಪಾರು ಮಾಡಿದರು. ಕಬೀರ್ ದೇವರಿಗೆ ಜಯವೆನ್ನಿರಿ. "ಕಬೀರ್ ದೇವ್ ಕಿ ಜೈ" ಮುಕ್ತಿದಾತನಿಗೆ ಜೈ (ಬಂದೀಛೋಡ ಕೀ ಜೈ).

ಪರಮೇಶ್ವರ ನಿಜವಾದ (ದೃಢ) ಶ್ರದ್ಧಾಳುಗಳ ಆಯಸ್ಸನ್ನು ವೃದ್ಧಿಸುತ್ತಾರೆ. ಅವರ ಪರಿವಾರದವರನ್ನೂ ರಕ್ಷಿಸುತ್ತಾರೆ. ಎಂಬುದು ಮೇಲಿನ ಉದಾಹರಣೆಯಿಂದ ದೃಢವಾಯಿತು. ಈ ಪ್ರಮಾಣವು ಬಹಳ ಹಿಂದಿನದು. ಕಬೀರ್ ಪರಮೇಶ್ವರರ ಶಕ್ತಿಯಿಂದ, ಸದ್ಗುರು ರಾಮ್‌ಪಾಲ್ ಮಹಾರಾಜ ರವರು ವರ್ತಮಾನ ಕಾಲದಲ್ಲಿ ಸಾಧಾರಣ ವ್ಯಕ್ತಿ ನಂಬಲು ಆಗದಂತಹ ಕಷ್ಟಗಳ ನಿವಾರಣೆ, ಆಯಸ್ಸು ವೃದ್ಧಿ ಯಾಗಿರುವ, ಇನ್ನು ಅನೇಕ ಸಾಕಷ್ಟು ಪ್ರಮಾಣಗಳು ಓದಲು ಈ ಪುಸ್ತಕದಲ್ಲಿ ಸಿಗುತ್ತದೆ. "ಅಲೆಮಾರಿಗಳಿಗೆ ಮಾರ್ಗ ಸಿಗುವ ವಿಷಯ" ಎಂಬ ಲೇಖನದಲ್ಲಿ ನೋಡಬಹುದು.

## "ಕಬೀರ್ ಪರಮೇಶ್ವರರು (ಕವಿರ್ದೇವರು) ಕಲಿಯುಗದಲ್ಲಿ ಪ್ರಕಟವಾದುದು"

ವಿಕ್ರಮ ಸಂವತ್ಸರ 1455 (ಸನ್ 1398)ರ ಜೇಷ್ಠ ಮಾಸದ ಪೂರ್ಣಿಮೆಯ ದಿನ ಬೆಳಗಿನ ಬ್ರಹ್ಮ ಮುಹೂರ್ತದಲ್ಲಿ ಪೂರ್ಣ ಪರಮೇಶ್ವರ ಕಬೀರರು (ಕವಿರ್ದೇವರು) ಸ್ವಯಂ ಪ್ರಕಟವಾದರು. ಅವರು ಸತ್ಯಲೋಕದಿಂದ ಬಂದಿದ್ದರು. ಕಾಶಿಯ 'ಲಹರ ತಾರಾ' ಕೆರೆಯಲ್ಲಿನ ಒಂದು ಕಮಲದ ಹೂವಿನ ಮೇಲೆ ಬಾಲಕ ರೂಪವನ್ನು ಧರಿಸಿ ಪ್ರಕಟವಾದರು. ಈ ಬಾಲಕ ಕಬೀರರನ್ನು ಪಾಲನೆ–ಪೋಷಣೆಯನ್ನು ನೀರೂ ನೀಮಾ ಎಂಬ ದಂಪತಿಗಳು ಮಾಡಿದರು. ಅವರು ಯಾರು? ಎಂಬುದರ ಪರಿಚಯ ಮಾಡಿಕೊಳ್ಳೋಣ. ದ್ವಾಪರ ಯುಗದಲ್ಲಿ ಅವರು ಸುಪಚ ಸುದರ್ಶನ (ಪಾಂಡವರ

ಯಜ್ಞ ಸಫಲ ಮಾಡಿದವರು) ರ ತಂದೆ-ತಾಯಿಯಾಗಿದ್ದರು. ಕರುಣಾಮಯ ರೂಪದಲ್ಲಿ ಬಂದ ಕಬೀರ್ ಪರಮೇಶ್ವರರ ಮಾತುಗಳನ್ನು ಆಗ ಒಪ್ಪಿರಲಿಲ್ಲ (ಸ್ವೀಕರಿಸಿರಲಿಲ್ಲ). ಕೊನೆಯಲ್ಲಿ ಸುದರ್ಶನರು ಕರುಣಾಮಯನ ರೂಪದಲ್ಲಿ ಬಂದ ಕಬೀರ್ ಪ್ರಭುಗೆ ಪ್ರಾರ್ಥಿಸಿದರು ನೀವು ನನಗೆ ಉಪದೇಶದ ಮೂಲಕ ಸರ್ವಸ್ವವನ್ನೂ ನೀಡಿದ್ದೀರಿ. ಈ ದಿನದವರೆಗೆ ನನಗೆ ತಮ್ಮಿಂದ ಏನನ್ನೂ ಬೇಡುವ ಅವಶ್ಯಕತೆಯೇ ಬರಲಿಲ್ಲ. ಏಕೆಂದರೆ ತಾವು ನನ್ನ ಸಂಪೂರ್ಣ ಮನೋಕಾಮನೆಯನ್ನು ಪೂರ್ಣಗೊಳಿಸುವುದರ ಜೊತೆಗೆ ಭಕ್ತಿಧನವನ್ನೂ ನೀಡಿದ್ದೀರಿ ಈ ದಾಸನದು ಒಂದು ಪ್ರಾರ್ಥನೆ ಇದೆ. ಉಚಿತವೆನಿಸಿದರೆ ಸ್ವೀಕಾರ ಮಾಡಿರಿ, ನನ್ನ ತಂದೆ-ತಾಯಿಯರು ಯಾವುದೇ ಜನ್ಮದಲ್ಲಿ ಮನುಷ್ಯ ಜನ್ಮವನ್ನು ಪಡೆದರೆ, ಅವರನ್ನು ಕಾಪಡಬೇಕು (ತಮ್ಮ ಶರಣಕ್ಕೆ ತೆಗೆದುಕೊಳ್ಳಬೇಕು). ಅವರು ಬಹಳ ಪುಣ್ಯಾತ್ಮರು, ಆದರೆ ಇಂದು ಅವರ ಬುದ್ಧಿ ವಿಪರೀತವಾಗಿದೆ (ವಿರುದ್ಧ) ಅವರು ಪರಮಾತ್ಮನ ವಾಣಿಯನ್ನು ಒಪ್ಪುತ್ತಿಲ್ಲ. ಕಬೀರ್ ಪರಮೇಶ್ವರರು ಹೇಳಿದರು ಚಿಂತಿಸಬೇಡ. ಈಗ ನೀನು ನಿನ್ನ ತಂದೆ-ತಾಯಿಯರ ಚಿಂತೆಯಲ್ಲಿ ಸಿಲುಕಿದರೆ ತೊಂದರೆಗೆ ಒಳಗಾಗುವೆ. ಸಮಯ ಬಂದಾಗ ನಾನು ಅವರನ್ನು ಕಾಪಾಡಿಕೊಂಡು ಕಾಲನ-ಜಾಲದಿಂದ ಪಾರು ಮಾಡುವೆ. ನೀನು ನಿಶ್ಚಿಂತನಾಗಿ ಸತ್ಯಲೋಕಕ್ಕೆ ತೆರಳು. ಆಗ ಸುದರ್ಶನರು ನಿಶ್ಚಿಂತೆಯಿಂದ ಸತ್ಯಲೋಕಕ್ಕೆ ತೆರಳಿದರು.

ಸುದರ್ಶನರ ತಂದೆ-ತಾಯಿಯರು ನೀರೂ-ನೀಮಾರಾಗಿ ಜನಿಸುವ ಮುನ್ನ ಅವರ ಜನ್ಮ ಬ್ರಾಹ್ಮಣರಾಗಿ 2 ಬಾರಿ ಹುಟ್ಟಿದ್ದರು. ಆ ಸಮಯದಲ್ಲೂ ಅವರು ಸಂತಾನ ಹೀನರಾಗಿದ್ದರು. ಪುನಃ ಮೂರನೆಯ ಮನುಷ್ಯ ಜನ್ಮ ಕಾಶಿಯಲ್ಲಿ ಆಯಿತು. ಈ ಸಮಯದಲ್ಲೂ ಅವರು ಬ್ರಾಹ್ಮಣ-ಬ್ರಾಹ್ಮಣಿಯರಾಗಿದ್ದರು. (ಗೌರೀಶಂಕರ ಮತ್ತು ಸರಸ್ವತೀ ಎಂಬ ಹೆಸರಿನಿಂದ) ಈಗಲೂ ಸಂತಾನವಾಗಲಿಲ್ಲ.

ನೀರೂ-ನೀಮಾ ಇಬ್ಬರೂ ಗೌರೀಶಂಕರ-ಸರಸ್ವತೀ ನಾಮದ ಬ್ರಾಹ್ಮಣ ಜಾತಿಯವರು. ಇವರು ಭಗವಾನ್ ಶಂಕರನ ಉಪಾಸಕರು. ಶಿವಪುರಾಣವನ್ನು ನಿಸ್ವಾರ್ಥ ಭಾವದಿಂದ ಜನರಿಗೆ ಹೇಳುತ್ತಿದ್ದರು. ಯಾರಿಂದಲೂ ಹಣ ತೆಗೆದುಕೊಳ್ಳುತ್ತಿರಲಿಲ್ಲ. ಯಾರಾದರು ಅವರಾಗಿಯೇ ದಕ್ಷಿಣೆ ಕೊಟ್ಟರೆ, ಅದರಿಂದ ತಮ್ಮ ಭೋಜನದ ವೆಚ್ಚ ಹೊರತುಪಡಿಸಿ, ಉಳಿದ ಹಣ ದಾಸೋಹ (ಭಂಡಾರಾ) ಮಾಡಿಬಿಡುತ್ತಿದ್ದರು.

ಬೇರೆ ಸ್ವಾರ್ಥಿ ಬ್ರಾಹ್ಮಣರು, ಇವರನ್ನು ಈರ್ಷೆಯಿಂದ ನೋಡುತ್ತಿದ್ದರು. ಗೌರೀಶಂಕರರು ನಿಸ್ವಾರ್ಥ ಸೇವೆ ಮಾಡುತ್ತಿದ್ದರು. ಹಣದ ದುರಾಸೆ ಮಾಡದೆ ಜನರನ್ನು ದಾರಿ ತಪ್ಪಿಸದೆ, ಪ್ರಾಮಾಣಿಕರಾಗಿದ್ದರು. ಈ ಕಾರಣದಿಂದ ಅವರು ಪ್ರಶಂಸೆಗೆ ಪಾತ್ರರಾಗಿದ್ದರು. ಆ ಕಡೆ ಮುಸಲ್ಮಾನರಿಗೆ ತಿಳಿಯಿತು ಇವರ ಜೋತೆ ಹಿಂದುವಾಗಲಿ, ಬ್ರಾಹ್ಮಣರಾಗಲಿ ಇಲ್ಲ ಆದ್ದರಿಂದ ಬಲಪೂರ್ವಕವಾಗಿ ಅವರನ್ನು ಮತಾಂತರಿಸಿದರು. ಮುಸಲ್ಮಾನರು ತಮ್ಮ ನೀರನ್ನು ಅವರ ಮನೆಯ ಮೇಲೆ, ಬಟ್ಟೆಗಳ ಮೇಲೆ ಮುಖದಲ್ಲಿ ಚುಮುಕಿಸಿದರು. ಇದನ್ನು ನೋಡಿದ ಹಿಂದೂ ಬ್ರಾಹ್ಮಣರು ಹೇಳಿದರು ಇವರು ಮುಸಲ್ಮಾನರಾದರು. ಇಂದಿನಿಂದ ನಾವು ಅವರೊಂದಿಗೆ ಯಾವುದೇ ಸಂಬಂಧ ಇರಿಸಿಕೊಳ್ಳುವುದಿಲ್ಲ.

## "ನೀರೂ-ನೀಮಾರಿಗೆ 'ನೇಕಾರ' ಎಂಬ ಹೆಸರು ಬಂದದ್ದು ಹಾಗೂ ಪರಮೇಶ್ವರನ ಪ್ರಾಪ್ತಿ"

ಗೌರಿಶಂಕರ ಹಾಗೂ ಸರಸ್ವತಿ ಬಹಳ ಕಷ್ಟಕ್ಕೆ ಸಿಲುಕಿದರು. ಮುಸಲ್ಮಾನ್ ಪುರುಷನ ಹೆಸರು 'ನೀರೂ' ಎಂದು, ಸ್ತ್ರೀ ಹೆಸರು 'ನೀಮಾ' ಎಂದು ಇಟ್ಟರು. ಮೊದಲ (ಬ್ರಾಹ್ಮಣರಾಗಿದ್ದಾಗ) ಪೂಜೆ, ಪುರಾಣ ಪಠಣ, ಇವುಗಳಿಂದ ಹಣ ಬರುತ್ತಿತ್ತು. ರೊಟ್ಟಿ-ಬಟ್ಟೆ ಖರ್ಚು ಕಳೆದು ಉಳಿದ

ಹಣವನ್ನು ಸದುಪಯೋಗ ಮಾಡುತ್ತಿದ್ದರು. ಈಗ ಪೂಜೆ ಬಂದಾಯಿತು. ಹಣವೂ ಇಲ್ಲವಾಯಿತು. ಈಗೇನು ಕೆಲಸ ಮಾಡುವುದು ಎಂದು ಯೋಚಿಸಿ, ಒಂದು ಬಟ್ಟೆ ನೇಯುವ ಕೈ ಮಗ್ಗವನ್ನು ತಂದು, ಬಟ್ಟೆ ನೇಯುವ ಕಾಯಕ ಮಾಡತೊಡಗಿದರು. ಇದರಿಂದ ಬಂದ ಹಣದಲ್ಲಿ ಖರ್ಚು ನಿಭಾಯಿಸಿ, ಉಳಿದ ಹಣವನ್ನು ಭಂಡಾರದಲ್ಲಿ ಉಪಯೋಗಿಸುತ್ತಿದ್ದರು. ಹಿಂದೂ ಬ್ರಾಹ್ಮಣರು ಇವರನ್ನು ಗಂಗಾ ನದಿಯಲ್ಲಿ ಸ್ನಾನ ಮಾಡಬಾರದೆಂದು ಅಡ್ಡಿಪಡಿಸಿದರು. ಈಗ ಮುಸಲ್ಮಾನರಾಗಿದ್ದೀರಿ ಎಂದು.

ಗಂಗಾ ನದಿಯ ನೀರು ಹರಿಯುವ ರಭಸದಲ್ಲಿ ಉಕ್ಕಿ ಕಾಶಿಯಲ್ಲಿನ 'ಲಹರ್ ತಾರಾ' ಎಂಬ ದೊಡ್ಡ ಕೆರೆಯನ್ನು ತುಂಬಿಸುತ್ತಿತ್ತು. ಅದರಲ್ಲಿ ಬಹಳ ನಿರ್ಮಲವಾದ ನೀರು ತುಂಬಿರುತ್ತಿತ್ತು. ಅದರಲ್ಲಿ ಕಮಲದ ಹೂಗಳು ಅರಳಿರುತ್ತಿತ್ತು. ಸನ್ 1398 (ವಿಕ್ರಮ ಸಂವತ್ಸರ 1455)ರ ಜೇಷ್ಠ ಮಾಸದ ಪೂರ್ಣಮಿಯ ದಿನ ಬ್ರಹ್ಮ ಮುಹೂರ್ತದಲ್ಲಿ (ಸೂರ್ಯೋದಯಕ್ಕೆ ಸುಮಾರು ಒಂದೂವರೆ ಗಂಟೆ ಮೊದಲು) ತಮ್ಮ ಸತ್ಯಲೋಕ (ಋತ್‌ಧಾಮ) ದಿಂದ ಸಶರೀರವಾಗಿ ಬಂದು, ಪರಮೇಶ್ವರ ಕಬೀರರು (ಕವಿರ್ದೇವ) ಬಾಲಕನ ರೂಪದಲ್ಲಿ, ಲಹರ್ ತಾರಾ ಕೆರೆಯಲ್ಲಿ ಕಮಲದ ಹೂವಿನ ಮೇಲೆ ವಿರಾಜಮಾನರಾದರು. ಅದೇ ಲಹರ ತಾರಾದಲ್ಲಿ ಸ್ನಾನ ಮಾಡಲು ನೀರೂ–ನೀಮಾ ಬೆಳಗಿನ ಬ್ರಹ್ಮ ಮುಹೂರ್ತದಲ್ಲಿ ಪ್ರತಿದಿನ ಹೋಗುತ್ತಿದ್ದರು. ಒಂದು ಪ್ರಕಾಶಮಾನವಾದ ಗೋಲಾಕಾರವು ಅತ್ಯಂತ ಹೊಳಪಿನಿಂದ, ತೇಜಸ್ಸಿನಿಂದ ಕೂಡಿದ್ದು, ಅದು ಆಕಾಶದಿಂದ ಕೆಳಗೆ ಬಂದು ಒಂದು ಕಮಲದ ಹೂವಿನ ಮೇಲೆ ನಿಂತಿತು. ಆ ಜಗಮಗಿಸುವ ಪ್ರಕಾಶದಿಂದ ಲಹರ ತಾರಾದಲ್ಲಿ ಅತ್ಯಂತ ಹೊಳಪು ಹಾಗೂ ತೇಜೋಮಯವಾದ ಪ್ರಕಾಶ ತುಂಬಿತು.

ನಂತರ ಆ ಗೋಲಾಕೃತಿ ಒಂದು ಮೂಲೆಗೆ ಹೋಗಿ ಅದೃಶ್ಯ (ಮಾಯ) ವಾಯಿತು. ಈ ದೃಶ್ಯವನ್ನು ಸ್ವಾಮಿ ರಾಮಾನಂದರ ಶಿಷ್ಯರಲ್ಲಿ ಒಬ್ಬನಾದ ಋಷಿ ಅಷ್ಟಾನಂದರು ತಮ್ಮ ಕಣ್ಣುಗಳಿಂದ ನೋಡುತ್ತಲೇ ಇದ್ದರು. ಅಷ್ಟಾನಂದ ರವರು ಸಹ ಅದೇ ಲಹರತಾರಾಕ್ಕೆ (ಕೆರೆ) ಪ್ರತಿದಿನ ಸ್ನಾನ ಮಾಡಲು ಒಂದು ಏಕಾಂತ ಸ್ಥಳದಲ್ಲಿ ಬರುತ್ತಿದ್ದರು. ಅಲ್ಲಿ ಕುಳಿತು ಗುರುಗಳು ಉಪದೇಶ ಕೊಟ್ಟ ನಾಮಜಪ ಮಾಡುತ್ತಾ. ಪ್ರಕೃತಿಯ ಸೌಂದರ್ಯವನ್ನು ನೋಡುತ್ತಾ ಆನಂದಿಸುತ್ತಿದ್ದರು. ಸ್ವಾಮಿ ಅಷ್ಟಾನಂದರು ಅಷ್ಟೊಂದು ಪ್ರಕಾಶಮಾನವಾದ ಬೆಳಕನ್ನು ನೋಡಿ (ಕಣ್ಣು ಕೋರೈಸುವಂತಹ) "ಇದು ನನ್ನ ಭಕ್ತಿಯ ಫಲವೋ? ಇಲ್ಲ ನಾನೇ ಮೋಸ (ತಪ್ಪಾಗಿ ತಿಳಿದು) ಹೋಗಿರುವೆನೋ?" ಎಂದು ಯೋಚಿಸಿ, ಈ ಬಗ್ಗೆ ತಿಳಿಯಲು ತನ್ನ ಗುರುಗಳ ಹತ್ತಿರ ಹೋದರು. ಸ್ವಾಮಿ ರಾಮಾನಂದ ರವರೊಂದಿಗೆ ಅಷ್ಟಾನಂದರು ಕೇಳಿದರು– "ಗುರುದೇವಾ! ನಾನು ಈ ದಿನ ಎಂತಹ ಪ್ರಕಾಶಮಾನವಾದ ಬೆಳಕನ್ನು ನೋಡಿದೆ ಎಂದರೆ, ನನ್ನ ಜೀವಮಾನದಲ್ಲಿ ಎಂದೂ ನಾನು ಅಂತಹ ಪ್ರಕಾಶವನ್ನು ಕಂಡಿರಲಿಲ್ಲ. ನಂತರದ ಎಲ್ಲಾ ವೃತ್ತಾಂತವನ್ನು ತಿಳಿಸಿದರು.

ಆಕಾಶದಿಂದ ಒಂದು ಪ್ರಕಾಶದ ಸಮೂಹವು ಬರುತ್ತಿತ್ತು. ಆ ಬೆಳಕನ್ನು ನನ್ನ ಕಣ್ಣುಗಳಿಂದ ನೋಡಲು ಸಾಧ್ಯವಾಗದಾಯಿತು. ಆದ್ದರಿಂದ ಕಣ್ಣುಗಳನ್ನು ಮುಚ್ಚಿದೆ. ಮುಚ್ಚಿದ ಕಣ್ಣುಗಳಿಗೆ ಒಂದು ಶಿಶುವಿನ ರೂಪ ಗೋಚರಿಸಿತು. (ಹೇಗೆ ಸೂರ್ಯನನ್ನು ನೋಡಿದ ನಂತರ ಕಣ್ಣಿಗೆ ಒಂದು ಗೋಲಾಕಾರದ ಚಿತ್ರ ಕಾಣುತ್ತದೆಯೋ ಹಾಗೆ ಬಾಲಕನು ಕಾಣಿಸಿಕೊಂಡ) ಇದು ನನ್ನ ಭಕ್ತಿಗೆ ದೊರೆತ ಫಲವೋ? ಅಥವಾ ನನ್ನ ದೃಷ್ಟಿದೋಷವೋ? ರಾಮಾನಂದರು ಹೇಳಿದರು. "ಪುತ್ರನೆ ಇಂತಹ ಉತ್ತಮ ಲಕ್ಷಣ ಆ ಸಮಯದಲ್ಲಿ ಆಗುತ್ತವೆ ಯಾವಾಗ ಮೇಲಿನ ಲೋಕದಿಂದ ಯಾರಾದಾರು ಅವತಾರಗಣ ಬಂದಿರಬೇಕು. ಅವರು ಯಾರಲ್ಲಿಯೋ ಪ್ರಕಟವಾಗುತ್ತಾರೆ. ಯಾರೋ ತಾಯಿ ಅವನಿಗೆ ಜನ್ಮ ನೀಡುತ್ತಾಳೆ. ನಂತರ ಅವರು ಲೀಲೆ ತೋರಿಸುವರು. (ಏಕೆಂದರೆ ಈ

ಋಷಿಗಳಿಗೆ ಜ್ಞಾನವಿಷ್ಟೆ. ಅವತಾರ ಪುರುಷರು ತಾಯಿಯಿಂದಲೇ ಜನ್ಮ ಪಡೆಯುತ್ತಾರೆ. ಆ ಋಷಿಗೆ ಇದ್ದ ಜ್ಞಾನಕ್ಕೆ ಅನುಗುಣವಾಗಿ ಶಿಷ್ಯನಿಗೆ ಬಂದ ಅನುಮಾನದ ಸಮಾಧಾನ ಮಾಡಿದ್ದರು.)

ಪ್ರತಿದಿನದಂತೆ ನೀರೂ–ನೀಮಾ ಅಲ್ಲಿ ಸ್ನಾನ ಮಾಡಲು ಹೋಗುತ್ತಿದರು. ಆವಾಗ ನೀಮಾ ಪ್ರಭುವಿನಲ್ಲಿ ಪ್ರಾರ್ಥಿಸಿದಳು ಹೇ ಭಗವಂತ, ಶಿವನೇ! (ಏಕೆಂದರೆ ಅವರು ಬ್ರಾಹ್ಮಣರಾಗಿದ್ದರು, ಜನರ ನೋಟಕ್ಕೆ ಮುಸಲ್ಮಾನರು. ಶಿವನಲ್ಲಿ ಅವರು ಭಕ್ತಿಯುಳ್ಳವರಾಗಿದ್ದರು) "ನಿನ್ನ ಮನೆಯಲ್ಲಿ ನಮಗಾಗಿ ಒಂದು ಮಗು ಇಲ್ಲವೆ? ನೀನು ನಮಗೊಂದು ಶಿಶುವನ್ನು ಕರುಣಿಸಿದ್ದರೆ ನಮ್ಮ ಜೀವನ ಸಾರ್ಥಕವಾಗುತ್ತಿತ್ತು". ಹೀಗೆ ಪ್ರಾರ್ಥಿಸಿ ಬಿದ್ದು–ಬಿದ್ದು ಅಳತೊಡಗಿದಳು. ಆಗ ನೀರು ಹೆಂಡತಿಯನ್ನು ಸಮಾಧಾನ ಪಡಿಸಿದ– "ನೀಮಾ ಪ್ರಭುವಿನ ಇಚ್ಛೆ ಹೇಗಿದೆಯೋ ಅದರಿಂದಲೇ ನಾವು ಸಂತೋಷವಾಗಿರಬೇಕು. ಹೀಗೆ ಅತ್ತು–ಅತ್ತು ಕೊರಗಿದರೆ, ನಿನ್ನ ಕಣ್ಣುಗಳು ಕಾಣದಾಗುವವು, ಶರೀರವು ದುರ್ಬಲವಾಗುವುದು. ನಮ್ಮ ಭಾಗ್ಯದಲ್ಲಿ ಸಂತಾನವಿಲ್ಲ" ಎಂದು ಹೇಳುತ್ತಲೇ ಲಹರ ತಾರಾ ಕೆರೆಯನ್ನು ತಲುಪಿದರು. ಮಬ್ಬುಗತ್ತಲು ಇತ್ತು. ನೀಮಾ ಸ್ನಾನ ಮಾಡಿ ಕೆರೆಯಿಂದ ಈಚೆ ಬಂದಳು. ತನ್ನ ಬಟ್ಟೆಗಳನ್ನು ಬದಲಿಸಿದಳು. ನೀರೂ ಸ್ನಾನ ಮಾಡಲು ಕೆರೆಯಲ್ಲಿ ಇಳಿದು ಮುಳುಗು ಹಾಕುತ್ತಾ–ಹಾಕುತ್ತಾ ಸ್ನಾನ ಮಾಡುತ್ತಲಿದ್ದ. ನೀಮಾ ಸ್ನಾನ ಮಾಡಲು ಉಟ್ಟಿದ್ದ ಬಟ್ಟೆಯನ್ನು ಶುಚಿಗೊಳಿಸಲು ಪುನಃ ಕೆರೆಯತ್ತ ಹೋದಳು. ಆಗಾಗಲೇ ಬೆಳಕು ಹರಿದಿತ್ತು. ಎದುರಿನ ಕಮಲದ ಹೂವಿನ ಮೇಲೆ ಏನೋ ಒಂದು ವಸ್ತು ಅಲುಗಾಡುತ್ತಿರುವಂತೆ ಕಂಡಿತು. ಕಬೀರ್ ಪರಮೇಶ್ವರರು ಮಗುವಿನ ರೂಪದಲ್ಲಿ ಒಂದು ಕಾಲಿನ ಬೆರಳನ್ನು ಮುಖದಲ್ಲಿ ಇರಿಸಿ, ಇನ್ನೊಂದು ಕಾಲನ್ನು ಅಲುಗಾಡಿಸುತ್ತಿದ್ದರು. ನೀಮಾ ಮೊದಲು ಯೋಚಿಸಿದಳು "ಸರ್ಪವೇನಾದರೂ ಇದೆಯೋ? ಅದು ತನ್ನ ಪತಿಯತ್ತ ಬರುತ್ತಿದ್ದೆಯೋ?" ಎಂದು ಪುನಃ ಧ್ಯಾನವಿಟ್ಟು ನೋಡಿದಳು.

ಅಲ್ಲಿದ್ದದ್ದು ಒಂದು ಶಿಶುವಾಗಿತ್ತು. 'ಮಗು' ಅದೂ ಕಮಲದ ಹೂವಿನ ಮೇಲೆ ತಕ್ಷಣ ಪತಿಯನ್ನು ಕೂಗಿದಳು. "ನೋಡಿರಿ. ಮಗು–ಕೆರೆಯಲ್ಲಿ ಮುಳುಗಬಹುದು." ನೀರೂ ಹೇಳಿದ, "ನೀನು ಮಗುವಿನ ಚಿಂತೆಯಲ್ಲಿ ಹುಚ್ಚಿಯಾಗಿರುವೆ. ನೀರಿನಲ್ಲೂ ನಿನಗೆ ಮಗು ಕಾಣಿಸುತ್ತಿದೆಯೋ? "ಅಲ್ಲಿ ಎದುರಿನ ಕಮಲದ ಹೂವಿನ ಮೇಲೆ ಎಂದು ಸಂಕೇತ ಮಾಡಿ ಜೋರಾಗಿ ಹೇಳಿದಳು". ನೀಮಾಳ ಗಟ್ಟಿಯಾದ ಧ್ವನಿ ಕೇಳಿ ನೀರೂ ಅತ್ತ ನೋಡಿದ. ಒಂದು ಕಮಲದ ಹೂವಿನ ಮೇಲೆ ನವಜಾತ ಶಿಶು (ಆಗತಾನೆ! ಹುಟ್ಟಿದ ಮಗು) ಮಲಗಿದೆ. ನೀರು ಆ ಮಗುವನ್ನು ಹೂವಿನ ಸಹಿತ ಎತ್ತಿ ತಂದು ನೀಮಾಗೆ ಕೊಟ್ಟನು. ತಾನು ಸ್ನಾನ ಮಾಡತೊಡಗಿದ. ನೀರೂ ಸ್ನಾನ ಮಾಡಿಕೊಂಡು ಬಂದು ನೋಡುತ್ತಾನೆ. ನೀಮಾ ಮಗುವನ್ನು ಮುದ್ದಾಡುತ್ತಿದ್ದಾಳೆ. ಹಾಗೂ ಶಿವನ ದಯೆ ಎಂದೂ ಕೊಂಡಾಡುತ್ತಿದ್ದಾಳೆ. ಹೇ ಪ್ರಭು ನೀನು ನನ್ನ ಬಹಳ ವರ್ಷಗಳ ಮನೋಕಾಮನೆಯನ್ನು ಪೂರ್ಣ ಗೊಳಿಸಿದೆ. ಹೇ ಶಿವ! ಈ ದಿನ ಹೃದಯದಿಂದ ಕರೆ ಕೊಟ್ಟಿದ್ದೆ. ಈ ದಿನವೇ ನೀನು ಕೇಳಿದೆ.

ಆ ಕಬೀರ್ ಪರಮೇಶ್ವರರ ಹೆಸರನ್ನು ಹೇಳುತ್ತಿರುವಾಗ ನಮ್ಮ ಹೃದಯದಲ್ಲಿ ಒಂದು ವಿಶೇಷವಾದ ಆನಂದಾನುಭೂತಿಯಾಗುತ್ತದೆ. ಅವರ ಪ್ರೇಮದಲ್ಲಿ ಮೈ ರೋಮಾಂಚನವಾಗುತ್ತದೆ. ಆತ್ಮಾನಂದವಾಗುತ್ತದೆ. ಯಾವ ತಾಯಿ–ತಂಗಿಯು ಮಗುವನ್ನು ಹೃದಯದಲ್ಲಿ ಅಪ್ಪಿ ಮುದ್ದಾಡಿ ಮಗನಂತೆ ಪ್ರೀತಿಸಿದ ಯಾವ ಆನಂದ ಅನುಭವ ಆ ತಾಯಿಗೆ (ನೀಮಾಳಿಗೆ) ಆಗಿರಬಹುದು. ಅದು ಅವರ್ಣನೀಯ ಹೇಗೆ ಬೆಲ್ಲವನ್ನು ತಿಂದ ವ್ಯಕ್ತಿ, ಅದರ ಸವಿಯನ್ನು ಆನಂದಿಸಬಲ್ಲ. ಹೇಳಲಾರ ಅಂತಾಗಿದೆ. ಆ ತಾಯಿಯ ಸ್ಥಿತಿ. ಒಮ್ಮೆ ಹೃದಯಕ್ಕೆ ಅಪ್ಪುತ್ತಾಳೆ. ಒಮ್ಮೆ ಕೆನ್ನೆಗೆ ಮುತ್ತಿಡುತ್ತಾಳೆ. ಒಮ್ಮೆ ಶಿಶುವಿನ ಮುಖವನ್ನು ನೋಡುತ್ತಾ ಸಂತಸ ಪಡುತ್ತಿದ್ದಾಳೆ. ನೀರೂ ಲೋಕದ ವ್ಯವಹಾರಕ್ಕೆ ಅನುಗುಣವಾಗಿ ಯೋಚಿಸಿದ. "ನಾವು ಈಗ ಬ್ರಾಹ್ಮಣರಿಂದ ದೂರವಾಗಿದ್ದೇವೆ. ಬಲತ್ಕಾರವಾಗಿ

ಮುಸಲ್ಮಾನರಾಗಿದ್ದೇವೆ. ಈ ಮಗುವನ್ನು ಎತ್ತಿಕೊಂಡು ಹೋದರೆ ಜನ ಕೇಳದೆ ಇರುತ್ತಾರಾ? ಇದು ಯಾರ ಮಗು? ಎಲ್ಲಿಂದ ಎತ್ತಿಕೊಂಡು ಬಂದಿರಿ? ಇದರ ತಾಯಿ-ತಂದೆ ಯಾರು? ನಾವು ನಿಜವನ್ನೇ ಹೇಳಿದರೂ ಯಾರೂ ನಮಗೆ ಸಹಕಾರ ನೀಡುವುದಿಲ್ಲ. ಬದಲಾಗಿ ನಮ್ಮನ್ನು ದಂಡಿಸುವರು. ಆದ್ದರಿಂದ ಈ ಮಗುವನ್ನು ಇಲ್ಲೇ ಬಿಟ್ಟು ಹೋಗುವುದು ಒಳ್ಳೆಯದು. "ನೀಮಾ ನಾನು ಈವರೆಗೆ ನೀನು ಹೇಳಿದ ಮಾತಿಗೆ ವಿರುದ್ದ ಹೇಳಿಲ್ಲ. ಆದರೆ ಈ ದಿನ ಹೇಳುತ್ತಿದ್ದೇನೆ. ಈ ಮಗುವನ್ನು ಇಲ್ಲಿಯೇ ಬಿಡು. ಎಂದು ಹೇಳುತ್ತಾ ತನ್ನ ಯೋಚನೆಯನ್ನು ವಿವರಿಸಿದ. ಆದರೆ ನೀಮಾ ನಾನು ಪ್ರಾಣ ಬಿಡುತ್ತೇನೆ. ಆದರೆ ಈ ಮಗುವನ್ನು ಬಿಡಲಾರೆ. ಬೇಕಾದರೆ ದೇಶಾಂತರ ಹೋಗೋಣ. ಮಗುವನ್ನು ಬಿಟ್ಟಿರಲಾರೆ." ನೀಮಾಳ ಮಾತುಗಳನ್ನು ಕೇಳಿ ನೀರೂ ಕೋಪದಿಂದ ಮತ್ತೆ-ಮತ್ತೆ ಹೇಳಿದ. ನೋಡು ನಾನು ಈವರೆಗೆ ನಿನ್ನ ಮೇಲೆ ಕೈ ಮಾಡಿಲ್ಲ. ಈಗ ಹೊಡೆಯುತ್ತೇನೆ" ಎಂದು ಕೈ ಮೇಲೆ ಎತ್ತಿದ. ಅಷ್ಟರಲ್ಲಿ ಶಿಶು ಮಾತನಾಡಿತು. (ಕಬೀರ್ ಪರಮಾತ್ಮರು) "ನನ್ನನ್ನು ಮನಗೆ ಕರೆದುಕೊಂಡು ಹೋಗಿ, ನಿಮಗೆ ಯಾವುದೇ ತೊಂದರೆ ಬರುವುದಿಲ್ಲ", ಶಿಶುರೂಪದ ಪರಮೇಶ್ವರನ ಮಾತುಗಳನ್ನು ಕೇಳಿ ನೀರೂ ಗಾಬರಿಗೊಂಡ ಈ ಬಾಲಕ ಯಾರೋ ದೇವದೂತನೋ, ದೇವರೋ, ಸಿದ್ಧ ಪುರುಷನೋ ಆಗಿದ್ದರೆ. ನಿನ್ನ ಮೇಲೆ ಎನೂ ತೊಂದರೆ ಬರದಿರಲಿ. ಎಂದು ಸುಮ್ಮನೆ ಮನೆಗೆ ನಡೆದು ಬಿಟ್ಟ.

ಮಗುವನ್ನು ಮನೆಗೆ ಕರೆದುಕೊಂಡು ಹೋದ ಮೇಲೆ ಎಲ್ಲರೂ ಎಲ್ಲಿಂದ ಈ ಮಗು ಬಂದಿತು ಎಂದು ಕೇಳವುದನ್ನೇ ಮರೆತರು. ಕಾಶಿಯ ಹೆಂಗಸರು-ಗಂಡಸರು. ಮಗುವನ್ನು ನೋಡಲು ಬಂದರು. "ಇದು ಯಾವುದೋ ದೇವರಂತೆ ಕಾಣುತ್ತಿದೆ. ಇಂತಹ ಸುಂದರ ಶರೀರ ಇಷ್ಟು ತೇಜೋಮಯವಾದ ಮಗುವನ್ನು ಈ ಮೊದಲು ನಾವು ನೋಡಿಯೇ ಇಲ್ಲ" ಕೆಲವರು ಹೇಳಿದರು- ಬ್ರಹ್ಮಾ-ವಿಷ್ಣು-ಮಹೇಶ್ವರರಲ್ಲಿ ಯಾರೋ ಇರಬೇಕು. ಮತ್ತೆ ಕೆಲವರು ಹೇಳಿದರು. ಮೇಲಿನ ಲೋಕದಿಂದ ಬಂದಿರುವ ಯಾವುದೋ ಶಕ್ತಿ ಇದಾಗಿದೆ" ಹೀಗೆ ಎಲ್ಲರೂ ತಮ್ಮ ತಮ್ಮ ಅನಿಸಿಕೆಗಳನ್ನು ಹೇಳುತ್ತಲ್ಲಿದ್ದರು.

ಗರೀಬ್, ಚೌರಾಸಿ ಬಂಧನ ಕಾಟನ್, ಕೀನೀ ಕಲಪ ಕಬೀರ ।
ಭವನ ಚತುರದಶ ಲೋಕ ಸಬ್, ಟೂಟ್ಯೆ ಜಮ ಜಂಜೀರ ॥ 376 ॥

ಗರೀಬ್, ಅನಂತ ಕೋಟಿ ಬ್ರಹ್ಮಾಂಡ ಮೆ, ಬಂದೀ ಛೋಡ್ ಕಹಾಯ್ ।
ಸೋ ತೌ ಏಕ ಕಬೀರ್ ಹೈ, ಜನನಿ ಜನ್ಯಾ ನ ಮಾಯ್ ॥ 377 ॥

ಗರೀಬ್, ಶಬ್ದ ಸ್ವರೂಪ ಸಾಹಿಬ್ ಧನೀ, ಶಬ್ದ ಸಿಂಧ ಸಬ್ ಮಾಹೀ ।
ಬಾಹರ-ಭೀತರ್ ರಮೀ ರಮ್ಹಾ, ಜಹಾ-ತಹಾ ಸಬ್ ಠಾಹೀ ॥ 378 ॥

ಗರೀಬ್, ಜಲ-ಥಲ-ಪೃಥ್ವೀ ಗಗನ್ ಮೆ, ಬಾಹರ್ ಭೀತರ್ ಏಕ್ ।
ಪೂರಣ ಬ್ರಹ್ಮ ಕಬೀರ್ ಹೈ, ಅವಿಗತ ಪುರುಷ ಅಲೇಖ್ ॥ 379 ॥

ಗರೀಬ್, ಸೇವಕ ಹೋಯ ಕರಿ ಊತರೆ, ಇಸ್ ಪೃಥ್ವೀ ಕೆ ಮಾಂಹೀ ।
ಜೀವ ಉಧಾರನ್ ಜಗತ್ ಗುರು, ಬಾರ್-ಬಾರ್ ಬಲಿ ಜಾಹಿ ॥ 380 ॥

ಗರೀಬ್, ಕಾಶೀಪುರಿ ಕಸ್ತ ಕಿಯಾ, ಉತರೆ ಸಥರ ಸಥಾರ್ ।
ಮೋಮನ್ ಕೂ ಮುಜರಾ ಹುವಾ, ಜಂಗಲ್ ಮೆ ದೀದಾರ್ ॥ 381 ॥

ಗರೀಬ್, ಕೋಟಿ ಕಿರಣ್ ಶಶಿ ಭಾನ ಸುಧಿ, ಆಸನ ಅಧರ ಬಿಮಾನ್ ।
ಪರಸತ್ ಪೂರಣ ಬ್ರಹ್ಮ ಕೂ, ಶೀತಲ್ ಪಿಂಡರೂ ಪ್ರಾಣ ॥ 382 ॥

ಗರೀಬ್, ಗೋದ್ ಲಿಯಾ ಮುಖ ಚೂಂಬಿ ಕರಿ, ಹೇಮರೂಪ ಝಲಕಂತ ।
ಜಗರ್–ಮಗರ್ ಕಾಯಾ ಕರ್ೈ, ದಮಕೈ ಪದಮ ಅನಂತ ॥ 383 ॥

ಗರೀಬ್, ಕಾಶಿ ಉಮಟಿ ಗುಲ್ ಭಯಾ, ಮೊಮನ ಕಾ ಘರ್ ಘೇರ ।
ಕೋಈ ಕಹೇ ಬ್ರಹ್ಮಾ ವಿಷ್ಣು ಹೈ, ಕೋಯಿ ಕಹೇ ಇಂದ್ರ ಕುಬೇರ್ ॥ 384 ॥

ಗರೀಬ್, ಕೋಈ ಕಹೈ ಛಲ್ ಈಶ್ವರ್ ನಹೀ, ಕೋಯಿ ಕಿಂನರ್ ಕಹಲಾಯ್ ।
ಕೋಈ ಕಹೈ ಗಣ ಈಶಕಾ, ಜ್ಯೂಂ ಜ್ಯೂಂ ಮಾತ ರಿಸಾಯ್ ॥ 388 ॥

ಗರೀಬ್, ಕೋಈ ಕಹೈ ವರುಣ ಧರ್ಮರಾಯ ಹೈ , ಕೋಯಿ ಕೋಯಿ ಕಹತೆ ಈಶ।
ಸೋಲಹ್ ಕಲಾ ಸುಭಾಂನ ಗತಿ, ಕೋಯಿ ಕಹೈ ಜಗದೀಶ್ ॥ 385 ॥

ಗರೀಬ್, ಭಕ್ತಿ–ಮುಕ್ತಿ ಲೇ ಊತರೆ, ಮೇಟನ್ ತೀನೂ ತಾಪ್ ।
ಮೋಮನ್ ಕೆ ಡೇರಾ ಲಿಯಾ, ಕಹೈ ಕಬೀರಾ ಬಾಪ್ ॥ 386 ॥

ಗರೀಬ್, ದೂಧ್ ನ ಪೀವೈ ನ ಅನ್ನ ಭಖೈ, ನಹೀ ಪಲನೆ ಝೂಲಂತ್ ।
ಅಧರ್ ಅಮಾನ್ ದಿಯಾನ್ ಮೆ, ಕಮಲ ಕಲಾ ಫೂಲಂತ್ ॥ 387 ॥

ಗರೀಬ್, ಕಾಶೀ ಮೆ ಅಚರಜ್ ಭಯಾ, ಗಯಿ ಜಗತ್ ಕೀ ನೀಂದ್ ।
ಐಸೆ ದುಲ್ಹೆ ಊತರೆ, ಜ್ಯೂ ಕನ್ಯಾ ವರ ಬೀಂದ್ ॥ 389 ॥

ಗರೀಬ್, ಖಲಕ್ ಮುಲಕ್ ದೇಖನ್ ಗಯಾ, ರಾಜಾ ಪ್ರಜಾ ರೀತ್ ।
ಜಂಬೂ ದೀಪ್ ಜಿಹಾಂನ್ ಮೆ, ಉತರೆ ಶಬ್ದ ಅತೀತ್ ॥ 390 ॥

ಗರೀಬ್, ದುನೀ ಕಹೈ ಯೋಹ ದೇವ ಹೈ, ದೇವ ಕಹತ್ ಹೈ ಈಶ್ ।
ಈಶ್ ಕಹೆ ಪಾರಬ್ರಹ್ಮ ಹೈ, ಪೂರಣ ಬೀಸವೆ ಬೀಸ್ ॥ 391 ॥

**ಪರಮೇಶ್ವರ ಕಬೀರರೇ ಅನಾದಿ ಪರಮ ಗುರುವಾಗಿದ್ದಾರೆ. ಅವರೇ ರೂಪಾಂತರ ಹೊಂದಿ ಸಂತ ಹಾಗೂ ಋಷಿ ವೇಷದಲ್ಲಿ ಸಮಯ–ಸಮಯದಲ್ಲಿ ಸ್ವಯಂ ಪ್ರಕಟವಾಗುತ್ತಾರೆ. (ಸ್ವಯಂಭೂ) ಕಾಲನ ಧೂತರಿಂದ ಕೆಟ್ಟು ಹೋಗಿರುವ ತತ್ವಜ್ಞಾನವನ್ನು ಸರಿಪಡಿಸುತ್ತಾರೆ. ಕಬೀರ್ ಪರಮೇಶ್ವರರೇ ಬ್ರಹ್ಮಾ–ವಿಷ್ಣು–ಶಿವ ಮೊದಲಾದ ದೇವರುಗಳಿಗೆ ಋಷಿ–ಮುನಿಗಳಿಗೆ ಹಾಗೂ ಸಂತರಿಗೆ ಸಮಯ–ಸಮಯದಲ್ಲಿ ಸತ್ಯಲೋಕದಿಂದ ಬಂದು ನಾಮೋಪದೇಶ ಕೊಟ್ಟಿದ್ದಾರೆ. ಗೌರವಾನ್ವಿತ ಗರೀಬ್ ದಾಸರು ತಮ್ಮ ವಾಣಿಯಲ್ಲಿ ಬರೆದಿದ್ದಾರೆ, ಇದನ್ನು ಕಬೀರ್ ಪರಮೇಶ್ವರರು ಸ್ವಯಂ ಹೇಳಿದ್ದಾರೆ :**

ಆದಿ ಅಂತ ಹಮಾರಾ ನಹೀ, ಮಧ್ಯ ಮಿಲಾವಾ ಮೂಲ್ ।
ಬ್ರಹ್ಮಾ–ಜ್ಞಾನ್ ಸುನಾಯಿಯಾ, ಧರ ಪಿಂಡಾ ಅಸ್ಥೂಲ್ ॥

ಶ್ವೇತ ಭೂಮಿಕಾ ಹಮ್ ಗಯೆ, ಜಹಾ ವಿಶ್ವಂಭರನಾಥ್ ।
ಹರಿಯಮ್ ಹೀರಾ ನಾಮ್ ದೆ, ಅಷ್ಠ ಕಮಲ ದಲ ಸ್ವಾಂತಿ ॥

ಹಮ್ ಬೈರಾಗೀ ಬ್ರಹ್ಮ ಪದ, ಸಂನ್ಯಾಸಿ ಮಹಾದೇವ್ ।
ಸೋಹಂ ಮಂತ್ರ ದಿಯಾ ಶಂಕರ ಕೂಂ, ಕರತ ಹಮಾರಿ ಸೇವ್ ॥

ಹಮ್ ಸುಲ್ತಾನೀ ನಾನಕ್ ತಾರೆ, ದಾದೂ ಕೂ ಉಪದೇಶ್ ದಿಯಾ ।
ಜಾತಿ ಜುಲಾಹಾ ಭೇದ ನ ಪಾಯಾ, ಕಾಶೀ ಮಾಹೆ ಕಬೀರ್ ಹುಆ ॥

ಸತ್ ಯುಗ ಮೆ ಸತ್ ಸುಕೃತ ಕಹ್ ಟೇರಾ, ತ್ರೇತಾ ನಾಮ ಮುನೀಂದ್ರ ಮೇರಾ ।
ದ್ವಾಪರ್ ಮೆ ಕರುಣಾಮಯ ಕಹಲಾಯಾ, ಕಲಿಯುಗ್ ಮೆ ನಾಮ ಕಬೀರ್ ಧರಾಯಾ ॥

ಚಾರೋಂ ಯುಗೋಂ ಮೆ ಹಮ್ ಪುಕಾರ್ರೈ, ಕೂಕ್ ಕಹ್ಯೆ ಹಮ್ ಹೇಲ ರೆ ।
ಹೀರೇ ಮಾನಿಕ ಮೋತಿ ಬರಸ್ಸೈ, ಯೆ ಜಗ್ ಚುಗತಾ ಢೇಲ ರೆ ॥

**ಮೇಲಿನ ವಾಣಿಯಿಂದ ಸಿದ್ಧವಾಗಿದೆ. ಕಬೀರ್ ಪರಮೇಶ್ವರರೆ ಅವಿನಾಶಿ ಪರಮಾತ್ಮರಾಗಿದ್ದಾರೆ. ಇವರೇ ಅಜರಾಮರರು. ಇವರೇ ನಾಲ್ಕು ಯುಗಗಳಲ್ಲೂ ತಾವೇ ಅತಿಥಿ ರೂಪದಲ್ಲಿ ಕೆಲವು ಸಮಯದವರೆಗೆ ಬಂದು, ತಮ್ಮ ಸದ್ಭಕ್ತಿಯ ಮಾರ್ಗ ದರ್ಶನ ಮಾಡುತ್ತಾರೆ.**



## ೬. ಪೂರ್ಣ ಸಂತರನ್ನು ಗುರುತಿಸುವುದು ಹೇಗೆ?

### (ಪವಿತ್ರ ಸದ್‌ಗ್ರಂಥಗಳ ಮೂಲಕ ಪೂರ್ಣ ಸಂತರನ್ನು ಗುರುತಿಸುವುದು)

ವೇದಗಳಲ್ಲಿ, ಭಗವದ್ಗೀತೆ ಮೊದಲಾದ ಪವಿತ್ರ ಸದ್‌ಗ್ರಂಥಗಳಲ್ಲಿ ಪೂರ್ಣ ಸಂತರ ಪ್ರಮಾಣಗಳು ಸಿಗುತ್ತವೆ, ಧರ್ಮಕ್ಕೆ ಚ್ಯುತಿ (ಹಾನಿ) ಯಾವಾಗ–ಯಾವಾಗ ಬರುವುದೋ, ಆಗೇಲ್ಲಾ ಅಧರ್ಮದ ವೃದ್ಧಿಯಾಗುತ್ತದೆ. ವರ್ತಮಾನದ ನಕಲಿ ಸಂತರು, ಮಹಂತರು ಹಾಗೂ ಗುರುಗಳು ಭಕ್ತಿಮಾರ್ಗದ ಸ್ವರೂಪವನ್ನೇ ಕೆಡೆಸಿದ್ದಾರೆ/ಕೆಡೆಸುತ್ತಿದ್ದಾರೆ. ಪರಮೇಶ್ವರನು ಸ್ವತಃ ಬಂದು ಅಥವಾ ತನ್ನ ಪರಮಜ್ಞಾನಿ ಸಂತರನ್ನು ಕಳುಹಿಸಿ, ನಿಜವಾದ ಜ್ಞಾನದ ಮೂಲಕ ಧರ್ಮದ ಪುನಃ ಸ್ಥಾಪನೆ ಮಾಡುತ್ತಾನೆ. ಅವರು (ಬಂದಂತಹವರು) ಭಕ್ತಿಮಾರ್ಗವನ್ನು ಶಾಸ್ತ್ರಗಳಿಗೆ ಅನುಗುಣವಾಗಿ ತಿಳಿಸುತ್ತಾರೆ. ಅವರು ಯಾರು ಎಂಬುದನ್ನು ತಿಳಿಯಲು, ಒಂದು ಗುರುತು ಎಂದರೆ, ವರ್ತಮಾನದ ಧರ್ಮಗುರು ಅವರ ವಿರೋಧವಾಗಿ ನಿಂತು ಪ್ರಜೆಗಳನ್ನು ದಾರಿ ತಪ್ಪಿಸಿ/ ರಾಜರನ್ನು ದಾರಿ ತಪ್ಪಿಸಿ, ಅವರ ಮೇಲೆ ಅತ್ಯಾಚಾರ ಮಾಡುತ್ತಾರೆ/ ಮಾಡಿಸುತ್ತಾರೆ ಕಬೀರ್ ಪರಮೇಶ್ವರರು ತಮ್ಮ ವಾಣಿಯಲ್ಲಿ ಹೇಳುತ್ತಾರೆ.

ಜ್ಯೋ ಮಮ್ ಸಂತ ಸತ್ ಉಪದೇಶ್ ದೃಢಾವೈ (ಬತಾವೈ),
ವಾಕೆ ಸಂಗ ಸಭಿ ರಾಡ್ ಬಢಾವೈ ।
ಯಾ ಸಬ್ ಸಂತ ಮಹಂತನ್ ಕೀ ಕರಣೀ, ಧರ್ಮ್‌ದಾಸ್ ಮೈ ತೋಸೆ ವರ್ಣೀ ॥

ಕಬೀರ್ ಪರಮೇಶ್ವರರು ತಮ್ಮ ಪ್ರಿಯ ಶಿಷ್ಯ ಧರ್ಮದಾಸನಿಗೆ ಈ ವಾಣಿಯಲ್ಲಿ ಹೀಗೆ ತಿಳಿಸುತ್ತಿದ್ದಾರೆ ಯಾವ ನನ್ನ ಸಂತರು, ಸದ್ಭಕ್ತಿ ಮಾರ್ಗವನ್ನು ತಿಳಿಸುವರೋ, ಅವರ ಜೊತೆ ಎಲ್ಲ ಸಂತ–ಮಹಂತರು ಜಗಳವಾಡುವರು. ಇದೇ ಅವರ ಗುರುತಾಗುವುದು.

ಎರಡನೆಯ ಗುರುತೆಂದರೆ, ಆ ಸಂತನಿಗೆ ಎಲ್ಲ ಧರ್ಮ ಗ್ರಂಥಗಳ ಪೂರ್ಣ ಜ್ಞಾನವು ತಿಳಿದಿರುತ್ತದೆ ಇದಕ್ಕೆ ಪ್ರಮಾಣ ಸದ್ಗುರು ಗರೀಬದಾಸರ ವಾಣಿಯಲ್ಲಿ

ಸತ್‌ಗುರುಕೇ ಲಕ್ಷಣ ಕಹೂ, ಮಧುರೈ ಬೈನ ವಿನೋದ್,
ಚಾರ್ ವೇದ್, ಷಟ್ ಶಾಸ್ತ್ರ ಕಹೈ ಅಠಾರಾ ಬೋಧ್.

ಸದ್ಗುರು ಗರೀಬದಾಸರು ತಮ್ಮ ವಾಣಿಯಲ್ಲಿ ಪೂರ್ಣ ಸಂತರ ಗುರುತನ್ನು ತಿಳಿಸುತ್ತಿದ್ದಾರೆ, ಅವರು ನಾಲ್ಕು ವೇದಗಳನ್ನು, ಆರು ಶಾಸ್ತ್ರಗಳನ್ನು, ಹದಿನೆಂಟು ಪುರಾಣಗಳನ್ನು ತಿಳಿದಿರುತ್ತಾರೆ. ಅವುಗಳ ಪೂರ್ಣ ಜ್ಞಾನ ಅವರಿಗೆ ಇರುತ್ತದೆ.

ಅವರು ಅವುಗಳ ಸಾರಾಂಶವನ್ನು ತಿಳಿಸುವಂತಹರಾಗಿರುತ್ತಾರೆ. ಯಜುರ್ವೇದದ 19ನೇ ಅಧ್ಯಾಯದ 25–26ನೇಯ ಮಂತ್ರದಲ್ಲಿ ಬರೆದಿದೆ. ಅವರು ವೇದಗಳ ಅರ್ಧ ವಾಕ್ಯಗಳನ್ನು ಅಂದರೆ ಸಾಂಕೇತಿಕ ಶಬ್ದಗಳನ್ನು ಹಾಗೂ ನಾಲ್ಕನೆಯ ಒಂದು ಶ್ಲೋಕಗಳನ್ನು ವಿಸ್ತರಿಸಿ ಹೇಳುವರು. ಹಾಗೂ ಮೂರು ಸಮಯದಲ್ಲಿ ಮಾಡುವ ಪೂಜೆಗಳ ಬಗ್ಗೆ ತಿಳಿಸುವರು. ಬೆಳಿಗ್ಗೆ ಪೂರ್ಣ ಪರಮಾತ್ಮನ ಪೂಜೆ, ಮಧ್ಯಾಹ್ನ ವಿಶ್ವದೇವತೆಗಳ ಸತ್ಕಾರ, ಹಾಗೂ ಸಂಜೆ ಆರತಿ, ಇವುಗಳನ್ನು ಪ್ರತ್ಯೇಕವಾಗಿ ತಿಳಿಸುವವರು ಜಗತ್ತಿಗೆ ಉಪಕಾರ ಮಾಡುವ ಸಂತರಾಗಿರುತ್ತಾರೆ.

ಯಜುರ್ವೇದದ 19ನೇ ಅಧ್ಯಾಯದ 25ನೇ ಮಂತ್ರ.

**ಸಂಧಿಛೇದಃ :–** ಅರ್ಧ್ವ ಋಚೈಃ ಉಕ್ಥಾನಾಮ್ ರೂಪಮ್ ಪದೈಃ ಆಪ್ನೋತಿ ನಿವಿದಃ ।

ಪ್ರಣವೈಃ ಶಾಸ್ತ್ರಾಣಾಮ್ ರೂಪಮ್ ಪಯಸಾ ಸೋಮಃ ಆಪ್ಯತೇ । (25)

**ಅನುವಾದ :-** ಯಾವ ಸಂತ (ಅರ್ಧ ಋಚೈಃ) ವೇದಗಳ ಅರ್ಧ ವಾಕ್ಯಗಳನ್ನು ಅರ್ಥಾತ್ ಸಾಂಕೇತಿಕ ಶಬ್ಧಗಳನ್ನು ಪೂರ್ಣ ಮಾಡಿ (ನಿವಿಧಃ) ವಿಸ್ತರಿಸುವನೋ (ಪದೈಃ) ಶ್ಲೋಕಗಳ ನಾಲ್ಕನೆಯ ಒಂದು ಭಾಗವನ್ನು ಅರ್ಥಾತ್, ಆಂಶಿಕ ವಾಕ್ಯಗಳನ್ನು (ಉಕ್ಥಾನಾಮ್) ಸ್ತೋತ್ರಗಳ (ರೂಪಮ್) ರೂಪದಲ್ಲಿ (ಆಪ್ನೋತಿ) ಪಡೆಯುತ್ತಾನೋ ಅರ್ಥಾತ್ ಆಂಶಿಕ ವಿವರಣೆಯನ್ನು ಪೂರ್ಣ ರೂಪದಲ್ಲಿ ತಿಳಿದು ತಿಳಿಸುತ್ತಾನೋ, ಅಂತಹ ಪೂರ್ಣ ಸಂತರು (ಶಾಸ್ತ್ರಾಣಾಮ್) ಶಾಸ್ತ್ರಗಳನ್ನು ತಿಳಿದಿರುತ್ತಾರೆ. ಅವರಿಗೆ (ರೂಪಮ್) ಇವುಗಳನ್ನು ಪೂರ್ಣ ರೂಪದಲ್ಲಿ ಪ್ರಯೋಗ ಜ್ಞಾನವಿರುತ್ತದೆ. ಇಂತಹ ಪೂರ್ಣ ಸಂತರು (ಪ್ರಣವೈಃ) ಓಂಕಾರಗಳನ್ನು ಅಂದರೆ ಓಂ-ತತ್-ಸತ್ ಮಂತ್ರಗಳನ್ನು ಪೂರ್ಣ ರೂಪದಲ್ಲಿ ತಿಳಿದು-ತಿಳಿಸುತ್ತಾರೆ. (ಪಯಸಾ) ಹಾಲು ನೀರುಗಳನ್ನು ಬೇರ್ಪಡಿಸಿ, ನೀರಿಲ್ಲದ ಹಾಲಿನಂತಹ ತತ್ವಜ್ಞಾನವನ್ನು ಪ್ರಧಾನ ಮಾಡುತ್ತಾನೆ. ಅವರಿಗೆ (ಸೋಮಃ) ಅಮರ ಪುರುಷ ಅರ್ಥಾತ್ ಅವಿನಾಶಿ ಪರಮಾತ್ಮನು ಪ್ರಾಪ್ತವಾಗುತ್ತಾನೆ. ಆ ಪೂರ್ಣ ಸಂತನು, ವೇದಜ್ಞ ಎನಿಸಿಕೊಳ್ಳುತ್ತಾನೆ.

**ಭಾವಾರ್ಥ :- ಯಾರು ವೇದಗಳ ಸಾಂಕೇತಿಕ ಶಬ್ದಗಳನ್ನು, ಪೂರ್ಣ ವಿಸ್ತಾರವಾಗಿ ವರ್ಣಿಸಬಲ್ಲರೋ, ಯಾರಿಂದ ಪೂರ್ಣ ಪರಮಾತ್ಮನ ಪ್ರಾಪ್ತಿಯಾಗುವುದೋ, ಅವನೇ ತತ್ವದರ್ಶಿ ಸಂತ ಹಾಗೂ ವೇದಜ್ಞ ಎನಿಸುವನು.**

**ಯಜುರ್ವೇದದ 19ನೇ ಅಧ್ಯಾಯದ 26ನೇ ಮಂತ್ರ.**

**ಅಶ್ವಿಭ್ಯಾಮ್ ಪ್ರಾತಃ ಸವನಮ್ ಇಂದ್ರೇಣ ಏಂದ್ರಮ್ ಮಾಧ್ಯಂದಿನಮ್ ।**

**ವೈಶ್ವದೈವಮ್, ಸರಸ್ವತ್ಯಾ ತೃತೀಯಮ್ ಆಪ್ತಮ್ ಸವನಮ್ (26)**

**ಅನುವಾದ :-** ಆ, ಪೂರ್ಣ ಸಂತನು ಮೂರು ಸಮಯಗಳ ಸಾಧನೆಯನ್ನು ತಿಳಿಸುತ್ತಾನೆ. (ಅಶ್ವಿಭ್ಯಾಮ್) ಸೂರ್ಯೋದಯ ಅಸ್ತದಿಂದ ಆದ ಒಂದು ದಿನದ ಆಧಾರದಿಂದ (ಇಂದ್ರೇಣ) ದೇವಾದಿ ಶ್ರೇಷ್ಠರಿಂದ ಎಲ್ಲ ದೇವರ ಪ್ರಭು ಪೂರ್ಣ ಪರಮಾತ್ಮನ (ಪ್ರಾತಃ ಸವನಮ್) ಪೂಜೆಯನ್ನು ಪ್ರಾತಃ ಕಾಲದಲ್ಲಿ ಮಾಡಲು ಹೇಳುತ್ತಾನೆ. ಅದು (ಏಂದ್ರಮ್) ಪೂರ್ಣ ಪರಮಾತ್ಮನಿಗೆ ಸಲ್ಲುತ್ತದೆ. ಎರಡನೆಯ (ಮಾಧ್ಯಾಂದಿನಮ್) ಪೂಜೆಯನ್ನು ಮಧ್ಯಾಹ್ನ ಮಾಡಲು ಹೇಳುತ್ತಾನೆ. ಅದು (ವೈಶ್ಯ ದೈವಮ್) ಸಕಲ ದೇವರುಗಳಿಗೆ ಸತ್ಕಾರವಾಗಿರುತ್ತದೆ (ಸರಸ್ವತ್ಯಾ) ಇವುಗಳನ್ನು ಅಮೃತವಾಣಿಯ ಮೂಲಕ ಸಾಧನೆ ಮಾಡಲು ತಿಳಿಸುತ್ತಾನೆ. ಹಾಗೂ (ತೃತೀಯಮ್) ಮೂರನೆಯ (ಸವನಮ್) ಸಂಜೆಯ (ಆಪ್ತಮ್) ಪೂಜೆಯನ್ನು ತಿಳಿಸುತ್ತಾನೆ. ಅಂದರೆ ಸಮಯಕ್ಕನುಗುಣವಾಗಿ ಬೇರೆ-ಬೇರೆ ಕ್ರಮದಿಂದ ಪೂಜೆ ಮಾಡುವುದನ್ನು ತಿಳಿಸುತ್ತಾನೆ. ಅವನೇ ಜಗತ್ತಿಗೆ ಉಪಕಾರ ಮಾಡುವ ಸಂತನಾಗಿರುವನು.

**ಭಾವಾರ್ಥ :- 19ನೇ ಅಧ್ಯಾಯದ 26ನೇ ಮಂತ್ರದಲ್ಲಿ ತಿಳಿಸಿದೆ ಪೂರ್ಣ ಸಂತರು ಈ ವಿಷಯದಲ್ಲಿ (ಪ್ರಾತಃ ಕಾಲ, ಮಧ್ಯಾಹ್ನ, ಸಂಜೆ) ಮೂರು ವೇಳೆಯಲ್ಲಿ ಮಾಡುವ ಸಾಧನೆ ಬಗ್ಗೆ ತಿಳಿದಿರುತ್ತಾರೆ. ಪ್ರಾತಃ ಕಾಲದಲ್ಲಿ ಪೂರ್ಣ ಪರಮಾತ್ಮನ ಪೂಜೆ, ಮಧ್ಯಾಹ್ನ ಎಲ್ಲ ದೇವರುಗಳಿಗೆ ಸತ್ಕಾರ, ಸಂಜೆ ಆರತಿ, ಇವುಗಳ ಬಗ್ಗೆ ಅಮೃತ ವಾಣಿಯ ಮೂಲಕ ಹೇಳಲಾಗಿದೆ. ಪೂರ್ಣ ಸಂತರು ಎಲ್ಲರಿಗೂ ಉಪಕಾರ ಮಾಡುವವರಾಗಿರುತ್ತಾರೆ.**

**ಯಜುರ್ವೇದದ 19ನೆಯ ಅಧ್ಯಾಯದ 30ನೇ ಮಂತ್ರ.**

**ಸಂಧಿಛೇದಃ :-** ವ್ರತೇನ ದೀಕ್ಷಾಮ್ ಆಪ್ನೋತಿ ದೀಕ್ಷಯಾ ಅಪ್ನೋತಿ ದಕ್ಷಿಣಾಮ್ ।

ದಕ್ಷಿಣಾ ಶ್ರದ್ಧಾಮ್ ಆಪ್ನೋತಿ ಶ್ರದ್ಧಯಾ ಸತ್ಯಮ್ ಆಪ್ಯತೆ । (30)

**ಅನುವಾದ :–** (ವ್ರತೇನ) ಧೂಮಪಾನ, ಸಾರಾಯಿ, ಮಾಂಸಗಳನ್ನು ಸೇವನೆ ಮಾಡದ ಸಂಯಮಿಯಾದ ಸಾಧಕನು, (ದೀಕ್ಷಾಮ್) ಪೂರ್ಣ ಸಂತನಿಂದ ದೀಕ್ಷೆ (ಆಪ್ನೋತಿ) ಪಡೆಯುತ್ತಾನೆ. ಅಂದರೆ ಅವನು ಪೂರ್ಣ ಸಂತನ ಶಿಷ್ಯನಾಗುತ್ತಾನೆ. (ದೀಕ್ಷಯಾ) ಪೂರ್ಣ ಸಂತನು ಇಂತಹ ದೀಕ್ಷಿತರಿಂದ (ದಕ್ಷಿಣಾಮ್) ದಾನ–ದಕ್ಷಿಣೆಗಳನ್ನು (ಆಪ್ನೋತಿ) ಸ್ವೀಕರಿಸುತ್ತಾನೆ.

ಅಂತಹ ಶಿಷ್ಯನು ಪೂರ್ಣ ಸಂತರಿಂದ ನಾಮದ ಉಪದೇಶ ಪಡೆದಿರುತ್ತಾನೆ. ಈ ಪ್ರಕಾರ (ದಕ್ಷಿಣಾ) ಗುರುದೇವರು ಹೇಳಿದಂತೆ ದಾನ–ದಕ್ಷಿಣೆ ಮಾಡುತ್ತಾನೆ. (ಶ್ರದ್ಧಾಮ್) ಇದರಿಂದ ಶ್ರದ್ಧೆ ಪ್ರಾಪ್ತಿಯಾಗುತ್ತದೆ. (ಶ್ರದ್ಧಯಾ) ಶ್ರದ್ಧೆಯಿಂದ ಭಕ್ತಿ ಮಾಡುವವನಿಗೆ (ಸತ್ಯಮ್) ಅವಿನಾಶಿ ನಿತ್ಯ–ಸತ್ಯ ಪರಮಾತ್ಮನು ದೊರೆಯುತ್ತಾನೆ.

**ಭಾವಾರ್ಥ :– ಯಾರು ಅಮಲಿನ ಪದಾರ್ಥಗಳನ್ನು ಸ್ವೀಕರಿಸದೆ ಸಂಯಮಿಯಾಗಿರುತ್ತಾನೋ, ಆ ವ್ಯಕ್ತಿಯನ್ನು ಪೂರ್ಣ ಸಂತನು ಶಿಷ್ಯನನ್ನಾಗಿ ಸ್ವೀಕರಿಸುತ್ತಾನೆ. ಮತ್ತು ಯಾರು ಅವನ ಶಿಷ್ಯರಾಗುತ್ತಾರೋ, ಅಂತಹವರಿಂದ ಮಾತ್ರ ಪೂರ್ಣ ಸಂತನು ದಾನ–ದಕ್ಷಿಣೆ ಪಡೆಯುತ್ತಾನೆ. ದಾನ–ದಕ್ಷಿಣೆ ಮಾಡುವುದರಿಂದ, ಶ್ರದ್ಧೆ ಹೆಚ್ಚುತ್ತದೆ. ಶ್ರದ್ಧೆಯಿಂದ ಅವಿನಾಶೀ ಪರಮಾತ್ಮನ ಪ್ರಾಪ್ತಿಯಾಗುತ್ತದೆ. ಪೂರ್ಣ ಮೋಕ್ಷ ಸಿಗುತ್ತದೆ. ಪೂರ್ಣ ಸಂತರು ಭಿಕ್ಷೆ ಹಾಗೂ ಚಂದಾ ವಸೂಲಿ ಮಾಡತ್ತಾ ತಿರುಗುವುದಿಲ್ಲ. (ಅಲೆದಾಡುವುದಿಲ್ಲ)**

ಕಬೀರ್, ಗುರು ಬಿನ ಮಾಲಾ ಫೆರತೆ, ಗುರು ಬಿನ ದೇತೆ ದಾನ ।
ಗುರು ಬಿನ ದೋನೋಂ ನಿಷ್ಫಲ ಹೈ ಪೂಛೋ ವೇದ ಪುರಾಣ್ ॥

**ಮೂರನೆಯ ಗುರುತು, ಮೂರು ಪ್ರಕಾರದ ಮಂತ್ರಗಳನ್ನು (ನಾಮ) ಮೂರು ಬಾರಿ ಉಪದೇಶ ಮಾಡಲಾಗುವುದು. ಇದರ ವರ್ಣನೆಯು ಕಬೀರ್ ಸಾಗರದ 265ನೇ ಪುಟದ ಬೋಧ ಸಾಗರದಲ್ಲಿ ದೊರೆಯುತ್ತದೆ ಹಾಗೂ ಗೀತೆಯ 17ನೇ ಅಧ್ಯಾಯದ 23ನೇ ಶ್ಲೋಕದಲ್ಲಿ ಹಾಗೂ ಸಾಮವೇದ ಸಂಖ್ಯೆ ನಂ. 822ರಲ್ಲಿ ದೊರೆಯುತ್ತದೆ.**

**ಕಬೀರ್ ಸಾಗರದಲ್ಲಿ ಅಮರ ಮೂಲ ಬೋಧ ಸಾಗರ ಪುಟ 265ರಲ್ಲಿ :–**

ತಬ್ ಕಬೀರ್ ಅಸ ಕಹೇವೆ ಲೀನ್ಹಾ, ಜ್ಞಾನ ಭೇದ ಸಕಲ ಕಹ ದೀನ್ಹಾ ॥
ಧರ್ಮ್‌ದಾಸ್ ಮೈ ಕಹೋ ಬಿಚಾರಿ, ಜೆಹಿತೆ ನಿಬಹೈ ಸಬ್ ಸಂಸಾರಿ ॥
ಪ್ರಥಮ ಹೀ ಶಿಷ್ಯ ಹೋಯ್ ಜೋ ಆಯಿ, ತಾ ಕಹೈ ಪಾನ
ದೇಹು ತುಮ್ ಭಾಯಿ ॥ 1 ॥
ಜಬ್ ದೇಖಹು ತುಮ್ ದೃಢತಾ ಜ್ಞಾನಾ, ತಾ ಕಹೈ ಕಹು ಶಬ್ದ ಪ್ರವಾನಾ ॥ 2 ॥
ಶಬ್ಧ ಮಾಂಹಿ ಜಬ್ ನಿಶ್ಚಯ ಆವೈ, ತಾ ಕಹೈ ಜ್ಞಾನ ಅಗಾಧ ಸುನಾವೈ ॥ 3 ॥

**ಎರಡನೆ ಬಾರಿ ಪುನಃ ಹೇಳಿದ್ದಾರೆ :–**

ಬಾಲಕ ಸಮ ಜಾಕರ ಹೈ ಜ್ಞಾನಾ । ತಾಸೋ' ಕಹಹೂ ವಚನ ಪ್ರವಾನಾ ॥ 1 ॥
ಜಾ ಕೋ ಸೂಕ್ಷ್ಮ ಜ್ಞಾನ್ ಹೈ ಭಾಈ । ತಾ ಕೊ ಸ್ಮರನ್ ದೇಹು ಲಖಾಯಿ ॥ 2 ॥
ಜ್ಞಾನ ಗಮ್ಯ ಜಾ ಕೋ ಪುನಿ ಹೋಯಿ । ಸಾರ ಶಬ್ದ ಜಾ ಕೋ ಕಹ್ ಸೋಯಿ ॥ 3 ॥
ಜಾ ಕೊ ಹೋಏ ದಿವ್ಯ ಜ್ಞಾನ ಪರವೇಶಾ । ತಾಕೋ ಕಹೆ ತತ್ವಜ್ಞಾನ ಉಪದೇಶಾ ॥4॥

**ಮೇಲಿನ ವಾಣಿಯಿಂದ ಸ್ಪಷ್ಟವಾಗುವುದೇನೆಂದರೆ ಪೂರ್ಣ ಗುರುವು ಮೂರು ಸ್ಥಿತಿಯಲ್ಲಿ,**

ಸಾರ ಜ್ಞಾನವನ್ನು ಪ್ರಧಾನ ಮಾಡುತ್ತಾನೆ. ಹಾಗೂ ನಾಲ್ಕನೆಯ ಸ್ಥಿತಿಯಲ್ಲಿ, ಶಬ್ದ ಪ್ರಧಾನ ಮಾಡಬೇಕಾಗುತ್ತದೆ. ಏಕೆಂದರೆ ಕಬೀರ್ ಸಾಗರದಲ್ಲಿ, ಪ್ರಮಾಣವನ್ನು ನಂತರ ನೋಡಲಾಗಿತ್ತು. ಆದರೆ ಉಪದೇಶ ವಿಧಿಯನ್ನು ಮೊದಲೇ ಪೂಜ್ಯ ದಾದಾ ಗುರುದೇವ ಹಾಗೂ ಪರಮೇಶ್ವರ ಕಬೀರ್ ಸಾಹೇಬರು, ನಮ್ಮ ಪೂಜ್ಯ ಗುರುದೇವರಿಗೆ ಪ್ರಧಾನ ಮಾಡಿದ್ದರು. ಅವರು ನಮಗೆ ಶುರುವಿನಿಂದಲೂ ಮೂರು ಬಾರಿ ನಾಮೋಪದೇಶದ ದೀಕ್ಷೆ ಮಾಡುತ್ತಾ ಬಂದಿದ್ದಾರೆ.

ನಮ್ಮ ಗುರುದೇವ ರಾಮ್‌ಪಾಲ್ ಮಹಾರಾಜ ರವರು ಮೊದಲು ಶ್ರೀ ಗಣೇಶ, ಶ್ರೀ ಬ್ರಹ್ಮಾ ಸಾವಿತ್ರಿ, ಶ್ರೀ ವಿಷ್ಣು ಲಕ್ಷ್ಮಿ, ಶ್ರೀ ಶಿವ ಪಾರ್ವತಿ ಹಾಗೂ ಮಾತೆ ದುರ್ಗೆಯ (ಚಾಮುಂಡೇಶ್ವರಿ) ನಾಮ ಜಪ ಮಾಡಲು ತಿಳಿಸಿ ಕೊಡುತ್ತಾರೆ. ಅವರುಗಳ ವಾಸ ನಮ್ಮ ಮಾನವ ಶರೀರದೊಳಗಿನ ಕಮಲ (ಚಕ್ರ) ಗಳಲ್ಲಿ ಇರುತ್ತದೆ. ಮೂಲಾಧಾರ ಚಕ್ರದಲ್ಲಿ ಶ್ರೀ ಗಣೇಶ, ಸ್ವಾದ ಚಕ್ರದಲ್ಲಿ ಬ್ರಹ್ಮಾ ಸಾವಿತ್ರಿ, ನಾಭಿ ಚಕ್ರದಲ್ಲಿ ವಿಷ್ಣು ಲಕ್ಷ್ಮಿ, ಹೃದಯ ಚಕ್ರದಲ್ಲಿ ಶ್ರೀ ಶಿವ ಪಾರ್ವತಿ, ಕಂಠ ಚಕ್ರದಲ್ಲಿ ದುರ್ಗಾ (ಚಾಮುಂಡೇಶ್ವರಿ) ಳ ವಾಸವಿರುತ್ತದೆ. ಈ ಎಲ್ಲಾ ದೇವ-ದೇವತೆಯರ ಆದಿ-ಅನಾದಿ ನಾಮ ಮಂತ್ರವಿರುತ್ತದೆ. ಇವುಗಳ ಬಗ್ಗೆ ವರ್ತಮಾನದ ಗುರುಗಳಿಗೆ ಜ್ಞಾನವಿರುವುದಿಲ್ಲ. ಈ ಮಂತ್ರಗಳ ಜಪದಿಂದ ಈ ಐದೂ ಕಮಲ (ಚಕ್ರ) ಗಳು ತೆರೆಯುತ್ತವೆ. ಈ ಚಕ್ರಗಳು ತೆರೆದ ನಂತರ ಮಾನವನು ಭಕ್ತಿ ಮಾಡಲು ಯೋಗ್ಯವಾಗುತ್ತಾನೆ. ಸದ್ಗುರು ಗರೀಬ್ ದಾಸ್ ರವರು ತಮ್ಮ ವಾಣಿಯಲ್ಲಿ ಪ್ರಮಾಣ ಕೊಡುತ್ತಾರೆ:-

ಪಾಂಚ್ ನಾಮ ಗುಝು ಗಾಯತ್ರೀ ತತ್ವ ಜಗಾವೋ ।
ಓಂ ಕಿಲಿಯಂ ಹರಿಯಮ್ ಶ್ರೀಯಮ್ ಸೋಹ ಧ್ಯಾಓ ॥

ಭಾವಾರ್ಥ :- 5 ನಾಮಗಳು ಬ್ರಹ್ಮ ಗಾಯತ್ರಿಯದ್ದಾಗಿವೆ. ಇವುಗಳ ಜಪ ಮಾಡುತ್ತಾ ಆತ್ಮವನ್ನು ಜಾಗೃತಗೊಳಿಸಿ, ಎರಡನೆ ಬಾರಿ 2 ಅಕ್ಷರಗಳ ಜಪವನ್ನು ಹೇಳುತ್ತಾರೆ. ಒಂದು 'ಓಂ' ಎರಡನೆಯದು 'ತತ್' (ಇದನ್ನು ರಹಸ್ಯ / ಗುಪ್ತವಾಗಿದೆ ಉಪದೇಶಿಗೆ ಹೇಳುತ್ತಾರೆ) ಅದನ್ನು ಉಸಿರಿನ ಜೊತೆಗೆ ಜಪ ಮಾಡಬೇಕು. ಮೂರನೆಯ ಬಾರಿ ಸಾರ ನಾಮವನ್ನು ಹೇಳಿ ಕೊಡುತ್ತಾರೆ. ಅದು ಸಂಪೂರ್ಣವಾಗಿ ರಹಸ್ಯವಾದದ್ದು.

## ಮೂರು ಬಾರಿ ನಾಮೋಪದೇಶ ಕೊಡುವ ಬಗ್ಗೆ ಪ್ರಮಾಣ

ಭಗವದ್ಗೀತೆಯ 17ನೇ ಅಧ್ಯಾಯದ 23ನೇ ಶ್ಲೋಕ.

ಓಂ, ತತ್, ಸತ್, ಇತಿ, ನಿರ್ದೇಶಃ, ಬ್ರಹ್ಮಣಃ, ತ್ರೀವಿಧಃ, ಸ್ಮೃತಃ,
ಬ್ರಾಹ್ಮಣಾಃ, ತೇನ, ವೇದಾಃ, ಚ, ಯಜ್ಞಾಃ, ಚ, ವಿಹಿತಾಃ, ಪುರಾ ॥ 23 ॥

ಅನುವಾದ :- (ಓಂ) ಬ್ರಹ್ಮನ (ತತ್) ಪರಬ್ರಹ್ಮನ ಸಾಂಕೇತಿಕ ಮಂತ್ರ (ಸತ್) ಪೂರ್ಣ ಬ್ರಹ್ಮನ (ಇತಿ) ಹೀಗೆ ಇದು (ತ್ರಿವಿಧಃ) ಮೂರು ಪ್ರಕಾರದ, (ಬ್ರಹ್ಮಣಃ) ಪೂರ್ಣ ಪರಮಾತ್ಮನ ನಾಮ ಸ್ಮರಣೆಯನ್ನು (ನಿರ್ದೇಶಃ) ಸಂಕೇತಿಸಿ (ಸ್ಮೃತಃ) ಹೇಳಲಾಗಿದೆ. (ಚ) ಮತ್ತು (ಪುರಾ) ಸೃಷ್ಠಿಯ ಆದಿಕಾಲದಲ್ಲಿ (ಬ್ರಾಹ್ಮಣಃ) ವಿದ್ವಾನರು ತಿಳಿಸಿದ್ದಾರೆ. (ತೇನ) ಆ ಪೂರ್ಣ ಪರಮಾತ್ಮನು (ವೇದಾಃ) ವೇದಗಳು (ಚ) ಹಾಗೂ (ಯಜ್ಞಾಃ) ಯಜ್ಞಾದಿಗಳನ್ನು (ವಿಹಿತಾಃ) ರಚಿಸಿದರು.

ಸಂಖ್ಯಾ ನಂ. 822 ಸಾಮವೇದದ ಉತಾರ್ಚಿತ ಅಧ್ಯಾಯ 3, ಖಂಡ ನಂ 5ರ, 8ನೇ ಶ್ಲೋಕ (ಸಂತ ರಾಮ್‌ಪಾಲ್ ದಾಸರು ಭಾಷ್ಯೆ ಬರೆದಿರುತ್ತಾರೆ)

ಮನೀಷಿಭಿಃ ಪವತೆ ಪೂರ್ವ್ಯಃ ಕವಿನೃಭಿರ್ಯತಃ ಪರಿಕೋಶಾಂ ಅಸಿಷ್ಯದತ್ ।
ತ್ರಿ ತಸ್ಯ ನಾಮ ಜನಯನ್ಮಧು ಕ್ಷರನ್ನಿಂದ್ರಸ್ಯ ವಾಯುಂ ಸಖ್ಯಾಯ ವರ್ಧಯನ್ ॥8॥

**ಮನೀಷಿಭಿಃ–ಪವತೆ–ಪೂರ್ವ್ಯಃ–ಕವಿರ–ನೃಭಿಃ–ಯತಃ–ಪರಿ–ಕೋಶಾನ್–ಅಸಿಷ್ಯದತ್–ತ್ರಿತಸ್ಯ–ನಾಮ–ಜನಯನ್–ಮಧು–ಕ್ಷರನಃ–ನ–ಇಂದ್ರಸ್ಯ–ವಾಯುಮ್–ಸಖ್ಯಾಯ–ವರ್ಧಯನ್।**

ಶಬ್ದಾರ್ಥ :– (ಪೂರ್ವ್ಯಃ) ಸನಾತ ಅರ್ಥಾತ್ ಅವಿನಾಶೀ (ಕವಿರ ನೃಭಿಃ) ಕಬೀರ್ ಪರಮೇಶ್ವರ ಮಾನವ ರೂಪ ಧಾರಣೆ ಮಾಡಿ ಅರ್ಥಾತ್ ಗುರು ರೂಪದಲ್ಲಿ ಪ್ರಕಟವಾಗಿ (ಮನೀಷಿಭಿಃ) ಹೃದಯದಿಂದ ಇಚ್ಛೆಪಟ್ಟು ಶ್ರದ್ಧೆಯಿಂದ ಭಕ್ತಿ ಮಾಡುವ ಭಕ್ತಾತ್ಮರನ್ನು (ತ್ರಿ) ಮೂರು (ನಾಮ) ಮಂತ್ರಗಳ/ನಾಮಗಳ ಉಪದೇಶ ಕೊಟ್ಟು (ಪವತೆ) ಪವಿತ್ರಗೊಳಿಸಿ (ಜನಯನ್) ಜನ್ಮ ಹಾಗೂ (ಕ್ಷರನಃ) ಮೃತ್ಯುವಿನ (ನ) ಚಕ್ರದಲ್ಲಿ ಸಿಲುಕದೆ ಇರುವಂತೆ ಮಾಡುತ್ತಾರೆ. ಹಾಗೂ (ತಸ್ಯ) ಅವನ (ವಾಯುಮ್) ಪ್ರಾಣ/ಉಸಿರನ್ನು (ಸಂಸ್ಕಾರವಸ ಏಣಿಸಿ ಹಾಕಿರುವುದನ್ನು (ಕೋಶಾನ್) ತನ್ನ ಭಂಡಾರದಿಂದ (ಸಖ್ಯಾಯ) ಮಿತ್ರತೆಯ ಆಧಾರದಿಂದ (ಪರಿ) **ಪೂರ್ಣ** ರೂಪದಿಂದ (ವರ್ಧಯನ) ವೃದ್ಧಿಸುತ್ತಾರೆ. (ಯತಃ) ಈ ಕಾರಣದಿಂದ (ಇಂದ್ರಸ್ಯ) ಪರಮೇಶ್ವರನ (ಮಧು) ವಾಸ್ತವಿಕ ಆನಂದವನ್ನು (ಅಸಿಷ್ಯದತ್) ತಮ್ಮ ಆಶೀರ್ವಾದ ಪ್ರಸಾದದಿಂದ ಪ್ರಾಪ್ತಿಮಾಡಿಸುತ್ತಾರೆ.

**ಭಾವಾರ್ಥ :– ಈ ಮಂತ್ರದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ ಪೂರ್ಣ ಪರಮಾತ್ಮ ಕಬೀರರು, ಮಾನವ ಶರೀರದಲ್ಲಿ ಗುರು ರೂಪದಲ್ಲಿ ಪ್ರಕಟವಾಗುತ್ತಾರೆ. ಪ್ರಭುವನ್ನು ಇಚ್ಚಿಸುವ ಪ್ರಭು ಪ್ರೇಮಿಗಳಿಗೆ ಮೂರು ನಾಮದ ಉಪದೇಶ ಕೊಟ್ಟು ಭಕ್ತಿ ಮಾಡಿಸುತ್ತಾರೆ. ಹಾಗೂ ಆ ಮಿತ್ರ ಭಕ್ತರನ್ನು ಪವಿತ್ರಗೊಳಿಸುತ್ತಾರೆ. ತಮ್ಮ ಆಶೀರ್ವಾದ ಪ್ರಸಾದದಿಂದ ಪೂರ್ಣ ಪರಮಾತ್ಮನು ಪ್ರಾಪ್ತಿಯಾಗುವಂತೆ ಮಾಡುತ್ತಾರೆ.**

**ಸಾಧಕರ ಆಯಸ್ಸನ್ನು ವೃದ್ಧಿಸುತ್ತಾರೆ. ಇದೇ ಪ್ರಮಾಣವನ್ನು ಗೀತೆಯ 17ನೇ ಅಧ್ಯಾಯದ 23ನೇ ಶ್ಲೋಕದಲ್ಲಿ ನೋಡಬಹುದು. "ಓಂ–ತತ್–ಸತ್ ಇತಿ ನಿರ್ದೇಶಃ ಬ್ರಹ್ಮಣಃ ತ್ರಿವಿಧ ಸ್ಮೃತಃ" ಇದರ ಭಾವಾರ್ಥ ಪೂರ್ಣ ಪರಮಾತ್ಮನ ಪ್ರಾಪ್ತಿಗಾಗಿ ಓಂ–ತತ್–ಸತ್ ಎಂಬ ಮೂರು ಮಂತ್ರವನ್ನು ಜಪಿಸಲು ನಿರ್ದೇಶನ ಮಾಡಲಾಗಿದೆ. ಈ ನಾಮವನ್ನು ತತ್ವದರ್ಶಿ ಸಂತರಿಂದ ಉಪದೇಶ ಪಡೆಯಿರಿ. ತತ್ವದರ್ಶಿ ಸಂತರ ಬಗ್ಗೆ ಗೀತೆಯ 4ನೇ ಅಧ್ಯಾಯ 34ನೇ ಶ್ಲೋಕದಲ್ಲಿ ಹೇಳಿದೆ. ಗೀತೆಯ 15ನೇ ಅಧ್ಯಾಯದ 1ರಿಂದ 4ನೇ ಶ್ಲೋಕದಲ್ಲಿ ತತ್ವದರ್ಶಿ ಸಂತರ ಗುರುತನ್ನು ಹೇಳಿದೆ. ಹಾಗೂ ಅಂತಹ ತತ್ವದರ್ಶಿ ಸಂತರಿಂದ ತತ್ವಜ್ಞಾನವನ್ನು ತಿಳಿದು, ಆ ನಂತರ ಪರಮಪದ ಪರಮೇಶ್ವರನನ್ನು ಹುಡುಕಬೇಕು. ಅಲ್ಲಿಗೆ ಹೋದವನು ಪುನಃ ಈ ಸಂಸಾರಕ್ಕೆ ಬರುವುದಿಲ್ಲ. ಏಕೆಂದರೆ ಪೂರ್ಣ ಮುಕ್ತಿ ದೊರೆಯುತ್ತದೆ. ಆ ಪರಮ ಪದ ಪರಮಾತ್ಮ ಪರಮೇಶ್ವರನೇ, ಸಂಪೂರ್ಣ ಸೃಷ್ಠಿಯ ರಚನೆಯನ್ನು ಮಾಡಿರುತ್ತಾನೆ.**

ವಿಶೇಷ :– ಮೇಲಿನ ವಿವರಣೆಯಿಂದ ಸ್ಪಷ್ಟವಾದ ವಿಷಯವೆಂದರೆ ಪವಿತ್ರವಾದ ನಾಲ್ಕು ವೇದಗಳಲ್ಲಿ ಸಾಕ್ಷಿ ಇದೆ. ಏನೆಂದರೆ ಪೂರ್ಣ ಪರಮಾತ್ಮನೇ ಪೂಜೆಗೆ ಯೋಗ್ಯವಾಗಿದ್ದಾನೆ. ಅವನ ವಾಸ್ತವಿಕ ನಾಮವು ಕವಿರ್ದೇವ (ಕಬೀರ್ ಪರಮೇಶ್ವರ) ಹಾಗೂ ಮೂರು ನಾಮಗಳ ಜಪ ಮಾಡುವುದರಿಂದ ಮುಕ್ತಿ (ಮೋಕ್ಷ) ಪ್ರಾಪ್ತವಾಗುತ್ತದೆ.

**ಧರ್ಮದಾಸ್ ರವರಿಗೆ ಕಬೀರ್ ಪರಮೇಶ್ವರರು ಸಾರ ಮಂತ್ರದ ಉಪದೇಶವನ್ನು ತಮ್ಮ ಅನುಯಾಯಿಗಳಿಗೆ ಕೊಡಲು ಆದೇಶಿಸಿರಲಿಲ್ಲ. ಒಂದು ವೇಳೆ ಸಾರಶಬ್ದವು ಯಾವುದಾದರು ಕಾಲನ ಧೂತರಿಗೆ ತಿಳಿದರೆ ಮಧ್ಯದ ಪೀಳಿಗೆಯ ಹಂಸಾತ್ಮಗಳೂ ಪಾರಾಗಲು ಸಾಧ್ಯವಿಲ್ಲ ಎಂದು ಹೇಳಿದರು. ಹೇಗೆಂದರೆ, ಕಲಿಯುಗದ ಪ್ರಾರಂಭದಲ್ಲಿ ಮೊದಲಿನ ತಲೆಮಾರಿನವರು ಅಶಿಕ್ಷಿತರಾಗಿದ್ದರು. ಹಾಗೂ ಕಲಿಯುಗ ಅಂತ್ಯದಲ್ಲಿ, ಕಡೆಯ ಪೀಳಿಗೆಯವರು ಭಕ್ತಿ ಕೃತಘ್ನರಾಗುವರು (ನಾಸ್ತಿಕರಾಗುವರು)**

**ಈಗ ಅಂದರೆ ವರ್ತಮಾನದಲ್ಲಿ 1947 ರಲ್ಲಿ ಸ್ವಾತಂತ್ರ ಸಿಕ್ಕಿದ ನಂತರ "ಮಧ್ಯದ" ಪೀಳಿಗೆಯವರು, ಈಗ ಮಧ್ಯದ ಪೀಳಿಗೆ ಆರಂಭವಾಗಿದೆ. 1951ರಲ್ಲಿ ಸದ್ಗುರು ರಾಮ್‌ಪಾಲ್ ದಾಸರನ್ನು ಕಳುಹಿಸಿದ್ದಾರೆ. ಈಗ ಎಲ್ಲಾ ಭಕ್ತ ಜನರೂ ಶಿಕ್ಷಿತರು. ಶಾಸ್ತ್ರಗಳು ನಮ್ಮಲ್ಲಿವೆ. ಈಗ ಈ ಸನ್ಮಾರ್ಗ. ಸತ್ಯಸಾಧನೆ ಸಂಪೂರ್ಣ ವಿಶ್ವದಲ್ಲಿ ಹರಡುವುದು. ನಕಲಿ ಗುರುಗಳು ಸಂತ-ಮಹಂತರು ಅಡಗಿ ಕೊಳ್ಳುತ್ತಾ ಸುತ್ತುವರು.**

**ಕಬೀರ್ ಸಾಗರ, ಜೀವ ಧರ್ಮ ಬೋಧ, ಬೋಧ ಸಾಗರ, ಪುಟ 1937ರಲ್ಲಿ :-**

ಧರ್ಮ್‌ದಾಸ್ ತೋಹಿ ಲಾಖ ದುಹಾಯಿ, ಸಾರ ಶಬ್ದ ಕಹೀಂ ಬಾಹರ ನಹೀ ಜಾಯಿ ।
ಸಾರ ಶಬ್ದ ಬಾಹರ ಜೋ ಪರಿ ಹೈ, ಬಿಚಲೀ ಪೀಢೀ ಹಂಸ ನಹೀ ತರಿ ಹೈ ॥

**ಪುಸ್ತಕ 'ಧನೀ ಧರ್ಮದಾಸರ ಜೀವನ ದರ್ಶನ ಹಾಗೂ ವಂಶ ಪರಿಚಯ'ದ ಪುಟ 46ರಲ್ಲಿ ಬರೆದಿದೆ ಹನ್ನೊಂದನೆ ಪೀಳಿಗೆಗೆ ಪೀಠ ಸಿಗಲಿಲ್ಲ. ಆ ಮಹಂತ ರವರ ಹೆಸರು "ಶ್ರೀ ಧೀರಜ್ ನಾಮ್ ರವರು" ಕವರ್ಧಾದಲ್ಲಿ ಇದ್ದರು. ಅವರ ನಂತರ ಹನ್ನೆರಡನೆಯ ಮಹಂತರು "ಶ್ರೀ ಉಗ್ರ ನಾಮ್ ರವರು" ದಾಮಾಖೇಡಾದಲ್ಲಿ ಪೀಠವನ್ನು ಸ್ಥಾಪಿಸಿದರು. ತಾವೇ ಸ್ವತಃ ಮಹಂತರಾದರು. ಇದಕ್ಕೆ ಮೊದಲು ದಾಮಾಖೇಡಾದಲ್ಲಿ ಪೀಠವಿರಲಿಲ್ಲ. ಇದರಿಂದ ಸ್ಪಷ್ಟವಾಗುತ್ತದೆ. ಇಡೀ ವಿಶ್ವದಲ್ಲಿ ಸದ್ಗುರು ರಾಮ್‌ಪಾಲ್ ಮಹಾರಾಜರಲ್ಲದೆ ಬೇರೆ ಭಕ್ತಿ ಮಾರ್ಗದರ್ಶಕರಿಲ್ಲ. ಅನ್ಯ ಭಕ್ತಿ ಮಾರ್ಗ ಇಲ್ಲ. ಸಂತ ರಾಮ್‌ಪಾಲ್ ಮಹಾರಾಜ ರವರು ತಮ್ಮ ಪ್ರವಚನಗಳಲ್ಲಿ ಪದೇ-ಪದೇ ಹೇಳುತ್ತಾರೆ. "ಎಲ್ಲಾ ಪ್ರಭುಪ್ರೇಮಿ ಶ್ರದ್ಧಾಳುಗಳಲ್ಲಿ ಪ್ರಾರ್ಥನೆ ಏನೆಂದರೆ ನನ್ನನ್ನು ಪ್ರಭು ಕಳುಹಿಸಿರುವ ದಾಸ ಎಂದು ತಿಳಿದು ನಿಮ್ಮ ಕಲ್ಯಾಣ ಮಾಡಿಕೊಳ್ಳಿರಿ".**

ಯಹ್ ಸಂಸಾರ ಸಮಝುದಾ ನಾಹೀ, ಕಹಂದಾ ಶ್ಯಾಮ್ ದೋಪಹರೆ ನೂಂ ।
ಗರೀಬ್ ದಾಸ್ ಯಹ್ ವಕ್ತ್ ಜಾತ ಹೈ, ರೋವೋಗೆ ಇಸ್ ಪಹರೆ ನೂಂ ।

**ಹನ್ನೆರಡನೆಯ ಪಂಥ (ಗರೀಬ್‌ದಾಸ್ ಪಂಥವನ್ನು ಹನ್ನೆರಡನೆ ಪಂಥವೆಂದು ಬರೆದಿದೆ. ಕಬೀರ್**

**ಸಾಗರ, ಕಬೀರ್ ಚರಿತ್ರ ಬೋಧ ಪುಟ 1870ರಲ್ಲಿದ್ದ ವಿಷಯದಲ್ಲಿ ಕಬೀರ್ ಸಾಗರ, ಕಬೀರ್ ವಾಣೀ ಪುಟ ಸಂ. 136-137 ರಲ್ಲಿ ಹೀಗೆ ಬರೆದಿದೆ :**

ಸಂವತ ಸತ್ರಾಸೌ ಪಚಹತ್ತರ್ ಹೋಯಿ, ತಾ ದಿನ ಪ್ರೇಮ ಪ್ರಕಟೆ ಜಗ ಸೋಯಿ ।
ಸಾಖೀ ಹಮಾರೀ ಲೇ ಜೀವ ಸಮಝಾ ವೈ, ಅಸಂಖ್ಯ ಜನ್ಮ ಠೌರ್ ನಹೀ ಪಾವೈ ।
ಬಾರವೈ ಪಂಥ್ ಪ್ರಗಟ್ ಹೈ ಬಾನಿ, ಶಬ್ದ ಹಮಾರೆ ಕೀ ನಿರ್ಣಯ ಠಾನೀ ।
ಅಸ್ಥಿರಘರ್ ಕಾ ಮರಮ್ ನ ಪಾವೈ, ಯೆ ಬಾರಾ ಪಂಥ ಹಮಹೀ ಕೋ ಧ್ಯಾವೈ ।
ಬಾರವೇ ಪಂಥ ಹಮ ಹೀ ಚಲೀ ಆವೈ, ಸಬ್ ಪಂಥ್ ಮೇಟಿ ಏಕ್ ಹೀ ಪಂಥ್ ಚಲಾವೆ ।
ಧರ್ಮ್‌ದಾಸ್ ಮೋರೀ ಲಾಖ ದೋಹಾಯಿ, ಸಾರ ಶಬ್ದ ಬಾಹರ್ ನಹೀ ಜಾಯಿ ।
ಸಾರ ಶಬ್ದ ಬಾಹರ್ ಜೋ ಪರಹೀ, ಬಿಚಲೀ ಪೀಡಿ ಹಂಸ ನಹಿ ತರಹಿ ।
ತೇತೀಸ್ ಅರ್ಬ ಜ್ಞಾನ್ ಹಮ್ ಭಾಖಾ, ಸಾರ ಶಬ್ದ ಗುಪ್ತ ಹಮ್ ರಾಖಾ ।
ಮೂಲ ಜ್ಞಾನ್ ತಬ್ ತಕ್ ಛುಪಾಯಿ, ಜಬ್ ಲಗ್ ದ್ವಾದಶ ಪಂಥ ಮಿಟ ಜಾಯಿ ।

**ಇಲ್ಲಿ ಕಬೀರರು ತನ್ನ ಶಿಷ್ಯ ಧರ್ಮದಾಸರಿಗೆ ತಿಳಿಸುತ್ತಾರೆ :- ಸಂವತ 1775ರಲ್ಲಿ ನನ್ನ ಜ್ಞಾನದ ಪ್ರಚಾರವಾಗುವುದು. ಅದೇ ಹನ್ನೆರಡನೆಯ ಪಂಥವಾಗುವುದು. ಹನ್ನೆರಡನೆಯ ಪಂಥದಲ್ಲಿ ನಮ್ಮ ವಾಣಿ ಪ್ರಕಟವಾಗುವುದು ಆದರೆ ಸರಿಯಾದ ಭಕ್ತಿ ಮಾರ್ಗ ವಿರದು, ಪುನಃ ಹನ್ನೆರಡನೇ**

**ಪಂಥದಲ್ಲಿ ನಾವೇ ಬರುವೆವು. ಬೇರೆಲ್ಲಾ ಪಂಥಗಳನ್ನು ಅಳಿಸಿ (ನಾಶಮಾಡಿ) ಕೇವಲ ಒಂದು ಪಂಥವನ್ನು ನಡೆಸುವೆವು. ಆದರೆ ಧರ್ಮದಾಸ್, ನಿನ್ನ ಮೇಲೆ ಒಂದು ಲಕ್ಷ ಆಣೆ (ಶಪಥ) ಮಾಡುವೆನು. ಈ ಸಾರ ಶಬ್ದವನ್ನು ಯಾವುದೇ ಕುಪಾತ್ರರಿಗೆ ಉಪದೇಶಿಸಬೇಡ. ಇಲ್ಲವಾದರೆ ಮಧ್ಯದ ಪೀಳಿಗೆಯವರು (ಹಂಸಾತ್ಮರು) ಪಾರಾಗಲಾರರು. (ಜನನ–ಮರಣ ಬಾಧೆಯಿಂದ) ಆದ್ದರಿಂದ ಈ ಹನ್ನೆರಡು ಪಂಥಗಳು ನಾಶವಾಗಿ ಏಕಮಾತ್ರ ಪಂಥ ಯಾವಾಗ ಉಳಿಯುವುದೋ, ಅಲ್ಲಿಯವರೆಗೆ ನಾನು ಈ ಮೂಲಜ್ಞಾನವನ್ನು ರಹಸ್ಯವಾಗಿ (ಗೂಢವಾಗಿ) ಇಡುವೆನು.**

**ಸಂತ ಗರೀಬ್ ದಾಸ್ ಮಹಾರಾಜರ ವಾಣಿಯಲ್ಲಿ ನಾಮದ ಮಹತ್ವ :–**

ನಾಮ ಅಭೈಪದ ಊಂಚಾ ಸಂತೋ, ನಾಮ ಅಭೈಪದ ಊಂಚಾ ।
ರಾಮ ದುಹಾಯಿ ಸಾಚ ಕಹತ ಹೂಂ, ಸತ್‌ಗುರು ಸೆ ಪೂಛಾ ॥

ಕಹೈ ಕಬೀರ್ ಪುರುಷ ಬರಿಯಾಮಂ, ಗರೀಬ್ ದಾಸ್ ಏಕ್ ನೌಕಾ ನಾಮ್ಂ ॥

ನಾಮ ನಿರಂಜನ ನೀಕಾ ಸಂತೋ, ನಾಮ ನಿರಂಜನ್ ನೀಕಾ ।
ತೀರ್ಥ್ ವ್ರತ ಥೋಥರೆ ಲಾಗೆ, ಜಪ ತಪ ಸಂಜಮ ಫೀಕಾ ॥

ಗಜ ತುರಕ ಪಾಲಕಿ ಅರ್ಥಾ, ನಾಮ ಬಿನಾ ಸಬ್ ದಾನಂ ವ್ಯರ್ಥಾ ।
ಕಬೀರ್, ನಾಮ ಗಹೆ ಸೋ ಸಂತ ಸುಜಾನಾ, ನಾಮ ಬಿನಾ ಜಗ ಉರಝಾಣ ।
ತಾಹಿ ನಾ ಜಾನೆ ಯೆ ಸಂಸಾರಾ, ನಾಮ ಬಿನಾ ಸಬ್ ಜಮ್ ಕೆ ಚಾರಾ ॥

**ಸಂತ ಗುರು ನಾನಕ್ ರವರ ವಾಣಿಯಲ್ಲಿ ನಾಮದ ಮಹತ್ವ :–**

ನಾನಕ್ ನಾಮ ಚಢದೀ ಕಲಾ, ತೇರೇ ಬಾಣೆ ಸಬದಾ ಭಲಾ ।
ನಾನಕ್ ದುಃಖಿಯಾ ಸಬ್ ಸಂಸಾರ್, ಸುಖಿಯಾ ಸೋಯ ನಾಮ ಆಧಾರ್ ।
ಜಾಪ್ ತಾಪ್ ಜ್ಞಾನ್ ಸಬ್ ಧ್ಯಾನ್, ಷಟ್ ಶಾಸ್ತ್ರ ಸಿಮಿರತ್ ವ್ಯಾಖಾನ್ ।
ಜೋಗ ಅಭ್ಯಾಸ ಕರ್ಮ ಧರ್ಮ ಸಬ್ ಕ್ರಿಯಾ, ಸಗಲ ತ್ಯಾಗವಣ ಮಧ್ಯ ಫಿರಿಯಾ ।
ಅನೇಕ್ ಪ್ರಕಾರ ಕಿಯೆ ಬಹುತ್ ಯತ್ನಾ, ದಾನ ಪುಣ್ಯ ಹೋಮೈ ಬಹು ರತ್ನಾ ।
ಶೀಶ್ ಕಟಾಯೆ ಹೋಮೈ ಕರ ರಾತಿ, ವ್ರತ ನೇಮ ಕರೆ ಬಹು ಭಾಂತಿ ।
ನಹೀ ತುಲ್ಯ ರಾಮ ನಾಮ ವಿಚಾರ್, ನಾನಕ್ ಗುರುಮುಖ ನಾಮ ಜಪಿಯೆ ಏಕ್ ಬಾರ್।

**(ಪರಮ ಪೂಜ್ಯ ಕಬೀರ್ ಪರಮೇಶ್ವರರ (ಕವಿರ್ದೇವರ) ಅಮೃತವಾಣಿ)**

ಸಂತೊ ಶಬ್ದಯಿ ಶಬ್ದ ಬಖಾನಾ ॥ ಟೇಕ॥
ಶಬ್ದ ಫಾಂಸ್ ಫಂಸಾ ಸಬ್ ಕೋಯಿ ಶಬ್ದ ನಹೀ ಪಹಚಾನಾ ॥
ಪ್ರಥಮ ಹಿ ಬ್ರಹ್ಮ ಸವಂ ಇಚ್ಛಾತೆ ಪಾಂಚೋ ಶಬ್ದ ಉಚಾರಾ ॥
ಸೋಹಂ, ನಿರಂಜನ, ರರಂಕಾರ, ಶಕ್ತಿ ಔರ್ ಓಂಕಾರಾ ॥
ಪಾಂಚೋ ತತ್ವ ಪ್ರಕೃತಿ ತೀನೋ ಗುಣ ಉಪಜಾಯಾ ॥
ಲೋಕ ದ್ವೀಪ ಚಾರೋ ಖಾನ ಚೌರಾಸೀ ಲಖ್ ಬನಾಯಾ ॥
ಶಬ್ದಯಿ ಕಾಲ ಕಲಂದರ ಕಹಿಯೆ ಶಬ್ದಯಿ ಭರ್ಮ ಭುಲಾಯಾ ॥
ಪಾಂಚ ಶಬ್ದಕೀ ಆಶಾ ಮೆ ಸರ್ವಸ ಮೂಲ ಗಂವಾಯಾ ॥
ಶಬ್ದಯಿ ಬ್ರಹ್ಮ ಪ್ರಕಾಶ ಮೇಂಟ ಕೆ ಬೈಠೆ ಮೂಂದೆ ದ್ವಾರಾ ॥
ಶಬ್ದಯಿ ನಿರಗುಣ ಶಬ್ದ ಯಿ ಸರಗುಣ ಶಬ್ದಯಿ ವೇದ ಪುಕಾರಾ ॥

ಶುದ್ಧ ಬ್ರಹ್ಮ ಕಾಯಾ ಕೇ ಭೀತರ್ ಬೈಠ್ ಕರೆ ಸ್ಥಾನಾ ॥
ಜ್ಞಾನಿ ಯೋಗೀ ಪಂಡಿತ ಔರ ಸಿದ್ಧ ಶಬ್ದ ಮೆ ಉರಝಾನಾ ॥
ಪಾಂಚ ಯಿ ಶಬ್ದ ಪಾಂಚ ಹೈ ಮುದ್ರಾ ಕಾಯಾ ಬೀಚ್ ಠಿಕಾನಾ ॥
ಜೋ ಜಿಹಸಂತ ಆರಾಧನಾ ಕರತಾ ಸೋಹಿ ಕರತ ಬಖಾನಾ ॥
ಶಬ್ದ ನಿರಂಜನ ಚಾಂಚರೀ ಮುದ್ರಾ ಹೈ, ನೈನನ್ ಕೆ ಮಾಂಹೀ ॥
ತಾಕೋ ಜಾನೆ ಗೋರಖಯೋಗಿ ಮಹಾ ತೇಜ ಜಪ ಮಾಂಹೀ ॥
ಶಬ್ದ ಓಂಕಾರ ಭೂಚರಿ ಮುದ್ರಾ ತ್ರಿಕುಟೀ ಹೈ ಸ್ಥಾನಾ ॥
ವ್ಯಾಸ ದೇವ ತಾಹಿ ಪಹಿಚಾನಾ ಚಾಂದ ಸೂರ್ಯ ತಿಹಿ ಜಾನಾ ॥
ಸೋಹಂ ಶಬ್ದ ಅಗೋಚರೀ ಮುದ್ರಾ ಭಂವರ ಗುಫಾ ಸ್ಥಾನಾ ॥
ಸುಕದೇವ ಮುನೀ ತಾಹಿ ಪಹಿಚಾನಾ ಸುನ ಅನಹದ, ಕೋ ಕಾನಾ ॥
ಶಬ್ದ ರರಂಕಾರ ಖೇಚರೀ ಮುದ್ರಾ ದಸವೇ ದ್ವಾರ ಠಿಕಾನಾ ॥
ಬ್ರಹ್ಮಾ–ವಿಷ್ಣು–ಮಹೇಶ ಆದಿ ಲೊ ರಹಂಕಾರ ಪಹಿಚಾನಾ ॥
ಶಕ್ತಿ ಶಬ್ದ ಧ್ಯಾನ ಉನಮುನೀ ಮುದ್ರಾ ಬಸೆ ಆಕಾಶ ಸನೇಹೀ ॥
ಝಿಲಮಿಲ ಝಿಲಮಿಲ ಜೋತ ದಿಖಾವೆ ಜಾನೆ ಜನಕ ವಿದೇಹಿ ॥
ಪಾಂಚ ಶಬ್ದ ಪಾಂಚ ಹೈ ಮುದ್ರಾ ಸೊ ನಿಶ್ಚಯ ಕರ ಜಾನಾ ॥
ಆಗೆ ಪುರುಷ ಪುರಾನ ನಿಃಅಕ್ಷರ ತಿನಕೀ ಖಬರ ನ ಜಾನಾ ॥
ನೌ ನಾಥ ಚೌರಾಸಿ ಸಿದ್ಧಿ ಲೊ ಪಾಂಚ ಶಬ್ದ ಮೇ ಅಟಕೆ ॥
ಮುದ್ರಾ ಸಾಧ ರಹೆ ಘಟ ಭೀತರ ಫಿರ ಔಂಧೆ ಮುಖ ಲಟಕೇ ॥
ಪಾಂಚ ಶಬ್ದ ಪಾಂಚ ಹೈ ಮುದ್ರಾ ಲೋಕ ದೀಪ ಯಮಜಾಲಾ ॥
ಕಹೈ ಕಬೀರ್ ಅಕ್ಷರ ಕೆ ಆಗೆ ನಿಃಅಕ್ಷರ ಕಾ ಉಜಿಯಾಲಾ ॥

**ಈ ಶಬ್ಧ "ಸಂತೋ ಶಬ್ದಯಿ ಶಬ್ದ ಬಖಾನಾ" ದಲ್ಲಿ ಬರೆದಿದೆ. ಎಲ್ಲರೂ ಸಂತ ಶಬ್ದ (ನಾಮ) ದ ಮಹಿಮೆ ಹೇಳುತ್ತಾರೆ. ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರರು ಹೇಳಿದ್ದಾರೆ. ಈ ಶಬ್ದವು ಸತ್ಯಪುರುಷನದು ಇದೆ. ಯಾವುದು ಸತ್ಯಪುರುಷರ ಪ್ರತೀಕವಾಗಿದೆ. ಜ್ಯೋತಿ ನಿರಂಜನ (ಕಾಲ) ನ ಪ್ರತೀಕವೂ ಸಹ ಶಬ್ದ ಇದೆ. ಜ್ಯೋತಿ ನಿರಂಜನನು ಈ ಚಾಂಚರೀ ಮುದ್ರೆಯ ಶಬ್ದವನ್ನು ಪ್ರಾಪ್ತಿಮಾಡಿಸುತ್ತಾನೆ. ಇದನ್ನು ಗೊರಖ ಯೋಗಿಯು ಅಧಿಕ ತಪ ಮಾಡಿ ಪಡೆದು ಕೊಂಡರು. ಇದು ಸಾಮಾನ್ಯ ವ್ಯಕ್ತಿಗಳಿಗೆ ಸಾಧ್ಯವಾಗದ ಮಾತು ನಂತರ ಗೋರಖನಾಥರು ಕಾಲನವರೆಗಿನ ಸಾಧನೆ ಮಾಡಿ ಸಿದ್ಧರಾಗಿದ್ದಾರೆ. ಆದರೆ ಮುಕ್ತರಾಗಲಿಲ್ಲ. ಯಾವಾಗ ಕಬೀರ್ ಪರಮೇಶ್ವರರು ಸತ್ಯನಾಮ ಹಾಗೂ ಸಾರನಾಮದ ಉಪದೇಶ ಮಾಡಿದರೋ, ಆಗ ಕಾಲನಿಂದ ಬಿಡುಗಡೆಯನ್ನು ಪಡೆದರು. ಆದ್ದರಿಂದ 'ಜ್ಯೋತಿ ನಿರಂಜನ' ಜಪ ಮಾಡುವವರು, ಕಾಲನಜಾಲದಿಂದ ಬಿಡುಗಡೆ ಪಡೆಯಲಾರರು. ಅಂದರೆ ಸತ್ಯಲೋಕಕ್ಕೆ ಹೋಗಲಾರರು. 'ಓಂ' ಕಾರ ಶಬ್ದದ ಜಪ ಮಾಡುವುದರಿಂದ ಸಾಧಕರು "ಭ್ರೂಂಚರಿ ಮುದ್ರಾ" ಸ್ಥಿತಿಗೆ ಬರುತ್ತಾರೆ. ಇದನ್ನು ವೇದವ್ಯಾಸರು ಜಪ ಮಾಡಿ ಸಾಧನೆ ಮಾಡಿದರು ಆದರೆ ಕಾಲನ ಜಾಲದಲ್ಲೇ ಉಳಿದರು. "ಸೋಹಂ" ನಾಮದ ಜಪದಿಂದ ಅಗೋಚರಿ ಮುದ್ರಾ ಸ್ಥಿತಿಯುಂಟಾಗುತ್ತದೆ. ಕಾಲನ ಲೋಕದಲ್ಲಿ ಮಾಡಿರುವ ಭವರ ಗುಹೆಯನ್ನು ತಲುಪುತ್ತಾರೆ.**

**ಈ ಸಾಧನೆಯನ್ನು ಸುಖದೇವ ಋಷಿಯು ಮಾಡಿದ್ದರು. ಅದರಿಂದ ವಿಷ್ಣುವಿನ ಲೋಕದಲ್ಲಿನ ಸ್ವರ್ಗದವರೆಗೆ ತಲುಪಿದರು. ಶಬ್ದ "ರರಂಕಾರ"ವು ಖೈಂಚಿರೀ ಮುದ್ರೆ ಆಗಿದ್ದು, ಹತ್ತನೆಯ ಬಾಗಿಲಿನವರೆಗೆ (ಸುಷ್ಮಣಾ) ತಲುಪಿಸುತ್ತದೆ. ಬ್ರಹ್ಮಾ, ವಿಷ್ಣು, ಮಹೇಶ ಈ ಮೂವರೂ "ರರಂಕಾರ"ವನ್ನು ಸತ್ಯ ನಾಮವೆಂದು ತಿಳಿದು, ಕಾಲನ ಜಾಲದಲ್ಲಿ ಸಿಲುಕಿ ನರಳುತ್ತಿದ್ದಾರೆ. ಶಕ್ತಿ (ಶ್ರೀಯಮ್) ಇದು "ಉನಮನೀ ಮುದ್ರೆ" ಯನ್ನು ಪ್ರಾಪ್ತಿ ಮಾಡಿಸುತ್ತದೆ. ಇದನ್ನು ರಾಜಾ ಜನಕರು ಪಡೆದಿದ್ದರು. ಆದರೆ ಮುಕ್ತಿಯಾಗಲಿಲ್ಲ. ಕೆಲವು ಸಂತರು ಐದು ನಾಮಗಳಲ್ಲಿ ಶಕ್ತಿಯ ಜಾಗದಲ್ಲಿ "ಸತ್ಯನಾಮವನ್ನು" ಸೇರಿಸಿದ್ದಾರೆ. ಸತ್ಯ ನಾಮವು ಯಾವುದೇ ಜಪದ ನಾಮವಲ್ಲ ಇದು ಸತ್ಯನಾಮದ ಕಡೆಗೆ ಸಂಕೇತಿಸುತ್ತದೆ. ಹೇಗೆಂದರೆ ಸತ್ಯಲೋಕವನ್ನು ಸತ್ಯ ಖಂಡ (ಸಚ್ಚ ಖಂಡ), ಎಂದು ಸಹ ಹೇಳುತ್ತಾರೆ. ಹಾಗೆ ಸತ್ಯನಾಮ ಹಾಗೂ ಸಚ್ಚ ನಾಮ (ಸತ್ಯನಾಮ) ವಾಗಿದೆ. ಕೇವಲ ಸತ್ಯನಾಮ.....ಸತ್ಯನಾಮ..... ಎಂದು ಜಪ ಮಾಡಿದರು ಯಾವುದೆ ಲಾಭ ಆಗುವುದಿಲ್ಲ. ಈ ಐದು ಶಬ್ದಗಳ ಸಾಧನೆ ಮಾಡುವವರು ಒಂಬತ್ತು ನಾಥರು ಹಾಗೂ 84 ಸಿದ್ಧರು ಕೂಡ (ಈವರೆಗೆ ಮಾತ್ರ ಸೀಮಿತರಾಗುವರು) ಶರೀರದೊಳಗಿನ ಒಂದು ಧ್ವನಿ ಕೇಳಿ ಆನಂದ ಪಡುವರು. ವಾಸ್ತವಿಕ ಸತ್ಯಲೋಕವು ಶರೀರದಿಂದ (ಪಿಂಡ) ಬ್ರಹ್ಮಾಂಡದಿಂದ (ಅಂಡ) ದೂರವೇ ಇದೆ. ಆದ್ದರಿಂದ ಪುನಃ ಜನನಿಯ ಗರ್ಭದೊಳಗೆ ಬಂದರು. ತಲೆ ಕೆಳಗಾಗಿ ನೇತಾಡಿದರು. ಅರ್ಥಾತ್ ಜನನ-ಮರಣಗಳ ಸಂಕಷ್ಟವು ದೂರವಾಗಲಿಲ್ಲ. ಯಾವುದೇ ಉಪಲಬ್ಧಿಯು ಶರೀರ (ಘಟ) ದಲ್ಲಿ ಆಗುತ್ತದೆ ಅದು ಕಾಲನವರೆಗೆ (ಬ್ರಹ್ಮ) ಮಾತ್ರ ಇರುವುದು. ಯಾಕೆಂದರೆ, ಪೂರ್ಣ ಪರಮಾತ್ಮನ ನಿಜ ಸ್ಥಾನ (ಸತ್ಯಲೋಕವು) ಹಾಗೂ ಅವರ ಶರೀರದಕಾಂತಿ (ಪ್ರಕಾಶ) ಯು ಪರಬ್ರಹ್ಮ ಮುಂತಾದವರಿಗಿಂತಲೂ ಅಧಿಕ ಹಾಗೂ ಬಹಳ ದೂರದಲ್ಲಿದೆ. ಅದಕ್ಕಾಗಿ ಪೂರ್ಣ ಸಂತರೇ ಪೂರ್ಣ ಸಾಧನೆಯನ್ನು ತಿಳಿಸುವರು. ಅದು ಐದು ನಾಮಗಳಿಗಿಂತ ಬೇರೆಯೇ ಆಗಿದೆ.**

ಸಂತೋ ಸದ್ಗುರು ಮೋಹೆ ಭಾವ್ಯೆ, ಜೋ ನೈನನ ಅಲಖ ಲಖಾವ್ಯೆ ।
ಢೋಲತ್ ಢಿಗೈ ನಾ ಬೋಲತ್ ಬಿಸರೈ, ಸತ್ ಉಪದೇಶ ದೃಢಾವ್ಯೆ ॥
ಆಂಖ ನಾ ಮೂಂದ್ಯೆ ಕಾನ್ ನಾ ರೂಂದ್ಯೆ ನಾ ಅನಹದ್ ಉರಝಾವ್ಯೆ ।
ಪ್ರಾಣ ಪೂಂಜ ಕ್ರಿಯಾವೋಂ ಸೆ ನ್ಯಾರಾ, ಸಹಜ ಸಮಾಧಿ ಬತಾವ್ಯೆ ॥

**ಘಟ ರಾಮಾಯಣದ ರಚನೆಕಾರರಾದ ಗೌರವಾನ್ವಿತ ತುಲಸೀ ದಾಸ್ ರವರು (ಹಾಥ ರಸ ವಾಲೆ) ಸ್ವತಃ ಹೇಳುತ್ತಾರೆ:– (ಘಟ ರಾಮಾಯಣದ ಪ್ರಥಮ ಭಾಗ ಪುಟ ಸಂ. 27)**

ಪಾಂಚೋ ನಾಮ ಕಾಲ ಕೆ ಜಾನೌ ತಬ್ ದಾನಿ ಮನ ಸಂಕಾ ಆನೌ ॥
ಸುರತಿ ನಿರತ ಲೈ ಲೋಕ ಸಿಧಾಂವು, ಆದಿನಾಮ ಲೆ ಕಾಲ ಗಿರಾಂವು ॥
ಸತ್‌ನಾಮ ಲೆ ಜೀವ ಉಬಾರೀ, ಅಸ ಚಲ ಜಾಂವು ಪುರುಷ ದರಬಾರೀ ॥
ಕಬೀರ್, ಕೋಟಿ ನಾಮ ಸಂಸಾರಮೆ, ಇನ್ ಸೆ ಮುಕ್ತಿ ನ ಹೋ ॥
ಸಾರನಾಮ ಮುಕ್ತಿ ಕಾ ದಾತಾ, ವಾಕೋ ಜಾನೆ ನ ಕೋಯೆ ॥
ಪೂರಾ ಸತ್‌ಗುರು ಸೋಯೆ ಕಹಾವ್ಯೆ, ದೋಯ ಅಖರ ಕಾ ಭೇದ ಬತಾವ್ಯೆ ।
ಏಕ್ ಛುಡಾವ್ಯೆ, ಏಕ್ ಲಖಾವ್ಯೆ, ತೊ ಪ್ರಾಣಿ ನಿಜ ಘರ್ ಜಾವ್ಯೆ ॥

**ಗುರು ನಾನಕ್ ರವರ ವಾಣಿಯಲ್ಲಿ ಮೂರು ನಾಮಗಳ ಪ್ರಮಾಣವಿದೆ :–**

ಜೈ ಪಂಡಿತ ತು ಪಢಿಯಾ, ಬಿನಾ ದುವು ಅಖರ ದುವು ನಾಮಾ ।
ಪರಣವತ ನಾನಕ್ ಏಕ ಲಘಾಯೆ, ಜೆ ಕರ್ ಸಬ್ ಸಮಾವಾ ।
ವೇದ ಕತೇಬ್ ಸಿಮರಿತ ಸಬ್ ಸಾಂಸತ್, ಇನ್ ಪಢಿ ಮುಕ್ತಿ ನ ಹೋಯಿ ।
ಏಕ್ ಅಕ್ಷರ ಜೊ ಗುರುಮುಖ ಜಾಪೈ, ತಿಸ ಕೀ ನಿರ್ಮಲ ಹೋಯಿ ॥

**ಭಾವಾರ್ಥ :– ಗುರು ನಾನಕ್ ರವರು ತಮ್ಮ ವಾಣಿಯ ಮೂಲಕ ತಿಳಿಸಲು ಇಷ್ಟ ಪಡುತ್ತಾರೆ ಯಾರು ಎರಡು ಅಕ್ಷರದ ಜಪದ ಬಗ್ಗೆ ತಿಳಿದಿರುವವರೋ, ಅವರೇ ಪೂರ್ಣ ಸದ್ಗುರುವಾಗಿದ್ದಾರೆ. ಅವುಗಳಲ್ಲಿ ಒಂದು ಕಾಲ ಬ್ರಹ್ಮ ಹಾಗೂ ಮಾಯೆಯ ಬಂಧನದಿಂದ ಬಿಡಿಸುತ್ತದೆ. ಎರಡನೆಯದು ಪರಮಾತ್ಮನನ್ನು ತೋರಿಸುತ್ತದೆ.ಮತ್ತು ಮೂರನೆಯ ಅಕ್ಷರವು ಪರಮಾತ್ಮನೊಂದಿಗೆ ಸೇರಿಸುತ್ತದೆ.**

**ಸಂತ ಗರೀಬ್‌ದಾಸ್ ರವರ ಅಮೃತವಾಣಿಯಲ್ಲಿ ಶ್ವಾಸದ (ಉಸಿರಿನ) ನಾಮದ ಪ್ರಮಾಣ :–**

ಗರೀಬ್, ಸ್ವಾಸಾ ಪಾರಸ ಭೇದ ಹಮಾರಾ, ಜೋ ಖೋಜೆ ಸೋ ಉತರೆ ಪಾರಾ ।
ಸ್ವಾಂಸಾ ಪಾರಾ ಆದಿ ನಿಶಾನೀ, ಜೊ ಖೋಜೆ ಸೊ ಹೋಏ ದರಬಾನೀ ।
ಸ್ವಾಂಸಾ ಹೀ ಮೆ ಸಾರ ಪದ, ಪದ ಮೆ ಸ್ವಾಂಸಾ ಸಾರ ।
ದಮ್ ದೇಹೀ ಕಾ ಖೋಜ್ ಕರೊ, ಆವಾಗಮನ ನಿವಾರ ।
ಗರೀಬ್, ಸ್ವಾಂಸ್ ಸುರತಿ ಕೆ ಮಧ್ಯ ಹೈ, ನ್ಯಾರಾ ಕದೆ ನಹೀ ಹೋಯ್ ।
ಸತ್‌ಗುರು ಸಾಕ್ಷಿ ಭೂತ ಕೂಂ, ರಾಕೋ ಸುರತಿ ಸಮೋಯ್ ॥
ಗರೀಬ್, ಜಾರ್ ಪದಾರ್ಥ ಉರ ಮೆ ಜೋವೈ, ಸುರತಿ ನಿರತಿ ಮನ ಪವನ ಸಮೋವೈ।
ಸುರತಿ–ನಿರತಿ ಮನ ಪವನ ಪದಾರ್ಥ (ನಾಮ) ತರೊ ಇಕ್ತರ್ ಯಾರ್ ।
ದ್ವಾದಸ ಅಂದರ ಸಮೋಯ ಲೆ, ದಿಲ್ ಅಂದರ್ ದೀದಾರ್ ।
ಕಬೀರ್, ಕಹತಾ ಹೂಂ ಕಹಿ ಜಾತ ಹೂಂ, ಕಹೂಂ ಬಜಾಕರ್ ಢೋಲ್ ।
ಸ್ವಾಂಸ ಜೋ ಖಾಲೀ ಜಾತ ಹೈ, ತೀನ್ ಲೋಕ ಕಾ ಮೋಲ್ ॥
ಕಬೀರ್, ಮಾಲಾ ಸ್ವಾಂಸ್–ಉಸ್ವಾಂಸ್ ಕೀ, ಫೇರೇಂಗೆ ನಿಜ ದಾಸ್ ।
ಚೌರಾಸಿ ಭ್ರಮೆ ನಹೀ, ಕಟೈ ಕರ್ಮ ಕೀ ಫಾಂಸ್ ॥

**ಗುರು ನಾನಕ್ ದೇವ ರವರ ವಾಣಿಯಲ್ಲಿ ಪ್ರಮಾಣ :–**

ಚಹಊಂ ಕಾ ಸಂಗ, ಚಹಊಂ ಕಾ ಮೀತ್, ಜಾ ಮೈ ಚಾರಿ ಹಟಾವೈ ನಿತ್ ।
ಮನ ಪವನ ಕೊ ರಾಖೈ ಬಂದ, ಲಹೆ ತ್ರಿಕುಟೀ ತ್ರಿವೇಣೀ ಸಂಘ ॥
ಅಖಂಡ ಮಂಡಲ ಮೆ ಸುನ್ನ ಸಮಾನಾ, ಮನ ಪವನ ಸಚ್ಚ ಖಂಡ ಟಿಕಾನಾ ॥

**ಪೂರ್ಣ ಸದ್ಗುರು ಯಾರೆಂದರೆ ಯಾರು ಮೂರು ಬಾರಿ ನಾಮ ಉಪದೇಶ ಕೊಟ್ಟು, ಉಸಿರಿನ ಕ್ರಿಯೆಯ ಜೊತೆಗೇ ಸ್ಮರಣೆ (ಸ್ತುತಿ) ಮಾಡುವ ವಿಧಾನ ಹೇಳಿಕೊಡುವರೋ, ಆಗಲೇ ಜೀವಕ್ಕೆ ಮೋಕ್ಷ ಸಂಭವವಿದೆ. ಹೇಗೆ ಪರಮಾತ್ಮ ಸತ್ಯನೋ ಹಾಗೆ ಸರಿಯಾಗಿ ಅದೇ ರೀತಿಯಲ್ಲಿ ಪರಮಾತ್ಮನ ಸಾಕ್ಷಾತ್ಕಾರ ಮೋಕ್ಷ ದೊರಕಿಸಿ ಕೊಡುವ ರೀತಿಯೂ ಸಹ, ಆದಿ, ಅನಾದಿ, ಹಾಗೂ ಸತ್ಯವಾಗಿದೆ. ಇದು ಎಂದೂ ಬದಲಾಗುವುದಿಲ್ಲ. ಶ್ರೀ ಗರೀಬ್ ದಾಸ್ ರವರು ತಮ್ಮ ವಾಣಿಯಲ್ಲಿ ಹೇಳುತ್ತಾರೆ:–**

ಭಕ್ತಿ ಬೀಜ ಪಲಟೆ ನಹೀ, ಯುಗ ಜಾಂಹೀ ಅಸಂಖ ।
ಸಾಯಿ ಸಿರ ಪರ್ ರಾಖಿಯೋ, ಚೌರಾಂಸಿ ನಹೀ ಶಂಕ ॥

ಘೀಸಾ ಆಯೆ ಏಕೋ ದೇಶ ಸೆ, ಉತರೆ ಏಕೋ ಘಾಟ್ ।
ಸಮಝೋ ಕಾ ಮಾರ್ಗ ಏಕ್ ಹೈ ಮೂರ್ಖ ಬಾರಹ ಬಾಟ ॥
ಕಬೀರ್ ಭಕ್ತಿ ಬೀಜ ಪಲಟೆ ನಹೀ, ಆನ ಪಡೈ ಬಹು ಝೋಲ್ ।
ಜೈ ಕಂಚನ ಬಿಷ್ಟಾ ಪರೈ, ಘಟೈ ನ ತಾಕಾ ಮೋಲ್ ॥

ಬಹಳಷ್ಟು ಮಹಾಪುರುಷರು 'ಸತ್ಯನಾಮ'ದ ಬಗ್ಗೆ ತಿಳಿದಿಲ್ಲ. ಅವರು ಮನಬಂದ ಹಾಗೆ ನಾಮೋಪದೇಶ ಮಾಡುತ್ತಾರೆ. ಅದರಿಂದ ಸುಖವಾಗಲೀ, ಮುಕ್ತಿಯಾಗಲೀ ಸಿಗುವುದಿಲ್ಲ, ಯಾರೋ ಹೇಳುತ್ತಾರೆ, ತಪ, ಯಜ್ಞ, ಹವನ ಮೊದಲಾದುವುಗಳನ್ನು ಮಾಡು. ಯಾರು ತಮ್ಮ ಕಣ್ಣು, ಕಿವಿ ಮತ್ತು ಬಾಯಿಗಳನ್ನು ಮುಚ್ಚಿ ಒಳಗೆ ಧ್ಯಾನ ಮಾಡುವ ಮಾತನ್ನಾಡುತ್ತಾರೆ, ಇದು ಅವರ ಮನಬಂದಂತೆ ಮಾಡುವ ಸಾಧನೆಗಳಾಗಿವೆ. ಕಬೀರ್ ಪರಮೇಶ್ವರರು, ಸಂತ ಗರೀಬ್‌ದಾಸ್ ರವರು, ಗುರು ನಾನಕ್ ದೇವ ರವರು ಮುಂತಾದ ಪರಮ ಸಂತರು, ಈ ಎಲ್ಲಾ ಕ್ರಿಯಗಳನ್ನು ನಿಲ್ಲಿಸಿ ಕೇವಲ ಒಂದು ನಾಮ ಜಪ ಮಾಡಲು ಹೇಳಿದ್ದಾರೆ.

""ನಾಸ್ತ್ರೇಡಮಸ್" ಎಂಬ ಹೆಸರಿನ ಒಬ್ಬ ಭವಿಷ್ಯ ಹೇಳುವವನಿದ್ದ. ಅವನು ಹೇಳಿದ ಭವಿಷ್ಯವಾಣಿಗಳೆಲ್ಲಾ ಸತ್ಯವಾಗಿವೆ. ಇದು ಸುಮಾರು 400 ವರ್ಷಗಳ ಹಿಂದೆ ಬರೆದಿರುವುದು/ ಹೇಳಿರುವುದು ಆಗಿದೆ" 2006ರಲ್ಲಿ ಒಬ್ಬ ಹಿಂದೂ ಸಂತನು ಪ್ರಕಟವಾಗುವನು. ಎಲ್ಲೆಡೆ ಅವನ ಚರ್ಚೆಯಾಗುವುದು. ಎಂದು ಅವನು ಹೇಳಿದ್ದನು.

ಆ ಸಂತನು ಮುಸಲ್ಮಾನನಾಗಲೀ, ಈಸಾಯಿಯಾಗಲಿ ಆಗಿರದೆ ಹಿಂದುವಾಗಿರುವನು. ಅವನು ಹೇಳಿದ ಭಕ್ತಿಮಾರ್ಗವು ಎಲ್ಲವುದಕ್ಕಿಂತ ಭಿನ್ನವೂ, ಹಾಗೂ ತತ್ವಾಧಾರಿತವೂ ಆಗಿರುವುದು. ಅವನನ್ನು ಜ್ಞಾನದಿಂದ ಯಾರೂ ಸೋಲಿಸಲು ಸಾಧ್ಯವಾಗುವುದಿಲ್ಲ. 2006ರಲ್ಲಿ ಆ ಸಂತನ ವಯಸ್ಸು 50ರಿಂದ 60ವರ್ಷಗಳ ನಡುವಿನದಿರುವುದು. (ಸಂತ ರಾಮ್‌ಪಾಲ್ ದಾಸರ ಜನ್ಮವು 8–12–1951ರಲ್ಲಿ ಆಯಿತು. ಜುಲೈ 2006ಕ್ಕೆ ಅವರ ವಯಸ್ಸು ಸರಿಯಾಗಿ 55 ವರ್ಷಗಳು, ಇದು ಭವಿಷ್ಯವಾಣಿಯ ಅನುಸಾರ ಸತ್ಯವಾಯಿತು) ಆ ಹಿಂದೂ ಸಂತನು ಹೇಳಿದ ಜ್ಞಾನವನ್ನು ಇಡೀ ವಿಶ್ವವೇ ಸ್ವೀಕರಿಸುವುದು. ಆ ಹಿಂದೂ ಸಂತನ ಅಧ್ಯಕ್ಷತೆಯಲ್ಲಿ ಇಡೀ ಪ್ರಪಂಚದಲ್ಲಿ ಭಾರತ ದೇಶದ ಶಾಸನ ನಡೆಯುವುದು. ಹಾಗೂ ಆ ಸಂತನ ಆಜ್ಞೆಯಂತೆ ಎಲ್ಲ ಕಾರ್ಯಗಳೂ ನಡೆಯುವುದು. ಅವನ ಮಹಿಮೆಯು ಗಗನದೆತ್ತರವನ್ನು ಮೀರುವುದು. ನಾಸ್ತ್ರೇಡಮಸ್ ಹೇಳಿದ ಸಾಂಕೇತಿಕ ಸಂತರು ಶ್ರೀ ರಾಮ್‌ಪಾಲ್ ಮಹಾರಾಜರೇ, ಅವರು 2006ನೇ ಇಸವಿಯಲ್ಲಿ ಪ್ರಸಿದ್ಧರಾದರು. ತಿಳುವಳಿಕೆಯಿಲ್ಲದವರು ಕೆಟ್ಟದನ್ನು ಮಾಡಿ ಪ್ರಸಿದ್ಧರಾಗಿಸಿದ್ದಾರೆ. ಆದರೆ ಸಂತರಲ್ಲಿ ಯಾವ ದೋಷವೂ ಇಲ್ಲ. ಮೇಲೆ ಹೇಳಿರುವ ಎಲ್ಲಾ ಅಂಶಗಳೂ ಸಂತ ರಾಮ್‌ಪಾಲ್ ಮಹಾರಾಜರಲ್ಲಿ ವಿದ್ಯಮಾನವಿದೆ.

# ೭. "ಸಂತರನ್ನು ಸತಾಯಿಸಿದರೆ ಆಗುವ ಶಿಕ್ಷೆ"

ಗೌರವಾನ್ವಿತ ಗರೀಬ್ ದಾಸ್ ರವರು ಝುಜ್ಜರ ಜಿಲ್ಲೆಯ ಛುಡಾನಿ ಎಂಬ ಪವಿತ್ರ ಹಳ್ಳಿಯಲ್ಲಿ ಶ್ರೀ ಬಲರಾಮ ಧನಖಡ (ಜಾಟರ) ಮನೆಯಲ್ಲಿ ಜನಿಸಿದರು. ಅವರನ್ನು ಪೂರ್ಣ ಬ್ರಹ್ಮ ಕಬೀರರು (ಕವಿರ್ದೇವರು) 1727ರಲ್ಲಿ ಸಶರೀರರಾಗಿ ಬಂದು ಭೇಟಿಯಾಗಿದ್ದರು ಹಾಗೂ ಅವರ ಜೀವವನ್ನು ಸತ್ಯಲೋಕಕ್ಕೆ ಕರೆದುಕೊಂಡು ಹೋದರು. ಗರೀಬ್‌ದಾಸರ ಮನೆಯವರು, ಅವರು ಮರಣ ಹೊಂದಿರುವರೆಂದು ತಿಳಿದು, ಅವರ ಶರೀರವನ್ನು ಚಿತೆಯ ಮೇಲೆ ಇಟ್ಟಿದ್ದರು. ಅದೇ ಸಮಯದಲ್ಲಿ ಕವಿರ್ದೇವರು, ಅವರ ಜೀವವನ್ನು ಆ ಶರೀರದಲ್ಲಿ ವಾಪಸ್ ಕಳುಹಿಸಿದರು. ಅದಾದ ನಂತರ ಆದರಣೀಯ ಗರೀಬ್‌ದಾಸರು, ತಾವು ಕಣ್ಣಿನಿಂದ ಕಂಡ ಕಬೀರ್ ಪರಮೇಶ್ವರರ ಮಹಿಮೆಯನ್ನು ಜನರಿಗೆ ತಿಳಿಸತೊಡಗಿದರು. ಯಾವುದಾದರು ದುಃಖದ ಪ್ರಾಣಿ, ಅವರಿಂದ ಉಪದೇಶ ಪಡೆದರೆ ಸುಖವನ್ನು ಅನುಭವಿಸುತ್ತಿತ್ತು ಅವರ ತತ್ವಜ್ಞಾನ ಹಾಗೂ ಮಹಿಮೆಯನ್ನು ಕಂಡು ಅರ್ಧ ಜ್ಞಾನದ (ಅಜ್ಞಾನಿ) ಗುರುಗಳು ಈರ್ಷೆ ಪಡತೊಡಗಿದರು. ಅಕ್ಕ-ಪಕ್ಕದ ಊರುಗಳ ಮುಖ್ಯಸ್ಥರಲ್ಲಿ ಗರೀಬ್‌ದಾಸರ ಬಗ್ಗೆ, ಇಲ್ಲ -ಸಲ್ಲದ ಅಸ್ಟವಾದ (ನಿಂದೆ) ಮಾಡಿದರು. ಇದರಿಂದಾಗಿ ಅಕ್ಕ-ಪಕ್ಕದ ಹಳ್ಳಿಯ ಸಾಮಾನ್ಯ ಜನರು ಕಬೀರರ ಪ್ರೀತಿಯ ಮಗು, ಶ್ರೀ ಗರೀಬ್‌ದಾಸರನ್ನು ದ್ವೇಷಿಸತೊಡಗಿದರು.

ದೆಹಲಿಯ ವಾಜೀದಪುರ ಎಂಬ ಹಳ್ಳಿಯಲ್ಲಿ ಅವರ ಒಬ್ಬ ಶಿಷ್ಯನಿದ್ದ. ಅವನನ್ನೂ ಹಳ್ಳಿಯವರೆಲ್ಲ ದ್ವೇಷಿಸತೊಡಗಿದರು. ಅದೇ ಸಮಯದಲ್ಲಿ (ಟಿಡ್ಡೀ) ಒಂದು ಜಾತಿಯ ಹಾರುವ ಮಿಡತೆಗಳ ಗುಂಪು ಅಕ್ಕ-ಪಕ್ಕದ ಹೊಲ-ಗದ್ದೆಗಳ ಜೋಳದ ಫಸಲನ್ನು ಹಾಳುಮಾಡಿದವು. ಆದರೆ ಗರೀಬದಾಸರ ಸೇವಕನ ಫಸಲನ್ನು ಹಾನಿ ಮಾಡಲಿಲ್ಲ. ಆಗ ಗ್ರಾಮದವರೆಲ್ಲರು ಗರೀಬ್‌ದಾಸರ ಮಹಿಮೆಯನ್ನು ಅರಿತರು. ಅವರಿಂದ ಪ್ರಭಾವಿತರಾಗಿ, ಅವರ ಜ್ಞಾನವನ್ನು ಸ್ವೀಕರಿಸಿ ಅತ್ಮೋದ್ಧಾರ ಮಾಡಿಸಿಕೊಂಡರು.

ಗರೀಬ್‌ದಾಸರ ಭಕ್ತನು ಗುರುಗಳ ಆಜ್ಞೆಯಂತೆ ತನ್ನ ಹೊಲದ ಜೋಳವನ್ನು ಹಳ್ಳಿಯವರಿಗೆಲ್ಲ ಹಂಚಿದನು. ಹಾಗೂ ಗರೀಬ್‌ದಾಸರು ಒಪ್ಪದಿದ್ದರೂ ಸ್ವಲ್ಪ ಜೋಳವನ್ನು ಎತ್ತಿನ ಬಂಡಿಯಲ್ಲಿ ತುಂಬಿಸಿದರು. ನೀವು ಪ್ರತಿ ಪೂರ್ಣಿಮೆಯಂದು ದಾನಮಾಡುವಿರಿ. ಸ್ವಲ್ಪ ದಾನ ನಿಮ್ಮ ದಾಸನ ಪಾಲಿನದೂ ಇರಲಿ ಎಂದು ಹೇಳಿದನು. ಭಕ್ತನ ಶ್ರದ್ಧೆಗೆ ಮೆಚ್ಚಿದ ಗುರುಗಳು ಸ್ವೀಕರಿಸಲು ಒಪ್ಪಿದರು. (ಶ್ರೀ ಗರೀಬ್‌ದಾಸರಿಗೆ **4** ಗಂಡು ಮಕ್ಕಳು ಹಾಗೂ **2** ಹೆಣ್ಣು ಮಕ್ಕಳು ಇದ್ದರು. ಸುಮಾರು **1300** ಎಕರೆಯಷ್ಟು ಭೂಮಿಯ ಒಡೆಯರಾಗಿದ್ದರು). ಅದೇ ಎತ್ತಿನ ಗಾಡಿಯಲ್ಲಿ ಕುಳಿತು ತಮ್ಮ ಹಳ್ಳಿ ಛುಡಾನಿಗೆ ಹೋಗುತ್ತಿದರು. ಗಾಡಿಯು ಕಾಣೌಂದಾ ಹಳ್ಳಿ ತಲುಪುತ್ತಿದ್ದಂತೆ ಕೆಲವು ದುಷ್ಕರ್ಮಿಗಳು (ಪೂರ್ವ ನಿಯೋಜಿತ ಷಡ್ಯಂತ್ರದಂತೆ) ಅವರ ಗಾಡಿಯನ್ನು ಸುತ್ತಿ ನಿಂತರು (ಮುತ್ತಿಗೆ ಹಾಕಿದರು). ಅವರೆಲ್ಲಾ ಸ್ವಾರ್ಥಿಗಳಾದ ಗುರುಗಳು, ಆಚಾರ್ಯರಾಗಿದ್ದರು. ಎಲ್ಲಾ ಜೋಳವನ್ನು ಲೂಟಿ ಮಾಡಿದರು. ಅದೇ ಹಳ್ಳಿಯ ಚೌಧರಿ (ಮುಖಂಡ) ಛಾಜೂರಾಮ ಛಿಕ್ಕಾರಾಗೆ ಸೂಚನೆ ಕೊಟ್ಟರು. "ಆ ಹಿಂದೂ ಧರ್ಮ ದ್ರೋಹಿಯನ್ನು ಹಿಡಿದಿದ್ದೇವೆ. ಛಾಜೂ ರಾಮನ ಆದೇಶದ ಪ್ರಕಾರ ನಾಲ್ಕು ಗೋಡೆಗಳ ಮಧ್ಯೆ ಕೂಡಿ ಹಾಕಿದರು. ಚೌಧರಿ ಛಾಜುರಾಮ ಛಿಕ್ಕಾರಾಗೆ ಸರಕಾರದ ವತಿಯಿಂದ ಕೆಲವು ಕಾನೂನಿನ ಅಧಿಕಾರಗಳು ಇದ್ದವು. ಅದರ ಪ್ರಕಾರ ಅವರು **6** ತಿಂಗಳು ಸಜೆ **500** ರೂಪಾಯಿ ದಂಡ, ಹಾಗೂ ಮಹಾದೋಷಿ ಎಂದು ಕಾತದಲ್ಲಿ ಕಟ್ಟಿ ಹಾಕುವ ಶಿಕ್ಷೆಯನ್ನು ವಿಧಿಸಿದರು.

ಆ ಧರ್ಮದ ಅಜ್ಞಾನಿಗಳು (ಗುರುಗಳು-ಅಚಾರ್ಯರು) ಪರಮ ಸಂತ ಶ್ರೀ ಗರೀಬ್

ದಾಸರನ್ನು ಮರದಲ್ಲಿ ಕಟ್ಟಿ ಹಾಕಿದರು. (ಕಾಠದಲ್ಲಿ ಕಟ್ಟುವುದು ಒಂದು ರೀತಿಯ ಕಠಿಣ ಶಿಕ್ಷೆ, ಎರಡೂ ಕಾಲುಗಳನ್ನು ಮಂಡಿಯ ಮೇಲೆ, ಎರಡು ಮರದ ದಪ್ಪ ಕಟ್ಟಿಗೆಯಿಂದ ಕಟ್ಟುತ್ತಾರೆ. ಇದರಿಂದ ವ್ಯಕ್ತಿಯು ಕೂರಲು ಆಗದೆ ಬಹಳ ನೋವು ಅನುಭವಿಸುತ್ತಾನೆ) ಎತ್ತಿನ ಗಾಡಿಯವನು ಖಾಲಿ ಗಾಡಿಯೊಂದಿಗೆ, ವಾಜೀದಪುರಕ್ಕೆ ವಾಪಸ್ ಹೋದನು. ಆ ಹಳ್ಳಿಯು ಕಾಣೌಂದಾ ಹಳ್ಳಿಯಿಂದ 10ಕಿ.ಮೀ ದೂರದಲ್ಲಿದೆ. ಸೂಚನೆ (ಗರೀಬ್‌ದಾಸರ ಬಂಧನದ) ಯು ಸಿಕ್ಕಿದ ಕೂಡಲೆ, ವಾಜೀದಪುರದವರು (ಮುಖ್ಯ ವ್ಯಕ್ತಿಗಳು) ತಕ್ಷಣ ಕಾಣೌಂದಾ ಹಳ್ಳಿಯನ್ನು ಸೇರಿ, ಭಾಜೂರಾಮರಲ್ಲಿ ಪ್ರಾರ್ಥಿಸಿದರು. “ನೀವು ಬಂಧಿಸಿರುವ ವ್ಯಕ್ತಿ ಸಾಮಾನ್ಯ ವ್ಯಕ್ತಿಯಲ್ಲ ಇವರು ಪರಮ ಶಕ್ತಿ ಸಂಪನ್ನರು ನೀವು ಅವರಲ್ಲಿ ಕ್ಷಮೆ ಕೇಳಿರಿ. ಚೌಧರೀ ಭಾಜೂರಾಮರು ಬಹಳ ಸಂಭಾವಿತರು. ಪುಣ್ಯಾತ್ಮರು ದಯಾಳು, ನಮ್ರ ಹೃದಯದವರು ಆಗಿದ್ದರು. ಆದರೆ ಸ್ವಾರ್ಥಿಗಳಾದ, ಸುಳ್ಳರಾದ, ಅರೆಜ್ಞಾನಿಗಳಾದ ಹಾಗೂ ಪದವಿಯ ಬಯಕೆಯ ಗುರುಗಳೆಲ್ಲಾ ಸೇರಿ, ಚೌಧರೀ ಭಾಜೂರಾಮರಿಗೆ ಇಲ್ಲದ–ಸಲ್ಲದ ಮಾತುಗಳಿಂದ ದಾರಿತಪ್ಪಿಸಿದ್ದರು. ಶ್ರೀ ಗರೀಬ್‌ದಾಸರ ಮೇಲೆ ಬೇಸರ–ತಿರಸ್ಕಾರ ಹುಟ್ಟುವಂತೆ ಮಾಡಿದ್ದರು. ಈಗ ವಾಜೀದಪುರದ ಭಕ್ತರ ಮಾತುಗಳನ್ನು ಕೇಳಿ ಗರೀಬ್‌ದಾಸರನ್ನು ಬಿಡುಗಡೆ ಗೊಳಿಸಿದರು. ಹಾಗೂ ಶ್ರೀ ಗರೀಬ್‌ದಾಸ್ ರವರು ತಮ್ಮ ಹಳ್ಳಿ ಛುಡಾನಿಗೆ ಬಂದರು. ಕೆಲ ದಿನಗಳ ನಂತರ ಭಾಜೂರಾಮರು ಬೆಳಗಿನ ಶೌಚಕಾರ್ಯ ಮುಗಿಸಲು ಕೆರೆಯಕಡೆ ಹೋದಾಗ ಇಬ್ಬರು ಕುದುರೆ ಸವಾರರು ಅವರ ಎರಡೂ ಕೈಗಳನ್ನು ಕತ್ತರಿಸಿ ಹಾಕಿದರು. ಅದೇ ಸಮಯದಲ್ಲಿ ಅವರ ಕಣ್ಣ ಮುಂದೆಯೇ ಅದೃಶ್ಯರಾದರು (ಮಾಯವಾದರು) ಈ ದೃಶ್ಯವನ್ನು ಕೆರೆಯ ಸಮೀಪವಿದ್ದ ಕೆಲವರು ನೋಡಿದರು. ಬಹಳ ಉಪಚಾರ ಮಾಡಿದರು. ಆದರೆ ನೋವು ಹಾಗೂ ರಕ್ತದ ಧಾರೆ ನಿಲ್ಲಲಿಲ್ಲ. ಬಹಳ ದಿನಗಳವರೆಗೆ ಕೆಟ್ಟರೀತಿಯಲ್ಲಿ ಕಿರುಚಾಡುತ್ತಿದ್ದರು. ಆಗ ಒಬ್ಬ ವ್ಯಕ್ತಿ ಹೇಳಿದ, ಸಂತ ಗರೀಬ್‌ದಾಸರ ಬಳಿ ಹೋಗಿ ಕ್ಷಮೆ ಯಾಚಿಸು ಎಂದು. ಅವರು ದಯಾಳು ಕ್ಷಮಿಸುತ್ತಾರೆ, ಎಂದೂ ಹೇಳಿದರು ಪರಿವಾರದವರು ಚೌಧರಿಯವರನ್ನು ಕುದುರೆ ಮೇಲೆ ಕೂರಿಸಿಕೊಂಡು ಛುಡಾನಿ ಗ್ರಾಮಕ್ಕೆ ಬಂದರು. ಶ್ರೀ ಭಾಜೂರಾಮರು ಹೋದವರೇ ಶ್ರೀ ಗರೀಬ್‌ದಾಸರ ಚರಣಗಳಿಗೆ ಬಿದ್ದರು. (ಕರಮುಗಿಯಲು ಕೈಯೇ ಇರಲಿಲ್ಲ) ಕ್ಷಮೆ ಯಾಚಿಸಿದರು. ಸಂತ ಗರೀಬ್‌ದಾಸರು ಆಶೀರ್ವಾದ ಮಾಡಿದರು. ಹಾಗೂ ನಾಮೋಪದೇಶವನ್ನು ಕೊಟ್ಟರು. ಜೀವನಪೂರ್ತಿ ಭಕ್ತಿ ಮಾಡಲು ಹೇಳಿದರು. ನನ್ನನ್ನು ನಿಮ್ಮ ಬಗ್ಗೆ ಅತ್ಯಂತ ಭ್ರಮಿತವಾಗುವಂತೆ ಮಾಡಿಬಿಟ್ಟಿದ್ದರು. ತಾವು ಪೂರ್ಣ ಪರಮಾತ್ಮರೆಂದು ನನಗೆ ತಿಳಿದಿರಲಿಲ್ಲ. ಪೂರ್ಣ ಪರಮಾತ್ಮರು ಕಬೀರ್ ದಾಸ್ ರವರು ನಾನು ಅವರು ಕಳುಹಿಸಿರುವ (ನೇಕಾರ ಕಳುಹಿಸಿರುವ) ದಾಸನು. ಅವರ ಶಕ್ತಿಯಿಂದಲೇ ತಾವು ಗುಣಮುಖರಾಗಿರುವಿರಿ. ನಾನು ನಿಮಗೆ ಯಾವ ಶಾಪವನ್ನೂ ಕೊಟ್ಟಿರಲಿಲ್ಲ. ತಮ್ಮ ಕರ್ಮ ಫಲ ತಮಗೆ ದೊರೆತಿದೆ. ಒಂದು ವೇಳೆ ನೀವು ಇಲ್ಲಿಗೆ ಬಾರದಿದ್ದರೆ ತಾವು ಮತ್ತು ತಮ್ಮ ಪರಿವಾರದವರು. ಮತ್ತಷ್ಟು ಪಾಪದ ಪ್ರಭಾವಕ್ಕೆ ಒಳಗಾಗುತ್ತಿದ್ದಿರಿ”. ಈಗ ಅದು ಇರುವುದಿಲ್ಲ ಏಕೆಂದರೆ ನೀವು ಉಪದೇಶ (ನಾಮೋಪದೇಶ) ಪಡೆದಿರುವಿರಿ. ಚೌಧರಿ ಭಾಜುರಾಮರು ತಮ್ಮ ಪರಿವಾರದವರಿಗೆಲ್ಲಾ ಉಪದೇಶ ಕೊಡಿಸಿದರು. ಇಂದಿಗೂ ಆ ಪರಿವಾರದವರು (ಪುಣ್ಯಾತ್ಮ ಭಾಜೂರಾಮರ ವಂಶದವರು) ಶ್ರೀ ಗರೀಬ್‌ದಾಸರ ಪೂಜೆಯನ್ನು ಮಾಡುತ್ತಾ ಬಂದಿದ್ದಾರೆ. ಸುಮಾರು ನೂರಾರು ಪರಿವಾರಗಳಿವೆ ಅವರನ್ನು ‘ಭಾಜೂವಾಡಾ’ ಎಂದೇ ಕರೆಯುತ್ತಾರೆ.

**ಏಕೆಂದರೆ:**

ತುಮನೆ ಉಸ್ ದರಗಾಹ ಕಾ ಮಹಲ ನ ದೇಖ್ಯಾ ।
ಧರ್ಮರಾಯ ಕೆ ತಿಲ್–ತಿಲ್ ಕಾ ಲೇಖ್ ।

ರಾಮ ಕ ಹೈ ಮೇರೆ ಸಾಧ ಕೋ, ದುಃಖ ನಾ ದೀಜೋ ಕೋಯೆ ।
ಸಾಧ ದುಖಾಯ ಮೈ ದುಃಖೀ । ಮೇರಾ ಆಪಾ ಭೀ ದುಃಖೀ ಹೋಯ ॥

ಹಿರಣ್ಯಕಶ್ಯಪು ಉದರ (ಹೊಟ್ಟೆ) ವಿದಾರಿಯಾ, ಮೈ ಹೀ ಮಾರಯಾ ಕಂಶ, ಜೊ ಮೇರೆ ಸಾಧು ಕೊ ಸತಾವೈ, ವಾಕಾ ಖೋ ದೂ ವಂಶ್ ॥

ಸಾಧು ಸತಾವನ ಕೋಟಿ ಪಾಪ ಹೈ, ಅನಗಿನ ಹತ್ಯಾ ಅಪರಾಧ ।
ದುರ್ವಾಸಾ ಕೀ ಕಲ್ಪ ಕಾಲಸೆ, ಪ್ರಲಯ ಹೋ ಗಯೆ ಯಾದವ" ॥

ಮೇಲಿನ ವಾಣಿಯಲ್ಲಿ ಸದ್ಗುರು ಗರೀಬ್ ದಾಸ್ ರವರು ಪ್ರಮಾಣ ನೀಡುತ್ತಿದ್ದಾರೆ. ಪರಮೇಶ್ವರರು ಸಂತರನ್ನು ಸತಾಯಿಸಿದರೆ ಆಗುವ ಶಿಕ್ಷೆ ಹೇಳುತ್ತಿದ್ದಾರೆ :– "ನನ್ನ ಭಕ್ತರಿಗೆ ಸಂತರಿಗೆ ದುಃಖ ಕೊಡಬೇಡಿರಿ. ಯಾರು ನನ್ನ ಸಂತರಿಗೆ ದುಃಖ ಕೊಡುವರೋ, ಅವರು ನನಗೆ ದುಃಖ ಕೊಟ್ಟಂತೆ ಎಂದು ತಿಳಿಯಿರಿ. ಯಾವಾಗ ನನ್ನ ಭಕ್ತ ಪ್ರಹ್ಲಾದನಿಗೆ ದುಃಖ ಕೊಟ್ಟರೋ, ಆಗ ಹಿರಣ್ಯಕಶಪುನ ಹೊಟ್ಟೆಯನ್ನು ಬಗೆದೆ. ನಾನೇ ಕಂಸ ವಧೆ ಮಾಡಿದ್ದು. ಯಾರು ನನ್ನ ಸಾಧುಗಳಿಗೆ ದುಃಖ ಕೊಡುವರೋ, ಅವರ ವಂಶವನ್ನೇ ನಾಶ ಮಾಡುತ್ತೇನೆ. ಸಂತರನ್ನು ಸತಾಯಿಸಿದರೆ ಕೋಟಿ ಪಾಪಗಳು ಅಂಟಿಕೊಳ್ಳುತ್ತವೆ. ಹೇಗೆಂದರೆ ಲೆಕ್ಕವಿಲ್ಲದಷ್ಟು ಹತ್ಯೆ ಮಾಡಿದ ಪಾಪ ಮಾಡಿದಷ್ಟು. ಅಜ್ಞಾನಿ ಜನರು ಪರಮಾತ್ಮನ ಪರಿಚಯವಿಲ್ಲದವರಾಗಿದ್ದಾರೆ. ಆದ್ದರಿಂದ ಭಯಂಕರವಾದ ತಪ್ಪುಗಳನ್ನು ಮಾಡುತ್ತಾರೆ. ನಂತರ ಶಿಕ್ಷೆಗೆ ಭಾಗಿಗಳಾಗುತ್ತಾರೆ. ಸಾಧುಗಳನ್ನು ಸತಾಯಿಸಿದರೆ ಈ ಕೆಳಗಿನ ಶಿಕ್ಷೆಯಾಗುತ್ತದೆ. "ಒಬ್ಬನು ಮತ್ತೊಬ್ಬನನ್ನು ಹತ್ಯೆ ಮಾಡಿದರೆ, ಅವನು ಮತ್ತೊಂದು ಜನ್ಮದಲ್ಲಿ ಅವನನ್ನು ಹತ್ಯೆ ಮಾಡಿ ಪಾಪ ಪೂರ್ಣಗೊಳಿಸುತ್ತಾನೆ. ಆದರೆ ಸಂತರನ್ನು ಸತಾಯಿಸಿದರೆ ಅನಂತ ಜನ್ಮಗಳಲ್ಲಿಯೂ ಆ ಪಾಪ ಕಳೆಯುವುದಿಲ್ಲ. ಸದ್ಗುರು ತಮ್ಮ ವಾಣಿಯಲ್ಲಿ ಹೇಳುತ್ತಾರೆ :–

ಅರ್ಧಮುಖೀ ಗರ್ಭವಾಸ ಮೆ ಹರದಮ್ ಬಾರಂಬಾರ್,
ಜೂನೀ ಭೂತ ಪಿಶಾಚಕೀ, ಜಬ್ ಲಗ ಸೃಷ್ಠಿ ಸಂಹಾರ ।

ಹೀಗೆ ತಪ್ಪುಮಾಡಿದವರಿಗೆ ಪರಮೇಶ್ವರನು, ಭಿನ್ನ ಪ್ರಾಣಿಗಳ ಯೋನಿಯಲ್ಲಿ ಪದೇ–ಪದೇ ಹುಟ್ಟುವಂತೆ ಮಾಡುತ್ತಾನೆ. ಅರ್ಥಾತ್ ಜನ್ಮವಾದ ಕೂಡಲೆ ಸಾಯುತ್ತಾ ಮತ್ತೆ–ಮತ್ತೆ ಹುಟ್ಟುತ್ತಾ ಇರುತ್ತಾನೆ. ಎಲ್ಲಿಯವರೆಗೆ ಸೃಷ್ಠಿಯಲ್ಲಿ ಪ್ರಳಯವಾಗುವುದಿಲ್ಲವೋ, ಅಲ್ಲಿಯವರೆಗೂ ಭೂತ–ಪಿಶಾಚಗಳಾಗಿ, ಅವುಗಳ ಯೋನಿಯಲ್ಲಿ ಮಹಾಕಷ್ಟವನ್ನು ಅನುಭವಿಸುತ್ತಾ ಹುಟ್ಟುತ್ತಾ–ಸಾಯುತ್ತಾ ಬಹಳ ದುಃಖಮಯವಾದ ಜೀವನವಿರುತ್ತದೆ. ಎಲ್ಲಿಯವರೆಗೆ ಇವರು ಸತಾಯಿಸಿದ ಸಂತರಿಂದಲೇ ಕ್ಷಮೆ ಸಿಗುವುದಿಲ್ಲವೋ, ಅಲ್ಲಿಯವರೆಗೂ ಬೇರೆ ಸಂತರೂ ಕ್ಷಮಿಸಲು ಆಗುವುದಿಲ್ಲ.

ಒಮ್ಮೆ ದೂರ್ವಾಸಾ ಮುನಿಯು ಅಭಿಮಾನ ವಶನಾಗಿ ಅಂಬರೀಷ ಮುನಿಯನ್ನು ಸಾಯಿಸಲೆಂದು ತನ್ನ ಶಕ್ತಿಯಿಂದ ಒಂದು ಸುದರ್ಶನ ಚಕ್ರವನ್ನು ಬಿಟ್ಟನು. ಚಕ್ರವು ಅಂಬರೀಷ ಮುನಿಯ ಕಾಲನ್ನು ಮುಟ್ಟಿ ವಾಪಸ್ಸು ದೂರ್ವಾಸಾ ಮುನಿಯನ್ನೆ ಸಾಯಿಸಲು ಅವರತ್ತ ಹೊರಟಿತು. ದೂರ್ವಾಸನಿಗೆ ತಾನು ತಪ್ಪು ಮಾಡಿದೆ ಎಂದು ಗೊತ್ತಾಯಿತು. ಆದರೆ ಹೆಚ್ಚಿನ ಸಮಯವಿಲ್ಲ ಎಂದು ತಿಳಿದು ಬ್ರಹ್ಮಾನ ಬಳಿ ಸೇರಿದ, ಹೇ ಭಗವಾನ್ ! ನನ್ನನ್ನು ಈ ಸುದರ್ಶನ ಚಕ್ರದಿಂದ ಪಾರು ಮಾಡು ಎಂದ. ಆಗ ಬ್ರಹ್ಮಾ ಹೇಳಿದ–ಋಷಿಗಳೇ ಇದು ನನ್ನಿಂದಾಗದ ಕೆಲಸ. ತನ್ನ ತಲೆಯ ಮೇಲಿನ ಹೊರೆಯನ್ನು ಮುಂದೆ ತಳ್ಳುತ್ತಾ, ತಾವು ಶಿವನಲ್ಲಿಗೆ ಹೋಗಿ, ಆಗ ದೂರ್ವಾಸರು ಭಗವಾನ್ ಶಿವನಲ್ಲಿಗೆ ಹೋದರು. ಪ್ರಾರ್ಥಿಸಿದರು–ಹೇ ಭಗವಾನ್! ನನ್ನನ್ನು ಈ ಸುದರ್ಶನ ಚಕ್ರದಿಂದ ಪಾರುಮಾಡು. ಆಗ ಶಿವನು ತನ್ನ ತಲೆಯ ಮೇಲಿನ ಭಾರವನ್ನು ತಳ್ಳುತ್ತಾ. ನೀನೀಗ

ವಿಷ್ಣು ಭಗವಾನನ ಹತ್ತಿರ ಹೋಗಿ ಎಂದರು ಕೂಡಲೆ ವಿಷ್ಣುವಿನಲ್ಲಿಗೆ ಹೋಗಿ ಪ್ರಾರ್ಥಿಸಿದರು. ಹೇ ಭಗವಾನ್! ಈಗ ನೀನೇ ಈ ಸುದರ್ಶನ ಚಕ್ರದಿಂದ ನನ್ನನ್ನು ಪಾರು ಮಾಡಲು ಸಾಧ್ಯ ಇಲ್ಲವಾದರೆ, ಇದು ನನ್ನನ್ನು ಕತ್ತರಿಸಿ ಕೊಲ್ಲುತ್ತದೆ. ಆಗ ವಿಷ್ಣು ಕೇಳಿದ ಹೇ ಋಷಿಗಳೇ ! ಈ ಸುದರ್ಶನ ಚಕ್ರ ನಿಮ್ಮನ್ನು ಏಕೆ ಸಾಯಿಸಬಯಸುತ್ತದೆ ? ಆಗ ದೂರ್ವಾಸರು ಮೇಲಿನ ಎಲ್ಲಾ ಕಥೆಯನ್ನೂ ಹೇಳಿದರು. ಆಗ ವಿಷ್ಣು ಹೇಳಿದನು–ನೀವು ಆ ಅಂಬರೀಷ ಋಷಿಗಳ ಪಾದಗಳನ್ನು ಹಿಡಿದು ಕ್ಷಮೆ ಯಾಚಿಸಿದರೆ, ಈ ಸುದರ್ಶನ ಚಕ್ರವು ನಿಮಗೆ ಪ್ರಾಣ ಭಿಕ್ಷೆ ಕೊಡಬಲ್ಲದು. ಇಲ್ಲವಾದರೆ ನಾನಲ್ಲ, ಬೇರೆ ಯಾವ ದೇವರೂ ನಿಮ್ಮನ್ನು ಉಳಿಸಲು ಸಾಧ್ಯವಿಲ್ಲ. ಇದಕ್ಕೆ ಬೇರೊಂದು ಪರಿಹಾರ ಮಾರ್ಗವಿಲ್ಲ. ಸಾಯುತ್ತಿರುವಾಗ ಮತ್ತೇನು ಮಾಡುತ್ತಾನೆ ? ದೂರ್ವಾಸರು ವಾಪಸ್ ಅಂಬರೀಷ ಮುನಿಗಳಲ್ಲಿಗೆ ಬಂದು ಕಾಲುಗಳನ್ನು ಹಿಡಿದು ಕೊಂಡು ಅಳತೊಡಗಿದರು ಹಾಗೂ ಹೃದಯದಿಂದ ಕ್ಷಮೆ ಯಾಚಿಸಿದರು. ಆಗ ಅಂಬರೀಷ ಮುನಿಗಳು ಆ ಸುದರ್ಶನ ಚಕ್ರವನ್ನು ಕೈಯಲ್ಲಿ ಹಿಡಿದು ದೂರ್ವಾಸರಿಗೇ ಕೊಟ್ಟರು. ಅವರಾಗ ದೂರ್ವಾಸರಿಗೆ ಹೇಳಿದರು. ಸಂತರಿಗೆ/ ಋಷಿಗಳಿಗೆ ಅಗೌರವ ಎಂದೂ ಮಾಡಬಾರದು. ಅದರ ಪರಿಣಾಮ ಬಹಳ ಕೆಟ್ಟದಾಗಿರುತ್ತದೆ.

"ಶ್ರೀ ಕೃಷ್ಣ ಗುರು ಕಸನೀ ಹುಯಿ, ಔರ್ ಬಜೇಗಾ ಕೌನ್"

**ಯಾವಾಗ ಶ್ರೀ ಕೃಷ್ಣನ ಗುರು ದೂರ್ವಾಸರಿಗೆ ಈ ಸ್ಥಿತಿಯಾದ ಮೇಲೆ, ಅನ್ಯ ಸಾಮಾನ್ಯರು ಹೇಗೆ ಉಳಿಯುತ್ತಾರೆ !.**



## ೮. ಅಲೆಮಾರಿಗಳಿಗೆ ಮಾರ್ಗ ಸಿಗುವ ವಿಷಯ

"ಭಕ್ತ ಸಮಾಜವು ಪ್ರಭುವಿನ ವಾಸ್ತವಿಕ ಭಕ್ತಿಯಿಂದ ಮೈಲಿಗಳವರೆಗೆ ದೂರ".

"ಸತ್ಯಲೋಕ ಆಶ್ರಮ" ಕರೌಂಥಾ, ಹರಿಯಾಣದ ರೋಹತಕ್ ಜಿಲ್ಲೆಯಲ್ಲಿ ಕವಿರ್ದೇವರು (ಕಬೀರ್ ಪರಮೇಶ್ವರ) ಪ್ರಕಟಗೊಂಡ ಸಮಯದ ಆಚರಣೆಯ 5 ದಿವಸದ (ದಿನಾಂಕ 18 ರಿಂದ 22 ಜೂನ್ 2005 ರ ತನಕ) ಸತ್ಸಂಗದ ಸಮಾರಂಭದಲ್ಲಿ ಭಕ್ತ ಬಸಂತ ಸಿಂಹ ಸೈನೀಯು ತನ್ನ ಕಥೆಯನ್ನು ಹೇಳಿದರು. ಈ ಕೆಳಗಿನಂತ್ತಿದೆ ದಯಮಾಡಿ ಓದಿರಿ.

### "ಪ್ರಭು ಪ್ರೇಮಿ ಭಕ್ತ ವಸಂತ ಸಿಂಹ ಸೈನೀ ಗೆ ಮಾರ್ಗ ದೊರೆತದ್ದು"

ನಾನು ವಸಂತ ಸಿಂಹ ಸೈನೀ ಹರಿಯಾಣದ ರೋಹತಕ್ ಜಿಲ್ಲೆಯ ಗಾಂಧರಾ ಹಳ್ಳಿಯವನು. ನನ್ನ ಹಿಂದಿನ ವಿಳಾಸ (ಹಿಂದೆ ವಾಸವಿದ್ದ) ಮನೆ ನಂ. 161, ಮದರ್ ಡ್ಯೆರಿ ಹತ್ತಿರ, ಪಾಂಡವ ನಗರ, ಯಮುನಾಪಾರ್, ದೆಹಲಿ–92. ಇಲ್ಲಿ ನಾನು ವಾಸವಿದ್ದೆ. ನಮ್ಮ ಪರಿವಾರದವರ ಮೇಲೆ ದುಃಖಗಳ ಪರ್ವತವೇ ಬಿದ್ದಿತ್ತು. ದುಃಖ ದೂರಮಾಡಿಕೊಳ್ಳಲು, ಹಾಗೂ ಪರಮಾತ್ಮನನ್ನು ಪಡೆಯಲು ಸಂತರು, ಮಹಂತರಲ್ಲಿಗೆ ಹೋಗಿ ಬರುತ್ತಿದ್ದೆ. ಆದರೆ ಎಲ್ಲಿಯೂ ದುಃಖಗಳು ನಿವಾರಣೆಯಾಗಲಿಲ್ಲ. ಪ್ರಸಿದ್ಧರಾದ, ಪರಿಚಿತರಾದ ಸಂತ ಶ್ರೀ ಆಸಾರಾಮ ಬಾಪು ರವರನ್ನು ಭೇಟಿ ಮಾಡಿದೆ. ಆ ಸಮಯದಲ್ಲಿ ಬಾಪೂಜಿಯ ಜೊತೆಯಲ್ಲಿ ದೆಹಲಿಯಲ್ಲಿ ಒಂದು ಸಾವಿರದಷ್ಟು (ಸುಮಾರು) ಜನರಿದ್ದರು. ಆದ ಕಾರಣ ಬಹಳ ಹತ್ತಿರದಿಂದ ಅವರನ್ನು ನೋಡುವ ಅವಕಾಶ ಸಿಕ್ಕಿತು. ನನ್ನ ದುಃಖವನ್ನು ಹಾಗೂ ಪರಮಾತ್ಮನನ್ನು ನೋಡುವ ಹಂಬಲವನ್ನು ಅವರ ಸಮ್ಮುಖದಲ್ಲಿ ತಿಳಿಸಿದೆ. ಅವರು ನನಗೆ 7 ಮಂತ್ರಗಳ ಉಪದೇಶ ನೀಡಿದರು. (ಓಂ ಗುರು, ಹರಿ ಓಂ, ಓಂ ಐಂ ನಮಃ, ಓಂ ನಮಃ ಶಿವಾಯ, ಓಂ ನಮೋ ಭಗವತೇ ವಾಸುದೇವಾಯ, ಹ್ರೀಂ ರಾಮಾಯ ನಮಃ, ಹಾಗೂ ಗಾಯತ್ರಿ ಮಂತ್ರ ಇತ್ಯಾದಿ) ಇವುಗಳಲ್ಲಿ ಒಂದನ್ನು ಆಯ್ಕೆಮಾಡಬಹುದೆಂದು ಹೇಳಿದರು. ಅದರಲ್ಲಿ ಒಂದು ಮಂತ್ರ ಸೋಹಂ, ಉಸಿರನ್ನು ಒಳಗೆ 'ಸೋ' ಹಾಗೂ ಹೊರಕ್ಕೆ ಬಿಡುವಾಗ 'ಹಂ' ಎಂದು ಜಪ (ಉಸ್ವಾಸ–ನಿಶ್ವಾಸ) ಮಾಡಲು ಹೇಳಿದರು. ಏಕಾದಶೀ ಹಾಗೂ ಪೂರ್ಣಿಮಯ ವ್ರತ, ಸೋಮವಾರದ ವ್ರತ, ಹಾಗೂ ಅಷ್ಟಮಿಯ ವ್ರತ ಮಾಡಲು ಹೇಳಿದರು. ಹೆಚ್ಚಾಗಿ ತ್ರಿಬಂಧ ಪ್ರಾಣಾಯಾಮ (ಪೂರಕ–ಕುಂಭಕ–ರೇಚಕ) ಹಾಗೂ ಸಿದ್ಧಾಸನದಲ್ಲಿ ಕುಳಿತು ಧ್ಯಾನ ಮಾಡುತ್ತಾ, ಅನುಷ್ಠಾನ ಮಾಡಲು ಹೇಳಿದರು. ನಾವು ಮಂತ್ರೋಪದೇಶ ಪಡೆದೆವು.

ನಮ್ಮ ದುಃಖವನ್ನು ಅವರ ಮುಂದೆ ಹೇಳಿದೆವು. ನಮ್ಮ ದೊಡ್ಡಪ್ಪನವರು 40 ವರ್ಷಗಳ ಹಿಂದೆ ಮರಣ ಹೊಂದಿದರು. ಈಗ ಅವರು ಬಹುದೊಡ್ಡ ಪ್ರೇತವಾಗಿದ್ದಾರೆ. ಅವರು ನಮ್ಮ ಇಬ್ಬರು ಸೋದರರನ್ನು ಸಾಯಿಸಿದರು. 8–10 ಎಮ್ಮೆಗಳನ್ನು ಸಾಯಿಸಿದರು. 5–6 ಹಸುಗಳನ್ನು ಸಾಯಿಸಿದರು ದನಗಳ ಕರುಗಳು ಬದುಕಿ ಉಳಿಯುತ್ತಿರಲಿಲ್ಲ. ಮನೆಯಲ್ಲಿ ಎಲ್ಲಾ ಸದಸ್ಯರು ರೋಗದಿಂದ ನರಳುತ್ತಿದ್ದರು ದುಃಖದ ಕಾರಣದಿಂದ ನಮ್ಮ ಪರಿಸ್ಥಿತಿ ಕೆಟ್ಟಿದೆ. ಯಾವುದೇ ಕೆಲಸ ಕಾರ್ಯಗಳನ್ನು ಮಾಡಲಾಗುತ್ತಿಲ್ಲ ಈಗ ಹೇಳುತ್ತಿದೆ (ಪ್ರೇತಾತ್ಮ) ನಿಮ್ಮ ತಂದೆಯವರನ್ನೂ ಕರೆದುಕೊಂಡು ಹೋಗುವೆನು ಎಂದು."ನಾವು ಬಾಪೂಜೀಯವರಲ್ಲಿ ಪ್ರಾರ್ಥಿಸಿದೆವು. ನಮ್ಮನ್ನು ಕಾಪಾಡಿರಿ ಎಂದು, ಆದರೆ 6 ತಿಂಗಳ ನಂತರ ತಂದೆಯವರು ತೀರಿಕೊಂಡರು ಬಾಪೂಜಿ ಹೇಳಿದರು. ಏನು ಆಗಿದೆಯೋ ಅದು ಆಗಲೇ ಬೇಕಿತ್ತು. ಪಶುಗಳ ಹಾನಿ, ಧನಹಾನಿ, ಶಾರೀರಿಕ

ರೋಗಗಳು ಇವೇಲ್ಲಾ ಪಾಪದ ಫಲ, ಇದನ್ನು ಜೀವಿಯ ಪ್ರಾರಬ್ಧದಲ್ಲಿ ಬರೆದಿರುತ್ತದೆ. ಅದನ್ನು ಅನುಭವಿಸಲೇ ಬೇಕು. ನೀವು ಭಕ್ತಿ ಮಾಡಿರಿ.

ನಾವು ಆಗ ಪರಮಾತ್ಮನನ್ನು ಪಡೆಯಲು ಭಕ್ತಿಯಲ್ಲಿ ತೊಡಗಿದೆವು, ಬಾಪೂಜಿ ಯವರು ಹೇಳಿದ ಪ್ರಕಾರ ನಾವು ಪೂರ್ಣ ಶ್ರದ್ಧೆಯಿಂದ ಭಕ್ತಿಯಲ್ಲಿ ತೊಡಗಿದೆವು. ನಾನು (ಬಸಂತ ದಾಸ್) ಮೊದಲು ಶ್ರೀ ಆಸಾರಾಮ ಬಾಪೂ ಆಶ್ರಮ ದೇಹಲಿಯಲ್ಲಿ 40 ದಿನಗಳ ಅನುಷ್ಠಾನ ಮಾಡಿದೆ. ಮಹಂತ ನರೇಂದ್ರ ಬ್ರಹ್ಮಚಾರಿಯವರ ಸಲಹೆಯಂತೆ ಮಾಡಿದೆ. ಇದಾದ ನಂತರ 40 ದಿನಗಳ 6 ಅನುಷ್ಠಾನವನ್ನು ಆಸಾರಾಮ ಬಾಪೂ ಆಶ್ರಮ ಪಂಚೇಡ ರತಲಾಮ ಮಧ್ಯ ಪ್ರದೇಶದಲ್ಲಿ ಮಹಂತ ಕಾಕಾಜೀಯವರ ನಿಗದಲ್ಲಿ ಮಾಡಿದೆ. ಅದಾದ ನಂತರ 2 ಅನುಷ್ಠಾನವನ್ನು ಆಸಾರಾಮ ಆಶ್ರಮ ಸಾಬರಮತಿ, ಅಹಮದಾಬಾದ್, ಗುಜರಾತಿನ ಮೌನಮಂದಿರಲ್ಲಿ ಮಾಡಿದೆ. ಅಲ್ಲಿ ಶ್ರೀ ಆಸಾರಾಮ ಬಾಪೂಜೀಯವರೊಂದಿಗೆ ಚೆನ್ನಾಗಿ ಮಾತನಾಡುವ ಅವಕಾಶ ಸಿಕ್ಕಿತು. ಆಗ ನಾನು ಬಾಪೂಜೀಯವರನ್ನು ಕೇಳಿದೆ–"ಯಾವ ಪರಮಾತ್ಮನನ್ನು ನೋಡಲೆಂದು ನಾನು ಹಾಗೂ ಎಲ್ಲಾ ಭಕ್ತ ಸಮಾಜವು ಧ್ಯಾನದಲ್ಲಿ ತೊಡಗಿರುವೆವೊ, ಆ ಪರಮಾತ್ಮ ಯಾರು ಹೇಗಿದ್ದಾನೆ? ಎಲ್ಲಿ ಇರುತ್ತಾನೆ? ತಿಳಿಸಿಕೊಡುವ ಕೃಪೆ ಮಾಡಿರಿ."

ಈ ಮಾತನ್ನು ಕೇಳಿ ಬಾಪೂಜಿ ಹೇಳಿದರು–ನೀವೂ ಹೀಗೆಯೇ ಭಕ್ತಿ ಕಾರ್ಯದಲ್ಲಿ ತೊಡಗಿರಿ ಗೊತ್ತಾಗುವುದು. ಗೀತೆಯ ಒಂದು ಅಧ್ಯಾಯವನ್ನು ಪ್ರತಿದಿನ ಓದಿರಿ. ನನ್ನನ್ನು ನೋಡಬೇಕೆಂಬ ಇಚ್ಛೆಯಾದಾಗ, 3 ದಿನಗಳ ವರೆಗೆ ಒಂದು ಕೊಠಡಿಯೊಳಗೆ ಹೋಗಿ ಬಾಗಿಲು ಹಾಕಿಕೊಳ್ಳಿರಿ. ಹಾಗೆ ಕೊಠಡಿಯೊಳಗೆ ಬಂದಿಯಾಗುವ ಮೊದಲ ದಿನ, ಊಟ–ನೀರು ಎಲ್ಲವನ್ನು ತ್ಯಜಿಸಬೇಕು. ಏಕೆಂದರೆ ಸಂಜೆಯವರೆಗೆ ಮಲ ಮೂತ್ರ ವಿಸರ್ಜನೆ ಮಾಡಬಾರದು. ಅದಾದ ಮೂರು ದಿನಗಳ ವರಗೆ ತಿನ್ನುವುದಾಗಲಿ, ಕುಡಿಯುವುದಾಗಲೀ ಮಾಡುವಂತಿಲ್ಲ. ಹೊರಗೆ ಬರಬಾರದು. ಕೊಠಡಿಯಲಿ ಇದ್ದು ತ್ರಾಟಕ ಮಾಡು. (ಯೋಗದ ಒಂದು ಮುದ್ರೆ) ಮನೆಗೆ ಹೋಗಿ, ಹೀಗೆಯೇ ಮೂರು ಬಾರಿ ಮಾಡಿದೆ. ಆದರೆ ದೇವರ ದರ್ಶನವಾಗಲಿಲ್ಲ. ಅನುಷ್ಠಾನದ ಸಮಯದಲ್ಲಿ ಜೀವನ–ಮೃತ್ಯುವಿನ ಜೊತೆ ಹೋರಾಡಿ ಖಾಯಿಲೆಗೆ ಒಳಗಾದೆ, ಆದರೂ ಪುನಃ ಪರಮಾತ್ಮನನ್ನು ಕಾಣುವ ಪ್ರಯತ್ನದಲ್ಲಿ ತೊಡಗಿದ್ದೆ.

ಡಿಸೆಂಬರ್ 2000 ದಲ್ಲಿ ಸಂತ ರಾಮ್‌ಪಾಲ್‌ದಾಸ್ ರವರ ಸತ್ಸಂಗವನ್ನು ರೋಹತಕ್‌ನ ಕಾಠಮಂಡೀಯಲ್ಲಿ ಕೇಳಿದೆ. ಅವರು ತತ್ವಜ್ಞಾನದ ಆಧಾರದಲ್ಲಿ ಗೀತೆಯನ್ನು ಅರ್ಥಮಾಡಿಸಿದರು. ಅದಾದ ಮೇಲೆ ಗೀತೆಯನ್ನು ಓದಲು ಮನಸ್ಸು ಬಯಸುತ್ತಿತ್ತು. ಗೀತೆಯಲ್ಲಿ ಭಗವಂತ ಏನನ್ನು ಹೇಳಿದ್ದಾನೆ. ಆದರೆ ಬಾಪೂಜಿಯವರು ಏನು ಹೇಳುತ್ತಿದ್ದಾರೆ. ನಾನೇನಾದರೂ ಭಗವಂತನ ವಿರುದ್ಧವಾಗಿ ಸಾಧನೆ ಮಾಡುತ್ತಿರುವೆನೋ? ಸಂತ ರಾಮ್‌ಪಾಲ್ ರವರಿಂದ ಕೇಳಿದ ಗೀತೆಯ ಅನುವಾದದಿಂದ ಅಂತರಾತ್ಮ ಅಳತೊಡಗಿತು. ಬಾಪೂಜಿಯವರನ್ನು ಭೇಟಿಯಾಗಿ ಈ ಎಲ್ಲಾ ಅನುಮಾನಗಳನ್ನು ಕೇಳಬೇಕು ಎನಿಸಿತು. ನಾನು ಬಾಪೂಜಿಯಲ್ಲಿಗೆ ಗೀತೆಯನ್ನು ತೆಗೆದುಕೊಂಡು ಹೋಗಿ, ಗೀತೆಯನ್ನು ತೋರಿಸಿ, ಎಲ್ಲ ಅನುಮಾನಗಳನ್ನು ಕೇಳಿದೆ. ಆದರೆ ಬಾಪೂಜೀಯವರು ಯಾವುದೇ ಅನುಮಾನಕ್ಕೆ ಸಮಾಧಾನ ಹೇಳಲಿಲ್ಲ. "ನಾನು ಬಾಪೂಜೀಯವರನ್ನು ಕೇಳಿದೆ–ನಿಮಗೆ ಪರಮಾತ್ಮನ ಬಗ್ಗೆ ತಿಳಿದಿಲ್ಲದಿದ್ದರೆ, ನೀವೇಕೆ ಭಕ್ತಜನರಿಗೆ ಕಷ್ಟಕೊಡುತ್ತಿರುವಿರಿ. ಆಗ ಬಾಪೂಜಿಯವರು ನನ್ನನ್ನು ಬಿರುಗಣ್ಣಿನಿಂದ ನೋಡುತ್ತಾ–ನಿನಗೇನು ಗೊತ್ತು ಭಕ್ತಿಯ ವಿಷಯದಲ್ಲಿ ಅಂದರು. ನಾನಾಗ ಅಳುತ್ತಾ ಮನೆಗೆ ಬಂದೆ.

ಪರಮಾತ್ಮನ ಪ್ರಾಪ್ತಿಯಾಗಿರದ ಕಾರಣ, ಹಾಗೂ ಸಂಕಷ್ಟದ ದಿನಗಳನ್ನು ನೋಡುತ್ತಾ,

ಹಠರೂಪದ ಅನುಷ್ಠಾನ ಹಾಗೂ ವ್ರತಗಳಿಂದ ದೇಹವು ದುರ್ಬಲ ವಾಯಿತು. ರೋಗಗ್ರಸ್ತನಾಗಿ ಸಾವಿಗೆ ಹತ್ತಿರವಾಗುತ್ತಿರುವಂತೆ ಕಾಣಿಸತೊಡಗಿತು. ಪುನಃ ಬೇರೆ ಸಂತರ (ರಾಧಾಸ್ವಾಮಿ ಪಂಥ, ಧನ್-ಧನ್ ಸಂತ್‌ಗುರು, ಶ್ರೀ ಸತ್‌ಪಾಲ್‌ರವರು, ಬಾಲಯೋಗೇಶ್ವರ ರವರು, ದೀವ್ಯಜ್ಯೋತಿ ಬ್ರಹ್ಮಕುಮಾರಿ, ನೀರಂಕಾರಿ ಮಿಶನ್,ಜಯ ಗುರುದೇವ ಮಥುರಾದವರು ಮೊದಲಾದವರ) ಹತ್ತಿರ ಅಲೆದಾಡಿದೆ. ಆದರೆ ಮೇಲೆ ಹೇಳರುವಂತೆ ಸಂತ ರಾಮ್‌ಪಾಲ್ ಮಹಾರಾಜರು ತಿಳಿಸಿರುವ ಜ್ಞಾನ, ಬೇರೆ ಯಾವ ಸಂತ-ಪಂಥದ ಬಳಿ ಇಲ್ಲ. ಯಾರಿಗೆ ಪರಮಾತ್ಮನ ಪ್ರಾಪ್ತಿಯಾಗಿದೆಯೋ ಅವರು ಮಾತ್ರ ಪರಮಾತ್ಮ ಯಾರು? ಹೇಗಿದ್ದಾನೆ? ಎಲ್ಲಿದ್ದಾನೆ ಎಂದು ಹೇಳಬಲ್ಲರು. ಈ ರೀತಿ ಯೋಚಿಸಿ ನಾನು ಬಿದ್ದು ಬಿದ್ದು ಅಳುತ್ತಲಿದ್ದೆ. ಸಂತರ ಮೇಲಿನ ನನ್ನ ವಿಶ್ವಾಸ ಹಾರಿಹೋಯಿತು. ಮನಸ್ಸಿನಲ್ಲಿ ಬಂತು, ಶ್ರೀ ಆಸಾರಾಮ ರಂತಹ ಸುಪ್ರಸಿದ್ಧ ಸಂತರು ಶಾಸ್ತ್ರ ವಿಧಿಗೆ ವಿರುದ್ಧವಾಗಿ ಶಾಸ್ತ್ರ ತ್ಯಜಿಸಿ ಮನಬಂದಂತೆ ಆಚರಣೆ ಮಾಡುತ್ತಾ ಮಾಡಿಸುತ್ತಾ ಇದ್ದಾರಲ್ಲ ಎಂದು". ಹೀಗಿರುವಾಗ ಯಾವ ಸಂತರಲ್ಲಿ ವಿಶ್ವಾಸವಿಡುವುದು? ಸಂತ ರಾಮ್‌ಪಾಲ್ ರವರು ಶ್ರೇಷ್ಠವಾದ ಜ್ಞಾನವನ್ನು ಹೇಳುತ್ತಿದ್ದಾರೆ. ಜನರಿಗೆ ತಿಳಿಸುತ್ತಿದ್ದಾರೆ. ಆದರೆ ಇವರ ಹತ್ತಿರ ಜನಸಮೂಹ (ಶಿಷ್ಯರು) ಸ್ವಲ್ಪ ಇದೆ. ಇವರು ಪೂರ್ಣ ಸಂತರಾಗಲು ಹೇಗೆ ಸಾಧ್ಯ? ಈ ಅನುಮಾನ ಮನಸ್ಸಿನಲ್ಲಿ ಬಂತು. ಕೆಲವು ದಿನಗಳ ನಂತರ, ಸಂತ ರಾಮ್‌ಪಾಲ್ ಮಹಾರಾಜರ ಒಬ್ಬ ಶಿಷ್ಯ, ನಮ್ಮ ಹಳ್ಳಿಯವನೇ ಅವನು ನನಗೆ ಸಿಕ್ಕಿದ. ನನ್ನ ಕತೆ ಕೇಳಿದ ಅವನು ಪುನಃ (ಎರಡನೆಯ ಬಾರಿ, ಪರಮಾತ್ಮನ ಸ್ವರೂಪ ಸಂತ ರಾಮ್‌ಪಾಲ್ ಮಹಾರಾಜರ ಸತ್ಸಂಗಕ್ಕೆ ಕರೆದುಕೊಂಡು ಹೋದ. ನಾನು ಒಂದು ಗಂಟೆ ಅವರ ಸತ್ಸಂಗ ಕೇಳಿದೆ. ನಂತರ ಅಳುತ್ತಾ ಸಂತ ರಾಮ್‌ಪಾಲ್ ಮಹಾರಾಜರನ್ನು ಭೇಟಿ ಮಾಡಿದೆ. ಮಹಾರಾಜ ಯವರು ನನ್ನನ್ನು ಆಲಿಂಗನ (ಹೃದಯಕ್ಕೆ ಬಾಚಿ ತಬ್ಬಿ) ಮಾಡಿಕೊಂಡು ಹೇಳಿದರು. ನೀನು ಯಾವ ಸಂತರಲ್ಲಿಗೆ ಹೋಗುತ್ತಿರುವೆಯೋ, ಅವರು ಮನಬಂದಂತೆ, ಶಾಸ್ತ್ರ ವಿರುದ್ಧ ಆಚರಣೆ ಮಾಡಿಸುತ್ತಾ ಇದ್ದಾರೆ. ನನಗೇನು ಬೇಕು ಎಂಬುದನ್ನು ಸಂತ ರಾಮ್‌ಪಾಲ್ ಮಹಾರಾಜರು ಅರಿತಿದ್ದರು.ಅವರು ಚರಣಗಳ ಬಳಿ ಕೂರಿಸಿಕೊಂಡು ನನ್ನೆಲ್ಲಾ ಅನುಮಾನಗಳಿಗೆ ಸಮಾಧಾನ ಹೇಳಿದರು.

ತತ್ವದರ್ಶಿ ಸಂತರಾದ ರಾಮ್‌ಪಾಲ್ ಮಹಾರಾಜರು ತಿಳಿಸಿದರು. ಗೀತೆಯ 9ನೇ ಅಧ್ಯಾಯದ 25ನೇ ಶ್ಲೋಕದಲ್ಲಿ ಪಿತೃಪೂಜೆ ಅರ್ಥಾತ್ ಶ್ರಾದ್ಧ ಮಾಡುವುದನ್ನು ಒಪ್ಪುವುದಿಲ್ಲ. ಬೇರೆ ದೇವ-ದೇವಿಯರ ಪೂಜೆ ಮಾಡುವವರನ್ನು ಮಂದಬುದ್ಧಿಯವರು ಎಂದು ಬರೆದಿದೆ. (ಗೀತೆಯ 7ನೇ ಅಧ್ಯಾಯದ 12 ರಿಂದ 15 ಹಾಗೂ 20 ರಿಂದ 23ನೇ ಶ್ಲೋಕಗಳಲ್ಲಿ) ಆದರೆ ಶ್ರೀ ಆಸಾರಾಮರು "ಶ್ರಾದ್ಧ ಮಹಿಮಾ" ಎಂಬ ಪುಸ್ತಕದಲ್ಲಿ ಶ್ರಾದ್ಧ-ವಿಧಿ ಶ್ರೇಷ್ಠ ಕರ್ಮ ಎಂದು, ಶ್ರೇಷ್ಠ ವಿಧಿ ಎಂದು ತಿಳಿಸಿದ್ದಾರೆ. ಸಂತ ಶ್ರೀ ಆಸಾರಮ ರವರ ಸಾಬರಮತಿ ಅಹಮದಾಬಾದ್ ನಿಂದ ಪ್ರಕಾಶಿತ ಪತ್ರಿಕೆ "ಋಷಿಪ್ರಸಾದ್" ಅಂಕ 135 ಮಾರ್ಚ್ 2004 ನಲ್ಲಿ ಭೂತ ಪೂಜೆ ಮಾಡುವರು, ಪಿತೃಗಳನ್ನು ಪೂಜಿಸುವವರು ಹಾಗೂ ಬೇರೆ ದೇವ-ದೇವತೆಯರನ್ನು ಪೂಜಿಸುವವರು. ಏನಾಗುವರು? ಓದಿರಿ ಪತ್ರಿಕೆಯ ಮುಂದಿನ ಅಂಕದಲ್ಲಿ......... ಮುಂದಿನ ಅಂಕದ ಪತ್ರಿಕೆ "ಋಷಿಪ್ರಸಾದ್" ಅಂಕ 136 ಏಪ್ರಿಲ್ 2004 ಪುಟ 19 ರಲ್ಲಿ ಬರೆದಿದೆ. ಭೂತವನ್ನು ಪೂಜಿಸುವವರು ಭೂತ ಲೋಕವನ್ನು ಹೊಂದುವರು, ಪಿತೃ ಪೂಜೆ ಮಾಡುವವರು ಪಿತೃಲೋಕವನ್ನು ಹೊಂದುವರು. ಹಾಗೂ ಶ್ರೀ ಕೃಷ್ಣನ ಪೂಜಾರಿಗಳು ಭಗವಾನ್ ಶ್ರೀ ಕೃಷ್ಣನ ವೈಕುಂಠ ಲೋಕಕ್ಕೆ ಹೋಗುವರು. ವಿಚಾರ ಮಾಡಬೇಕಾದ ಅಂಶವೆಂದರೆ-ಶ್ರೀ ಆಸಾರಾಮ ರವರಿಂದ ಪ್ರಕಾಶಿತಗೊಂಡಿರುವ "ಶಾದ್ಧ ಮಹಿಮಾ" ಹೆಸರಿನ ಪುಸ್ತಕದಲ್ಲಿ ಪಿತೃ ಪೂಜೆಯ ವಿಧಿಯನ್ನು ಒಳ್ಳೆಯ ವಿಧಿ ಎಂದು ಸಹ ಬರೆದಿರುವರು.

ದಯವಿಟ್ಟು ಯೋಚಿಸಿ:- ಯಾರಾದರೂ ವ್ಯಕ್ತಿ ಹೀಗೆ ಹೇಳುತ್ತಾರೆಯೆ?- "ಬಾವಿಗೆ ಬೀಳುವ

ವ್ಯಕ್ತಿಯು ಮೃತ್ಯು ಹೊಂದುತ್ತಾನೆ. ನಂತರ ಸ್ವಯಂ ಬಾವಿಗೆ ಬೀಳುವ ಪರಾಮರ್ಶೆ ಮಾಡಿದ್ದಾರೆ ಹಾಗೂ ಹೇಳುತ್ತಾರೆ–ನಾನು ಬಾವಿಗೆ ಬೀಳುವ ಒಳ್ಳೆಯ ರೀತಿಯನ್ನು (ವಿಧಿ) ತಿಳಿಸುತ್ತೇನೆ.

ಏನೆಂದರೆ ಎರಡೂ ಕಾಲುಗಳನ್ನು ಎತ್ತಿ ಒಮ್ಮೆಗೆ ಬಾವಿಗೆ ಜಿಗಿಯಿರಿ. ಇದು ಬಾವಿಗೆ ಬಿದ್ದು ಸಾಯುವ ಶ್ರೇಷ್ಠ ವಿಧಿ. ಯಾರು ಈ ವಿಧಿಯಿಂದ ಮಾಡುವುದಿಲ್ಲವೋ, ಅವರು ದೋಷಿಯಾಗುತ್ತಾರೆ." ಏನು ಈ ವ್ಯಕ್ತಿ ನಿಷ್ಟಾವಂತನೆ? ಈ ಪೀಠಿಕೆಯನ್ನು ಶ್ರೀ ಆಸಾರಾಮ ಸಂತರು ಮಾಡುತ್ತಿದ್ದಾರೆ. ಒಂದು ಕಡೆ ಹೇಳುತ್ತಾರೆ. ಪಿತೃ ಹಾಗೂ ಭೂತ ಪೂಜೆ ಮಾಡುವವರು ಪಿತೃಲೋಕ ಹಾಗೂ ಭೂತಲೋಕಕ್ಕೆ ಹೋಗುತ್ತಾರೆ. ಅಲ್ಲಿ ಅವರು ಹಸಿವು ಬಾಯಾರಿಕೆಯಿಂದ ಇರುತ್ತಾರೆ. ನಂತರ ಅವರನ್ನು ಶ್ರಾದ್ಧಾದಿಗಳಿಂದ ತೃಪ್ತಿಪಡಿಸುತ್ತಾರೆ. ಮತ್ತೊಂದು ವಿಚಾರಣೀಯ ವಿಚಾರವೆಂದರೆ, ಯಾವಾಗ ನಮ್ಮ ಅಪ್ಪ ಅಮ್ಮ (ತಂದೆ–ತಾಯಿ) ಬದುಕಿರುವಾಗ ಕನಿಷ್ಠ **2** ಬಾರಿ ಊಟಮಾಡುತ್ತಿದ್ದರು. ಈಗ ಸಾವಿನ ನಂತರ ಶ್ರೀ ಗೀತೆಯ ವಿರುದ್ಧ ಸಾಧನೆ ಮಾಡಿ ದುಃಖಕರವಾದ ಭೂತ ಅಥವಾ ಪಿತೃಗಳಾಗಿದ್ದಾರೆ. ಈಗ ಅವರು ಒಂದು ದಿನದ ಶ್ರಾದ್ಧದಿಂದ ಹೇಗೆ ತೃಪ್ತರಾಗುತ್ತಾರೆ? ಉಳಿದ **364** ದಿನ **(365–1)** ಏನನ್ನು ತಿನ್ನುವರು. ಇದಕ್ಕಾಗಿ ಸಂತರು ಗುರು ಜನರು ದೋಷಿಯಾಗಿದ್ದಾರೆ. ಅವರು ಮುಗ್ಧ ಆತ್ಮಗಳನ್ನು ದಾರಿ ತಪ್ಪಿಸುತ್ತಿದ್ದಾರೆ. ಶಾಸ್ತ್ರ ಜ್ಞಾನವಿಲ್ಲದ ಸಂತರು ಈ ಜೀವಗಳನ್ನು ಶಾಸ್ತ್ರ ವಿಧಿಗೆ ವಿರುದ್ಧವಾಗಿ ಸಾಧನೆ ಮಾಡಿಸಿ ದುಃಖಕರವಾದ ಯೋನಿಗಳಲ್ಲಿ ಹಾಕುತ್ತಿದ್ದಾರೆ.

ಶ್ರೀ ಆಸಾರಾಮ ರವರು ಶಿವನ ಉಪಾಸನೆಯ ಮಂತ್ರ (ಓಂ ನಮಃ ಶಿವಾಯ) ಶ್ರೀ ವಿಷ್ಣುವಿನ ಮಂತ್ರ (ಓಂ ನಮೋ ಭಗವತೆ ವಾಸುದೇವಾಯ) ವನ್ನುತಿಳಿಸುತ್ತಾರೆ. ಇದಲ್ಲದೆ ಹರಿ ಓಂ, ಓಂ ಗುರು, ಮುಂತಾದ ಹೆಸರುಗಳಲ್ಲಿ ಯಾವುದಾದರೂ ಒಂದು ಮಂತ್ರವನ್ನು (ಇಚ್ಛೆಗೆ ಅನುಸಾರವಾಗಿ) ಆರಿಸಿ ಕೊಳ್ಳಲು ಹೇಳುತ್ತಾರೆ ಹಾಗೂ 'ಸೋಹಂ' ಮಂತ್ರವನ್ನು ಎರಡು ಭಾಗಮಾಡಿ, ಉಸಿರಿನ ಮೂಲಕ ಸ್ಮರಣೆ ಮಾಡುವ ಮಂತ್ರ ತಿಳಿಸುತ್ತಾರೆ. ಇದಕ್ಕೆ ಯಾವುದೇ ಶಾಸ್ತ್ರ ಪ್ರಮಾಣವಿಲ್ಲ.

ವಿಚಾರ ಮಾಡಿರಿ–ಯಾರೋ ರೋಗಿಯು, ಹೊಟ್ಟೆ ನೋವಿನ ಚಿಕಿತ್ಸೆಗಾಗಿ ವೈದ್ಯರ ಹತ್ತಿರ ಹೋಗುತ್ತಾನೆ. ವೈದ್ಯರು ರೋಗಿಯ ಮುಂದೆ **6** ರೀತಿಯ ಮಾತ್ರೆಗಳನ್ನು ಇಟ್ಟು, ಇವುಗಳಲ್ಲಿ ನಿನಗೆ ಇಷ್ಟವಾದ ಯಾವುದಾದರೂ ಒಂದನ್ನು ತೆಗೆದುಕೊ ಎಂದು ಹೇಳಿದರೆ. ಅವರು ವೈದ್ಯರೆನಿಸುವರೆ? ಪವಿತ್ರ ಗೀತೆಯ **8**ನೇ ಅಧ್ಯಾಯದ **13**ನೇ ಶ್ಲೋಕದಲ್ಲಿ ಹೇಳಿದೆ:–

ಓಂ, ಇತಿ, ಏಕಾಕ್ಷರಮ್, ಬ್ರಹ್ಮ, ವ್ಯಾಹರನ, ಮಾಮ್, ಅನುಸ್ಮರನ್, ಯಃ ಪ್ರಯಾತಿ
ತ್ಯಜನ್, ದೇಹಮ್, ಸಃ ಯಾತಿ ಪರಮಾಮ್, ಗತಿಮ್ ॥ 13 ॥

ಇದರ ಶಬ್ದಾರ್ಥ– ಗೀತೆಯನ್ನು ಹೇಳಿರುವ ಬ್ರಹ್ಮ ಅರ್ಥಾತ್ ಕಾಲನು ಹೇಳುತ್ತಿದ್ದಾನೆ (ಮಾಮ್ ಬ್ರಹ್ಮ) "ನಾನು ಬ್ರಹ್ಮ. ನನಗೆ (ಇತಿ) ಇದು ಒಂದು (ಓಂ ಏಕಾಕ್ಷರಮ್ ) ಓಂ ಎಂಬ ಒಂದು ಅಕ್ಷರವಿದೆ. (ವ್ಯಾಹರನ್) ಇದನ್ನು ಉಚ್ಚಾರಣೆ ಮಾಡಿ (ಅನುಸ್ಮರನ್) ಸ್ಮರಣೆ ಮಾಡುತ್ತ, (ಯ:) ಯಾವ ಸಾಧಕನು (ತ್ಯಜನ್ ದೇಹಮ್) ಶರೀರ ಬಿಡುವವರೆಗೂ, / ಕಡೆ ಉಸಿರಿನವರೆಗೂ (ಪ್ರಯಾತಿ) ಸ್ಮರಣೆ–ಸಾಧನೆ ಮಾಡುತ್ತಾನೋ, (ಸಃ) ಆ ಸಾಧಕನು (ಪರಮಾಮ್ ಗತಿಮ್) ಪರಮ ಗತಿಯನ್ನು (ಯಾತಿ) ಹೊಂದುವನಾಗುತ್ತಾನೆ.

ಭಾವಾರ್ಥ:– ಶ್ರೀ ಕೃಷ್ಣನ ಶರೀರದಲ್ಲಿ ಪ್ರೇತವಾಗಿ ಪ್ರವೇಶ ಮಾಡಿದ ಬ್ರಹ್ಮ ಅರ್ಥಾತ್ ಸಾವಿರ ಭುಜಗಳಿರುವ ಜ್ಯೋತಿ ನಿರಂಜನ/ ಕಾಲ ಹೇಳುತ್ತಿದ್ದಾನೆ. ನನ್ನ/ ಬ್ರಹ್ಮನ ಸಾಧನೆ ಕೇವಲ ಒಂದು 'ಓಂ' ನಾಮ ಇದನ್ನು ಕಡೆ ಉಸಿರಿನವರೆಗೂ ಸಾಧನೆ ಮಾಡುವವನು, ನನ್ನನ್ನು ಹೊಂದುವ (ಸೇರುವ) ಲಾಭವನ್ನು ಪಡೆಯುತ್ತಾನೆ. ಬೇರೆ ಯಾವುದೇ ಮಂತ್ರ, ನನ್ನ ಭಕ್ತಿಯ ಮಂತ್ರವಲ್ಲ. ತನ್ನ ಗತಿಯನ್ನು ಗೀತೆಯ **7**ನೇ ಅಧ್ಯಾಯದ **18**ನೇ ಮಂತ್ರ ಅನುತ್ತಮಾಮ್ ಅರ್ಥಾತ್

ಅನುತ್ತಮ (ಕೆಟ್ಟದು) ವಾದದ್ದು ಎಂದು ತಿಳಿಸಿದ್ದಾನೆ. ಇದರ ಪ್ರಮಾಣವು ಗೀತೆಯ 9ನೇ ಅಧ್ಯಾಯದ 20 ರಿಂದ 25ನೇ ಮಂತ್ರಗಳಲ್ಲಿ ಹೇಳಿದೆ. ಅದು ಮೂರು ವೇದಗಳಲ್ಲಿ (ಋಗ್ವೇದ, ಯಜುರ್ವೇದ,ಹಾಗೂ ಸಾಮವೇದ) ವರ್ಣಿಸಿರುವ ರೀತಿ ಯಾರು ಸಾಧನೆ ಮಾಡುತ್ತಾರೋ ಹಾಗೂ ಬೇರೆ ದೇವರುಗಳ ಪೂಜೆ ಮಾಡುವರೊ, ಅವರಿಗೆ ಜನ್ಮ, ಮೃತ್ಯು, ಹುಟ್ಟು-ಸಾವು ಹಾಗೂ ನರಕ, ಸ್ವರ್ಗ ಇರುತ್ತದೆ. ಹಾಗೂ ಪಿತೃಗಳನ್ನು ಪೂಜಿಸುವವರು (ಶ್ರಾದ್ಧ ಮಾಡುವವರು) ಪಿತರ್ ಆಗಿ ಪಿತೃಲೋಕವನ್ನೇ ಹೊಂದುತ್ತಾರೆ. ಭೂತ ಪೂಜಿಸುವವರು 13ನೇ ದಿನ, 70ನೇ ದಿನ, ವರ್ಷ, ಅಸ್ತಿಯನ್ನು ಎತ್ತಿ ಗಂಗಾನದಿಗಳಲ್ಲಿ ವಿಸರ್ಜಿಸುವರು, ಭೂತಾರಾಧಕರು ಭೂತಲೋಕವನ್ನೇ ಹೊಂದುತ್ತಾರೆ. ಭೂತವಾಗಿ ಭೂತಲೋಕಕ್ಕೆ ಹೋಗುವರು ಹಾಗೂ ಭೂಮಿಯ ಮೇಲೂ ಅಲೆದಾಡುತ್ತಾ ಇರುವರು. ಈ ಪೂಜೆಯು ಶಾಸ್ತ್ರ ವಿರುದ್ಧವಿದ್ದು, ಇದನ್ನು ಮನಬಂದಂತೆ ಅಚರಿಸುತ್ತಾರೆ, ಇದು ವ್ಯರ್ಥ ಇದಕ್ಕೆ ಪ್ರಮಾಣ ಗೀತೆಯ 16ನೇ ಅಧ್ಯಾಯದ 23-24ನೇ ಶ್ಲೋಕ: ಅಧ್ಯಾಯ 18, ಶ್ಲೋಕ 62 ರಲ್ಲಿ ಆ ಪರಮಾತ್ಮನ ಶರಣು ಹೋಗು. ಅವರಿಂದ ನಿನಗೆ ಪೂರ್ಣ ಮುಕ್ತಿ ಸಿಗುವುದು. ಪರಮಶಾಂತಿ, ಸತ್ಯಲೋಕದ ಪ್ರಾಪ್ತಿಯಾಗುವುದು.

ಗೀತೆಯ 15ನೇ ಅಧ್ಯಾಯದ 4ನೇ ಶ್ಲೋಕದಲ್ಲಿ ಹೇಳಿದೆ. ತತ್ವದರ್ಶಿ ಸಂತನು ದೊರಕಿದ ನಂತರ ಅವನು ಹೇಳಿದ ರೀತಿಯಲ್ಲಿ, ಶಾಸ್ತ್ರ ವಿಧಿಗೆ ಅನುಗುಣವಾಗಿ, ಸಾಧನೆ ಮಾಡಬೇಕು. ನಂತರ ಆ ಪರಮಪದ ಪರಮೇಶ್ವರನನ್ನು ಹುಡುಕಬೇಕು. ಅಲ್ಲಿಗೆ ಹೋದ ಸಾಧಕನಿಗೆ ಜನ್ಮ-ಮೃತ್ಯುವಿರುವುದಿಲ್ಲ. ಅನಾದಿ ಮೋಕ್ಷ ಪ್ರಾಪ್ತಿಯಾಗುತ್ತದೆ. (ಗೀತೆಯನ್ನು ಹೇಳಿರುವ ಕಾಲ ಬ್ರಹ್ಮ, ಅರ್ಥಾತ್ ಕ್ಷರ ಪುರಷನು ಹೇಳುತ್ತಿರುವನು) ನಾನೂ ಸಹ ಆ ಆದಿ ಪುರುಷ ಪರಮೇಶ್ವರನಿಗೆ ಶರಣಾಗಿದ್ದೇನೆ.

ಸಂತ ರಾಮ್‌ಪಾಲ್ ಮಹಾರಾಜರು ಹೇಳಿದ್ದಾರೆ- ಅನ್ಯ ಸಕಲ ಸಂತರೂ ಹೇಳುತ್ತಾರೆ- ಪಾಪವನ್ನು ಅನುಭವಿಸುವುದು ಪ್ರಾರಬ್ಧದಲ್ಲಿ ಬರೆದಿದೆ. ಅದನ್ನು ಜೀವಿಯು ಅನುಭವಿಸಲೇಬೇಕು. ಭಕ್ತಿ ಮಾಡುತ್ತಿರಿ. ಮುಂದಿನ ಜನ್ಮ ಸುಖವಾಗಿರುವುದು.

ದಯಮಾಡಿ ವಿಚಾರ ಮಾಡಿರಿ:- ಯಾರೊ ಒಬ್ಬರ ಕಾಲಿಗೆ ಮುಳ್ಳು ಚುಚ್ಚಿದೆ. ಅದರಿಂದಾಗಿ ಅವರಿಗೆ ಬಹಳ ನೋವಾಗುತ್ತಿದೆ. ಆ ಮುಳ್ಳಿನ ನೋವಿನ ಕಷ್ಟದ ನಿವಾರಣೆ ಮಾಡಿ ಕೊಳ್ಳಲು, ಯಾರನ್ನೋ ಅವರು ಪ್ರಾರ್ಥಿಸಿದರು. ಆಗ ಅವರು ಹೇಳುವರು "ಮುಳ್ಳು ಚುಚ್ಚಲಿಬಿಡಿ, ಚಪ್ಪಲಿ ಹಾಕಿರಿ ಮುಂದೆ ಮುಳ್ಳು ಚುಚ್ಚುವುದಿಲ್ಲ." ಈಗ ಹೇಳಿ ಆ ವ್ಯಕ್ತಿ ಕೊಡುತ್ತಿರುವ ಸಲಹೆ ಸರಿಯೆ? ಏಕೆಂದರೆ ಮುಳ್ಳು ಚುಚ್ಚಿರುವ ಕಾಲಿಗೆ ಚಪ್ಪಲಿ ಹಾಕಲು ಆಗುವುದಿಲ್ಲ. ಮೊದಲು ಮುಳ್ಳನ್ನು ತೆಗೆಯಬೇಕು. ಮುಂದೆ ಮುಳ್ಳು ಚುಚ್ಚುವುದೆಂಬ ಭಯದಿಂದ ಚಪ್ಪಲಿ ಹಾಕುವನು. ಏಕೆಂದರೆ ಪುನಃ ಮುಳ್ಳು ಚುಚ್ಚಿದರೆ? ಎಂಬ ಭಯ. ಇದೇ ರೀತಿ ಪೂರ್ಣ ಪರಮಾತ್ಮನ ಪೂರ್ಣ ಸಂತರಲ್ಲಿ ಶರಣು ಹೋಗುವುದರಿಂದ, ಪಾಪ ರೂಪದ ಮುಳ್ಳಿನ ಕಷ್ಟ ಮುಕ್ತಾಯವಾಗುವುದು ಪುನಃ ಸಾಧಕನು ಪೂರ್ಣ ಪ್ರಭುವಿನ ಶಾಸ್ತ್ರವಿಧಿ ರೂಪದ ಚಪ್ಪಲಿ ಧರಿಸುವನು, ಏಕೆಂದರೆ ಪುನಃ ಪಾಪರೂಪದ ಮುಳ್ಳು ಕಷ್ಟವನ್ನು ಕೊಡದಿರಲಿ ಎಂದು. ಎಲ್ಲಾ ಸಂತರು ಗೀತೆಯ ಅನುವಾದದಲ್ಲಿ ಅರ್ಥವನ್ನು ಅನರ್ಥ ಮಾಡಿದ್ದಾರೆ. ಗೀತೆಯ 7ನೇ ಅಧ್ಯಾಯದ 18 ಮತ್ತು 24ನೇ ಮಂತ್ರದಲ್ಲಿ ಅನುತ್ತಮದ ಅರ್ಥವನ್ನು ಅತಿ ಉತ್ತಮ ಮಾಡಿದ್ದಾರೆ ಹಾಗೂ 18ನೇ ಅಧ್ಯಾಯದ 66ನೇ ಮಂತ್ರದ 'ವ್ರಜ್' ಶಬ್ದದ ಅರ್ಥವನ್ನು 'ಬರುವುದು' ಎಂದು ಮಾಡಿದ್ದಾರೆ ಹೇಗೆ 'ಅನುತ್ತಮ' ಶಬ್ದದ ಅರ್ಥವು ಅಶ್ರೇಷ್ಠ ಎಂದಾಗುತ್ತದೋ, ಹಾಗೆ 'ವ್ರಜ್' ಶಬ್ದದ ಅರ್ಥ 'ಹೋಗುವುದು' ಎಂದು ಆಗುತ್ತದೆ. ತತ್ವಜ್ಞಾನದ ಅಭಾವದಿಂದ ಹಾಗೂ ಜ್ಞಾನ ಹೀನ ಗುರುಗಳ ಕಾರಣದಿಂದಲೇ,

ಸರ್ವಭಕ್ತ ಸಮಾಜವು, ಶಾಸ್ತ್ರ ವಿಧಿಗೆ ವಿರುದ್ಧ ಸಾಧನೆ ಮಾಡಿ, ಮನುಷ್ಯ ಜೀವನವನ್ನೇ ವ್ಯರ್ಥವಾಗಿಸಿಕೊಳ್ಳುತ್ತಿದ್ದಾರೆ. (ಪವಿತ್ರ ಗೀತೆಯ 16ನೇ ಅಧ್ಯಾಯದ 23–24ನೇ ಮಂತ್ರ) ಎಲ್ಲ ಪವಿತ್ರ ಧರ್ಮಗಳ, ಪವಿತ್ರಾತ್ಮಗಳು ತತ್ವ ಜ್ಞಾನದಿಂದ ಅಪರಿಚಿತರಾಗಿದ್ದಾರೆ. ಈ ಕಾರಣದಿಂದಲೇ, ನಕಲಿ ಗುರುಗಳು, ಸಂತರು, ಮಹಂತರು ಹಾಗೂ ಋಷಿಗಳು ಹೆಚ್ಚಾಗತೊಡಗಿದ್ದಾರೆ. ಯಾವಾಗ ಪವಿತ್ರ ಭಕ್ತ ಸಮಾಜಕ್ಕೆ, ಆಧ್ಯಾತ್ಮಿಕ ತತ್ವಜ್ಞಾನದ ಪರಿಚಯವಾಗುತ್ತದೋ, ಆಗ ಈ ನಕಲಿ ಗುರು, ಅಚಾರ್ಯರಿಗೆ ಅಡಗಿಕೊಳ್ಳಲೂ ಜಾಗ ಸಿಗುವುದಿಲ್ಲ.

ಮೇಲಿನ ಸತ್ಯತೆಯನ್ನು ಕಣ್ಣಾರೆ ಕಂಡು ನಾನು ಹಾಗೂ ಬೇರೆ ಪರಿವಾರದ ಸದಸ್ಯರು, ಸಂತ ರಾಮ್‌ಪಾಲ್ ಮಹಾರಾಜ ರವರ ಚರಣಕ್ಕೆ ಶರಣಾದೆವು. ಈಗ ಪರಿವಾರಗಳಲ್ಲಿ ಖಾಯಿಲೆಗಳು ಇಲ್ಲವಾಗಿವೆ. ಅಲ್ಲದೆ ಯಾವ ಭೂತ, ಪರಿವಾರದ ಸದಸ್ಯರನ್ನು, ಪಶುಗಳನ್ನು, ಸಾಯಿಸುತ್ತಾ, ಕೆಲಸ–ಕಾರ್ಯಗಳಿಗೆ ಅಡ್ಡಿಯೊಡ್ಡುತ್ತಿತ್ತೋ ಅದು ಮನೆಯಿಂದಷ್ಟೇ ಅಲ್ಲ. ಹಳ್ಳಿಯಿಂದಲೇ ಓಡಿ ಹೋಗಿದೆ. ಹಾಗೂ ಅವು ಬೇರೆ ನೆಂಟರ ಮನೆ ಸೇರಿವೆ. ಯಾರು ಆಸಾರಾಮ ರವರ ಪೂಜಾರಿಗಳೋ, ಅವರ ಮನೆಗೆ ಹೋಗಿವೆ. ಅಲ್ಲಿ ಹೋದ ಆ ಭೂತಗಳು ಹೇಳುತ್ತವೆ. "ಬಸಂತ ಮೊದಲಾದವರ ಮನೆ ಈಗ ಪರಮಾತ್ಮನ ನಿವಾಸವಾಗಿದೆ. ಅವರಿಗೆ ಪರಮಾತ್ಮನ ಸ್ವರೂಪದ ಪೂರ್ಣ ಸಂತ ಸಿಕ್ಕಿದ್ದಾನೆ. ನಾವು ಅವರ ಬಳಿಗೆ ಹೋಗಲು ಸಾಧ್ಯವಿಲ್ಲ". ಸಂತ ರಾಮ್‌ಪಾಲ್ ಮಹಾರಾಜರ ಉಪದೇಶ ಪಡೆದ ನಂತರ ನಾವು ಪೂರ್ಣ ರೀತಿಯಲ್ಲಿ, ಆರೋಗ್ಯ ಹಾಗೂ ಸುಖಮಯ ಜೀವನ ಮಾಡುತ್ತಿದ್ದೇವೆ. ನಮ್ಮ ಪರಿವಾರದ ಸುಮಾರು 200 ಸದಸ್ಯರು, ಮೊದಲು ಆಸಾರಾಮ ರವರ ಶಿಷ್ಯರಾಗಿದ್ದೆವು. ಈಗ ರಾಮ್‌ಪಾಲ್ ಮಹಾರಾಜ ರಿಂದ ಉಪದೇಶ ಪಡೆದಿದ್ದೇವೆ. ಸಂತ ರಾಮ್‌ಪಾಲ್ ಮಹಾರಾಜರ ಮೂಲಕ ತತ್ವಜ್ಞಾನವನ್ನು ತಿಳಿದ ಸುಮಾರು 10 ಸಾವಿರ ಆಸಾರಾಮ ರವರ ಶಿಷ್ಯರು ಕೂಡ, ಶರಣು ಬಂದಿದ್ದಾರೆ. ಅವರು ಸಹ ನನ್ನಂತೆ ಪಶ್ಚಾತ್ತಾಪ ಪಡುತ್ತಿದ್ದರು. ನಾನು ಭಕ್ತ ಸಮಾಜವನ್ನು ಪ್ರಾರ್ಥಿಸುತ್ತೇನೆ. ಯಾರಿಗೆ ದೇವರನ್ನು ಕಾಣುವ ತುಡಿತವಿದೆ. ಹುಡುಕಾಟದಲ್ಲಿರುವಿರಿ, ದಯಮಾಡಿ ಅಂತಹವರು ಸಂತ ರಾಮ್‌ಪಾಲ್ ಮಹಾರಾಜ ರವರ ಚರಣಗಳಿಗೆ ಶರಣು ಬನ್ನಿರಿ. ನಿಮ್ಮ ಜೀವನವನ್ನು ಸುಖಮಯಗೊಳಿಸಿರಿ ಹಾಗೂ ಪರಮಾತ್ಮನನ್ನು ಪಡೆಯಿರಿ.

ಭಕ್ತ ವಸಂತ ದಾಸ್
ಮೊ.ನಂ: 09728045811

## "ಅಧ್ಭುತ ಚಮತ್ಕಾರ"

ಪೂಜ್ಯ ಗುರುದೇವ ರವರಿಗೆ ಧೀರ್ಘದಂಡ ನಮಸ್ಕಾರಗಳು,

ನಾನು ನನ್ನ ಪರಿವಾರದ ಸಂತೋಷವನ್ನು, ಆದರಪೂರ್ವಕವಾಗಿ ತಿಳಿಸಬೇಕೆಂದು ಬಯುಸುತ್ತೇನೆ. ಜನವರಿ 2000 ದ ಆರಂಭದಲ್ಲಿ, ಸಂತ ರಾಮ್‌ಪಾಲ್ ಮಹಾರಾಜರ ಪ್ರವಚನವು/ ಸತ್ಸಂಗ ದೆಹಲಿಯ ತಾಚಾಪುರ ಗ್ರಾಮದಲ್ಲಿ, ಶ್ರೀ ಮುರಾರೀ ಭಕ್ತರ ಮನೆಯಲ್ಲಿ ನಡೆಯುತ್ತಿತ್ತು. ಆಗ ಒಬ್ಬಳು ಭಕ್ತೆ ಹೆಣ್ಣು ಮಗಳು ಬಂದು, ನನ್ನ ಪತ್ನಿ ವಿಮಲಾ ದೇವಿಗೆ (ಭಾವಲಾ) ಹೇಳಿದಳು. "ಚಿಕ್ಕಮ್ಮ, ಪಕ್ಕದ ಹಳ್ಳಿಯಲ್ಲಿ ಸತ್ಸಂಗ ನಡೆಯುತ್ತಿದೆ. ನೀವು ಅಲ್ಲಿಗೆ ಹೋಗಿ, ಆ ಮಹಾರಾಜ ರಿಂದ ನಾಮೋಪದೇಶವನ್ನು ಪಡೆದರೆ, ನಿಮ್ಮ ಅಸಾಧ್ಯವಾದ ರೋಗ (ಬೆನ್ನು ಮೂಳೆಯಲ್ಲಿ ಒಂದು ಇಂಚಿನಷ್ಟು ಜಾಗ) ಬೆನ್ನು ನೋವು, ಗುಣವಾಗುವುದು, ಆಗ ನನ್ನ ಪತ್ನಿ ಆ

ಹುಡುಗಿಯೊಂದಿಗೆ ಹೇಳಿದಳು–"ಆಲ್ ಇಂಡಿಯಾ ಮೆಡಿಕಲ್ ಇನ್ಸಟಿಟ್ಯೂಟ್ ಆಫ್ ರಿಸರ್ಚ್ ಸೆಂಟರ್ ಆಫ್ ಸಾಯಿನ್ಸ್" ದೆಹಲಿಯಲ್ಲಿ ಈ ರೋಗಕ್ಕೆ 2 ವರ್ಷ 6 ತಿಂಗಳು ಕಾಲ ಚಿಕಿತ್ಸೆ ಪಡೆದು ಫಲಕಾರಿಯಾಗಿಲ್ಲ, ಅದು ಇವರ ಒಂದು ಶಬ್ದ ಅಥವಾ ನಾಮೋಪದೇಶದಿಂದ ನನ್ನ ಅಸಾಧ್ಯವಾದ ಈ ರೋಗ ಗುಣವಾಗಲು ಸಾಧ್ಯವೆ! ಶಬ್ದಕ್ಕೆ ಅಷ್ಟು ಶಕ್ತಿ ಇದೆಯೆ? ಈ ವಿಚಾರವಾಗಿ ಬಹಳ ಸಮಯದ ವರೆಗೆ ಇಬ್ಬರಲ್ಲೂ ಮಾತುಕತೆ ನಡೆಯುತ್ತಿತ್ತು. ಕಡೆಗೆ ನಿಧಾನವಾಗಿ, ಆ ಸತ್ಸಂಗಕ್ಕೆ ಹೋಗುವ ನಿರ್ಣಯ ಮಾಡಲಾಯಿತು. ಪರಮ ಪೂಜ್ಯರಾದ ಸಂತ ರಾಮ್‌ಪಾಲ್ ಮಹಾರಾಜ ರವರ ಪ್ರವಚನ/ ಅಮೃತವಾಣಿಯನ್ನು ಕೇಳಿ, ಅರ್ಧಕ್ಕೆ ಕತ್ತರಿಸಿ ಹೋಗಿದ್ದ ಭಕ್ತಿಯ ತಂತಿ (ಎಳೇ/ ದಾರ) ಪುನಃ ಆ ಮುಕ್ತಿದಾತರೊಂದಿಗೆ ಸೇರಿಕೊಂಡಿತು. 2 ವರ್ಷ 6 ತಿಂಗಳು ಚಿಕಿತ್ಸೆಯಿಂದ ಯಾವುದೇ ಗುಣವನ್ನೂ ಕಾಣದ (ಫಲಕಾರಿಯಾಗದ ಚಿಕಿತ್ಸೆ) ರೋಗವು ಕೇವಲ ನಾಮಸ್ಮರಣೆಯಿಂದ 5 ದಿನಗಳಲ್ಲಿ ಗುಣವಾಯಿತು. ಇದಕ್ಕೆ ಮೊದಲು ಅವರಿಗೆ (ಆಕೆಗೆ) ಕೂರುವುದು. ನಿಲ್ಲುವುದು ಮಾಡಬಾರದೆಂದು ಕಡ್ಡಾಯವಾಗಿ ಪಾಲಿಸಲು ತಿಳಿಸಿದ್ದರು. ಇವತ್ತಿಗೂ ಸಹ ಚಿಕಿತ್ಸೆಯ ಚೀಟಿಯು ಸುರಕ್ಷಿತವಿದೆ. ಅದರಲ್ಲಿ ಬರೆದಿರುವ ಅಂಶಗಳ ಜೊತೆಗೆ 1 ಇಂಚಿನ ಎಕ್ಸರೆ (ಕ್ಷ–ಕಿರಣ) ಫೋಟೋ ಸಹ ಇದೆ. ನನ್ನ ಪತ್ನಿಗೆ ಹೆಚ್ಚಿನ ತೊಂದರೆ ಆಗುತ್ತಿದ್ದುದು–ಕುಳಿತು ಶೌಚ ಮಾಡಲು ಆಗುತ್ತಿರಲಿಲ್ಲ. ಬಗ್ಗಿ ಕೈ ತೊಳೆಯಲು ಆಗುತ್ತಿರಲಿಲ್ಲ. ಬೆನ್ನಿನಲ್ಲಿ ಬಹಳ ನೋವು ಕಾಡುತ್ತಿತ್ತು. ಇವತ್ತು ಪೂಜ್ಯ ರಾಮ್‌ಪಾಲ್ ಮಹಾರಾಜರ ಆಶೀರ್ವಾದಿಂದ 50 ಕೆ,ಜಿ, ತೂಕವನ್ನು ಎತ್ತಬಲ್ಲಳು. ಅವಳೀಗ ಪೂರ್ಣವಾಗಿ ಆರೋಗ್ಯದಿಂದಿದ್ದಾಳೆ. ಎಲ್ಲಾ ಓದುಗರಲ್ಲಿ ನನ್ನ ವಿನಂತಿ ಏನೆಂದರೆ ಪರಮೇಶ್ವರ ಸಮಾನರಾದ ಸಂತ ರಾಮ್‌ಪಾಲ್ ಮಹಾರಾಜರು ಕವಿರ್ದೇವ (ಕಬೀರ್ ಪರಮೇಶ್ವರ) ರ ಪೂರ್ಣ ಕೃಪಾಪಾತ್ರರು. ಅವರಲ್ಲಿಗೆ ಹೋಗಿ, ಶೀಘ್ರವಾಗಿ ನಾಮೋಪದೇಶವನ್ನು ಪಡೆಯಿರಿ. (ನಿಃಶುಲ್ಕವಾಗಿ) ಸಪರಿವಾರ ಕಲ್ಯಾಣ ಹೊಂದಿರಿ ಹಾಗೂ ಪೂರ್ಣ ಮೋಕ್ಷ ಮತ್ತು ಸತ್ಯಲೋಕ (ಶಾಶ್ವತ ಸ್ಥಾನ) ಪ್ರಾಪ್ತಿ ಪಡೆಯಿರಿ.

ತಮ್ಮ ಸೇವಕ ಭಕ್ತ ನಥುರಾಮ
ಭಾವಲಾ ಗ್ರಾಮ ದೆಹಲಿ
**ಮೊ. 09811957912**

## "ಅಸಂಭವವನ್ನು ಸಂಭವಗೊಳಿಸಿದ ಪರಮೇಶ್ವರ"

ನಾನು ಭಕ್ತ ಸುರೇಂದ್ರ ದಾಸ್, ರೋಹತಕ್ ಜಿಲ್ಲೆಯ, ಸಾಂಪಲಾ ತಾಲ್ಲೂಕಿನ ಗಾಂಧರಾ ಹಳ್ಳಿಯ ನಿವಾಸಿ. ನನಗೆ 31 ವರ್ಷವಾಗಿದೆ. ಬಾಲ್ಯದಿಂದಲೂ ಭಗವಂತನನ್ನು ನೋಡುವ ಹಂಬಲದಿಂದ ಅರಸುತ್ತಿದ್ದೇನೆ. ಮನಬಂದಂತೆ (ದೇವಾಲಯಗಳಿಗೆ ಹೋಗುವುದು, ವ್ರತ ಮೊದಲಾದವನ್ನು ಮಾಡುವುದು ಶ್ರಾದ್ಧ ಮಾಡುವುದು ಇತ್ಯಾದಿ) ಪೂಜೆ ಮಾಡುತ್ತಿದ್ದೆ. ಆದರೆ ಶಾರೀರಕವಾಗಿ ಕಷ್ಟ ಹಾಗೂ ಮಾನಸಿಕ ಅಶಾಂತಿಯಿಂದಲೇ ಇದ್ದೆ. ಆದರೂ ಸಹ ದೇವರಲ್ಲಿ ನಂಬಿಕೆ ಹಾಗೂ ದೇವರನ್ನು ನೋಡಬೇಕೆಂಬ ಹಂಬಲ ಇದ್ದೇ ಇತ್ತು. ಈ ಹಂಬಲವೇ ನನ್ನನ್ನು 1995ರಲ್ಲಿ ಸಂತ ಆಸಾರಾಮ ಬಾಪೂ ರವರ ಬಳಿ ಹೋಗುವಂತೆ ಮಾಡಿತ್ತು. ನಾನು ಅವರಿಂದ ನಾಮೋಪದೇಶವನ್ನು ಪಡೆದೆ ಬಾಪೂ ರವರು ಹೇಳಿದ ಭಕ್ತಿಮಾರ್ಗದಲ್ಲಿ ದೃಢವಾಗಿ ಮುಂದುವರಿದೆ. ಆದರೆ ಶಾರೀರಿಕವಾಗಿ ಕಷ್ಟವಾಗಲಿ, ಮನದ ಅಶಾಂತಿಯಾಗಲೀ ದೂರವಾಗಲಿಲ್ಲ. ಅಲ್ಲದೆ ಅಧ್ಯಾತ್ಮಿಕ ಸಾಧನೆಯು ಫಲಿಸಲಿಲ್ಲ ಬದಲಾಗಿ ಕಷ್ಟಗಳು ಹೆಚ್ಚುತ್ತಲೇ ಹೋದವು. ಆಸಾರಾಮ ಬಾಪೂ ಹೇಳಿದಂತೆಯೇ ಸಾಧನೆ ಮಾಡುತ್ತಿದ್ದೆ. ಪ್ರತಿದಿನ ಬೆಳಿಗ್ಗೆ 250 ಗ್ರಾಂ ಹಾಲು, ಸಂಜೆ 250 ಗ್ರಾಂ

ಹಾಲನ್ನು ಕುಡಿಯುತ್ತಿದ್ದೆ. ನನ್ನ ಮಂತ್ರದಲ್ಲಿರುವಷ್ಟು ಅಕ್ಷರಗಳ ಅನುಸಾರ ಅಷ್ಟು ಲಕ್ಷ ಜಪ ಮಾಡುತ್ತಾ ಸಮಾಧಿ ಸ್ಥಿತಿಯಲ್ಲಿರತೊಡಗಿದೆ. ಈ ಕ್ರಿಯೆ 40 ದಿನ ಮಾಡಬೇಕಿತ್ತು. 40 ದಿನಗಳಿಗೆ ಒಂದು ಅನುಷ್ಠಾನ ಪೂರ್ಣವಾಗುತ್ತಿತ್ತು. ಇದೇ ರೀತಿ ನಾನು 14 ಅನುಷ್ಠಾನಗಳನ್ನು ಮಾಡಿದೆ.

ಒಂದು ಸಾರಿ ನಾನು ಬಾಪೂ ರವರ ಪ್ರವಚನದಲ್ಲಿ ಕೇಳಿದೆ. 7 ದಿನಗಳ ವರೆಗೆ ನಿರಾಹಾರವಾಗಿದ್ದು, ಮಂತ್ರ ಜಪವನ್ನು ಮಾಡುತ್ತಾ, ಸಮಾಧಿ ಸ್ಥಿತಿಯಲ್ಲಿರುತ್ತಾ, ಪ್ರಾಣಾಯಾಮ ಮಾಡುವುದರಿಂದ ಈಶ್ವರನ ಪ್ರಾಪ್ತಿಯಾಗುತ್ತದೆ. ನಂತರ ನಾನು ಈ ವಚನಗಳು ಸತ್ಯವೆಂದು ತಿಳಿದು ಹಾಗೆಯೇ ಮಾಡಿದೆ. ಆದರೆ ಪರಮಾತ್ಮನ ಪ್ರಾಪ್ತಿಗೆ ಬದಲಾಗಿ, ಹಸಿವಿನಿಂದ ಇದ್ದ ಕಾರಣ ಸಾವಿನ ಹತ್ತಿರಕ್ಕೆ ತಲುಪಿದೆ ಹಾಗೂ ಪ್ರಾಣಾಯಾಮ ಮಾಡಿದ್ದರಿಂದ ಮೆದುಳಿನ ಸಮತೋಲನ ಕೆಟ್ಟು ಹುಚ್ಚನಂತೆ ಆಗಿ ಹೋದೆ.

ಇಂತಹ ಸಮಯದಲ್ಲಿ ನನ್ನ ಮೇಲೆ ಸದ್ಗುರು ಸಂತ ರಾಮ್‌ಪಾಲ್ ಮಹಾರಾಜರ ಕೃಪೆಯಾಯಿತು. ನನಗೆ ಡಿಸೆಂಬರ್ 2000 ದಲ್ಲಿ ಪೂಜ್ಯ ಗುರುದೇವ ಸಂತ ರಾಮ್‌ಪಾಲ್ ಮಹಾರಾಜ ರಿಂದ ನಾಮೋಪದೇಶ ಪ್ರಾಪ್ತವಾಯಿತು. ಉಪದೇಶ ಸಿಕ್ಕಿದ ಕೂಡಲೆ ದೀಪದಲ್ಲಿ ಯಾರೋ ತುಪ್ಪ ಹಾಕಿದಂತೆ ಆಯಿತು. ನನ್ನ ಜೀವನವು ಶಾಂತ ಹಾಗೂ ವ್ಯವಸ್ಥಿತವಾಗಿರತೊಡಗಿತು.

ಪೂರ್ಣ ಸಂತರು ಪಾಪ ಕರ್ಮಗಳನ್ನು ಸಮಾಪ್ತಿಗೊಳಿಸಬಲ್ಲರು ಇದರ ಪ್ರಮಾಣವು ನನ್ನ ಜೀವನದಲ್ಲಿ ಸ್ಪಷ್ಟ ರೂಪದಲ್ಲಿ ಘಟಿಸಿತು. ಮೇ 2004 ರಲ್ಲಿ ಮಹಾರಾಷ್ಟ್ರದ ಔರಂಗಾಬಾದ್ ನಲ್ಲಿ ಸಂತ ರಾಮ್‌ಪಾಲ್ ಮಹಾರಾಜರ ಸತ್ಸಂಗಕ್ಕಾಗಿ ಟೆಂಟ್ ಹಾಕುವ ಸೇವೆ ಮಾಡುತ್ತಿರುವಾಗ 26 ಅಡಿ ಎತ್ತರದಿಂದ ಕೆಳಗಿನ ಕಲ್ಲು ನೆಲದ ಮೇಲೆ ಬಿದ್ದು ಬಿಟ್ಟೆ. ಇಲ್ಲಿ ಕಾಲ ಬ್ರಹ್ಮನು ಮತ್ತೇನೋ ಮಾಡಬೇಕಿತ್ತು (ಸಾವು ಆಗಬೇಕಾಗಿತ್ತು) ಆಗ ನನ್ನ ಬೆನ್ನ ಮೂಳೆ ಮುರಿಯಿತು. ನನ್ನ ಶರೀರದ ಕೆಳಗಿನ ಭಾಗ ಲಕ್ವ (ಸ್ವಾಧೀನ ವಿಲ್ಲದಿರುವುದು) ಹೊಡೆಯಿತು. ಅದೇ ಸಮಯದಲ್ಲಿ ನನ್ನ ಗುರುದೇವ ಸಂತ ರಾಮ್‌ಪಾಲ್ ಮಹಾರಾಜ್‌ರನ್ನು ಸ್ಮರಿಸಿದೆ. ನನ್ನ ಗುರುವಿನ ದಯೆಯಿಂದ, ಅದೇ ಸಮಯದಲ್ಲಿ ನನ್ನ ಎರಡೂ ಕಾಲುಗಳು ಸರಿಯಾಗಿ ಕೆಲಸ ಮಾಡತೊಡಗಿದವು.

ಗರೀಬ್ ಕಾಲಡರ್ೈ ಕರತಾರ ಸೆ, ಜೈ ಜೈ ಜಗದೀಶ ।
ಜೌರಾ ಜೌರೀ ಝೂಡತಿ, ಪಗರಜ ಡಾರೈ ಶೀಶ್ ।

ಇದಾದ ಮೇಲೆ ನನ್ನನ್ನು ಔರಂಗಾಬಾದಿನ ಪಟವರ್ಧನ ಆಸ್ಪತ್ರೆಗೆ ಕರೆದುಕೊಂಡು ಹೋದರು. ಅಲ್ಲಿ ಡಾ॥ ಡಿ.ಜಿ ಪಟವರ್ಧನ್ ನನ್ನನ್ನು ಪರೀಕ್ಷಿಸಿದರು. ನನ್ನ ಬೆನ್ನು ಮೂಳೆಯ ಎಕ್ಸರೆ (ಕ್ಷ-ಕಿರಣ) ತೆಗೆದರು. ರಿಪೋರ್ಟ್ ನಿಂದ ತಿಳಿಯಿತು. ಬೆನ್ನು ಮೂಳೆ ಮುರಿದಿದೆ ಎಂದು. ಡಾಕ್ಟರ್ ರಿಪೋರ್ಟ್ ನೋಡಿ ಆಶ್ಚರ್ಯಪಟ್ಟರು. ಬೆನ್ನಿನ ಮೂಳೆ ಮುರಿದಿದೆ. ಅದರಲ್ಲಿ ಒಂದು ಚೂರು ಮುರಿದು ಪ್ರತ್ಯೇಕವಾಗಿದೆ ಡಾಕ್ಟರ್ ಪದೇ-ಪದೇ ನನ್ನ ಕಾಲುಗಳ ಮೇಲೆ ಕೈ ಇಟ್ಟು ನೋಡುತ್ತಿದ್ದರು. ನಿಮ್ಮ ಮೇಲೆ ದೇವರ ದಯೆ ಇದೆ. ಆದ್ದರಿಂದ ನಿಮ್ಮ ಕಾಲು ಕೆಲಸ ಮಾಡುತ್ತಿದೆ (ಚೇತನವಾಗಿದೆ) ಏಕೆಂದರೆ, ಈ ರಿಪೋರ್ಟನ ಪ್ರಕಾರ, ಲಕ್ವ ಹೊಡೆಯುವುದು ಸಹಜವಿತ್ತು. (ಬೆನ್ನು ಮೂಳೆಯು ಮುರಿದ ಮೇಲೆ ಆಧಾರವಿಲ್ಲ) ಆ ಆಸ್ಪತ್ರೆಯಲ್ಲಿ 3 ದಿನವಿದ್ದೆ. ನಂತರ ನನ್ನ ಮನೆಗೆ ಹರಿಯಾಣಕ್ಕೆ ಬಂದೆ. ಇಲ್ಲಿ ರೋಹತಕ್‌ನಲ್ಲಿ ನನ್ನ ಚಿಕಿತ್ಸೆಯನ್ನು ಪ್ರಸಿದ್ಧ ಮೂಳೆ ತಜ್ಞ ಡಾ॥ ಚಡ್ಡಾದಿಂದ ಮಾಡಿಸಿದೆ. ಡಾ॥ ಚಡ್ಡಾ ಸಹ ನನ್ನ ರಿಪೋರ್ಟ್ ನೋಡಿ ಆಶ್ಚರ್ಯ ಪಟ್ಟರು. ರಿಪೋರ್ಟ್ ಲಕ್ವ ಹೊಡೆದಿರಬೇಕಿತ್ತು. ಡಾ॥ ಚಡ್ಡಾ ಪುನಃ ಕಲ್ಲರ್ ಎಕ್ಸರೆ ಮಾಡಿಸಿದರು. ಹಾಗೂ ಹೇಳಿದರು ಇದರ ಚಿಕಿತ್ಸೆ ಸಾಧ್ಯವಿಲ್ಲ. ಆಪರೇಷನ್ ಮಾಡಿ ಈಗಿರುವ ಸ್ಥಿತಿಯಲ್ಲಿ ತಡೆಯಬಹುದು. ಇಲ್ಲವಾದರೆ ಮೂಳೆಗಳು ಮತ್ತಷ್ಟು ಮುರಿಯಬಹುದು, ಮೂಳೆಯು ಗಟ್ಟಿಯಾಗಲು ಅವರು ಮೂರು ತಿಂಗಳ

ಕಾಲ ಇಂಜೆಕ್ಷನ್ ಕೊಟ್ಟರು. ಡಾಕ್ಟರ್ ಹೇಳಿದರು, ಆಪರೇಷನ್ ಮಾಡಲೇಬೇಕು. ಇಲ್ಲವಾದರೆ ಉಳಿದಿರುವ ಮೂಳೆಗಳು ಮುರಿದು ಹೋಗುತ್ತವೆ. ಆಪರೇಷನ್ ಖರ್ಚು 2 ಲಕ್ಷ ರೂ. ಗಳಾಗುತ್ತದೆ. ಮತ್ತೊಬ್ಬ ಡಾಕ್ಟರ್ ಹೇಳಿದರು. ನಿಮಗೆ ಮೂರು ತಿಂಗಳ ಒಳಗೆ ಸಾವು ಆಗಬೇಕಿತ್ತು. ಆದರೆ ತಾವು ಈಗ ಪರಮಾತ್ಮನ ಕೃಪೆಯಿಂದಲೇ ಬದುಕಿರುವಿರಿ. ಆಪರೇಷನ್‌ಗಾಗಿ 2 ಲಕ್ಷ ರೂ. ಕೊಡುವ ಸ್ಥಿತಿಯಲ್ಲಿ ನಾನಿರಲಿಲ್ಲ. ಆದ್ದರಿಂದ ಬೇರೆ ಡಾಕ್ಟರರ ಹತ್ತಿರ ಚಿಕಿತ್ಸೆಗೆ ಹೋದೆನು. ರಿಪೋರ್ಟ್ ನೋಡಿ ಅವರೂ ಆಶ್ಚರ್ಯ ಪಟ್ಟರು ಹಾಗೂ ಹೇಳಿದರು ಆಪರೇಷನ್ ತಡವಾದರೆ ಇನ್ನೂ ಕೆಲವು ಮೂಳೆಗಳು ಮುರಿಯುವ ಸಾಧ್ಯತೆ ಇದೆ. ಅವರೂ ಅದನ್ನೇ ಹೇಳಿದರು. ಈ ರಿಪೋರ್ಟ್ ಪ್ರಕಾರ ನೀವು ಲಕ್ವದಿಂದ ಕಾಲುಗಳನ್ನು ಕಳೆದುಕೊಂಡಿರಬೇಕಿತ್ತು. ಅದರೆ ನೀವು ಹೇಗೆ ಓಡಾಡಿಕೊಂಡಿರುವಿರಿ?

ಕಡೆಗೆ ಸೋತು ನಾನಾಗ ನನ್ನ ಗುರುದೇವ ಸಂತ ರಾಮ್‌ಪಾಲ್ ಮಹಾರಾಜರ ಚರಣಗಳಲ್ಲಿ ಪ್ರಾರ್ಥನೆ ಮಾಡಿದೆ. ಆಗ ಪೂಜ್ಯ ಗುರುದೇವರು, ನನಗೆ ದಯೆ ತೋರಿದರು. ನನ್ನ ತಲೆಯ ಮೇಲೆ ಕೈ ಇಟ್ಟು ಹೇಳಿದರು. “ಮಗನೇ, ನೀನು ಖಂಡಿತ ಸರಿಯಾಗುವೆ” ಒಂದು ವೇಳೆ ಈ ದಿನ ನೀನು ಪರಮೇಶ್ವರ ಕಬೀರರ ಶರಣು ಹೋಗದಿದ್ದರೆ, ನಿನಗೆ ಸಾವು ಆಗುತ್ತಿತ್ತು. ನಿನ್ನ ಆಯಸ್ಸು ಬಾಕಿ ಇರಲಿಲ್ಲ. ನೀನೀಗ ಮತ್ತೊಮ್ಮೆ ವೈದ್ಯರಿಗೆ ತೋರಿಸು, ನಾನು ಗುರುಗಳ ಆದೇಶಾನುಸಾರವಾಗಿ, ಮಾರನೆಯ ದಿನವೇ ವೈದ್ಯರಿಗೆ ತೋರಿಸಿದೆ. ಅವರು ಎಕ್ಸ್-ರೇ ತೆಗೆದರು. ಎಕ್ಸ್-ರೇ ಕಾಪಿ ನೋಡಿ ಡಾಕ್ಟರಿಗೆ ಆಶ್ಚರ್ಯವಾಯಿತು. “ಯಾವ ಮೂಳೆ ಮುರಿದು ಪ್ರತ್ಯೇಕವಾಗಿ ಬಿದ್ದಿತೋ, ಅದು ತನಗೆ ತಾನೇ ಹೇಗೆ ಮೇಲಕ್ಕೆ ಹೋಗಿ ಸೇರಿಕೊಂಡಿತು? ಡಾಕ್ಟರ್ ಹೇಳಿದರು. ನಿನ್ನ ಪರಿಸ್ಥಿತಿ ಹೇಗೆ ಇತ್ತೆಂದರೆ, ಒಂದು ಗಾಡಿ ಎತ್ತರದ ಪ್ರದೇಶಕ್ಕೆ ಹತ್ತಬೇಕಿತ್ತು. (ಮೋಟಾರ್ ಗಾಡಿ, ಕಾರು) ಆದರೆ ಅದರ ಇಂಜನ್ ಕೆಟ್ಟು ಹೋಗಿ, ಬ್ರೇಕ್ ಹಿಡಿಯದೆ, ಅದು ಕೆಳಕ್ಕೆ ಜಾರುತ್ತಿತ್ತು. ಅದನ್ನು ಒಂದನೇ ಗೇರ್ ನಲ್ಲಿಟ್ಟು, ಚಕ್ರದ ಕೆಳಗೆ ಕಲ್ಲನ್ನು ಕೊಟ್ಟು ನಿಲ್ಲಿಸಬೇಕಿತ್ತು. ಮುಂದಕ್ಕೆ ಹತ್ತಲು ಸಾಧ್ಯವಿರಲಿಲ್ಲ ಹಾಗೇ ನಿನ್ನ ಮುರಿದು ಹೋದ ಮೂಳೆ ಭಾಗ ಹೇಗೆ ಮೇಲಕ್ಕೆ ಹೋಗಿ ಸೇರಿಕೊಳ್ಳಲು ಸಾಧ್ಯ? ಇದಂತೂ ಒಂದು ಮಹಾನ್ ಶಕ್ತಿಯಿಂದಲೇ ಆಗಿದೆ. ಅದು ಅಸಂಭವವನ್ನು ಸಂಭವ ಮಾಡಬಹುದಾದ ಶಕ್ತಿ. ಇದಂತೂ ಆಪರೇಶನ್ ನಿಂದಲೂ ಸಾಧ್ಯವಾಗುತ್ತಿರಲಿಲ್ಲ. ಆಪರೇಷನ್ ಮಾಡಿ ಇದರಲ್ಲಿ ಯಾವುದಾದರೂ ಪದಾರ್ಥದಿಂದ ಆ ಗ್ಯಾಪ್ ತುಂಬಿಸಬೇಕಿತ್ತು. ಆದರೂ ನೀವೇನಾದರೂ, ಭಾರದ ವಸ್ತು ಎತ್ತಿದರೆ ಪುನಃ ಮೇಲೇಳಲಾಗದೆ, ಚಾಪೆಯಲ್ಲಿ ಮಲಗಿರಬೇಕಾಗುತ್ತಿತ್ತು. ಇದು ಹೇಗೆ ಸಾಧ್ಯವಾಯಿತು. ಎಂಬ ಡಾಕ್ಟರ ಯೋಚನೆಗೆ ಉತ್ತರವಿರಲಿಲ್ಲ. ನಾನು ಹೇಳಿದೆ ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರ ಸ್ವರೂಪವೇ ನನ್ನ ಗುರು ಸಂತ ರಾಮ್‌ಪಾಲ್ ಮಹಾರಾಜರು ಅವರು ನನ್ನ ಪಾಪ ಕರ್ಮಗಳನ್ನು ಕತ್ತರಿಸಿ ಹಾಕಿದರು. ಹಾಗೂ ನನ್ನ ಸಾವನ್ನು ಮುಂದಕ್ಕೆ ಹಾಕಿದರು. ತಮ್ಮ ದಯೆಯ ಕೋಟಾದಿಂದ ನನಗೆ ಜೀವನ ಕೊಟ್ಟರು. ಪರಮೇಶ್ವರ ಕಬೀರ್ ಪರಮೇಶ್ವರ ರವರ ವಾಣಿ ಇದೆ.

ಜೋ ಮೇರೀ ಭಕ್ತಿ ಪೀಛೋಡೀ ಹೋಯಿ ತೋ ಹಮಾರಾ ನಾಮ್ ನ ಲೇವೇ ಕೋಯಿ।

ಈಗ ನಾನು ಸಂಪೂರ್ಣ ಗುಣಮುಖವಾಗಿದ್ದೇನೆ. ಸದ್ಗುರುವಿನ ಚರಣಗಳಲ್ಲಿ ಆತ್ಮ ಕಲ್ಯಾಣಕ್ಕಾಗಿ ಸೇವೆ ಮಾಡುತ್ತ ಇರುವೆನು. 50 ಕೆ.ಜಿ ತೂಕವನ್ನು ತಾನೇ ಎತ್ತಿ ಅದನ್ನು ಹೊತ್ತು ನಡೆಯಬಲ್ಲವನಾಗಿದ್ದೇನೆ. ನಮ್ಮ ಗುರುದೇವರ ವಾಸ್ತವಿಕ ಉದ್ದೇಶ. “ಭಕ್ತಿ ಮಾಡುವಂತೆ ಮಾಡಿಸಿ. ಜೀವವನ್ನು ವಿಕಾರ ರಹಿತವನ್ನಾಗಿ ಮಾಡಿಸಿ, ತನ್ನ ಪರಮಧಾಮ ಸತ್ಯಲೋಕಕ್ಕೆ ಕರೆದೊಯ್ಯುವುದಾಗಿದೆ. ಇಲ್ಲಿನ ಚಿಕ್ಕ ಪುಟ್ಟ ಸುಖಗಳನ್ನಂತೂ ನಮ್ಮ ಗುರುದೇವರು ಅವರ

ಖಜಾನೆಯಿಂದ ಕೊಡುತ್ತಾರೆ. ಏಕೆಂದರೆ ಜೀವವು ಭಕ್ತಿಮಾರ್ಗದಲ್ಲಿ ತೊಡಗಿರಲಿ ಎಂದು ಸಕಲ ಸಮಾಜದಲ್ಲಿ ಪ್ರಾರ್ಥಿಸುವುದೇನೆಂದರೆ, ನಮ್ಮ ಗುರುದೇವರ ಚರಣಗಳಲ್ಲಿ ಶರಣಾಗಿ ಸತ್ಯ ಭಕ್ತಿಯನ್ನು ಮಾಡಿರಿ ಹಾಗೂ ಸಾಂಸಾರಿಕ ಸುಖದ ಜೊತೆಗೆ ಆತ್ಮ ಕಲ್ಯಾಣದ ಮಾರ್ಗವನ್ನು ಪಡೆಯಿರಿ. ಸತ್ ಸಾಹೀಬ್!

ವಿಶೇಷ:– ಋಗ್ವೇದದ 10ನೇ ಮಂಡಲದ, 161 ನೇ ಸೂಕ್ತಿಯ, 2ನೇ ಮಂತ್ರದಲ್ಲಿ ಪೂರ್ಣ ಪರಮಾತ್ಮನು ಹೇಳಿದ್ದಾನೆ ಶಾಸ್ತ್ರಾನುಕೂಲ ಸಾಧನೆ ಮಾಡುವ ಸಾಧಕರೆ, ನೀವು ಸಂಪೂರ್ಣ ಭಾವದಿಂದ ನನ್ನ ಶರಣು ಬಂದರೆ ಅಂದರೆ ಶುದ್ಧ ಮನದಿಂದ ಅನುಮಾನವಿಲ್ಲದೇ ನನ್ನಲ್ಲಿ ಭಕ್ತಿ ಇರಿಸಿದರೆ ನಿನ್ನ ಅಸಾಧ್ಯವಾದ ರೋಗವನ್ನು ನಾನು ಗುಣ ಪಡಿಸುವೆ ಒಂದು ವೇಳೆ ನಿನ್ನ ಆಯಸ್ಸು ಮುಗಿದಿದ್ದರೂ. ನಿನ್ನ ಉಸಿರನ್ನು ಹೆಚ್ಚು ಮಾಡಿ ನಿನಗೆ 100 ವರ್ಷಗಳ ಆಯಸ್ಸನ್ನು ನೀಡುವೆ. ಮೇಲಿನ ಹೇಳಿಕೆಯು ಪ್ರಭುವಿನ ಸಾಮರ್ಥ್ಯವನ್ನು ಪ್ರಮಾಣಿಕರಿಸುತ್ತದೆ.

ಭಕ್ತ ಸುರೇಂದ್ರ ದಾಸ್
ಮೊ. 08059709819

## "ಬಡಜನರ ಮಾತನ್ನು ಕೇಳಿದರು ಪ್ರಭು"

ನಾನು ಕರ್ಮವೀರ ತಂದೆ ಶ್ರೀಘಾಸಿರಾಮ, ದಾದಾಜೀ ಶ್ರೀ ಘೋಟೂರಾಮ. ರೋಹತಕ್ ಜಿಲ್ಲೆಯ. ಭರಾಣ ಹಳ್ಳಿಯವನು. ಮೊಟ್ಟ ಮೊದಲು ನಾವೆಲ್ಲಾ ಪರಿವಾರದವರು, 1986 ರಲ್ಲಿ ನಿರಂಕಾರಿ ಬಾಬಾ ಹರದೇವ ಸಿಂಹ ರವರಿಂದ ನಾಮೋಪದೇಶ ಪಡೆದೆವು. ಆಗ ನಾನು ಬಳೆಗಾರರ ವೃತ್ತಿ ಮಾಡುತ್ತಿದ್ದ. ಆರ್ಥಿಕ ಸ್ಥಿತಿಯು ಚೆನ್ನಾಗಿತ್ತು. ನಿಧಾನವಾಗಿ ಸ್ಥಿತಿ ಕೆಡತೊಡಗಿತು. ಪುನಃ ಕೇಲವು ದಿನಗಳ ನಂತರ, ನನ್ನ ಪತ್ನಿಯ ಶರೀರದಲ್ಲಿ ನಾನಾ ಖಾಯಿಲೆಗಳು ಮನೆ ಮಾಡತೊಡಗಿತುಅವಳಿಗೆ ಕಿಡ್ನಿಯಲ್ಲಿ ಅಧಿಕ ಮಾಂಸವು ಬೆಳೆದು, ಮೂತ್ರಕೋಶದಲ್ಲಿ ಕಲ್ಲು ಸೇರಿತ್ತು. ಡಾಕ್ಟರ್ ಅವಳ ಆಪರೇಷನ್‌ಗೆ 20 ಸಾವಿರ ರೂಪಾಯಿಗಳು ಬೇಕಾಗುತ್ತದೆ ಎಂದು ಹೇಳಿದರು. ನನ್ನ ಮನೆಯಲ್ಲಿ ಆಗ 20 ಸಾವಿರ ರೂಪಾಯಿ ಇರಲಿ, 20 ಸಾವಿರ ಧಾನ್ಯದ ಕಾಳೂ ಇರಲಿಲ್ಲ. ನನಗೂ ದಮ್ಮಿನ (ಶ್ವಾಸಕೋಶದ ಖಾಯಿಲೆ) ರೋಗವಿತ್ತು. ನಾನು ಮತ್ತು ನನ್ನ ಪತ್ನಿ ಒಂದು ಆಟೋದಲ್ಲಿ ಕುಳಿತು ಕೊಂಡು, ನಮ್ಮ ಕಷ್ಟಗಳನ್ನು ನೆನೆಯುತ್ತಾ ದುಃಖದಿಂದ ಮಾತಾಡಿಕೊಳ್ಳುತ್ತಿದ್ದೆವು. ಎಲ್ಲಾದರೂ ಸುತ್ತಾಡಿ ಬರುವ ಉದ್ದೇಶದಿಂದ ಆಟೋದಲ್ಲಿ ಕುಳಿತಿದ್ದೆವು. ನಮ್ಮ ಪಕ್ಕದಲ್ಲಿ ಒಬ್ಬಳು ಮಹಿಳೆ ಕುಳಿತಿದ್ದಳು. ಅವಳು ನಮ್ಮ ಮಾತುಗಳನ್ನು ಕೇಳಿ ಹೇಳಿದಳು ಕರೌಂಥಾಗೆ ಹೋಗಿ, ಅಲ್ಲಿ ಒಬ್ಬರು ಮಹಾರಾಜರು ಇದ್ದಾರೆ. ಅವರು ರೋಗಗಳಿಗೆ ಹಣವಿಲ್ಲದೆ ಔಷಧಿ ಕೊಡುತ್ತಾರೆ. ನನ್ನ ಪತ್ನಿ ಭಕ್ತಿಮತಿ ಮೇವಾದೇವಿ 27–7–2003 ರಂದು "ಸತ್ಯಲೋಕ ಆಶ್ರಮ" ಕರೌಂಥಾಗೆ ಹೋದಳು ಅಲ್ಲಿದ್ದ ಸದ್ಗುರು ರಾಮ್‌ಪಾಲ್ ಮಹಾರಾಜರಿಗೆ ತನ್ನ ಖಾಯಿಲೆ ಹಾಗೂ ಮನೆಯ ಪರಿಸ್ಥಿತಿಯನ್ನು ತಿಳಿಸಿದಳು. ಸದ್ಗುರುಗಳು ಬಹಳ ಪ್ರೀತಿಯಿಂದ ಎಲ್ಲಾ ಮಾತುಗಳನ್ನು ಕೇಳಿದರು. ಮಗಳೆ ಇಲ್ಲಿ ಯಾವ ಔಷಧಿಯನ್ನು ಕೊಡುವುದಿಲ್ಲ. ಕೇವಲ ಆತ್ಮಕಲ್ಯಾಣದ ಮಾರ್ಗವನ್ನು ತಿಳಿಸಿಕೊಡಲಾಗುತ್ತದೆ. ಭಕ್ತಿ ಮಾಡುವ ರೀತಿಯನ್ನು ಪವಿತ್ರ ಗೀತೆ ಮತ್ತು ಪವಿತ್ರ ವೇದಗಳ ಆಧಾರದಲ್ಲಿ, ಶಾಸ್ತ್ರಾನುಕೂಲವಾಗಿ ತಿಳಿಸಿಕೊಡಲಾಗುತ್ತದೆ. ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರ ರವರ ಕೃಪೆಯಿಂದ ಕೇವಲ ಮಂತ್ರ ಜಪಮಾತ್ರದಿಂದ ಸಕಲ ಕಷ್ಟಗಳು ದೂರವಾಗುತ್ತದೆ. ಜನನ–ಮರಣಗಳ ಚಕ್ರದಿಂದ ಪೂರ್ಣ ರೂಪದಲ್ಲಿ ಜೀವಿಗಳಿಗೆ ಮುಕ್ತಿ ಸಿಗುವ ಮಾರ್ಗವನ್ನು ತಿಳಿಸಿಕೊಡುತ್ತೇವೆ. ಇದೇ ಪ್ರಧಾನವಾದ ಮೂಲ ಲಾಭ ಇದರ ಜೊತೆಗೆ ಬೇರೆ ಸಾಮಾಜಿಕವಾದ ಅನ್ಯ ಸುಖಗಳು ತಾನೇ ಲಭಿಸುತ್ತದೆ

(ಹಣದ ಖರ್ಚಿಲ್ಲದೆ) ರಾಮ ನಾಮದ ಔಷಧಿಯನ್ನು ನೀಡಿ, ನಮ್ಮ ಪರಿವಾರವನ್ನು ಕೃತಾರ್ಥ ಮಾಡಿದರು. ಈಗ ನಾವು ಪ್ರೇಮಪೂರ್ಣವಾದ ಜೀವನ ನಡೆಸುತ್ತಿದ್ದೇವೆ. ಎಲ್ಲ ರೋಗಗಳು ಕೇವಲ ನಾಮಸ್ಮರಣೆ ಮಾತ್ರದಿಂದ, ಗುರುಗಳ ಆಶೀರ್ವಾದದಿಂದ ದೂರವಾದವು. ನಾವು ಮುಕ್ತಿದಾತನಲ್ಲಿ ಪ್ರಾರ್ಥಿಸುತ್ತೇವೆ. ನಮಗೆ ದೊರೆತಿರುವಂತಹ ಸುಖಮಯ ಜೀವನ ಸಮಸ್ತರಿಗೂ ಸಿಗುವಂತೆ ದಯಸಾಲಿಸಿರಿ.

ಭಕ್ತ ಕರ್ಮವೀರದಾಸ್ ಪುತ್ರ
ಘಾಸೀರಾಮ
ರೋಹತಕ್ ಜಿಲ್ಲೆ ಮಹಮ ತಾಲ್ಲೂಕು.
ಭರಾಣ ಗ್ರಾಮ.

## "ದೇವರು ಹೀಗಿರಬೇಕು'

ನಾನು ಮಹಾವೀರ ಸಿಂಹ, ಕೇಹರ ಸಿಂಹನ ಮಗ. ಹರಿಯಾಣದ ಝಜ್ಜರ ಜಿಲ್ಲೆಯ, ಢರಾಣಾ ಹಳ್ಳಿಯ ನಿವಾಸಿ. ಮೊದಲು ನಾನು ಶಿವನ ಪರಮಭಕ್ತನಾಗಿದ್ದೆ. ನನ್ನ ಲಿವರ್ ಹಾಗೂ ಕಿಡ್ನಿಯ ಒಳಗೆ ಕೀವು ತುಂಬಿತ್ತು. ನನ್ನನ್ನು ನನ್ನ ಸೋದರ ಭಕ್ತ ಮಹೇಂದ್ರ ಸಿಂಹ ಚಿಕಿತ್ಸೆ ಕೊಡಿಸಲು ಕರೆದುಕೊಂಡು ಹೋದ. ಅದಕ್ಕೂ ಮೊದಲು ಸಾಕಷ್ಟು ಹಣ ಖರ್ಚು ಮಾಡಲಾಗಿತ್ತು. ಆದರೆ ಯಾವುದೇ ಗುಣ ಕಂಡಿರಲಿಲ್ಲ. ಅಲ್ಟ್ರಾಸೌಂಡ್ ಮಾಡಿಸಿದ ನಂತರ 3 ಆಪರೇಷನ್ ಮಾಡಿಸಬೇಕೆಂದು ಹೇಳಿದರು. ನಾನು ಗಾಭರಿಗೊಂಡೆ ಆಪರೇಷನ್ ಮಾಡಿಸಿಕೊಳ್ಳಲು ನಿರಾಕರಿಸಿದೆ. ಊಟ ಮಾಡಲು ಆಗುತ್ತಿರಲಿಲ್ಲ. ಪರಿಸ್ಥಿತಿ ಬಹಳ ಗಂಭೀರವಾಗಿತ್ತು. ನನ್ನ ಸೋದರ ಮಹೇಂದ್ರ ಹೇಳುತ್ತಲೇ ಇದ್ದ "ನೀನು ಸಂತ ರಾಮ್‌ಪಾಲ್ ಮಹಾರಾಜ ರವರಿಂದ ಉಪದೇಶವನ್ನು ಪಡೆದುಕೊ ಅವರು ಪೂರ್ಣ ಪರಮಾತ್ಮನ ಅವತಾರವೆತ್ತಿ ಭೂಮಿಗೆ ಬಂದಿದ್ದಾರೆ. ಕಬೀರ್ ಪರಮೇಶ್ವರರು ಪೂರ್ಣ ಬ್ರಹ್ಮರು. ನಾನು ಹೇಳುತ್ತಿದ್ದೆ ಶಿವ ಭಗವಾನ್ ಮುಂದೆ ನಿನ್ನ ಕಬೀರ್ ನೇಕಾರನದು ಯಾವ ದೊಡ್ಡಸ್ತಿಕೆ? ಎಂದು. ಕಬೀರರು ಒಬ್ಬ ಕವಿಯಾಗಿದ್ದರು. ಅವರು ದೇವರು ಆಗಲು ಸಾಧ್ಯವಿಲ್ಲ. ನನ್ನ ದೊಡ್ಡ ಅಣ್ಣ ಮಹೇಂದ್ರ ಸಿಂಹನ ಮಗ ಕೆಹರ ಸಿಂಹನ ಪರಿವಾರ ಸಹ ಕಷ್ಟದಿಂದ ಬಳಲುತಿತ್ತು. ಸಂತ ರಾಮ್‌ಪಾಲ್ ಮಹಾರಾಜರ ಶರಣು ಬಂದ ಮೇಲೆ ಸುಖವಾಗಿದ್ದಾರೆ. ಅವರು ಮೊದಲು ಮಾಡುತ್ತಿದ್ದ ಪೂಜೆಗಳನ್ನೆಲ್ಲಾ ಬಿಟ್ಟಿದ್ದಾರೆ. ನಾನು ಒಪ್ಪುತ್ತಿದ್ದೆ, ಆದರೆ ನನ್ನ ಭಗವಾನ್ ಶಿವನಿಗಿಂತ ಹೆಚ್ಚಾಗಿ ನಾನು ಯಾರನ್ನೂ ಒಪ್ಪುತ್ತಿರಲಿಲ್ಲ.

ನನ್ನ ಅಣ್ಣ ನನಗೆ ಹೇಳುತ್ತಿದ್ದ–ಮಹಾವೀರ ಎಲ್ಲರಿಗೂ ಇದೇ ತಪ್ಪು ಕಲ್ಪನೆಗಳಿವೆ. ಪೂರ್ಣ ಬ್ರಹ್ಮ ಕವಿರ್ದೇವ (ಕಬೀರ್ ಪರಮೇಶ್ವರ) ರೇ ಆಗಿದ್ದಾರೆ. ಇವರ ಶಕ್ತಿಯ ಮುಂದೆ, ಬ್ರಹ್ಮಾ, ವಿಷ್ಣು, ಶಿವ, ಕಾಲ ಬ್ರಹ್ಮ, ಪರಬ್ರಹ್ಮರ ಶಕ್ತಿಯ ಕಡಿಮೆ. ದೇಶದ ಪ್ರಧಾನಮಂತ್ರಿಯ ಎದುರು ಪ್ರಾಂತೀಯ ಮಂತ್ರಿಗಳ ಶಕ್ತಿ (ಅಧಿಕಾರಶಕ್ತಿ) ಕಡಿಮೆ ಇರುವುದೋ ಹಾಗೆ. ಅಂತರ ಹೇಗೆ ಇದೆ ಅಂದರೆ ಪರಮೇಶ್ವರ ಕಬೀರ್ ಪ್ರಧಾನ ಮಂತ್ರಿ/ ರಾಷ್ಟ್ರಪತಿ ಆದರೆ ಶಿವ ಭಗವಾನ್ ಪ್ರಾಂತೀಯ ಮಂತ್ರಿ ಎಂದು ತಿಳಿ. ಇಲಿಯು ಆನೆಗೆ ಸಮವೆ? ರಾಮ್‌ಪಾಲ್ ಮಹಾರಾಜ್ ರವರು ಎಲ್ಲ ಸದ್‌ಗ್ರಂಥಗಳನ್ನೂ ಅಧ್ಯಯನ ಮಾಡಿದ್ದಾರೆ. ಭಕ್ತಿ ಶಕ್ತಿಯನ್ನು ಸ್ವಯಂ ಅನುಭವದಿಂದ ಪಡೆದಿದ್ದಾರೆ. ಅವರು ತಮ್ಮ ಜ್ಯೂ. ಇಂಜೀನಿಯರ ನೌಕರಿಯನ್ನು ತೊರೆದು, ಭಕ್ತಿ ಮೈದಾನದಲ್ಲಿ ಕಾರ್ಯ ನಿರತರಾಗಿದ್ದಾರೆ. ಈಗ ಎಲ್ಲ ಸಂತ, ಮಹಂತ ಹಾಗೂ ಆಚಾರ್ಯರನ್ನು ಹಿಂದೆ ಹಾಕಿದ್ದಾರೆ. ಸರ್ವ ಪಂಥಗಳು ಹಾಗೂ ಮಹರ್ಷಿ ದಯಾನಂದರೂ ಸಹ ಅವರ ಮುಂದೆ ಅನುತ್ತೀರ್ಣರಾಗಿದ್ದಾರೆ.

ಸಮಾಚಾರ ಪತ್ರಿಕೆಯಲ್ಲಿಯೇ, ಎಲ್ಲರೊಂದಿಗೆ ತಮ್ಮ ವಿಚಾರವಿಟ್ಟು ಪ್ರಶ್ನಿಸಿದ್ದಾರೆ. ಯಾರೂ ಏನೂ ಹೇಳುತ್ತಿಲ್ಲ. ಆರ್ಯ ಸಮಾಜದ ಕೆಲವು ಮೂರ್ಖರು ಅವರನ್ನು ವಿರೋಧಿಸಿದ್ದರು ವಾದ–ವಿವಾದ ಮಂಡಿಸಿದ್ದರು. ಸಂತ ರಾಮ್‌ಪಾಲ್ ಮಹಾರಾಜರು ಆಧಾರ ಸಹಿತವಾಗಿ ಮಾತನಾಡುತ್ತಾರೆ. ಬೇರೆಯವರು ದಂತಕಥೆಗಳ ಆಧಾರದ ಮಾರ್ಗದರ್ಶನ ಮಾಡಿಸುತ್ತಾರೆ ಸತ್ಯದ ಎದುರಿನಲ್ಲಿ ಅಸತ್ಯ ನಿಲ್ಲಲಾರದು.

ಅಣ್ಣ ಮಹೇಂದ್ರನ ಮಾತುಗಳನ್ನು ಕೇಳಿ ಅವನೊಂದಿಗೆ ಜಗಳ ಮಾಡಬೇಕೆನಿಸಿತು ದೊಡ್ಡವನೆಂಬ ಗೌರವದಿಂದ ಸುಮ್ಮನಿದ್ದೆ. ಬೇರೆ ಯಾರಾದರೂ ಹೇಳಿದ್ದರೆ 'ಎಲ್ಲಿಯ ಇಲಿ, ಎಲ್ಲಿಯ ಆನೆ ಎಂದು' ನಾನು ಅವರ ಮೇಲೆ ಜಗಳಕ್ಕೆ ಹೋಗುತ್ತಿದ್ದೆ. ಆದರೆ ಈಗ ಗೊತ್ತಾಗಿದೆ. ನಿಜವಾಗಿಯೂ ಕಬೀರರೇ ಪೂರ್ಣ ಪರಮೇಶ್ವರ, ಸಾಯುತ್ತಿರುವವನು ಏನು ಮಾಡುವುದಿಲ್ಲ? ಉಳಿಯಲೆಂದು. ನಾನು ಅಣ್ಣನೊಂದಿಗೆ ನನ್ನನ್ನು ಬಚಾವು ಮಾಡು ಎಂದೆ. ಕರೌಂಥಾ ಆಶ್ರಮಕ್ಕೆ ಹೋಗು ನಿನ್ನ ಪ್ರಾಣ ಉಳಿಯುತ್ತದೆ ಎಂದು ಅಣ್ಣ ಹೇಳಿದ. ಆಪರೇಷನ್‌ಗಾಗಿ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ನಾನಾಗ ಆ ಬಟ್ಟೆಗಳನ್ನು ಕಳಚಿ ಹಾಕಿ, ನನ್ನ ಬಟ್ಟೆ ಹಾಕಿಕೊಂಡು, ನಾಮೋಪದೇಶ ಪಡೆಯಲು ಆಶ್ರಮಕ್ಕೆ (ಗಾಡಿಮಾಡಿಕೊಂಡು ಹೋದೆವು) ಹೋದೆ ನಾಮೋಪದೇಶ ವಾಯಿತು. ಆ ಸಮಯದಲ್ಲಿ ನಾನು ಅಲ್ಲೇ ಆಶ್ರಮದಲ್ಲಿ ಊಟ ಮಾಡಿದೆ. ಪುನಃ ಆಸ್ಪತ್ರೆಗೆ ಹೋಗಿ ಪರೀಕ್ಷೆ ಮಾಡಿಸಿದೆ. ಡಾಕ್ಟರ್‌ಗೆ ಆಶ್ಚರ್ಯ. ನನಗೆ ಯಾವ ತೊಂದರೆಯೂ ಇರಲಿಲ್ಲ. ನಾನು ಆರೋಗ್ಯಕರವಾಗಿದ್ದೆ. ನನಗೆ ಆಶ್ರಮದಲ್ಲಿ ಯಾವ ಖರ್ಚು ಬರಲಿಲ್ಲ. ನಾಮಮಂತ್ರ ಜಪದ ಪುಸ್ತಕವು ಉಚಿತವಾಗಿ ಸಿಕ್ಕಿತು. ನನ್ನ ಪರಿವಾರದವರು ಅನ್ಯ ದೇವ–ದೇವಿಯರ ಪೂಜೆ ಮಾಡುವುದನ್ನು ಬಿಟ್ಟು ನಾಮಜಪದಲ್ಲಿ ತೊಡಗಿದರು. ಎಲ್ಲರೂ ಸುಖವಾಗಿ ಇದ್ದಾರೆ. ಮುಕ್ತಿದಾತ ರಾಮ್‌ಪಾಲ್ ಮಹಾರಾಜ ರವರ ಗುಣಗಾನವನ್ನು ಪ್ರತಿದಿನ ಮಾಡುತ್ತಾರೆ.

ಸಂತ ರಾಮ್‌ಪಾಲ್ ಮಹಾರಾಜ ರವರ ಮುಖ್ಯ ಉದ್ದೇಶವೆಂದರೆ ಜನರನ್ನು ಭಕ್ತಿ ಮಾರ್ಗದಲ್ಲಿ ನಡೆಸಿ, ಕಾಲನ ಜಾಲನಿಂದ ಬಿಡುಗಡೆಗೊಳಿಸುವುದು. ಅನ್ಯ ಸಾಮಾಜೀಕ ಸುಖಗಳು ತಮಗೆ ತಾವೇ ದೊರೆಯುತ್ತದೆ.

"ಸತ್‌ಸಾಹೇಬ್"
ಭಕ್ತ ಮಹಾವೀರ

## "ಲೂಟಿಗೊಳಗಾದವರಿಗೆ ಆಧಾರ"

ನಾನು ಭಕ್ತ ಜೀಯಾರಾಮ (ರಾಜು) ಶ್ರೀ ಗಣೇಶೀ ರಾಮನ ಮಗ. ಢರಾಣಾ ಹಳ್ಳಿಯ ನಿವಾಸಿ. ನನಗೆ ಹಾಗೂ ನನ್ನ ಪತ್ನಿಗೆ ಅಸಾಧ್ಯ ರೋಗವಿತ್ತು ಕೆಲವರು ಮದ್ದು ಹಾಕಿರಬಹುದೆಂದರು. ಡಾಕ್ಟರ್ ಟಿ. ಬಿ. ಎಂದು ತಿಳಿಸಿದರು. ನಾವು ಡಾಕ್ಟರ್‌ರಿಂದ ಸಾಕಷ್ಟು ಚಿಕಿತ್ಸೆ ಕೊಡಿಸಿದೆವು. ದೇವ–ದೇವತೆಯರ ಪೂಜೆಯನ್ನು ಮಾಡಿದೆವು. ಉತ್ತರ ಪ್ರದೇಶ, ಹರಿಯಾಣ, ರಾಜಸ್ಥಾನದಲ್ಲಿ ಬಾಲಾಜೀ ಮೊದಲಾದವರಿಂದ ಚಿಕಿತ್ಸೆ ಮಾಡಿಸಲು ಸಾಕಷ್ಟು ಹಣ ಖರ್ಚಾಯಿತು. 10–12 ವರ್ಷಗಳ ಕಾಲ ಹೀಗೆ ಅಲೆದಾಡುತ್ತಿದ್ದೆವು. ನಾವು ಕಡಿಮೆ ಎಂದರೂ 2 ಲಕ್ಷ ರೂಪಾಯಿ ಖರ್ಚು ಮಾಡಿರಬಹುದು. ಆದರೆ ಗುಣಮುಖರಾಗಲೇ ಇಲ್ಲ. ನಮಗೆ ಬಹಳ ಚಿಂತೆಯಾಯಿತು. 50ರೂ. ದುಡಿದರೆ 100ರೂ. ಖರ್ಚಾಗುತ್ತಿತ್ತು. ಎಷ್ಟೋ ವೇಳೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಸಹ ಯೋಚಿಸಿದೆವು. ಹವನವನ್ನು ಮಾಡಿಸಿದೆವು. ಹವನ ಮಾಡುವಾಗ ಪಂಡಿತರು ಹೆದರಿದರು. ಇದರ ಒಳಗೆ ಬಹಳ ದೊಡ್ಡ ಭೂತವಿದೆ ಎಂದರು. ಪುನಃ ಹೋಮಮಾಡಿ ಹೇಳುವೆ ಎಂದರು. ಕೇಹರ ಸಿಂಹನ ಮಗ

ಮಹೇಂದ್ರ ನಮ್ಮ ಹಳ್ಳಿಯವನೇ ಅವನು ಹೇಳಿದ ಸಂತ ರಾಮ್‌ಪಾಲ್ ಮಹಾರಾಜ ರವರಿಂದ ನಾಮೋಪದೇಶ ಪಡಿ. ನನಗೆ ಸಾಕಷ್ಟು ಬಾರಿ ಹೇಳಿದ್ದ- ಜಿಯಾರಾಮ ಎಲ್ಲೂ, ಅಲೆಯಬೇಡ ಲೂಟಿಕಾರರಿಂದ ಲೂಟಿಗೆ ಒಳಗಾಗಬೇಡ. ಸಂತ ರಾಮ್‌ಪಾಲ್ ಮಹಾರಾಜ ರವರ ಆಶೀರ್ವಾದವಿಲ್ಲದೆ ಕಷ್ಟ ನಿವಾರಣೆ ಆಗುವುದಿಲ್ಲ. ನಾನೂ ನಿನ್ನ ಹಾಗೆಯೇ ಅಲೆದಾಡಿ, ಹಣ ಕಳೆದುಕೊಂಡು ಕಡೆಗೆ ಸಂತ ರಾಮ್‌ಪಾಲ್ ಮಹಾರಾಜರ ನಾಮೋಪದೇಶದಿಂದ ಉಳಿದಿದ್ದೇವೆ. ನಾನು ಭಕ್ತ ಮಹೇಂದ್ರನಿಗೆ ಹೇಳಿದೆ ಕರೌಂಥಾದಲ್ಲಿನ ಆಶ್ರಮ ಈಗೀಗ ಕಟ್ಟಿದ್ದಾರೆ. ನಾನುಕೂಡ ದೊಡ್ಡ ದೊಡ್ಡ ಮಂದಿರಗಳಿಗೆ ಹೋಗಿದ್ದೇನೆ. ಯಾವಾಗ ಬಹಳ ತೊಂದರೆಗೆ ಒಳಗಾದೆನೋ, ಆಗ ಮಹೇಂದ್ರನನ್ನು ಭೇಟಿ ಮಾಡಿದೆ. ನಾನು ಮಹೇಂದ್ರನೊಂದಿಗೆ ಮರುದಿನವೇ ಸಂತ ರಾಮ್‌ಪಾಲ್ ಮಹಾರಾಜ ರವರಿಂದ ನಾಮೋಪದೇಶ ಪಡೆದೆ. ನಾವು 2005ರಲ್ಲಿ ನಾಮೋಪದೇಶ ಪಡೆದೆವು ಈಗ ನಮ್ಮ ಪೂರ್ಣ ಪರಿವಾರ ಆರೋಗ್ಯವಾಗಿದೆ. ನಾವು ಪ್ರತಿದಿನ ಪೂರ್ಣ ಪರಮಾತ್ಮ ಸಂತ ರಾಮ್‌ಪಾಲ್ ಮಹಾರಾಜ, ಮುಕ್ತಿದಾತರ ಗುಣಗಾನ ಮಾಡುತ್ತೇವೆ.

ಸಂತ ರಾಮ್‌ಪಾಲ್ ಮಹಾರಾಜ ರವರ ಮುಖ್ಯ ಉದ್ದೇಶ, ನಾಮೋಪದೇಶ ಕೊಟ್ಟು ಸದ್ಭಕ್ತಿ ಮಾರ್ಗದಲ್ಲಿ ನಡೆಸಿ ಕಾಲನ ಜಾಲದಿಂದ ಜನರನ್ನು ಮುಕ್ತಗೊಳಿಸುವುದು. ಸಮಾಜ ಸುಧಾರಣೆ, ಅನ್ಯಸುಖಗಳು ಉಚಿತವಾಗಿ ತನಗೆ ತಾನೇ ಸಿಗುತ್ತದೆ. "ಸತ್ ಸಾಹೇಬ್".

ಭಕ್ತ ಜಿಯಾರಾಮ

## "ಸಂತರೆಂದರೆ ಹೀಗಿರಬೇಕು"

ನಾನು ಶಶಿಪ್ರಭಾ ಪ್ರಧಾನಾಚಾರ್ಯ (ಪ್ರಿನ್ಸಿಪಾಲ್) ರಾಜಕೀಯ ವರಿಷ್ಠ ಮಾಧ್ಯಮಿಕ ವಿದ್ಯಾಲಯ, ಡಿಗಾನಾ ಜಿಲ್ಲೆ, ಜಿಂದ್‌ನಲ್ಲಿ ಕೆಲಸ ಮಾಡುತ್ತಿರುವೆ ನಾನು ನನ್ನ ಮನೆಯ ಜಗಳ-ಕದನ, ಮಾನಸಿಕ ಒತ್ತಡಗಳ ಕಾರಣ 35 ವರ್ಷಗಳಿಂದ ದುಃಖಿಯಾಗಿದ್ದೆ. ಗಂಡ ಹೊಡೆಯುತ್ತಲೂ ಇದ್ದ. ಸಂಬಳವನ್ನೆಲ್ಲಾ ಕಿತ್ತು ಕೊಳ್ಳುತ್ತಿದ್ದ. ಅವನಿಂದ ಎಷ್ಟು ನೋವು ಕೊಡಲು ಸಾಧ್ಯವೋ ಅಷ್ಟನ್ನೂ ಕೊಡುತ್ತಿದ್ದ.

32 ಎಕರೆ ಜಮೀನಿನ ಮಾಲಿಕನಾಗಿದ್ದರೂ, ನನಗೆ ಸದಾ ನಾಯಿಗೆ ರೊಟ್ಟಿ ಹಾಕಿದ ರೀತಿ ಹಾಕುತ್ತಿದ್ದ. ನಾನು ಅವನ ಹಾಗೂ ನನ್ ಸಂಬಂಧಿಕರಲ್ಲಿ ಸಹಾಯ ಯಾಚಿಸಿದೆ. ನಾನು ಸಮಾಜದಲ್ಲಿರುವ ಪಂಚಾಯಿತಿಯಿಂದಲೂ ಸಹಾಯಕೋರಿದೆ. ನನಗೆ ಯಾರೂ ಸಹಕಾರ ನೀಡಲಿಲ್ಲ. ಸಂತರು ಕೆಟ್ಟು ಹೋಗಿರುವ ಕೆಲಸಗಳನ್ನು ಸರಿಮಾಡುತ್ತಾರೆ ಎಂಬ ಮಾತು ಕೇಳಿ, ನಾನು ಸಹ ಆನಂದಪುರ (ಬೀನಾ) ಮಧ್ಯಪ್ರದೇಶದವರನ್ನು ಗುರುವೆಂದು ಶರಣುಹೋದೆ. ಆದರೆ ಮನೆಯಲ್ಲಿ ಅದೇ ಕ್ಲೇಶ, ಹುಡುಗಿಯರು ದೇವರ ದಯೆಯಿಂದ ಚೆನ್ನಾಗಿ ಓದಿದರು. ಆದರೆ ಮದುವೆ ಆಗುತ್ತಿರಲಿಲ್ಲ. ತಂದೆ ಸಂಬಂಧ ಹುಡುಕುವುದನ್ನು ನಿಲ್ಲಿಸಿದರು. ನಾನು ಈ ಗೊಂದಲದ ಕಾರಣ ಬಾಲಾಜೀ ಅವರಲ್ಲಿ ಹೋದೆ. ಬಗಡ್ (ರಾಜಸ್ಥಾನ) ಧೌಲೀ ಧಾರ್ (ಹಿಮಾಚಲ ಪ್ರದೇಶ) ಗೆ ಹೋಗಿ ಪೀರ್-ಫಕೀರ್, ಗುರುದ್ವಾರದ ಆಶ್ರಯ ಪಡೆದೆ. ಮನೆಯಲ್ಲಿ ಒಂಟಿ ಇರುವಾಗ "ಭೂಮಿಯ ಮೇಲೆ ಪರಮಾತ್ಮ ಇಲ್ಲ" ಎಂದು ಅಳುತ್ತಿದ್ದೆ. ಹೊಡೆತ-ಬಡೆತ ಅಪ್ರಾಮಾಣಿಕತೆಗಳನ್ನು ಸಹಿಸಿ-ಸಹಿಸಿ ನಾನು ಹುಚ್ಚಿಯಂತೆ ಆಗಿಹೋದೆ. ಆದರೆ ಒಂದು ದಿನ ನನ್ನ ಪಕ್ಕದ ಮನೆಯಲ್ಲಿ ಪ್ರವಚನವಾಯಿತು. ಅವರು ಪ್ರಸಾದ ಪಡೆದುಕೊಳ್ಳಿ ಎಂದು ನನ್ನನ್ನು ಕರೆದರು. ಹೋದ ಮೇಲೆ ಮಾತುಕತೆ ಆಯಿತು. ಪ್ರವಚನದ ಬಗ್ಗೆ ಹೇಳಿದರು. ಈ ಸಂತರ (ಪಾಠ) ಪ್ರವಚನದಿಂದ ದುಃಖ ನಿವಾರಣೆಯಾಗುತ್ತದೆ. ಆದರೆ ಈ ಪಾಠವನ್ನು ಕೇವಲ ಸಂತ ರಾಮ್‌ಪಾಲ್ ಮಹಾರಾಜರ

ಆಜ್ಞೆಯಂತೆ ಮಾಡಿಸಿದರೆ ಲಾಭವಾಗುತ್ತದೆ. ಬೇರೆ ಯಾರಿಂದಲೂ ಕಥೆ ಹೇಳಿಸಿದರೆ ಏನೂ ಪ್ರಯೋಜನವಿಲ್ಲ. ಹೇಗೆಂದರೆ ರಾಜ ಪರೀಕ್ಷಿತನಿಗೆ ಕಥಾ (ಪ್ರವಚನ) ಹೇಳುವ ಸಮಯದಲ್ಲಿ ಯಾವುದೇ ಋಷಿಗಳು ಪಾಠ ಮಾಡುವ ಧೈರ್ಯ ಮಾಡಲಿಲ್ಲ. ಏಕೆಂದರೆ ಅವರು ಅನಧಿಕಾರಿಯಾಗಿದ್ದರು. ಇದರ ಫಲವು 7ನೇ ದಿನ ಬರಬೇಕಿತ್ತು. ಇದಕ್ಕಾಗಿ ಸ್ವರ್ಗದಿಂದ ಸುಖದೇವರು (ಮಹರ್ಷಿ) ಬಂದರು. ಅವರೇ ರಾಜನಿಗೆ 7ದಿನಗಳವರೆಗೆ ಕಥೆ ಹೇಳಿದರು. ಆಗ ರಾಜ ಪರೀಕ್ಷಿತನಿಗೆ ಮುಕ್ತಿ ಸಿಕ್ಕಿತು.

ಈ ಕಾಲದಲ್ಲಿ ಯಾರೂ ವಾಸ್ತವಿಕ (ಸಹಜ) ಜ್ಞಾನ ಹಾಗೂ ಸತ್ಯ ಸಾಧನೆಯ ಪರಿಚಿತರಿಲ್ಲ. ಆದ್ದರಿಂದಲೇ ಯಾರಾದರೂ ಕಥೆ ಹೇಳುತ್ತಾರೆ. ಇದರಿಂದ ಸಾಧಕನಿಗೆ ಯಾವುದೇ ಲಾಭವಾಗುವುದಿಲ್ಲ. ನಾನು ಚರ್ಚಿಸುತ್ತಿದ್ದ ಸೋದರಿ ಸಂತ ರಾಮ್‌ಪಾಲ್ ಮಹಾರಾಜರ ವಿಚಾರಗಳನ್ನು ಹೇಳುತ್ತಿದ್ದರು. ಅಶಿಕ್ಷಿತರಾಗಿದ್ದರೂ ಶಾಸ್ತ್ರಗಳ ಗೂಢ ರಹಸ್ಯ ತಾನು ಸಂತರಿಂದ ಕೇಳಿದ್ದನ್ನು ಹೇಳಿದರು. ನಾನು ಪ್ರಧಾನಾಚಾರ್ಯಳಾಗಿದ್ದೂ ಆಶ್ಚರ್ಯ ಪಟ್ಟೆ ಪರಮಾತ್ಮನೇ ನನ್ನ ಕೈ ಹಿಡಿದು ಹೋಗುತ್ತಿರುವಂತೆ ಭಾಸವಾಯಿತು.

ಸೋದರಿ ಹೇಳಿದಳು. ನಮ್ಮ ಗುರುಗಳು ದುಃಖಗಳನ್ನು ನಿವಾರಣೆ ಮಾಡುತ್ತಾರೆ. ಆಗ ನಾನು ನನ್ನನ್ನೂ ನಿಮ್ಮ ಆ ಗುರುಗಳ ಬಳಿಗೆ ಕರೆದುಕೊಂಡು ಹೋಗಿ ಎಂದು ಪ್ರಾರ್ಥಿಸಿದೆ. ಮರುದಿನವೇ ನಾನು ಸಂತ ರಾಮ್‌ಪಾಲ್ ಮಹಾರಾಜರ ದರ್ಶನದ ಭಾಗ್ಯ ಪಡೆದೆ. ಒಂದು ಸಾಧಾರಣ ಕುರ್ಚಿಯಲ್ಲಿ ಕುಳಿತಿದ್ದರು. ನನಗೆ ಸಂತರು ಹೇಗಿರುತ್ತಾರೆ? ಅವರ ಮಹಿಮೆ ಏನು? ಎಂಬುದು ತಿಳಿದಿರಲಿಲ್ಲ. ಯಾರು ಎಷ್ಟು ಉನ್ನತ ಸ್ಥಾನದಲ್ಲಿರುತ್ತಾರೋ, ಅಷ್ಟೇ ಸರಳವಾಗಿರುತ್ತಾರೆ. ನಮ್ಮ ಸ್ಥಾನವು ಭೂಮಿಗಿಂತ ಕೆಳಗೆ ಇರುತ್ತದೆ. ನಾವು ಪರಮಾತ್ಮನ ಮಹಿಮೆಯನ್ನು ತಿಳಿದಿದ್ದೇವು. ಗುರುಗಳು, ನನ್ನ ವ್ಯಥೆಯನ್ನು ಕೇಳಿದರು. ನಾಮೋಪದೇಶವನ್ನು ಪಡೆಯಿರಿ ಎಲ್ಲವೂ ಸರಿಯಾಗುತ್ತದೆ ಎಂದು ಹೇಳಿದರು. ಮೂರನೆ ದಿನ ನನಗೆ ಉಪದೇಶ ಕೊಟ್ಟರು. ಒಂದು ತಿಂಗಳ ಒಳಗೆ ಮಗಳಿಗೆ ಸಂಬಂಧ ಕೂಡಿ ಬಂತು ಮದುವೆಯೂ ಆಯಿತು. ಅಸಂಭವವಾದದ್ದು. ಸಂಭವವಾಗುತ್ತಿದೆ ಎನಿಸಿತು. ಅದೇ ನನ್ನ ಪತಿ ಸಂಬಂಧವನ್ನು ನೋಡಲು ಹೋಗದಿದ್ದವರು. ಈಗ ಮದುವೆ ಮಾಡುತ್ತಿದ್ದಾರೆ. ಕೆಲ ದಿನಗಳ ನಂತರ ನನ್ನ ದೊಡ್ಡ ಮಗಳ ಹೊಟ್ಟೆಯಲ್ಲಿ ಗೆಡ್ಡೆ ಕಾಣಿಸಿಕೊಂಡಿತು. ಹೊಟ್ಟೆಯಲ್ಲಿ ಮಗು ಇತ್ತೋ, ಇಲ್ಲವೋ ತಿಳಿಯದು ಚಿಂತೆಯಾಯಿತು. ನಾವು ಸಿನಿಮಾಗಳಲ್ಲಿ ನೋಡುತ್ತೇವೆ. ಈ ಕಡೆ ಆಪರೇಷನ್ ಆಗುತ್ತಿರುತ್ತದೆ. ಅತ್ತಕಡೆ ದೇವರಲ್ಲಿ ಪ್ರಾರ್ಥನೆ ಸಲ್ಲುತ್ತಿರುತ್ತದೆ. ನಂತರ ಎಲ್ಲ ಸರಿ ಹೋಗುತ್ತದೆ.ಹಾಗೆಯೇ ನನಗೆ ಕ್ಯಾನ್ಸರ್ ಇರಬಹುದೆ ಎಂಬ ಸಂಶಯವಿತ್ತು. ಅದು ಕ್ಯಾನ್ಸರ್ ಗೆಡ್ಡೆಯಾಗಿರಲಿಲ್ಲವೆಂದು ತಿಳಿಯಿತು. ಪುನಃ ಹುಡುಗಿ ಗರ್ಭಿಣಿಯಾದಳು. ಇಷ್ಟರಲ್ಲೇ ಅಳಿಯನಿಗೆ ಒಂದು ಟ್ರಾಕ್ಟರ್ ಮೋಟಾರ್‌ಸೈಕಲ್ ಅಪಘಾತದಲ್ಲಿ ತೊಂದರೆಯಾಗಿರುವ ಸಮಾಚಾರ ತಿಳಿಯಿತು. ನನಗಂತೂ ನನ್ನ ಪೂಜ್ಯ ಗುರುದೇವರಲ್ಲದೆ ದಾರಿ ತೋರುವವರು ಬೇರೇ ಯಾರೂ ಕಾಣಲಿಲ್ಲ. ಪ್ರಭುವನ್ನು ಎಷ್ಟು ಹೊಗಳಿ ಗುಣಗಾನ ಮಾಡಿದರೂ ಸಾಲದು. ಈ ನಾಲಿಗೆಯಿಂದ ಅದೆಷ್ಟು ಜನರಿಗೆ ಗುರುವಿನ ಮಹಿಮೆಯನ್ನು ತಿಳಿಸಿರುವೆನೋ, ಎಷ್ಟು ಹೇಳಿದರೂ ಕಡಿಮೆ. ಈ ನಡುವೆ ಅಳಿಯ ಗುಣಮುಖನಾಗಿ ಮನೆಗೆ ಬಂದ. ಪ್ರಪಂಚ ಏನು ತಿಳಿಯುವುದೋ?. ನನ್ನ ಪ್ರಾರ್ಥನೆಯನ್ನು ದೇವರು ಕೇಳುತ್ತಾನೆಯೆ? ಖಂಡಿತಾ ಕೇಳುತ್ತಾನೆ.

ಯಾವ ದಿನದಿಂದ ನಾನು ಈ ಗುರುಗಳಿಂದ ಉಪದೇಶ ಪಡೆದೆನೋ, ಆ ವರೆಗೆ ಇದ್ದ ನಕಲಿ ಗುರುಗಳ ಫೋಟೋವನ್ನು ಅಂಗಳದಲ್ಲಿ ಎಸೆದು ನಷ್ಟಗೊಳಿಸಿದೆ ಆ ದಿನದಿಂದ ನನ್ನ ಜೀವನದ ಗಾಡಿ ಸರಿಯಾಗಿ ಹಳಿಯ ಮೇಲೆ ಹತ್ತಿ ನಡೆಯ ತೊಡಗಿತ್ತು. **23–9–2003** ರಂದು

ನಾನು, ನಮ್ಮ ಜಗಲಿಯ ಮೇಲೆ ಒಂದು ಭಯಂಕರ ಆಕೃತಿಯ ವ್ಯಕ್ತಿಯನ್ನು ನೋಡಿದೆ.(ಸಂಜೆ 4–5 ಗಂಟೆಯಿರಬಹುದು) ನಾನು ನಾಮ ಜಪಿಸತೊಡಗಿದೆ. ಇಲ್ಲವಾದರೆ ಆಗಲೇ ನನ್ನ ಹೃದಯ ಒಡೆದು ಹೋಗುತ್ತಿತ್ತು. ಆದರೆ ಆ ಸಮಯದಲ್ಲಿ ನನಗೆ ಭಯವಾಗಲಿಲ್ಲ. ನನಗೆ ಅವನು ಯಮಧೂತನೇ ಅನ್ನಿಸತೊಡಗಿತು. ಮಾರನೆ ದಿನ ಈ ವಿಷಯವನ್ನು ನನ್ನ ಗುರುಗಳಿಗೆ ತಿಳಿಸಿದೆ.

ಅವರು ಆಗ ತಿಳಿಸಿದರು. ಆ ದಿನಕ್ಕೆ ನನ್ನ ಆಯಸ್ಸು ಮುಗಿದಿತ್ತು. ಈಗ ನಾನು ಬದುಕಿರುವುದು ಪರಮಾತ್ಮ ಸ್ವರೂಪರಾದ ನನ್ನ ಗುರುಗಳ ದಯೆಯಿಂದ ಅವರ ಕೃಪೆಯಿಂದಲೆ, ಚಿಕ್ಕ ಮಗಳ ಮದುವೆ ಇಂಜಿನಿಯರ್ ಹುಡುಗನೊಡನೆ ಕಳೆದ ವರ್ಷ ಆಯಿತು. ಎರಡು ಮೂರು ಬಾರಿ ನನ್ನ ನೌಕರಿ ಹೋಗುವ ಸಂಭವವೂ ಒದಗಿತು. ಆದರೆ ಪುನಃ ನನ್ನ ಪರಮಾತ್ಮನೇ ನನ್ನನ್ನು ಕಾಪಾಡಿದ ನನಗೆ ಎರಡು ಭಡ್ತಿ (ಪ್ರಮೋಶನ್) ಯೂ ಆಯಿತು. ಸಂತ ರಾಮ್‌ಪಾಲ್ ಮಹಾರಾಜ ರವರು ಹೇಳುತ್ತಾರೆ. ರಾಜನೂ ಸಹ ಪ್ರಭುವಿನ ಮಗುವೇ ಆಗಿದ್ದಾನೆ. ಅವನಲ್ಲಿಯೂ ಪ್ರಭುವಿನ ಶಕ್ತಿ ಕೆಲಸಮಾಡುತ್ತದೆ. ಪರಮೇಶ್ವರನೇ ತನ್ನ ಸಾಧಕರಿಗಾಗಿ, ರಾಜನಲ್ಲಿ ಪ್ರೇರಣೆಯನ್ನು ಮಾಡಿ ಎಲ್ಲವನ್ನೂ ಬದಲಾಯಿಸುತ್ತಾನೆ. ಮಾಡುತ್ತಿರುವುದು ರಾಜಾ ಎಂದು ತೋರಿದರೂ, ಮಾಡಿಸಿದವನು ಪರಮೇಶ್ವರನಾಗಿರುತ್ತಾನೆ. ಯಾರಾದರೂ ನನ್ನ ಗುರು ಸಂತ ರಾಮ್‌ಪಾಲ್ ಮಹಾರಾಜ ರವರ ಆಶ್ರಯ ಪಡೆದು ನೋಡಿರಿ ಅವರಿಗೂ ನನ್ನಂತೆ ಎಲ್ಲಾ ಕಷ್ಟಗಳೂ ದೂರವಾಗುವುದು. ಪರಮಾತ್ಮನು ಆಶ್ರಯಹೀನರಿಗೆ ಆಶ್ರಯ ನೀಡುತ್ತಾರೆ. ಆತ್ಮನ ಕರೆಯನ್ನು ಕೇಳುತ್ತಾರೆ. ನನಗೆ ಈ ಕೆಲವು ವರ್ಷಗಳಿಂದ ಏನೆಲ್ಲಾ ಒಳಿತಾಗಿದೆಯೋ, ಅದನ್ನೆಲ್ಲಾ ಪರಮಾತ್ಮನೇ ಮಾಡಿಸಿದ್ದಾನೆ. ನನ್ನ ಗುರುವಿನ ಮಹಿಮೆಯನ್ನು ವರ್ಣಿಸಲು ನನ್ನಲ್ಲಿ ಶಬ್ದವೇ ಇಲ್ಲವಾಗಿದೆ. ಇವರು ಸ್ವಯಂ ಕಬೀರ್ ಪರಮೇಶ್ವರರ ಅವತಾರವೇ ಆಗಿದ್ದಾರೆ ಯಾರು ಪರಮಾತ್ಮನ ಅನುಗ್ರಹ ಬಯಸುತ್ತೀರೋ, ಅವರು ಕರೌಂಥಾಗೆ ಬರುವುದನ್ನು ಮರೆಯಬೇಡಿ. ನನ್ನಂತಹ ಚಿಕ್ಕ ಜೀವನವನ್ನು ತಾವು ಹೇಗೆ ಉದ್ದಾರ ಮಾಡಿರುವಿರಿ ನಾನು ಕೃತಜ್ಞಳಾಗಿರುವೆ ಯಾವ ಶಬ್ದಗಳಿಂದ ತಮ್ಮ ಮಹಿಮೆಯನ್ನು ಹಾಡಲಿ? ಈ ಶಬ್ದಗಳನ್ನು ಓದುಗರು ಹೃದಯದಲ್ಲಿ ಸ್ವೀಕರಿಸಿ ಹಾಗೂ ಲಾಭ ಪಡೆಯಿರಿ.

ಭಕ್ತಿಮತಿ ಶಶಿ
ಮೊ. 918684900607

## “ತನ್ನ ಭಕ್ತರನ್ನು ಧರ್ಮರಾಜನ ದರಬಾರಿನಿಂದ ಬಿಡಿಸಿದ್ದು”

ನಾನು ಮಾತಾದೀನನ ಸುಪುತ್ರ ಓಂ ಪ್ರಕಾಶ್ ದೆಹಲಿಯ ನಜಫ್ ಗಢದ ನಿವಾಸಿ. ನಾನು ಸಂತ ರಾಮ್‌ಪಾಲ್ ಮಹಾರಾಜ ರವರಿಂದ ನಾಮೋಪದೇಶ ಪಡೆದು ಒಂದೂವರೆ ವರ್ಷವಾಯಿತು. ನಜಫ್ ಗಢದಲ್ಲಿ ನನ್ನ ಹಲವಾ ಅಂಗಡಿ ಇದೆ. (ಮಿಠಾಯಿ,) 19–5–2005 ರಂದು ರಾತ್ರಿ 9.30 ರಲ್ಲಿ ನನಗೆ ಹೊಟ್ಟೆ ನೋವು ಹೆಚ್ಚಾಯಿತು. ನೋವಿನ ಕಾರಣ ನನ್ನ ಸ್ಥಿತಿ ಬಹಳ ಕೆಟ್ಟು ಹೋಗಿತ್ತು. ನಾನು ಗುರುವಿನ ಹೆಸರನ್ನು ಜಪಿಸುತ್ತಾ ಮನೆ ತಲುಪಿದೆನು. ಮನೆಗೆ ಪ್ರವೇಶವಾದ ಕೂಡಲೇ ಗುರುವಿನ ಚಿತ್ರಪಟಕ್ಕೆ ನಮಸ್ಕರಿಸಿದೆ. ದೀರ್ಘದಂಡ ನಮಸ್ಕಾರ ಮಾಡಿ ನಿಂತಿದ್ದೆ. ಆಗ ನನಗೆ ನೋವಿನ ಅನುಭವವಾಗಲಿಲ್ಲ. ನಂತರ ನಾನು ಚಾಪೆಯ ಮೇಲೆ ಮಲಗಿದೆ. ಚಾಪೆಯ ಮೇಲೆ ಮಲಗುತ್ತಿದ್ದಂತೆಯೇ, ನಾನು ಪ್ರಜ್ಞಾಹೀನನಾದೆ. ನನ್ನ ನಾಲ್ಕೂ ಕಡೆ ಯಮ ಧೂತರು ಸುತ್ತುತ್ತಿದ್ದರು ಹಾಗೂ ನನ್ನನ್ನು ಹೆದರಿಸತೊಡಗಿದರು. ನಾನು ಹೆದರಿಕೆಯಿಂದ ಪ್ರಜ್ಞಾಹೀನನಾದೆ. ಆಗ ಯಮ ಧೂತರು ನನ್ನ ಮೇಲೆ ಬಿಳಿ ಬಟ್ಟೆ ಹೊದಿಸಿ, ಯಮರಾಜನಲ್ಲಿಗೆ ಕರೆದೊಯ್ದರು. ಯಮರಾಜನ

ದರಬಾರಿನಲ್ಲಿ ಜನರು ಸಾಲುಗಟ್ಟಿ ನಿಂತಿರುವುದನ್ನು ನೋಡಿದೆ. ನನ್ನ ಸರದಿ ಬಂದಾಗ, ಯಮರಾಜನು ನನ್ನನ್ನು ಕೆರೆಗೆ ಎಸೆಯುವಂತೆ ಆಜ್ಞೆ ಮಾಡಿದ. ನಾನು ಕೆರೆಯ ಕಡೆ ನೋಡಿದೆ. ಅಲ್ಲಿ ಮೊಸಳೆಗಳು ಕಂಡವು. ನಾನು ಅವುಗಳನ್ನು ಕಂಡು ಹೆದರಿದೆ. ಆಗ ನನ್ನ ಪರಮ ಪೂಜ್ಯ, ಗುರುಗಳಾದ ಸಂತ ರಾಮ್‌ಪಾಲ್ ಮಹಾರಾಜ ರವರನ್ನು ಸ್ಮರಿಸಿದೆ. ಆಗ ಯಮಧೂತನು ನನ್ನನ್ನು ಕೆರೆಗೆ ಎಸೆಯಲು ಸಿದ್ಧನಾಗಿದ್ದ, ನಾನು ಗುರುವನ್ನು ಕೂಗಿದೆ. "ಹೇ ಗುರುದೇವರೇ ಕಾಪಾಡಿರಿ". ಆಗ ನನ್ನ ಗುರು ಕಬೀರ್ ಪರಮೇಶ್ವರರ ರೂಪದಲ್ಲಿ ಬಂದು ಕೆರೆಗೆ ಬೀಳದಂತೆ ನನ್ನನ್ನು ಹೊರಗೆ ತಡೆದರು. ಯಮರಾಜನು ಕಬೀರ್ ಪರಮೇಶ್ವರರಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ಆಗ ಗುರುಗಳು ತಮ್ಮ ರೂಪದಲ್ಲಿ ಬಂದು ಹೇಳಿದರು. "ನೀನೇಕೆ ಹೆದರುತ್ತಿರುವೆ. ನಾನು ನಿನ್ನ ಜೊತೆ ಇರುವೆನು." ಆಗ ನನ್ನ ಭಯ ದೂರವಾಯಿತು. ಧರ್ಮರಾಜನು ಗುರುವಿನೊಂದಿಗೆ ಕೇಳಿದರು ಇವನನ್ನು ಪದೇ ಪದೇ ಏಕೆ ಕಾಪಾಡುವಿರಿ? ಇವನು ನನ್ನ ಬೋಜನ. ತಾವು ಈ ಮೊದಲು ಎರಡು ಸಾರಿ ಇವನನ್ನು ಸಾಯುತ್ತಿರುವುದರಿಂದ ತಪ್ಪಿಸಿರುವಿರಿ. ಮೊದಲ ಸಾರಿ ಜೀಪ್ ಹಾಗೂ ಸ್ಕೂಟರ್ ಅಪಘಾತದಲ್ಲಿ ಸಿಲುಕಿದರೂ ನನಗೆ ಚಿಕ್ಕ ಗಾಯವು ಆಗಿರಲಿಲ್ಲ. ಎರಡನೇ ಬಾರಿ ಮೋಟರ್‌ಗಾಡಿಯಿಂದ ಜಾರಿ ಬಿದ್ದು ಚಲಿಸುತ್ತಿದ್ದ ಟ್ರಕ್‌ನ ಚಕ್ರದಡಿ ಸಿಲುಕಿದೆ. ಗುರುದೇವರು ನನ್ನನ್ನು ಆ ಚಕ್ರಗಳ ನಡುವಿನಿಂದ ಕಾಪಾಡಿದರು.

ಇವನು ನನ್ನ ಭಕ್ತಿಯನ್ನು ಹಿಂದಿನ ಜನ್ಮದಲ್ಲಿ ಮಾಡಿದ್ದಾನೆ. ಆದ್ದರಿಂದ ರಕ್ಷಿಸಿರುವೆ ಎಂದು ಧರ್ಮರಾಯನಿಗೆ ಗುರುಗಳು ಹೇಳಿದರು. ಈಗ ನೀವು ಏಕೆ ಕಾಪಾಡಿದಿರಿ? ಎಂದು ಧರ್ಮರಾಜ ಕೇಳಿದನು? ಅದಕ್ಕೆ ಗುರುಗಳು ಹೇಳಿದರು ನೀವು ಇವನ ನಾಮೋಪದೇಶವನ್ನು ಖಂಡನೆ ಮಾಡಿಸಿದ್ದಿರಿ. ಇಲ್ಲದಿದ್ದರೆ ಇವನ ಸಾವು ಸಾಧ್ಯವಿರಲಿಲ್ಲ. ಇವನ ಭಕ್ತಿಯಿಂದ ನಾನು ರಕ್ಷಿಸಿರುವೆ. ನೀವು ಇವನನ್ನು ಎಲ್ಲಿಯವರೆಗೆ ಉಳಿಸುವಿರಿ? ಎಂದು ಧರ್ಮರಾಯ ಕೇಳಿದನು. ನಾನು ಇವನೊಂದಿಗೆ ಪ್ರತಿಕ್ಷಣದಲ್ಲೂ ಇರುವೆನು ನೀನು ಇವನನ್ನೂ ಏನೂ ಮಾಡಲು ಆಗುವುದಿಲ್ಲ.

ಸದ್ಗುರು ಧರ್ಮರಾಯನಿಗೆ ಹೇಳಿದರು ನೀನೇನಾದರೂ ಈ ಬಾರಿ ಪುನಃ ಕಷ್ಟ ಕೊಟ್ಟು ಹಿಂಸೆ ಮಾಡಿದರೆ, ನಿನ್ನ ಪರಿಸ್ಥಿತಿ ಕೆಟ್ಟದಾಗುತ್ತದೆ. ಅದಕ್ಕಿಂತ ಹೆಚ್ಚಿನ ತೊಂದರೆ ನಿನಗಾಗುತ್ತದೆ.

ಮೊದಲು ಇಬ್ಬರು ಡಾಕ್ಟರ್ ಚಿಕಿತ್ಸೆ ಕೊಡಲು ಒಪ್ಪಿರಲಿಲ್ಲ. ಇದು ನಮ್ಮಿಂದಾಗದ ಕೆಲಸ ಎಂದಿದ್ದರು. ನನ್ನ ಮನೆಯವರು ನನ್ನನ್ನು ಬೇರೆ ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿದ್ದರು. ಗುರುದೇವರು ನನ್ನನ್ನು ಧರ್ಮರಾಜನ ದರಬಾರಿನಿಂದ ಕೆಳಗೆ ಕರೆದುಕೊಂಡು ಬಂದರು. ನೀನು ಬೇಗನೆ ಹೇಳು. ನನ್ನನ್ನು ಮನೆಗೆ ಕರೆದುಕೊಂಡು ಹೋಗಿ, ನಾನೀಗ ಸರಿಯಾಗಿದ್ದೇನೆ ಎಂದು. ಯಾರು ನನ್ನೊಂದಿಗೆ ಇದ್ದರೋ, ಅವರು ಆಶ್ಚರ್ಯ ಪಟ್ಟರು. ಇವನು ಸತ್ತು ಹೋಗಿದ್ದ ಇವನಿಗೆ ಹೇಗೆ ಪ್ರಜ್ಞೆ ಬಂತು ಎಂದು? ಇವನು ಹೀಗೇಕೆ ಮಾತನಾಡುತ್ತಿದ್ದಾನೆ? ನನ್ನನ್ನು ನನ್ನ ಮನೆಯವರು ಮನೆಗೆ ವಾಪಸ್ ಕರೆದುಕೊಂಡು ಹೋಗುತ್ತಿದ್ದಾಗ, ನನಗೆ ಕಮಲದ ಮೇಲೆ ಕುಳಿತಿರುವ ಸದ್ಗುರುದೇವರ ರೂಪ ಕಾಣಿಸತೊಡಗಿತು. ಅವರು ನನ್ನ ಕಡೆ ಆಶೀರ್ವದಿಸುತ್ತಾ ಹೋಗುತ್ತಿರುವುದು ಕಾಣಿಸಿತು. "ನನ್ನ ಗುರುಗಳು ಹೋದರು, ನನ್ನ ಗುರುಗಳು ಹೋದರು", ಎಂದು ನಾನು ಅಳತೊಡಗಿದೆ. ನಮ್ಮ ಮನೆಯವರು ಗಾಬರಿಯಾದರು, ಇವನೇಕೆ ಹೀಗೆ ಮಾಡುತ್ತಿದ್ದಾನೆ? ಆಗ ಗುರುದೇವರು ಕೂಗಿ ಹೇಳಿದರು ಭಕ್ತ ನೀನೇನು ಮಾಡುತ್ತಿರುವೆ? ನಾನು ನಿನಗೆ ಹೇಳಿದ್ದೇನು? ಬೇಗನೆ ಮನೆಗೆ ಹೋಗು ಎಂದು ಆಗ ನಾನು ನನ್ನ ಮನೆಯವರಿಗೆ ಹೇಳಿದೆ ನನಗೆ ನನ್ನ ಗುರುಗಳು ಕಾಣಿಸಿಕೊಂಡರು, ಎಂದು ನಮ್ಮ ಮನೆಯವರಿಗೆ ಬಹಳ ಆಶ್ಚರ್ಯ ಇವನು ಸತ್ತೇ ಹೋಗಿದ್ದನು. ಹೇಗೆ ಪುನಃ

ಜೀವ ಬಂತು? ಎಂದು. ಆಗ ನನ್ನೊಡನೆ ಆದ ಎಲ್ಲಾ ಸಂಗತಿಗಳನ್ನೂ ಮನೆಯವರಿಗೆ ತಿಳಿಸಿದೆ. ನನ್ನ ಗುರುಗಳೇ ನನ್ನ ಜೊತೆ ಬಂದು ಮನೆಯನ್ನು ತಲುಪಿಸಿದರು.

ಭಕ್ತ ಓಂಪ್ರಕಾಶ್ ದಾಸ್
ಮೊ. 09716927191

## "ಪೂರ್ಣ ಪರಮಾತ್ಮನು ಸಾಧಕರ ಭಯಂಕರ ರೋಗವನ್ನು ಮುಕ್ತಗೊಳಿಸಿ ಆಯಸ್ಸನ್ನು ವೃದ್ಧಿಸುತ್ತಾನೆ."
## (ಭಕ್ತ ಡಾ॥ ಓಂ ಪ್ರಕಾಶ್ ಹುಡ್ಡಾ (C.M.O) ರವರ ಪ್ರಮಾಣ)

ಋಗ್ವೇದದ 10ನೇ ಮಂಡಲದ, 161ನೇ ಸೂಕ್ತಿಯ, 1 ಮತ್ತು 2ನೇ ಮಂತ್ರದಲ್ಲಿ ಪರಮೇಶ್ವರ ಹೇಳುತ್ತಾನೆ. ಯಾರಿಗಾದರೂ ಪ್ರತ್ಯಕ್ಷ ಅಥವಾ ಗುಪ್ತ ಕ್ಷಯರೋಗ ರಾಜಕ್ಷಯವಾಗಿದ್ದರೂ, ಅದನ್ನು ಸಹ ಗುಣಪಡಿಸುತ್ತೇನೆ. ಯಾರಾದರೂ ರೋಗಿಯ ಪ್ರಾಣ ಕ್ಷೀಣವಾಗಿದ್ದರೆ, ಯಾರದ್ದಾದರೂ ಆಯಸ್ಸು ಶೇಷವಿರದಿದ್ದರೆ ಅವರಿಗೆ ಆಯಸ್ಸನ್ನು 100 ವರ್ಷಗಳವರೆಗೆ ವೃದ್ಧಿಸುವೆ ಎಲ್ಲಾ ಸುಖಗಳನ್ನು ಕರುಣಿಸುವೆ, ಮಂತ್ರ 5ರಲ್ಲಿ ಹೇಳಿದೆ ಹೇ ಪುನರ್‌ಜೀವನ ಪ್ರಾಪ್ತ ಪ್ರಾಣಿಯೇ, ನೀನು ಸರ್ವ ಭಾವದಿಂದ ನನಲ್ಲಿ ಶರಣು ಬಾ ಒಂದು ವೇಳೆ ಪಾಪ ಕರ್ಮದ ದಂಡದ ಕಾರಣ ನಿಮ್ಮ ಕಣ್ಣುಗಳು ಕುರುಡಾಗಿದ್ದರೆ ನಿಮಗೆ ಜೀವನ ಪರ್ಯಂತ ನೇತ್ರದಾನ ಮಾಡುವೆ ನಿನ್ನನ್ನು ರೋಗಮುಕ್ತಗೊಳಿಸಿ ಸಕಲ ಅಂಗಗಳನ್ನು ಪ್ರಧಾನ ಮಾಡುವೆ.

ಜಮ ಜೊರಾ ಜಾಸೆ ಡರೆ, ಮಿಟೆ ಕರ್ಮ ಕೆ ಲೇಖ ।
ಅದಲೀ ಅದಲ ಕಬೀರ್ ಹೈ, ಕುಲ ಕೆ ಸತ್‌ಗುರು ಏಕ್ ॥

ಮೇಲಿನ ಪಂಕ್ತಿಗಳು ನನ್ನ ಜೀವನದಲ್ಲಿ ಪೂರ್ಣ ರೂಪದಲ್ಲಿ ಸತ್ಯವಾಗಿದೆ. ನಾನು ಭಕ್ತ ಡಾಕ್ಟರ್ ಓಂ ಪ್ರಕಾಶ್ ಹುಡ್ಡಾ (C.M.O.-M.B.B.S.,M.S(Eye specialist)) 18A ಸರಕುಲರ್ ರೋಡ್, ರೋಹತಕ್ ದಲ್ಲಿದ್ದೇನೆ. ನನ್ನ ಮೊ. ನಂ. 9813265050. ನಾನು ಹುಟ್ಟಿದ ದಿನಾಂಕ : 12–4–1953, ಹುಟ್ಟಿದ ಸ್ಥಳ ಕಿಲೋಯಿ ಎಂಬ ಹಳ್ಳಿ, ರೋಹತಕ್ ಜಿಲ್ಲೆ, ನನ್ನ 5 ರಿಂದ 12ನೇ ತರಗತಿಯವರೆಗಿನ ವಿದ್ಯಾಭ್ಯಾಸ D.A.V ಸ್ಕೂಲ್ ಹಾಗೂ D.A.V ಕಾಲೇಜ್, ಅಮೃತಸರದಲ್ಲೇ ಆಯಿತು. ಅಮೃತಸರದಲ್ಲಿ ನನ್ನ ಅಣ್ಣ ಗ್ರಂಥಪಾಲಕ (Librarian) ರಾಗಿ D.A.V ಸ್ಕೂಲಿನಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿನ ಪರಿಚಿತ ಜನರು ಅವರನ್ನು ಪ್ರೀತಿಯಿಂದ ಮಾಸ್ಟರ್‌ಜೀ ಎಂದು, ನನ್ನನ್ನು ಛೋಟೆ ಮಾಸ್ಟರ್ ಜೀ ಎಂದು ಕರೆಯುತ್ತಿದ್ದರು. ನಾನು ಆರನೆಯ ತರಗತಿಯಲ್ಲಿ ಓದುತ್ತಿದ್ದಾಗ, ಒಬ್ಬ ಮಹಾತ್ಮರು (ಅಮೃತ ಸರದಲ್ಲಿದ್ದವರು) ನನ್ನ ಹಸ್ತರೇಖೆಯನ್ನು ನೋಡಿ, ನೀನು ವೈದ್ಯನಾಗುವೆ, ಆದರೆ ನಿನ್ನ ಆಯಸ್ಸು ಕೇವಲ 50 ವರ್ಷಗಳು ಮಾತ್ರ ಎಂದು ತಿಳಿಸಿದರು. ಆ ಮೇಲೆ ಅವರಿಗೆ ಭಯವಾಯಿತು. ನಾನೂ ಈ ಚಿಕ್ಕ ಬಾಲಕನಿಗೆ ಸತ್ಯಾಂಶವನ್ನು ತಿಳಿಸಿ ತಪ್ಪು ಮಾಡಿದೆ. ಆದರೆ ಮಹಾತ್ಮರ ಮಾತುಗಳಿಗೆ ಅಂದು ನಾನು ಕೇಳಿಸಿದರೂ ಕೇಳಿಸದ ಹಾಗಿದ್ದು ಬಿಟ್ಟೆ. ನಾನು ದೊಡ್ಡವನಾಗಿ ವೈದ್ಯನಾದೆ. M.B.B.S ಹಾಗೂ M.S ಪರೀಕ್ಷೆ ಪಾಸು ಮಾಡಿದೆ.

ಸರಿಯಾಗಿ ನನಗೆ 50ವರ್ಷ ಪೂರೈಸುವುದರಲ್ಲಿತ್ತು. ದಿನಾಂಕ 10/ 11 ಏಪ್ರಿಲ್ 2003, ರಾತ್ರಿ ಸರಿಯಾಗಿ 12 ಗಂಟೆಗೆ ನನ್ನ ಎರಡೂ ಕೈಗಳಲ್ಲಿ ಬಹಳ ನೋವು ಕಾಣಿಸಿಕೊಂಡಿತು. ಎದೆಯಲ್ಲಿ ಒತ್ತಡ ಶುರುವಾಯಿತು. ಆಗ ನಾನು ರೋಹತಕ್‌ನಲ್ಲಿ ಇದ್ದೆ. ನಮ್ಮ ಪರಿವಾರದವರೆಲ್ಲಾ

ಜೊತೆಯಲ್ಲಿದ್ದರು. ಚಿಕಿತ್ಸೆಗಾಗಿ P.G.I.M.S ಗೆ ಹೋದೆವು. ಈ ಮೊದಲು ನನಗೆ ಸಕ್ಕರೆ ಖಾಯಿಲೆಯಾಗಲೀ, ಅಧಿಕ ರಕ್ತದೊತ್ತಡವಾಗಲಿ ಇರಲಿಲ್ಲ. ನಾಮೋಪದೇಶ ಪಡೆಯುವ ಮೊದಲು ನಾನು ಧೂಮಪಾನ (ನನ್ನ 23 ವರ್ಷಗಳವರೆಗೆ) ಮಾಡಿದ್ದೆ. ಅಲ್ಲಿದ್ದ ಡ್ಯೂಟಿ ಡಾಕ್ಟರೊಂದಿಗೆ ನನ್ನ ಪರಿಚಯ ತಿಳಿಸಿದೆ. ಪದವಿದೃಷ್ಟಿಯಿಂದ ಅವರು H.C.M.S.I (Group A) ಶ್ರೇಣಿಯಲ್ಲಿದ್ದರು.

ನಾನು S.M.O ಪದದಲ್ಲಿ ಸೇವಾನಿರತನಿದ್ದೆ. (ಆ ಕಾಲದ S.M.O ಈಗ C.M.O ಎನ್ನುತ್ತಾರೆ) ನನ್ನ ಪರಿಚಯವಾದ ಮೇಲೆ ವೈದ್ಯರು ತಕ್ಷಣ ಉಚಿತ ತಪಾಸಣೆ ಆದ ಮೇಲೆ, ನನಗೆ ಚಿಕಿತ್ಸೆ ಶುರುಮಾಡಿದರು. ನಂತರ I.C.U ನಲ್ಲಿ ಶಿಫ್ಟ್ ಮಾಡುವವರೆಗೆ ಎಲ್ಲ ಗತಿ–ವಿಧಿಗಳನ್ನು ಪರೀಕ್ಷಿಸಲಾಯಿತು. ಆದರೆ I.C.U ಗೆ ಶಿಫ್ಟ್ ಮಾಡಿದ ಸ್ವಲ್ಪ ಸಮಯದ ನಂತರ, ನನಗೆ ಏನಾಯಿತು? ಎಂದು ತಿಳಿಯದಾಯಿತು. ಸುಮಾರು ಒಂದುವರೆ ಗಂಟೆಗಳ ತರುವಾಯ ಕಾಲನ ಧೂತರು ನನ್ನನು ಸುತ್ತುಗಟ್ಟಿ ನಿಂತಿದ್ದಂತೆ ಭಾಸವಾಯಿತು. ಅವರು ಹೇಳಿದರು– "ನಿನ್ನ ಸಮಯ ಮುಗಿಯಿತು ನಾವು ನಿನ್ನನ್ನು ಕರೆದೊಯ್ಯಲು ಬಂದಿರುವೆವು" ನಾನು ಆಗ ಅವರಿಗೆ ಏನನ್ನೂ ಹೇಳದ ಪರಿಸ್ಥಿತಿಯಲ್ಲಿದ್ದಾಗ, ನನ್ನ ಹಾಸಿಗೆಯ ಬಳಿ ಸಂತ ರಾಮ್‌ಪಾಲ್ ಮಹಾರಾಜ ರವರು ಪ್ರಕಟವಾದರು. ಅವರನ್ನು ಕಂಡು ಭಯಂಕರ ರೂಪದ ಕಾಲನ ಧೂತರು ಹೆದರಿ ಅದೃಶ್ಯವಾದರು.

ನನ್ನ ಸದ್ಗುರು ದೇವರು ಹೀಗೆ ಆಶೀರ್ವಾದ ಮಾಡಿದರು "ಕಬೀರ್ ಪರಮೇಶ್ವರನು ನಿಮ್ಮ ಆಯಸ್ಸನ್ನು ತಮ್ಮ ಖಾತೆಯಿಂದ ಹೆಚ್ಚಿಸಿದ್ದಾರೆ. ಮತ್ತು ತಾವು ಭಕ್ತಿಯಲ್ಲಿ ಪೂರ್ಣತಲ್ಲಿನರಾಗಿ, ಸತ್ಯಲೋಕಕ್ಕೆ ಹೋಗಬಹುದು. ನಾನು ಅಳುತ್ತಾ ಹೇಳಿದೆ "ಸ್ವಾಮಿ ತಾವೇ ಸ್ವಯಂ ಪರಮೇಶ್ವರರು. ತಮ್ಮನ್ನು ತಾವು ಈ ಶರೀರದಲ್ಲಿ ಮುಚ್ಚಿಕೊಂಡಿರುವಿರಿ. ಪರಮೇಶ್ವರನ ಭಕ್ತಿಯನ್ನು ತಾವೇ ಮಾಡಿಸುವವರಾಗಿರುವಿರಿ. ನಾನು ಭಕ್ತಿಮಾಡಲು ಯಾರು?" ಇಷ್ಟು ಹೇಳುವುದರಲ್ಲಿ ನನ್ನ ಕಣ್ಣು ತೆರೆಯಿತು. ನನ್ನ ಕಣ್ಣುಗಳಿಂದ ಕಣ್ಣೀರ ಧಾರೆ ಹೊರತಾಗಿ ಇನ್ನೇನೂ ಇರಲಿಲ್ಲ. 3 ದಿನಗಳ ನಂತರ ನನ್ನನ್ನು I.C.U ನಿಂದ ವಾರ್ಡ್‌ಗೆ ತರುತ್ತಿದ್ದಾಗ ನಾನು ಎದ್ದು ಓಡಾಡ ತೊಡಗಿದೆ. ಆಗ ಡಾಕ್ಟರ್ ಓಡಿ ಬಂದು ನನ್ನನ್ನು ಹಿಡಿದುಕೊಂಡು ಕೇಳಿದರು. "ನೀನು ಎಲ್ಲಿಗೆ ಹೋಗುತ್ತಿರುವೆ? ನೀನು ನಡೆಯಬಾರದು. ನಿನಗೆ ಹೃದಯ ಸ್ಥಂಭನವಾಗಿದೆ. ಸ್ಪೆಷಲ್ ವಾರ್ಡ್‌ಗೆ ಶಿಫ್ಟ್ ಆದ ನಂತರ ಡಾಕ್ಟರ್ ಹೀಗೆ ಹೇಳಿದರು ತಾ: 10/ 11ರ ರಾತ್ರಿಯಲ್ಲಿ ತಮ್ಮ E.C.G ಹಾಗೂ B.P ರಿಪೋರ್ಟ್ ಹೇಳುತ್ತಿದ್ದ ಪ್ರಕಾರ ನೀವು ಉಳಿಯುವ ಸಂಭವವೇ ಇರಲಿಲ್ಲ. ಆದರೆ ಬೆಳಿಗ್ಗೆ ನಿಮ್ಮ B.P ನೋಡಿದರೆ ಮತ್ತೆ ನೀವು ಸಾಮಾನ್ಯ ಸ್ಥಿತಿಯಲ್ಲಿದ್ದಿರಿ.

ನಾನು 25–12–1999 ರಂದು ತತ್ವದರ್ಶಿ ಸಂತ ರಾಮ್‌ಪಾಲ್ ಮಹಾರಾಜ ರಿಂದ ನಾಮೋಪದೇಶವನ್ನು ಪಡೆದೆ. ಇದಕ್ಕೂ ಮೊದಲು ನಾನು. ಬ್ರಹ್ಮಕುಮಾರಿ, ಜೈನೀ, ರಾಧಾಸ್ವಾಮಿಗಳ ಶಿಷ್ಯನಾಗಿದ್ದೆ ಹಾಗೂ D.A.V ಶಾಲೆಯ ಶಿಷ್ಯನಾದ ಕಾರಣ ಆರ್ಯ ಸಮಾಜದ ಪ್ರಭಾವ ನನ್ನ ಮೇಲಿತ್ತು.

ಗಾಯತ್ರಿ ಮಂತ್ರದ ಜಪವನ್ನು ಅನೇಕ ಲಕ್ಷಗಳವರೆಗೆ ಮಾಡಿರಬಹುದು. ಮನೆಯಲ್ಲಿ ಸುಮಾರು ನೂರಾರು ಫೋಟೋಗಳು ದೇವ–ದೇವತೆಯರದ್ದು ಇತ್ತು. ನಾಮೋಪದೇಶದ ನಂತರ ಆ ಎಲ್ಲಾ ಫೋಟೋಗಳನ್ನು ಹರಿವ ನೀರಿನಲ್ಲಿ ವಿಸರ್ಜನೆ ಮಾಡಿದೆ. ಹಾಗೂ ಎಲ್ಲಾ ರೀತಿಯ ಮೊದಲಿನ ನಾನು ಆರಾಧನೆಯನ್ನು ಬಿಟ್ಟು ಬಿಟ್ಟೆ. ಸದ್ಗುಗುರು ರಾಮ್‌ಪಾಲ್ ಮಹಾರಾಜ ರವರ ಅಪ್ಪಣೆಯಂತೆ ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರರನ್ನು ಭಕ್ತಿಯಿಂದ ಧ್ಯಾನ ಮಾಡತೊಡಗಿದೆ. ಏಕೆಂದರೆ ಸದ್ಗುರು ಹೀಗೆ ಹೇಳಿದ್ದಾರೆ–

ಏಕ್ಕೈ ಸಾಧ್ಯೈ ಸಬ್ ಸಧ್ಯೈ, ಸಬ್ ಸಾಧ್ಯೈ ಸಬ್ ಜಾಯೆ ।
ಮಾಲೀಸೀಂಚ್ಯೈ ಮೂಲ ಕೋ, ಫಲೆ–ಘೂಲೇ ಅಘಾಯೆ ॥

ಕಬೀರ್ ಪರಮೇಶ್ವರರ ಭಕ್ತಿಯಲ್ಲಿ ತಲ್ಲೀನನಾದಾಗ, ತತ್ವದರ್ಶಿ ಸಂತರಿಂದ ನಾಮೋಪದೇಶ ಪಡೆದ ನಂತರ ನನಗಾದ ಲಾಭವೆಂದರೆ ಸಂತ ರಾಮ್‌ಪಾಲ್ ಮಹಾರಾಜ ರವರು ತಮ್ಮ ಖಾತೆಯಿಂದ ನನ್ನ ಆಯಸ್ಸನ್ನು ಹೆಚ್ಚಿಸಿದರು. "ಈ ಮಾತುಗಳನ್ನು ನಾನು ಹಾಗೂ ನನ್ನ ಪರಿವಾರದ ಸದಸ್ಯರು. ಅಲ್ಲಿ ಕಾರ್ಯ ನಿರತ ಡಾಕ್ಟರ್ ಮತ್ತು ಸಿಬ್ಬಂದಿ ವರ್ಗದವರಿಗೆ ತಿಳಿಸಿದೆವು. ಆದರೆ ಅವರು ಯಾರೂ ಇದನ್ನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಏಕೆಂದರೆ ಯಾರ ಭಕ್ತಿಯ **Channel** ಅನ್ನು ಪರಮೇಶ್ವರ **On** ಮಾಡುತ್ತಾರೆ. ಈ ಮಾತುಗಳು ಕೇವಲ ಅವರಗೆ ಅರಿವಾಗುತ್ತವೆ ಅನ್ಯರಿಗೆ ಅರಿವಾಗುವುದು ಸಾಧ್ಯವಾಗುವುದಿಲ್ಲ."

ನಾನು 25–12–1999 ರಲ್ಲಿ ರಾಮ್‌ಪಾಲ್ ಮಹಾರಾಜರಿಂದ ನಾಮೋಪದೇಶ ಪಡೆದೆ. ಆದರೆ ಇವರೇ ಕಬೀರರ ಅವತಾರವೆಂದು ತಿಳಿದಿರಲಿಲ್ಲ ಯಾವಾಗ ನನಗೆ ಮೇಲಿನ ಘಟನೆಗಳು ಘಟಿಸಿದವೋ, ಆಗ ನಂಬಿಕೆ ಬಂದಿತು.

ಮಾಂಸಾ ಘಟೆ ನ ತಿಲ ಬಢೆ, ವಿಧನಾ ಲಿಖೆ ಜೋ ಲೇಖ್ ।
ಸಾಚಾ ಸತ್‌ಗುರು ಮೇಟ ಕರ್, ಊಪರ್ ಮಾರೇ ಮೇಖ್ ॥

## "ಭಕ್ತಮತಿ ಸುಶೀಲಳ ಕಣ್ಣು ಸರಿಪಡಿಸಿದ್ದು"

ಇದೇ ರೀತಿ ನನ್ನ ಧರ್ಮಪತ್ನಿ ಶ್ರೀಮತಿ ಸುಶೀಲಾ ಹುಡ್ಡಾಳಿಗೆ, 6–12–2004ರಲ್ಲಿ ಬಲಗಣ್ಣಿನಿಂದ ಎರಡೆರಡು ವಸ್ತುಗಳು ಕಾಣಿಸ ತೊಡಗಿತು. **P.G.I.M.S** ರೋಹತಕ್‌ದಲ್ಲಿ ಎಲ್ಲ ಟೆಸ್ಟ್‌ಗಳನ್ನು ಹಾಗೂ **M.R.I.angiography** ಮುಂತಾದವುಗಳನ್ನೂ ಮಾಡಿಸಿದೆವು. ಎಲ್ಲಾ ಅನುಭವವುಳ್ಳ **(Specialist)** ವರಿಷ್ಠ ವೈದ್ಯರಿಗೆ ತೋರಿಸಿ ಚಿಕಿತ್ಸೆ ಕೊಡಿಸಲಾಯಿತು. ಆದರೆ ಯಾವುದೇ ಲಾಭವಾಗಲಿಲ್ಲ. ಖಾಸಗಿ ವೈದ್ಯ ಈಶ್ವರ ಸಿಂಹ ಮೊದಲಾದವರಿಗೂ ತೋರಿಸಿದರೂ ಏನೂ ಲಾಭವಾಗಲಿಲ್ಲ. ಈ ಎಲ್ಲಾ ಚಿಕಿತ್ಸೆಗಳನ್ನು ಸದ್ಗುರುವಿನ ಆಜ್ಞೆ ಪಡೆದ ನಂತರವೇ ಮಾಡಿಸಿದ್ದೆ. ಯಾವಾಗ ಔಷಧಿಗಳಿಂದ ಗುಣವಾಗಲಿಲ್ಲವೋ, ಆಗ ಸದ್ಗುರುವನ್ನು ಪ್ರಾರ್ಥಿಸಿದೆ ಪರಮೇಶ್ವರ ತಾವು ಆಯಸ್ಸನ್ನೇ ವೃದ್ಧಿಸಬಲ್ಲಿರಿ. ಈ ಕಾರ್ಯ ನಿಮಗೆ ಕಠಿಣವೇ? ನಿಮ್ಮ ಮಕ್ಕಳ ಮೇಲೆ ದಯವಿಟ್ಟು ಕೃಪೆ ಮಾಡಿರಿ. ಸದ್ಗುರುಗಳು ಕೃಪೆ ಮಾಡಿದರು. ಅವರು ತಲೆಯ ಮೇಲೆ ಕೈ ಇಟ್ಟರು. ಬಲಗಣ್ಣು ಸರಿಯಾಯಿತು. ಈಗ ಇವರನ್ನು ಪಾಪ ಕರ್ಮಗಳನ್ನು ನಾಶಮಾಡುವಂತಹ ಭಗವಾನ್ ಎನ್ನದೆ ಮತ್ತೇನು ಹೇಳಬಹುದು? ಪ್ರಿಯಪಾಠಕರು ವಿಚಾರ ಮಾಡಿ ನಿರ್ಣಯ ತೆಗೆದುಕೊಳ್ಳಿ, ಅತಿ ಶೀಘ್ರವಾಗಿ ನೀವೂ ಸಹ ತಮ್ಮ ಗೌರವ ವೃದ್ಧಿಯ, ಶಾಸ್ತ್ರವಿಧಿ ವಿರೋಧದ ಸಾಧನಾ ಮಾರ್ಗವನ್ನು ತ್ಯಜಿಸಿ, ಸತ್ಯಲೋಕ ಆಶ್ರಮ ಕರೌಂಥಾಗೆ ಬನ್ನಿರಿ. ಸಂತ ರಾಮ್‌ಪಾಲ್ ಮಹಾರಾಜ ರವರಿಂದ ನಾಮೋಪದೇಶ ಪಡೆಯಿರಿ. ನಿಮ್ಮ ಹಾಗೂ ನಿಮ್ಮ ಪರಿವಾರದವರ ಕಲ್ಯಾಣ ಮಾಡಿಕೊಳ್ಳಿರಿ. "ಸತ್ ಸಾಹೇಬ್"

ಪ್ರಾರ್ಥಿಸುವವ
ಭಕ್ತ ಡಾ॥ ಓಂ ಪ್ರಕಾಶ ಹುಡ್ಡಾ

## "ಮೂರು ತರಹದ ತಾಪತ್ರಯಗಳನ್ನು ಪೂರ್ಣ ಪರಮಾತ್ಮರೇ ನಿವಾರಿಸಬಲ್ಲರು"

ಭಕ್ತ ರಾಮಕುಮಾರ ಢಾಕಾ "ರಿಟಾಯರ್ ಹೆಡ್ ಮಾಸ್ಟರ್ ದೆಹಲಿ" **(Ex.Head master M.A.B.Ed)**ಇವರ ಪ್ರಮಾಣ.

ನಾನು ರಾಮಕುಮಾರ ಢಾಕಾ, ನಿವೃತ್ತ ಮುಖ್ಯ ಶಿಕ್ಷಕ. ರೋಹತಕ್ ಜಿಲ್ಲೆಯ ಸುಂಡಾನಾ ಹಳ್ಳಿಯವನು. ಈಗ–ಆಜಾದ್‌ನಗರ, ರೋಹತಕ್ (ಮೊ. ನಂ. **8684869051**)ನ ನಿವಾಸಿ **1996**ರಲ್ಲಿ ನನ್ನಪತ್ನಿ ಹಾಗೂ ನನ್ನ ಇಬ್ಬರು ಮಕ್ಕಳಿಗೂ ಬಹಳ ಭಯಂಕರ ಖಾಯಿಲೆ ಆಯಿತು. ಈ ಖಾಯಿಲೆಯಿಂದ ಇಬ್ಬರು ಮಕ್ಕಳು ಬಹಳ ಕಷ್ಟ ಅನುಭವಿಸಿದರು. ಇಬ್ಬರೂ ಮಕ್ಕಳು ಹೇಳತೊಡಗಿದರು. ನಿಮಗೆ ನೌಕರಿ ಮಾಡಲು ಸಾಧ್ಯವಾಗುವುದಿಲ್ಲ. ಈ ಖಾಯಿಲೆಯಿಂದ, ಅವರಿಗೆ (ಮಕ್ಕಳಿಗೆ ಹಾಗೂ ಪತ್ನಿಗೆ) ಉಸಿರು ಕಟ್ಟುತ್ತಿತ್ತು. ಉಸಿರಾಡಲು ಆಗುತ್ತಿರಲಿಲ್ಲ. ಹಾಗಾದಾಗ ಡಾಕ್ಟರನ್ನು ಕರೆದುಕೊಂಡು ಬಂದು ನಿದ್ರೆ ಬರುವ ಇಂಜೆಕ್ಷನ್ ಕೊಡಿಸುತ್ತಿದ್ದೆ. ಆದರೆ ರಾತ್ರಿ ನಾನು ಡ್ಯೂಟಿಗೆ ಹೋದಾಗ, ಹೀಗಾದರೆ ನಾನು ಎಲ್ಲಿಗೆ ಕರೆದುಕೊಂಡು ಹೋಗಲಿ, ಬಹಳ ಚಿಂತೆಯಾಗುತ್ತಿತ್ತು. ಅಧಿಕಾರಿಗಳು ಸಹ ನನ್ನನ್ನು ಕರೆಸಿಕೊಳ್ಳುತ್ತಿದ್ದರು ನಾನು ಅವರಿಗೆ ಮನೆಯ ಪರಿಸ್ಥಿತಿ ಹೇಳಿದರೆ, ಚಿಕಿತ್ಸೆ ಕೊಡಿಸು ಎಂದು ಹೇಳುತ್ತಿದ್ದರು. ನಾನು ಮನೆಯಲ್ಲಿದ್ದಾಗ ರಾತ್ರಿ ವೇಳೆಯಲ್ಲಿ **2–3** ಬಾರಿ ಡಾಕ್ಟರ್ ಬಂದು ಚಿಕಿತ್ಸೆ ಕೊಡುತ್ತಿದ್ದರು. ಮನೆಯಲ್ಲಿ ಯಾರಾದರೂ ಒಬ್ಬರು ಖಾಯಿಲೆಯಿಂದ ನರಳುತ್ತಲೇ ಇರುತ್ತಿದ್ದರು. ಒಂದು ವೇಳೆ ಯಾರಿಗಾದರೂ ಈ ವಿಷಯದ ಬಗ್ಗೆ ಅನುಮಾನ ಬಂದರೆ, ಡಬಲ್ ಫಾಟಕ ಹತ್ತಿರ ಸಚದೇವನ ಅಂಗಡಿ ಇದೆ ಆ ಸಚದೇವನನ್ನು ಕೇಳಿರಿ "ಮಾಸ್ಟರ್ ಮನೆಯಲ್ಲಿ ಯಾವ ಪರಿಸ್ಥಿತಿ ಇತ್ತು?" ಎಂದು. ಯಾರು ಏನೇ ಹೇಳಿದರೂ, ಎಲ್ಲಿಗೆ ಹೋದರೆ ಒಳಿತು, ಎಂದರೂ ನಾನು ಅಲ್ಲಿಗೆ ಹೋಗುತ್ತಿದ್ದೆ. ಉತ್ತರ ಪ್ರದೇಶದಲ್ಲಿನ ಕರಾನಾಶಾಮಲಿ ಹತ್ತಿರ ಖಾಟೂಶ್ಯಾಮರ ಹತ್ತಿರ, ಅನೇಕ ಸ್ಥಳಗಳಲ್ಲಿನ ಜಂತ್ರ–ಮಂತ್ರ ಮಾಡಿಸುವವರ ಹತ್ತಿರ, ಹೀಗೆ ಹರಿಯಾಣದಲ್ಲಿನ ಯಾವ ಜಾಗವನ್ನು ಬಿಟ್ಟಿಲ್ಲ.

ಆದರೆ ಯಾವುದೇ ಬದಲಾವಣೆ ಕಾಣಲಿಲ್ಲ. ಕರೇಲಾ ಹತ್ತಿರವಿರುವ ಖೇಡಾಕಂಚನೀ, ಬೋಹತಾವಾಲಾ, ಗೋಹಾನಾದ ಹತ್ತಿರದ ನಗರ, ಸಮಚಾನಾ, ಸಿಕಂದರಪುರ, ಖಿಡವಾಲೀ ಇನ್ನೂ ಮುಂತಾದ ಅನೇಕ ಜಾಗಗಳಿಗೆ ಹೋದೆ, ಸುಮಾರು **3**ಲಕ್ಷ ರೂಪಾಯಿ ಖರ್ಚಾಯಿತು. ಆದರೆ ಪ್ರಯೋಜನವಾಗಲಿಲ್ಲ. ನಾನು ಸೋತು ಹೋದೆ, ನನ್ನ ಪರಿವಾರ ಹಾಳಾಗಿ ಹೋಯಿತು. ನನ್ನ ಹೆಂಡತಿ ಹೇಳಿದಳು "ನನ್ನ ಜೀವನ ಮುಗಿದು ಹೋಗಲಿದೆ. ಭಕ್ತ ಸುಭಾಷ, ಮಹೇಂದ್ರನ ಮಗ, ಪೋಲೀಸ್ ಆಗಿದ್ದಾರಲ್ಲ, ಅವರು ಸಂತ ರಾಮ್‌ಪಾಲ್ ರವರ ಮಹಿಮೆ ಹೇಳುತ್ತಾರಲ್ಲ. ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗಿರಿ, ಅವರಿಂದ ನಾಮೋಪದೇಶ ಕೊಡಿಸಿರಿ "ಮೊದಲು ನಾನು ಯಾರನ್ನು ನಂಬುತ್ತಿರಲಿಲ್ಲ, ಹಾಗು ಗುರುವಿಗೆ ಶರಣಾಗುವುದು ಎಂದರೆ ಬಹಳ ಕೀಳು ಎಂದು ತಿಳಿದಿದ್ದೆ. "ನಾನೇ ನಿನ್ನ ಗುರು" ಎಂದು ಹೇಳುತ್ತಿದ್ದೆ. ನಾನೇ ಎಂ.ಎ.ಬಿ.ಎಡ್ ನನಗಿಂತ ಹೆಚ್ಚಿನ ಯಾವ ಗುರು ಇದ್ದಾರೆ. ಆದರೆ ಪರಿಸ್ಥಿತಿ ನನ್ನನ್ನು ವಿವಶಗೊಳಿಸಿತು. ನಾನು ಹೆಂಡತಿಯ ಮಾತಿಗೆ ಒಪ್ಪಿಗೆ ನೀಡಿದೆ. ನನ್ನ ಹೆಂಡತಿಯನ್ನು ಕರೆದುಕೊಂಡು ಹೋದೆ ನಾಮೋಪದೇಶ ಪಡೆ ಎಂದು ಹೇಳಿದೆ. ನಿನ್ನ ಜೀವನ ಬಾಕಿ ಇಲ್ಲ. ಏಕೆಂದರೆ ನನ್ನ ಪತ್ನಿಯ ತೂಕ **80** ಕೆ.ಜಿ ಯಿಂದ **50** ಕೆ.ಜಿಗೆ ಇಳಿದಿತ್ತು. ಕೂರಲು–ಏಳಲು ಆಗುತ್ತಿರಲಿಲ್ಲ. ನಡೆಯುವುದಂತೂ ಸಾಧ್ಯವೇ ಇರಲಿಲ್ಲ.

ಸಾಯುವುದು ಎಂದೇ ಹೇಳುತ್ತಿರುವೆ ನಾಮೋಪದೇಶವನ್ನು ತೆಗೆದುಕೋ ಅದನ್ನು ನೋಡೋಣ ನಿನ್ನ ಮನಸ್ಸಿನ ಈ ಆಸೆಯನ್ನು ಮಾಡಿ ನೋಡೋಣ. ಈಗ ನಾನು ನಿನ್ನನ್ನು

ತಡೆಯುವುದಿಲ್ಲ. ನಾಮೋಪದೇಶ ಪಡೆದಯುವುದು ಸರಿ, ಆದರೆ ನನ್ನ ಅಣ್ಣನ ಮಗ ಎರಡು–ಮೂರು ತಿಂಗಳಿಗೆ ಒಮ್ಮೊಮ್ಮೆ ಬಂದಾಗಲೂ ಸಂತ ರಾಮ್‌ಪಾಲ್ ಮಹಾರಾಜ ರವರಿಂದ ನಾಮೋಪದೇಶ ಪಡೆಯಿರಿ. ದೊಡ್ಡಮ್ಮ. ಇಲ್ಲವಾದರೆ ಸತ್ತು ಹೋಗುವಿರಿ ಎಂದು ಹೇಳುತ್ತಲೇ ಇದ್ದ ನಾನಾಗ, ಯಾವ ವೈದ್ಯರನ್ನೂ ಬಿಟ್ಟಿಲ್ಲ ಬಾಲಾಜೀ ಮುಂತಾದ (ಯಂತ್ರ–ಮಂತ್ರ ಹಾಕಿಸಲು) ತಾಂತ್ರಿಕರ ಬಳಿ ತಲೆ ಚಚ್ಚಿಕೊಂಡು ಆಯಿತು. ಇನ್ನು ನಿನ್ನ ಸಂತ ಏನು ತೆಗೆದುಕೊಳ್ಳುತ್ತಾನೆ? ಎನ್ನುತ್ತಿದ್ದೆ.

ಆದರೆ ಸೋತು, ಎಲ್ಲಿಯೂ ಮಾತು ನಡೆಯದಿದ್ದಾಗ, ನಾಮೋಪದೇಶಕ್ಕೆ ಕಳುಹಿಸಿದೆ. ಏಕೆಂದರೆ ನಾನು ನಮ್ಮ ಪರಿವಾರದವರು ಆಶ್ರಮಕ್ಕೆ ಹೋಗಲು ಬಹಳ ವಿರೋಧ ವ್ಯಕ್ತ ಪಡಿಸುತ್ತಿದ್ದೆ. 16–01–2003 ರಲ್ಲಿ ನಾಮೋಪದೇಶ ಪಡೆದರು. ಜೊತೆಗೆ "ಗಹರೀ ನಜರ್ ಗೀತಾ" ಎಂಬ ಪುಸ್ತಕವನ್ನು ತೆಗೆದುಕೊಂಡು ಬಂದಳು. ಒಂದು ತಿಂಗಳಿನಲ್ಲಿ, ದೀಪಕ್ಕೆ ಎಣ್ಣೆ ಹಾಕಿದಂತೆ ಬೆಳಕು ಬಂದಿತು. ಪ್ರತಿ ತಿಂಗಳೂ 3 ಕೆ.ಜಿ ತೂಕ ಹೆಚ್ಚಾಗ ತೊಡಗಿತು. ಆಗ ಹಿರಿಯ ಮಗನಿಗೆ ನಾಮೋಪದೇಶ ಕೊಡಿಸಿರಲಿಲ್ಲ ಆದರೆ ಅವನ ತಾಯಿ ನಾಮೋಪದೇಶ ಹೊಂದಿದಕ್ಕೆ ಇವನಿಗೂ ಚೆನ್ನಾಗಿ ನಿದ್ರೆ ಬರುತ್ತಲ್ಲಿತು. ಅವನಿಗೂ ನಾಮೋಪದೇಶ ಕೊಡಿಸಿದಳು. ಆಗಲೇ ತನ್ನ ಹೆಂಡತಿಗೆ ಅವನು ನಾಮೋಪದೇಶ ಕೊಡಿಸಿದ ಆಗ ನಾನು "ಗಹರೀ ನಜರ್ ಗೀತಾ' ಓದಿದೆ. ಅದರಲ್ಲಿನ ಜ್ಞಾನವು ತುಂಬಾ ಆಳವಾಗಿತ್ತು. ಇಂತಹ ಜ್ಞಾನವನ್ನು ನಾನು ಎಂದೂ ಓದಿರಲೂ ಇಲ್ಲ. ಕೇಳಿರಲೂ ಇಲ್ಲ. ನಾನೂ ಕೂಡ 2003ರ ಏಪ್ರಿಲ್ ತಿಂಗಳಲ್ಲಿ ನಾಮೋಪದೇಶ ಪಡೆದೆನು ಈಗ ನಮ್ಮ ಮನೆಯಲ್ಲಿ ಎಲ್ಲರೂ ನಾಮೋಪದೇಶ ಪಡೆದಿದ್ದಾರೆ.

ಅವಳು ಖಾಯಿಲೆ ಬಿದ್ದಾಗ, ಇಡೀ ಮನೆಯವರು ಭಯ ಪಡುತ್ತಿದ್ದರು. ಮನೆಯಲ್ಲಿ ಜಗಳ, ಕಲಹ ಅಸಮಾಧಾನ, ನೌಕರಿಯಲ್ಲಿ ವಿವಾದಗಳು ಆಗಿತ್ತು. ಮನೆಗೆ ವೈದ್ಯರು ಬಂದು ಹೋಗುವುದು ಸಾಮಾನ್ಯವಾಗಿತ್ತು. ಆಸ್ಪತ್ರೆಗೆ ಹೋದೊಡನೆ ತುರ್ತು ಚಿಕಿತ್ಸೆಯ ಘಟಕಕ್ಕೆ ಹೋಗಬೇಕಾಗುತ್ತಿತ್ತು. ಈಗ ನಮ್ಮ ಮನೆ ಸ್ವರ್ಗ ಸಮಾನವಾಗಿದೆ. ಹಾಗೂ ಎಲ್ಲರಿಗೂ ಸತ್ಯಲೋಕಕ್ಕೆ ಹೋಗುವ ಬಯಕೆ ಉಂಟಾಗಿದೆ.

ಒಂದು ತಿಂಗಳ ಹಿಂದೆ ಕನಸ್ಸಿನಲ್ಲಿ ಕಬೀರ್ ಪರಮೇಶ್ವರರು, ಗುಡಗಾಂವದ ಶೆಕ್ಟರ 57ರಲ್ಲಿ ಒಂದು ಪ್ಲಾಟ್ ಬುಕ್ ಆಗಿರುವಂತೆ ತಿಳಿಸಿದರು. ಯಾವಾಗ ಲಾಟರಿ ಎತ್ತಿದರೋ, ಆಗ ಕಬೀರರು ಕನಸಿನಲ್ಲಿ ತಿಳಿಸಿದ ಪ್ಲಾಟ್ ನಂಬರೇ ಸಿಕ್ಕಿತು. ಬೆಳಗಿನ ಸಮಾಚಾರ ಪತ್ರಿಕೆಯಲ್ಲಿ ಅದೇ ಪ್ಲಾಟ್ ನಂಬರ್ ಅಲಾಟ್ ಆಗಿತ್ತು. ನಮ್ಮ ಮನೆಯಲ್ಲಿ ರೋಗದಿಂದ ಎಷ್ಟು ದುಃಖಿತರಾಗಿದ್ದರೋ, ಬಹುಶಃ ಅಷ್ಟು ದುಃಖವನ್ನು ಯಾರೂ ಅನುಭವಿಸಿರಲಾರರು. ಸಂತ ರಾಮ್‌ಪಾಲ್ ಮಹಾರಾಜ ರವರಿಂದ ನಾಮೋಪದೇಶ ಪಡೆದ ಮೇಲೆ ನಾವೆಲ್ಲಾ ಸುಖವಾಗಿದ್ದೇವೆ. ನಮ್ಮ ಮನೆಯಲ್ಲಿ ಒಂದು ಪ್ರೇತ ಪ್ರಕಟವಾಯಿತು. ಅದು ಹೇಳಿತು ನಾನು ನಿಮ್ಮ ಆಶ್ರಮಕ್ಕೆ ಹೋಗುತ್ತೇನೆ. ಎಲ್ಲವನ್ನೂ ನೋಡಿಕೊಂಡು ಬರುತ್ತೇನೆ ಆದರೆ ಸಂತರು ಕುಳಿತು ಪ್ರವಚನ ಮಾಡುವ ಗಾಜಿನ ವಿಭಾಗಕ್ಕೆ ನಾನು ಹೋಗುವುದಿಲ್ಲ. ಏಕೆಂದರೆ ನನಗೆ ಎಲ್ಲಾ ಗೊತ್ತಿದೆ. ಅಲ್ಲೇನಾದರೂ ಹೋದರೆ, ನನಗೆ ಹೊಡೆಯುತ್ತಾರೆ. ಆದ್ದರಿಂದ ನಾನು ವಾಪಸ್ಸು ಹೊರ ಬರುತ್ತೇನೆ. ನೀನು ಯಾರಾದರೂ ತಾಂತ್ರಿಕರಲ್ಲಿಗೆ ಕರೆದು ಕೊಂಡು ಹೋಗುವೆ. ಅದಕ್ಕಾಗಿ ನಾನು ಒಳಕ್ಕೆ ಬರುವುದೇ ಇಲ್ಲ. ಹೊರಗೆ ಉಳಿಯುತ್ತೇನೆ. ಈಗ ನನ್ನನ್ನು ಬಂಧಿಸುವವರು ಯಾರೂ ಇಲ್ಲ. ನನ್ನ ಜೊತೆಯವರು ಹೆದರು ಪುಕ್ಕಲರು ಓಡಿ ಹೋದರು. ನಾನು ಹೋಗುವುದಿಲ್ಲ. ನನ್ನನ್ನು ಮಂತ್ರಿಸಿ ಬಿಟ್ಟಿದ್ದಾರೆ. ನಾನು ನಿನ್ನ ಮನೆ, ನಿಮ್ಮ ಮಗಳ ಮನೆಯನ್ನು ಸರ್ವನಾಶ ಮಾಡುತ್ತೇನೆ. ನನ್ನನ್ನು ಮಂತ್ರಿಸಿ ಕಳುಹಿಸಿದ್ದಾರೆ. ನಾನು ಶಕ್ತಿಶಾಲಿ,

ನಾನು ಒಬ್ಬರಾದ ಮೇಲೆ ಒಬ್ಬರನ್ನು ನಾಶ ಮಾಡುತ್ತೇನೆ. ಅದೆಲ್ಲಿಗೆ ಓಡುವಿರಿ, ಓಡಿರಿ ಎಂದಿತ್ತು.

ಕೆಲವು ದಿನಗಳ ನಂತರ ಅದೇ ಪ್ರೇತ ಮನೆಯನ್ನು ಪ್ರವೇಶಿಸಿತು. ಜೋರು ಜೋರಾಗಿ ಮಾತನಾಡ ತೊಡಗಿತು. ಎಲ್ಲಿ ನಿನ್ನ ರಾಮ್‌ಪಾಲ್? ಎಲ್ಲಿ ನಿನ್ನ ಪ್ರಭು ಕವಿರ್ದೇವ (ಕಬೀರ್ ಪರಮೇಶ್ವರ) "ಯಾವಾಗ ಅದು ಪ್ರಕಟವಾದರೂ ಮನುಷ್ಯರ ರೀತಿಯಲ್ಲಿ ಮಾತಾಡುತ್ತಿತ್ತು. ಆಗಲೇ ನನ್ನ ಪತ್ನಿ ನಮ್ಮ ಮನೆಯ ಪೂಜೆ ಸ್ಥಳಕ್ಕೆ ಹೋದಳು. ದೀರ್ಘದಂಡ ನಮಸ್ಕಾರ ಮಾಡಿದಳು. ಆಗಲೇ ಆ ಪ್ರೇತಕ್ಕೆ ಹೊಡೆತಗಳು ಬೀಳ ತೊಡಗಿತು. ಹೊಡೆಯುತ್ತೀಯಾ? ನಾನು ಈಗಲೇ ಈ ಗೋಡೆಯನ್ನು ಬೀಳಿಸುತ್ತೇನೆ'. ಯಾವಾಗ ಅದಕ್ಕೆ ಹೊಡೆತದ ಏಟು ಜೋರಾಯಿತೋ, ಆಗ ಹೇಳಿತು "ಇದೇನು ಈ ಗೋಡೆ, ಕಬ್ಬಿಣದ ಜಾಲ, ಸಲಾಕೆಗಳಿಂದ ಮಾಡಿದೆ. ಈ ರಾಮ್‌ಪಾಲ್ ರವರು ಎಲ್ಲಿಂದ ಬಂದರು! ಇವರು ಬರವಾಲಾದಲ್ಲಿ ಪ್ರವಚನ ಮಾಡಲು ಹೋಗಿದ್ದರು. (ಆ ದಿನಗಳಲ್ಲಿ ಸಂತ ರಾಮ್‌ಪಾಲ್ ಮಹಾರಾಜ ರವರು ಹಿಸಾರ್ ಜಿಲ್ಲೆಯ ಬರವಾಲಾದಲ್ಲಿ ಪ್ರವಚನ ಮಾಡಲು ಹೋಗಿದ್ದರು) ನಾನು ಅದಕ್ಕಾಗಿಯೇ ಬಂದೆ. ಪ್ರಭು ಇಲ್ಲಿ ಇಲ್ಲವಲ್ಲ ಎಂದು ಪ್ರೇತ ಹೇಳಿತು "ನಾನು ಬಂದದ್ದು ನಿನ್ನ ಸರ್ವನಾಶ ಮಾಡಲೆಂದು ಆದರೆ ಈಗ ನನ್ನ ಸರ್ವನಾಶವಾಗುತ್ತಿದೆ. ನನ್ನನ್ನು ನರಕದಲ್ಲಿ ಹಾಕುತ್ತಾರೆ. ನಾನು ಹೋಗಿ ಬಿಡುತ್ತೇನೆ. ನನ್ನನ್ನು ಬಿಡಿಸಿರಿ. ಕರೌಂಥಾ ಆಶ್ರಮದಲ್ಲಿ ಸ್ವಾಮಿ ರಾಮ್‌ಪಾಲ್ ಮಹಾರಾಜ ರವರು ಕುಳಿತ್ತಿದ್ದಾರೆ. ಅವರನ್ನು ಮನುಷ್ಯರೆಂದು ತಿಳಿಯಬೇಡ. ಅವರು ಪೂರ್ಣ ಪರಮಾತ್ಮರಾಗಿ ಬಂದಿರುತ್ತಾರೆ. ಇವರನ್ನು ಬಿಡಬೇಡಿ. ಬಿಟ್ಟರೆ ಅಪರಾಧವಾಗುತ್ತದೆ ಹೀಗೆ ಖೇಡಾ ಕಂಚನಿಯ ಪಂಡಿತರು ಸಹ ಚಿಕಿತ್ಸೆ ಕೊಡುತ್ತಿದ್ದರು.

ನಾನು ಖೇಡಾ ಕಂಚನಿಗೆ ಹೋಗಿದ್ದಾಗ, ಅಲ್ಲಿನ ಪಂಡಿತರು ಹೇಳಿದ್ದರು. ನಿನ್ನ ಪರಿವಾರದಲ್ಲಿ ಒಬ್ಬರಾದ ಮೇಲೆ ಒಬ್ಬರು ಮರಣಹೊಂದುತ್ತಾರೆ. ನಾನು ನಂಬಿರಲಿಲ್ಲ. ಆದರೆ ಶಾಹಾಪುರದಲ್ಲಿ ಅಣ್ಣನ ಹೆಣ್ಣು ಮಕ್ಕಳು ಇದ್ದಾರೆ. ಆ ಪಂಡಿತರೂ ಶಾಹಾಪುರದವರೇ ಪುನಃ ಪಂಡಿತರು ನಮ್ಮ ಚೌಧರಿಗೆ ತಿಳಿಸಿದರು ರೋಹತಕ್‌ದ ರಾಮಕುಮಾರನ ಮನೆಯವರಿಗೆ ಬಹಳ ಅಪಾಯದ ಖಾಯಿಲೆ ಇದೆ. ಪೂರ್ಣ ಪರಿವಾರ ನಾಶವಾಗುತ್ತದೆ. ಅವನನ್ನು ಕರೆದುಕೊಂಡು ಬನ್ನಿರಿ. ಆಗ ನಮ್ಮ ಚೌಧರಿ ಯವರು ಒಬ್ಬ ಸುದ್ದಿ ವಾಹಕನನ್ನು ನನ್ನ ಹತ್ತಿರ ಕಳುಹಿಸಿದ್ದರು. ನಮ್ಮ ಸುದ್ದಿವಾಹಕ ಹೇಳಿದ ಅವರು ಜೊತೆಯಲ್ಲೇ ಕರೆದುಕೊಂಡು ಹೋದರು. ಕರೆಸಿಕೊಂಡಿದ್ದು ಸುಲಭವಾಗಿತ್ತು. ಆದರೆ ಚಿಕಿತ್ಸೆ ಕಷ್ಟವಾಯಿತು. ಅವರ ಚಿಕಿತ್ಸೆಗೆ ಖಾಯಿಲೆ ಬಗ್ಗಲಿಲ್ಲ. ಮಂಗಳವಾರ ಹಾಗೂ ಶನಿವಾರ ರಾತ್ರಿಯ ವೇಳೆ ಐದೈದು ಬಾರಿ ಮೈಮೇಲೆ ದೆವ್ವ ಬರುತ್ತಿತ್ತು. ಅದನ್ನು ಮೈಮೇಲಿಂದ ಇಳಿಸುವುದು. ಅದನ್ನು ಬಿಡಿಸುವುದು (ನಿವಾಳಿಸಿದ ವಸ್ತುಗಳನ್ನು) ಈ ಕಾರ್ಯಕ್ರಮ 4 ವರ್ಷಗಳ ವರೆಗೆ ನಡೆಯಿತು. ನಂತರ ಕೈಕಟ್ಟಿ ಕುಳಿತೆವು.

ನಾನು ಬೋಹತಾವಾಲಾ ಗ್ರಾಮದ ಜಿಂದ್ ಜಿಲ್ಲೆಯ ಒಬ್ಬ ತಂತ್ರಜ್ಞಾನಿ ಹತ್ತಿರ ಹೋದೆವು. ಅವನು ಹೇಳಿದ "ನಿನ್ನ ಖಾಯಿಲೆಯನ್ನು ನಾನು ಕತ್ತರಿಸುವೆ. ನಿನ್ನ ಖಾಯಿಲೆ ಯಾವುದೆಂದು ನನಗೆ ತಿಳಿದಿದೆ. ಅವನು ನನ್ನನ್ನು ಅನೇಕ ಬಾರಿ ಬಾಲಾಜೀಯಲ್ಲಿಗೆ ಕರೆದುಕೊಂಡು ಹೋದ. ಅಲ್ಲಿಯೂ ಗುಣವಾಗಲಿಲ್ಲ. ಅವರ ಮಂದಿರಕ್ಕೆ ಹೋದೆವು, ಅಲ್ಲೂ ಗುಣವಾಗಲಿಲ್ಲ. ಏಕೆಂದರೆ ಮಂಗಳವಾರ ಹಾಗೂ ಶನಿವಾರಗಳಲ್ಲಿ ಬರುತ್ತಿದ್ದ ಪ್ರೇತಾತ್ಮಗಳು ಅವರಿಗೆ ಬಹಳ ಕಷ್ಟ ಕೊಡುತ್ತಿದ್ದವು. ಅವನು ಕೈ ಕೊಟ್ಟನು. ಯಾವಾಗ ದೆವ್ವ ಬರುತ್ತಿತ್ತೋ, ಆಗ ನನಗೆ ಸಂದೇಶ ಬರುತ್ತಿತ್ತು. ರಾತ್ರಿ 9 ರಿಂದ 2 ಗಂಟೆಯವರೆಗೆ ಬೆಂಕಿ ಹಚ್ಚಿ ಕೊಂಡು, ನೀರಿನ ಬಕೆಟ್ ತೆಗೆದುಕೊಂಡು ಮತ್ತು ಲಾಟಿ ತೆಗೆದುಕೊಂಡು ಎಚ್ಚರವಾಗಿರಬೇಕಿತ್ತು. ಈ ಕಾರ್ಯಕ್ರಮವು 1996 ರಿಂದ 2002 ರವರೆಗೆ ನಡೆಯಿತು. ಬೋಹತಾವಾಲೆಗೆ ದೆವ್ವ ಬಂದಾಗ ಅದರಲ್ಲಿ ಒಂದು ಚೀಟಿ (ಕಾಗದ) ಸಿಕ್ಕಿತು.

ಬೋಹತಾವಾಲನು ಹೇಳಿದ ನೀನೇನಾದರೂ ಮಧ್ಯಬಂದರೆ ನಿನ್ನನ್ನೂ ಮುಗಿಸುವೆ. ನಿನಗೆ 50 ಸಾವಿರ ರೂಪಾಯಿಗಳನ್ನು ಕೊಡುವೆ ಅವನು ಹೆದರಿಕೆಯ ಕಾರಣ ನನ್ನನ್ನು ತಿರಸ್ಕರಿಸಿದ. ನಾನು ಹಗಲಲ್ಲಿ ದೆಹಲಿಗೆ ನೌಕರಿಗಾಗಿ ಹೋಗುತ್ತಿದ್ದೆ. ರಾತ್ರಿವೇಳೆ ಎಚ್ಚರವಾಗಿ ಕಾಯುತ್ತಿದ್ದೆ. ಒಮ್ಮೊಮ್ಮೆ ರಾತ್ರಿಯಲ್ಲಿ ಡಾಕ್ಟರನ್ನು ಕರೆದುಕೊಂಡು ಬರುತ್ತಿದ್ದೆ. ಒಮ್ಮೊಮ್ಮೆ ರಾತ್ರಿವೇಳೆ ಅವರಿಗೇ ಬರಲು ತಿಳಿಸುತ್ತಿದ್ದೆ. ನನ್ನ ಸ್ಥಿತಿ ಬಹಳ ಕೆಟ್ಟದಾಗಿತ್ತು. ನಾನು ಮೇಲು ನೋಟಕ್ಕೆ ಕೆಲಸದಲ್ಲಿ ನಿರತ ನಿರುತ್ತಿದ್ದೆ. ಪರಿವಾರದವರು ಬಹಳ ತೊಂದರೆಯಲ್ಲಿದ್ದರು. 3 ಲಕ್ಷಕ್ಕೂ ಹೆಚ್ಚು ಹಣ ಖರ್ಚಾಯಿತು.

ನನ್ನ ಪತ್ನಿ ಚಾಂದಕೌರ್‌ಗೆ ಥೈರಾಯಿಡ್ ಆಯಿತು. ಜನವರಿ 2003ರಲ್ಲಿ ಡಾಕ್ಟರ್ ಗುಪ್ತಾ ರವರು ಥೈರಾಯಿಡ್ ಚಿಕಿತ್ಸೆಗಾಗಿ ತಿಮರಪುರ ದೆಹಲಿಯ ಆಸ್ಪತ್ರೆಗೆ ಸೇರಿಸಿಕೊಳ್ಳಲು ಬರೆದುಕೊಟ್ಟರು. ಆದರೆ ನಾನು ಅಲ್ಲಿಗೆ ಹೋಗಲಿಲ್ಲ. ಆಸ್ಪತ್ರೆ (ಮೆಡಿಕಲ್) ಡಾಕ್ಟರ್ ಚುಗ (ಥೈರಾಯಿಡ್ ಸ್ಪೆಷಲಿಸ್ಟ್) ರಿಂದ ಚಿಕಿತ್ಸೆ ಮಾಡಿಸಿದೆ. ಇಡೀ ಜೀವನ ಮಾತ್ರೆ ತೆಗೆದುಕೊಳ್ಳಬೇಕು ಎಂದು ಹೇಳಿದರು. ಆದರೆ ಈಗ 2003ರಲ್ಲಿ ನಾಮೋಪದೇಶವಾದ ಮೇಲೆ ಔಷಧಿ ನಿಂತುಹೋಯಿತು. ನಂತರ ಡಾಕ್ಟರ್ ಚುಗ್ ರಿಂದ ಪರೀಕ್ಷೆ ಮಾಡಿಸಿದೆ.

ಅವರಿಗೆ ಆಶ್ಚರ್ಯ ಇದು ಹೇಗೆ ಸಾಧ್ಯ? ಆಗ ನಾನು ಎಲ್ಲಾ ವಿಷಯವನ್ನು ಹೇಳಿದೆ. ಈಗ ನನ್ನ ಮಕ್ಕಳ ಹಾಗೂ ಹೆಂಡತಿಯ ಎಲ್ಲಾ ಖಾಯಿಲೆಗಳೂ ಗುಣವಾಗಿವೆ. ಆ ಮುಕ್ತಿದಾತನು ಎಲ್ಲವನ್ನೂ ಸರಿಪಡಿಸಿದನು. ಹಿರಿಯ ಮಗನ ಹೆಸರು ಸುರೇಂದ್ರ ಕುಮಾರ ಹಾಗೂ ಚಿಕ್ಕವನ ಹೆಸರು ಮನೋಜ ಕುಮಾರ, ಇಬ್ಬರೂ ಹರಿಯಾಣದ ಪೋಲೀಸ್ ಇಲಾಖೆಯಲ್ಲಿ ಕೆಲಸ ಮಾಡುತ್ತಾರೆ. ಯಾವಾಗ ಈ ಇಬ್ಬರೂ ಆ ಭೂತ–ಪ್ರೇತದಿಂದ ತೊಂದರೆಗೆ ಒಳಗಾಗಿದ್ದರೋ, ಹಾಗೂ ಮೃತ್ಯುವು (ಕಾಲನು) ಸಹ ಇವರ ಮೇಲೆ ಆಕ್ರಮಣ ಮಾಡಿದ್ದನೋ, ಆಗ ಇವರು ನಾಮೋಪದೇಶವನ್ನು ಪಡೆದಿದ್ದರು. ಆದ್ದರಿಂದ ಅವರನ್ನು ಪರಮಾತ್ಮ ಕಬೀರ್ ಪರಮೇಶ್ವರರು ಕಾಪಾಡಿದ್ದರು.

ತತ್ವದರ್ಶಿ ಜಗದ್ಗುರು ಸಂತ ರಾಮ್‌ಪಾಲ್ ಮಹಾರಾಜ ರವರು ನಮಗಾಗಿಯೇ ಅವತರಿತರಾಗಿದ್ದಾರೆ. ಒಂದು ಪರಿವಾರದ ಎರಡೂ ಮಕ್ಕಳು ಖಾಯಿಲೆ ಹಾಗೂ ಭೂತ–ಪ್ರೇತ ಪೀಡಿತರಾಗಿದ್ದರೆ, ಅವರು ಕೆಲಸಗಳಿಗೆ ಹೋಗಲೂ ಆಗದೆ ಇದ್ದಾಗ ಆ ಮನೆಯ ಪರಿಸ್ಥಿತಿ ಏನಾಗಬಹುದು? ಯಾವ ಹೆಂಗಸಿಗೆ ತನ್ನ ಎರಡೂ ಮಕ್ಕಳ ಜೊತೆ ಇಂತಹ ವಿಧಿಯಾಟ ನಡೆಯುತ್ತಿದ್ದು, ತಾನೂ ಕಾಯಿಲೆ, ಭೂತ–ಪ್ರೇತದಿಂದ ತೊಂದರೆಗೆ ಒಳಗಾದರೆ ಅವಳ ಬದುಕಿನಲ್ಲಿ ಏನಿರುತ್ತದೆ? ಯಾರು ಕರೌಂಥಾ ಆಶ್ರಮದ ಬಗ್ಗೆ ಜ್ಞಾನವನ್ನು ಪಡೆಯುವುದಿಲ್ಲವೋ ಅವರು ಕತ್ತಲಲ್ಲಿ (ಅಜ್ಞಾನ) ಉಳಿದಿರುತ್ತಾರೆ ಏಕೆಂದರೆ ಓದಲು ಬುದ್ಧಿ ಇದೆ ಓದಿ ತಿಳಿಯಿರಿ, ಯೋಚಿಸಿರಿ. ವಾಸ್ತವಿಕತೆ ಏನು ಎಂಬುದನ್ನು.

ನಮ್ಮ ಪರಿವಾರವು ಹಾಳಾಗಿ ಹೋಗಿತ್ತು. ನನ್ನ ಮಕ್ಕಳು ಹಾಗೂ ನನ್ನ ಪತ್ನಿ ಯಾವಾಗ ಸರಿಯಾದರೋ, ನಾನು ಸಹ ನನ್ನನ್ನು ನಾನು ಸದ್ಗುರು ರಾಮ್‌ಪಾಲ್ ಮಹಾರಾಜರ ಚರಣಗಳಿಗೆ ಸಮರ್ಪಣೆ ಮಾಡಿಕೊಂಡೆನು. ನನ್ನದೇನೂ ಇಲ್ಲ. ನನ್ನ ತನು–ಮನ–ಧನ ಎಲ್ಲಾ ಗುರುಗಳ ಚರಣಗಳಿಗೆ ಸಮರ್ಪಣೆ ಮಾಡುವೆ.

ನನ್ನ ಮಗಳು ಅಳಿಯ ಸಹ ನಾಮೋಪದೇಶವನ್ನು ಪಡೆದಿದ್ದಾರೆ. ಈಗ ಅವರ ಮನೆಯೂ ಸ್ವರ್ಗವಾಗಿದೆ. ನನ್ನ ಅಳಿಯ ಸಾರಾಯಿ ಕುಡಿಯುತ್ತಿದ್ದ ಅವನೀಗ ಸರಾಯಿ ಕುಡಿಯುವುದನ್ನು ಬಿಟ್ಟಿದ್ದಾನೆ. ನನ್ನ ಮಗಳಿಗೆ ಪ್ರಮೋಶನ್ ಆಗಿ ಫ್ಲಾಟ್ (ಮನೆ) ದೊರೆತಿದೆ ಎಲ್ಲವೂ ಕೆಲವೇ ದಿನಗಳಲ್ಲಿ ನನಗೆ ದೊರೆತಿವೆ. ಎಲ್ಲರೂ ಆನಂದದಿಂದ ಇದ್ದೇವೆ.

2003ರಲ್ಲಿ ಮುಕ್ತಿದಾತ ಗುರು ರಾಮ್‌ಪಾಲ್ ಮಹಾರಾಜರು ನಮ್ಮ ಪಾಪ ಕರ್ಮ ರೂಪಿ ಒಣ ಹುಲ್ಲಿನ ಗುಡ್ಡೆಗೆ ಸತ್ಯನಾಮ ರೂಪದ ಅಗ್ನಿಯನ್ನು ಹಾಕಿ ಸುಟ್ಟು ನಷ್ಟ ಮಾಡಿದರು. ಈಗೇನೂ ತೊಂದರೆಗಳಿಲ್ಲ. ಯಾವುದೂ ದಾರ–ಬೂದಿ–ತಾಯತಗಳು ಇಲ್ಲ. ಕೇವಲ ಮುಕ್ತಿದಾತನ ಮಂತ್ರ (ನಾಮೋಪದೇಶ) ಮಾತ್ರದಿಂದ ಎಲ್ಲಾ ರೋಗಗಳೂ ನಿವಾರಣೆಯಾಯಿತು. ನಾಮೋಪದೇಶವು, ಮೋಕ್ಷ ಪ್ರಾಪ್ತಿಗಾಗಿ ಎಲ್ಲಾ ಬಂಧನಗಳಿಂದ ಬಿಡುಗಡೆ ಹೊಂದಿ ಸತ್ಯಲೋಕಕ್ಕೆ ಹೋಗುವುದಕ್ಕಾಗಿದೆ. ಅದರಿಂದ ಎಲ್ಲಾ ರೋಗಗಳು, ಕವಿರ್ದೇವರ ಕೃಪೆಯಿಂದ ನಿವಾರಣೆಯಾಗಿದೆ. ಹೀಗಾಗದಿದ್ದಲ್ಲಿ, ಭಕ್ತಿಯಲ್ಲಿ ನಂಬಿಕೆ ಉಳಿಯುವುದಿಲ್ಲ. ಈಗ ನಾವು ಬಹಳ ಸುಖವಾಗಿದ್ದೇವೆ. ಈಗ ಯಾರು ಏನು ಮಾಡಿದರೂ, ಯಾವ ತೊಂದರೆಯೂ ಆಗುವುದಿಲ್ಲ. ಏಕೆಂದರೆ ನಾವೆಲ್ಲಾ ಮುಕ್ತಿದಾತಾ ಕಬೀರ್ ಪರಮೇಶ್ವರರ ಹಂಸಾತ್ಮರಾಗಿದ್ದೇವೆ. ನಾವೆಲ್ಲ ಅವರ ಚರಣಗಳಲ್ಲಿ ಶರಣಾಗಿದ್ದೇವೆ. ನಾನೂ ಇದನ್ನೆಲ್ಲಾ ನಂಬುತ್ತಿರಲಿಲ್ಲ. ಎಲ್ಲಾ ಮೋಸಗಾರರು ಎನ್ನುತ್ತಲಿದ್ದೆ ಯಾವಾಗ ಒಬ್ಬರಾದ ಮೇಲೆ ಒಬ್ಬರನ್ನು ಡಾಕ್ಟರ್ ಹತ್ತಿರ ಕರೆದುಕೊಂಡು ಹೋದೆವೊ, ಹಣ ಖರ್ಚಾಯಿತು. ತೊಂದರೆ ಮಾತ್ರ ದೂರವಾಗಲಿಲ್ಲ. ಆಗ ಕಣ್ಣುತೆರೆದೆ ನಾನು ವಾಸ್ತವವಾಗಿ ಒಂದು ಜಾಲದಲ್ಲಿ ಸಿಲುಕಿದ್ದೇನೆ. ಇದೆಲ್ಲಾ ಏನು ಇಲ್ಲಾ ನಮ್ಮ ಭ್ರಮೆ ಅಷ್ಟೆ ಜಿನ್ನ–ಭೂತ–ಪ್ರೇತಗಳಿಲ್ಲ. ನನ್ನ ಬೇಡದ ಹರಟೆಯಲ್ಲಿ ವಾಸ್ತವವಾದ ಅಂಶ ತಿಳಿಯದೆ ಪರಿವಾರದ ನಾಶ ಮಾಡಿದೆ ಈಗ ಕಣ್ಣು ತೆರೆದವು. ಒಂದು ವೇಳೆ ನಾನು ಸಂತ ರಾಮ್‌ಪಾಲ್ ಮಹಾರಾಜರ ಮಾರ್ಗದರ್ಶನದಲ್ಲಿ ನಡೆಯದಿದ್ದರೆ, ನನ್ನ ಮನೆ ಸರ್ವನಾಶವಾಗಿ ಬಿಡುತ್ತಿತ್ತು. ಆದ್ದರಿಂದ ಎಲ್ಲಾ ಓದುಗರಲ್ಲೂ ನನ್ನ ಪ್ರಾರ್ಥನೆ, ನೀವೂ ಸಹ ನಿಮ್ಮೆಲ್ಲಾ ದುಃಖಗಳನ್ನು ದೂರ ಮಾಡಿಕೊಳ್ಳಲು, ಕರೌಂಥಾದಲ್ಲಿನ ಪರಮ ಪೂಜ್ಯ ಸಂತ ರಾಮ್‌ಪಾಲ್ ಮಹಾರಾಜ ರಲ್ಲಿ ಸತ್ಯಭಕ್ತಿ ಮಾಡಿರಿ. ಅವರಲ್ಲಿ ಶರಣು ಹೋಗಿ ಮನುಷ್ಯ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಿರಿ.

ಪ್ರಾರ್ಥಿ,
ಹೆಡ್ ಮಾಸ್ಟರ್ ರಾಮಕುಮಾರ್ (ಎಂ.ಎ.ಬಿ.ಎಡ್)

ಮೇಲಿನ ಕೆಲವು ಭಕ್ತಾತ್ಮರ ಕಥೆಗಳನ್ನು ಓದಿರುವಿರಿ. ಇಂತಹ ಭಕ್ತರು ಸಾವಿರ–ಲಕ್ಷಗಳಲ್ಲಿ ಇದ್ದಾರೆ. ತಮ್ಮ ಆತ್ಮಕಥೆಯನ್ನು ಪುಸ್ತಕಗಳಲ್ಲಿ ಬರೆಸಲು ಬಯಸುತ್ತಾರೆ. ಇಲ್ಲಿ ಎಲ್ಲರ ಆತ್ಮಕಥೆಗೆ ಸ್ಥಳದ ಕೊರತೆ ಇರುವ ಕಾರಣ, ಕೆಲವೇ ಭಕ್ತರ ಕಥೆಗಳನ್ನು ಕೊಡಲು ಸಾಧ್ಯವಾಗಿದೆ. ಇದೇ ರೀತಿ ಎಲ್ಲಾ ಭಕ್ತರ ಆತ್ಮಕಥೆ ಬರೆಯಬೇಕೆಂದರೆ ನೂರಾರು ಪುಸ್ತಕಗಳನ್ನು ಮುದ್ರಣ ಮಾಡಬೇಕಾದೀತು. ಆದ್ದರಿಂದ ಬುದ್ಧಿವಂತರಿಗೆ ಸಂಕೇತ ಮಾತ್ರವೇ ಸಾಕಾಗುತ್ತದೆ.

ಭಕ್ತಿಯಲ್ಲಿ ಬೇಧ! ಭಕ್ತಿ–ಭಕ್ತಿಯಲ್ಲಿ ಬಹಳ ಬೇಧಗಳಿವೆ. ನೀವು ಇಷ್ಟ ಪಟ್ಟು ಯಾವುದಾದರೂ ದೇವ/ದೇವಿಯಲ್ಲಿ ಭಕ್ತಿ ಇಟ್ಟರೆ. ಫಲವು ಅವಶ್ಯಕವಾಗಿ ಸಿಗುವುದು ಕಷ್ಟ ದೂರಾಗುವುದು. ಆದರೆ ಮುಕ್ತಿ ಸಿಗುವುದಿಲ್ಲ. ಪಾಪ–ಕರ್ಮಗಳ ಫಲವನ್ನು ಅನುಭವಿಸಲು ಪದೇ–ಪದೇ ಹುಟ್ಟಿ ಬರಬೇಕಾಗುವುದು. ಮುಕ್ತಿಯನ್ನು ಹೊಂದಲು ಕೇವಲ ಪೂರ್ಣ ಸಂತರಲ್ಲಿ ಭಕ್ತಿಯಿಂದ ಶರಣು ಹೋದಾಗ ಮಾತ್ರ, ಬೇರೆ ರೀತಿಯಲ್ಲಿ ಮುಕ್ತಿ ದೊರೆಯುದಿಲ್ಲ.

ಯೆ ಸಂಸಾರ ಸಮಝುದಾ ನಾಹಿ, ಕಹಂದಾ ಶ್ಯಾಮ ದುಪಹರೆ ನೂ ।
ಗರೀಬ್ ದಾಸ್ ಯೆ ವಕ್ತ ಜಾತ ಹೈ, ರೋವೋಗೆ ಇಸ್ ಪಹರೆ ನೂ ॥

## ೯. ಕಬೀರ್ ಪರಮೇಶ್ವರರು ಕಾಲನೊಂದಿಗೆ ಸಂಭಾಷಣೆ ಮಾಡುವುದು.

ಪರಮೇಶ್ವರನು ಸಕಲ ಬ್ರಹ್ಮಾಂಡಗಳನ್ನು ರಚಿಸಿದ ಮೇಲೆ ತನ್ನ ಬ್ರಹ್ಮಾಂಡದಲ್ಲಿ ವಿಶ್ರಾಂತಿ ಪಡೆಯತೊಡಗಿದನು. ಇದಾದ ನಂತರ ನಾವೆಲ್ಲರೂ, ನಮ್ಮ ಕರ್ಮಫಲವನ್ನು ಅನುಭವಿಸುತ್ತಾ, ದುಃಖಿತರಾಗಿ, ಕಾಲನ ಬ್ರಹ್ಮಾಂಡದಲ್ಲಿದ್ದೇವೆ. ಸುಖ ಹಾಗೂ ಶಾಂತಿಯನ್ನು ಅರಿಸುತ್ತ ಅಲೆದಾಡತೊಡಗಿದ್ದೆವು. ನಮಗೆ ನಮ್ಮ ನಿಜಲೋಕವಾದ ಸತ್ಯಲೋಕದ ನೆನಪು ಸತಾಯಿಸತೊಡಗಿತು. ನಾವು ಅಲ್ಲಿಗೆ ಹೋಗುವ ಬಯಕೆಯಿಂದ ಭಕ್ತಿ ಮಾಡತೊಡಗಿದೆವು. ಯಾರು 4 ವೇದಗಳನ್ನು ಬಾಯಿಪಾಠ ಮಾಡಿದರು. ಕೆಲವರು ಉಗ್ರ ತಪಸ್ಸಿನಲ್ಲಿ ನಿರತರಾದರು, ಇನ್ನೂ ಕೆಲವರು ಹವನ, ಯಜ್ಞ, ಧ್ಯಾನ, ಸಮಾಧಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆದರೆ ನಮ್ಮ ಸ್ವಂತ ಮನೆಯಾದ ಸತ್ಯಲೋಕಕ್ಕೆ ಹೋಗಲು ಆಗಲಿಲ್ಲ ಮೇಲಿನ ಕ್ರಿಯಾಕರ್ಮಗಳ ಫಲದಿಂದ, ಮುಂದಿನ ಜನ್ಮಗಳಲ್ಲಿ (ರಾಜ, ಮಂತ್ರಿ, ವ್ಯಾಪಾರಿ, ಅಧಿಕಾರಿ, ದೇವ–ದೇವತೆ, ಸ್ವರ್ಗ–ಮಹಾಸ್ವರ್ಗ) ವಿವಿಧ ಸುಖ–ಭೋಗದೊಂದಿಗೆ ಹುಟ್ಟಿ–ಸಾಯುತ್ತಾ ವಿವಿಧ ಯೋನಿಗಳಲ್ಲಿ ಕಷ್ಟ ಪಡುತ್ತಾ ಜೀವನ ಕಳೆಯ ತೊಡಗಿದೆವು. ಬಹಳ ದುಃಖದಿಂದ ಅಳುತ್ತ ಪರಮಪಿತ ಪರಮೇಶ್ವರನನ್ನು ಪ್ರಾರ್ಥಿಸತೊಡಗಿದ್ದೇವೆ "ಹೇ! ದಯಾಳು ನಮಗೆ ಸ್ವಂತ ಮನೆಯ ದಾರಿ ತೋರಿಸು ನಾವು ಹೃತ್ಪೂರ್ವಕವಾಗಿ ನಿನ್ನಲ್ಲಿ ಭಕ್ತಿ ಮಾಡುತ್ತೇವೆ. ನೀನು ನಮಗೆ ಏಕೆ ದರ್ಶನ ನೀಡುತ್ತಿಲ್ಲ?"

ಈ ವೃತ್ತಾಂತವನ್ನು ಕೇಳಿದ ಕಬೀರ್ ಪರಮೇಶ್ವರರು ಧರ್ಮದಾಸರನ್ನು ಕುರಿತು ಹೀಗೆ ಹೇಳಿದರು ಈ ಜೀವಗಳ ಕರೆಯನ್ನು ಕೇಳಿ, ನಾನು ನನ್ನ ಸತ್ಯಲೋಕದಿಂದ, ಈ ಕಾಲನ ಲೋಕಕ್ಕೆ ಜೋಗಜೀತನ (ಪುತ್ರನ) ರೂಪತಾಳಿ ಬಂದೆನು. 21ನೆಯ ಬ್ರಹ್ಮಾಂಡದಲ್ಲಿ ಕಾಲನ ಮನೆಯಿದೆ. ಅಲ್ಲಿ ಅವನು ತಪ್ತಶಿಲೆಯ ಮೇಲೆ ಜೀವಗಳನ್ನು ಹುರಿದು, ಅವುಗಳ ಸೂಕ್ಷ್ಮ ಶರೀರದ ಕೊಳೆ ತೆಗೆಯಲಾಗುತ್ತಿತ್ತು. ಅವೆಲ್ಲಾ ಕಾಲನ ಆಹಾರವಾಗಿದ್ದವು. ನಾನು ಈ ಲೋಕಕ್ಕೆ ತಲುಪಿದ ಮೇಲೆ, ಆ ಜೀವಗಳ ಉರಿಯುವಿಕೆ ಸಮಾಪ್ತವಾಯಿತು. ಅವುಗಳು ನನ್ನನ್ನು ಕಂಡು ಕೇಳಿದವು"ಹೇ! ಪುರುಷ ತಾವು ಯಾರು? ತಮ್ಮ ದರ್ಶನ ಮಾತ್ರದಿಂದಲೇ ನಮಗೆ ಸುಖ–ಶಾಂತಿ ಲಭ್ಯವಾಗುತ್ತಿದೆ" ಆಗ ನಾನು ಹೇಳಿದೆ "ನಾನು ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರ ನಾಗಿರುವೆ" ನೀವೆಲ್ಲಾ ನನ್ನ ಲೋಕದಿಂದ ಬಂದು ಈ ಕಾಲನ ಲೋಕದಲ್ಲಿ ಸೆರೆಸಿಕ್ಕಿರುವಿರಿ. ಈ ಕಾಲನು ಪ್ರತಿದಿನ ಒಂದು ಲಕ್ಷ ಮಾನವರ ಸೂಕ್ಷ್ಮ ಶರೀರದ ಕೊಳೆಗಳನ್ನು ತೆಗೆದು ತಿನ್ನುತ್ತಾನೆ. ನಂತರ ನಾನಾ ಪ್ರಕಾರದ ಯೋನಿಗಳಲ್ಲಿ ಶಿಕ್ಷೆ ಅನುಭವಿಸಲು ಬಿಡುತ್ತಾನೆ". ಆಗ ಆ ಜೀವಾತ್ಮಗಳು ಹೇಳಿದವು. "ಹೇ! ದಯಾಳು ಪರಮೇಶ್ವರನೇ ನಮ್ಮನ್ನು ಈ ಕಾಲನ ಸೆರೆಯಿಂದ ಬಿಡಿಸು". ನಾನಾಗ ಹೇಳಿದೆ. "ಕಾಲನು ನನ್ನಲ್ಲಿ ಮೂರು ಬಾರಿ ಭಕ್ತಿ ಮಾಡಿ. ಈ ಬ್ರಹ್ಮಾಂಡವನ್ನು ಪಡೆದಿದ್ದಾನೆ. ತಾವೆಲ್ಲಾ ಇಲ್ಲಿ ಅನುಭವಿಸುತ್ತಿರುವ ಸಕಲ ವಸ್ತುಗಳು ಆ ಕಾಲನದೇ ಆಗಿದೆ. ನೀವು ನಿಮ್ಮಿಚ್ಛೆಯಿಂದ ಇಲ್ಲಿ ತಿರುಗಾಡಲು ಬಂದಿರುವಿರಿ. ಆದ್ದರಿಂದ ನಿಮ್ಮ ಮೇಲೆ ಈಗ ಕಾಲ ಬ್ರಹ್ಮನ ಋಣ ಹೆಚ್ಚಾಗಿದೆ. ಆ ಋಣವು ನನ್ನ ವಾಸ್ತವಿಕ ಜಪ ಮಾಡದೆ ತೀರದು.

ಎಲ್ಲಿಯವರೆಗೆ ನೀವೆಲ್ಲಾ ಋಣಮುಕ್ತರಾಗುವುದಿಲ್ಲವೋ, ಅಲ್ಲಿಯವರೆಗೆ ಕಾಲ ಬ್ರಹ್ಮನ ಸೆರೆಯಿಂದ ಹೊರಗೆಬರಲಾರಿರಿ. ಇದಕ್ಕಾಗಿ ನೀವು ನನ್ನಿಂದ ನಾಮೋಪದೇಶ ಪಡೆದು ಭಕ್ತಿ ಮಾಡಬೇಕಾಗುವುದು. ಆಗ ನಾನು ನಿಮ್ಮನ್ನು ಇಲ್ಲಿಂದ ಬಿಡಿಸಿ ಕರೆದೊಯ್ಯುಬಲ್ಲೆ. "ನಾವು ಈ ಸಂಭಾಷಣೆ ಮಾಡುತ್ತಿರುವಾಗಲೇ, ಅಲ್ಲಿ ಕಾಲ ಬ್ರಹ್ಮನು ಪ್ರತ್ಯಕ್ಷವಾದನು. ಅವನು ಬಹಳ ಕೋಪದಿಂದ

ನನ್ನ ಮೇಲೆ ಜಗಳಕ್ಕೆ ಇಳಿದ ನಾನಾಗ, ಅವನನ್ನು ನನ್ನ ಶಬ್ಧ ಶಕ್ತಿಯಿಂದ ಪ್ರಜ್ಞೆತಪ್ಪಿಸಿದೆ. ಪುನಃ ಸ್ವಲ್ಪ ಸಮಯಾನಂತರ ಪ್ರಜ್ಞೆಬಂದಿತು. ನನ್ನ ಚರಣಗಳಲ್ಲಿ ಬಿದ್ದು, ಕ್ಷಮೆ ಯಾಚಿಸ ತೊಡಗಿದ ಮತ್ತು ಹೇಳಿದ,

"ತಾವು ನನಗಿಂತ ಹಿರಿಯರು ನನ್ನ ಮೇಲೆ ಸ್ವಲ್ಪ ದಯೇ ತೋರಿರಿ. ನೀವು ನನ್ನ ಲೋಕಕ್ಕೆ ಏಕೆ ಬಂದಿರುವಿರಿ ಎಂದು ತಿಳಿಸಿರಿ." ನಾನಾಗ ಕಾಲಪುರುಷನಿಗೆ ತಿಳಿಸಿದೆ "ಕೆಲವು ಆತ್ಮಗಳು ಭಕ್ತಿಮಾಡಿ ತಮ್ಮ ಸ್ವಂತ ಮನೆಯಾದ ನನ್ನ ಲೋಕ (ಸತ್ಯಲೋಕ) ಕ್ಕೆ ಬರಲು ಬಯಸಿದ್ದಾರೆ. ಅವುಗಳಿಗೆ ಸದ್ಭಕ್ತಿಮಾರ್ಗ ದೊರೆಯುತ್ತಿಲ್ಲ. ಆದ ಕಾರಣ ಭಕ್ತಿ ಮಾಡಿದ ನಂತರವೂ ಇದೇ ಲೋಕದಲ್ಲಿ ಇವೆ. ನಾನೀಗ ಅವರಿಗೆ ಸದ್ಭಕ್ತಿ ಮಾರ್ಗ್ ದರ್ಶನ ಮಾಡಿಸಿ. ನಿನ್ನ ರಹಸ್ಯವನ್ನು ತಿಳಿಸಲು ಬಂದಿರುವೆನು ನೀನು ಕಾಲ ಪ್ರತಿದಿನ ಒಂದು ಲಕ್ಷ ಜೀವಿಗಳನ್ನು ತಿನ್ನುವೆ ಒಂದು ಕಾಲು ಲಕ್ಷ ಉತ್ಪತ್ತಿ ಮಾಡುವೆ ನೀನೇ ದೇವರಂತೆ ವಿರಾಜಿಸುವೆ. ಈ ವಿಷಯಗಳನ್ನು ಅವರಿಗೆ ತಿಳಿಸಿ. ನೀನು ದೇವರಲ್ಲ ಕಾಲ ನಾಗಿರುವೆ ಎಂದು. "ಇಷ್ಟು ಕೇಳಿದ ನಂತರ ಕಾಲನು ಹೇಳಿದನು ಎಲ್ಲಾ ಜೀವಿಗಳು ಸತ್ಯಲೋಕಕ್ಕೆ ಹೋದರೆ (ಮುಕ್ತಿ ಪಡೆದರೆ) ನನ್ನ ಬೋಜನದ ಪಾಡೇನು? ನಾನು ಹಸಿವಿನಿಂದ ಸಾಯುವೆ ತಮ್ಮಲ್ಲಿ ನನ್ನ ಪ್ರಾರ್ಥನೆ ಏನೆಂದರೆ, ಮೂರು ಯುಗದಲ್ಲಿ (ಸತ್ಯಯುಗ, ದ್ವಾಪರಯುಗ, ತ್ರೇತಾಯುಗ) ಕಡಿಮೆ ಜೀವಿಗಳನ್ನು ತಮ್ಮ ಲೋಕಕ್ಕೆ ಕರೆದೊಯ್ಯುವಿರಿ ಮತ್ತು ಎಲ್ಲರಿಗೆ ನನ್ನ ರಹಸ್ಯ ತಿಳಿಸಬೇಡಿ ನಾನು ಕಾಲ, ಎಲ್ಲರನ್ನೂ ತಿನ್ನುವೆ ಎಂದೂ. ಕಲಿಯುಗ ಬಂದಾಗ ಬೇಕಾದರೆ, ಎಷ್ಟು ಜೀವಗಳನ್ನಾದರೂ ಕೊಂಡೊಯಿರಿ. ಈ ವಚನವನ್ನು ಕಾಲನು ನನ್ನಿಂದ ಪಡೆದುಕೊಂಡಿದ್ದಾನೆ. ಕಬೀರ್ ಪರಮೇಶ್ವರರು ಧರ್ಮದಾಸರಿಗೆ ಹೇಳುತ್ತಾ ಸತ್ಯಯುಗ, ತ್ರೇತಾಯುಗ ಮತ್ತು ದ್ವಾಪರ ಯುಗದಲ್ಲೂ ಕೂಡ ನಾನು ಬಂದಿದ್ದೆ. ಬಹಳ ಜೀವಿಗಳನ್ನು ಸತ್ಯಲೋಕಕ್ಕೆ ಕರೆದುಕೊಂಡು ಹೋಗಿದ್ದೆ. ಆದರೆ ಇವನ ರಹಸ್ಯವನ್ನು ತಿಳಿಸಿರಲಿಲ್ಲ. ಈಗ ನಾನು ಕಲಿಯುಗದಲ್ಲಿ ಬಂದಿರುವೆ. ಕಾಲನೊಂದಿಗೆ ಸಂಭಾಷಣೆ ಮಾಡಿರುವೆ. ಕಾಲ ಬ್ರಹ್ಮನು ಈಗ ಹೇಳಿದನು "ಈಗ ನೀವು ಎಷ್ಟೇ ಜೋರಾಗಿ ಕೂಗಿ ಹೇಳಿದರೂ ನಿಮ್ಮ ಮಾತುಗಳನ್ನು ಯಾರೂ ಕೇಳುವುದಿಲ್ಲ. ಮೊದಲನೆಯದೆಂದರೆ, ನಾನು ಈ ಜೀವಿಗಳನ್ನು ಭಕ್ತಿ ಯೋಗ್ಯರನ್ನಾಗಿ ಇರಲು ಬಿಡುವುದಿಲ್ಲ. ಅವರಲ್ಲಿ ಬೀಡಿ. ಸಿಗರೇಟು, ಸಾರಾಯಿ, ಮಾಂಸ, ಮೊದಲಾದ ಕೆಟ್ಟ ಚಟಗಳನ್ನು ಹಾಕಿ, ಅವರ ವೃತ್ತಿಗಳನ್ನು ಕೆಡೆಸಿರುವೆ. ನಾನಾ ರೀತಿಯ ಡೋಂಗೀ (ಮೋಸದ) ಪೂಜೆಯಲ್ಲಿ ಜೀವಾತ್ಮರನ್ನು ತೊಡಗಿಸಿರುವೆನು. ಎರಡನೆಯ ಮಾತೆಂದರೆ ನೀವು ನಿಮ್ಮ ಲೋಕಕ್ಕೆ ಹೋದ ಮೇಲೆ, ನಾನಿಲ್ಲಿ ನನ್ನ ಧೂತರನ್ನು ಕಳುಹಿಸಿ, ನಿಮ್ಮ ಪಂಥಕ್ಕೆ ಸಮನಾದ, 12 ಪಂಥಗಳನ್ನು ಆರಂಭಿಸಿ ಜೀವಿಗಳನ್ನು ಭ್ರಮೆಯಲ್ಲಿಡುವೆ ತಮ್ಮ ಮಹಿಮೆ ತಿಳಿಸುವೆ. ತಮ್ಮ ಜ್ಞಾನ ತಿಳಿಸುವೆ ಆದರೆ ನಾಮಜಪವನ್ನು "ನನ್ನದೇ ಮಾಡಿಸುವೆ", ಇದರ ಫಲಸ್ವರೂಪ ಅವರೆಲ್ಲಾ ನನ್ನ ಭೋಜನವೇ ಆಗುವರು. "ಈ ಮಾತುಗಳನ್ನು ಕೇಳಿದ ಕಬೀರ್ ಪರಮೇಶ್ವರರು ಹೇಳಿದರು ನೀನು ನಿನ್ನ ಪ್ರಯತ್ನ ಮಾಡು ಆದರೆ ನಾನು ಸನ್ಮಾರ್ಗ ತಿಳಿಸಿಯೇ ವಾಪಸ್ ಹೋಗುವೆನು. ಯಾರು ನನ್ನ ಜ್ಞಾನ ತಿಳಿದು ಸನ್ಮಾರ್ಗದಲ್ಲಿ ನಡೆಯುವರೋ, ಅವರು ನಿನ್ನ ಮೋಸಜಾಲಕ್ಕೆ ಎಂದಿಗೂ ಬೀಳುವುದಿಲ್ಲ.

ಸದ್ಗುರು ಕಬೀರ್ ಪರಮೇಶ್ವರರು ಹೇಳಿದರು "ಹೇ ಕಾಲ ನಿರಂಜನ! ನಾನು ಬಯಸಿದ್ದೇ ಆದರೆ, ನಿನ್ನೆಲ್ಲಾ ಆಟಗಳನ್ನು ಕ್ಷಣ ಮಾತ್ರದಲ್ಲಿ ಮುಗಿಸಿಬಿಡುತ್ತೇನೆ. ಆದರೆ ಹಾಗೆ ಮಾಡಿದರೆ, ನನ್ನ ವಚನ ಭಂಗವಾಗುತ್ತದೆ. ಹೀಗೆ ಯೋಚಿಸಿ, ನಾನು ನನ್ನ ಹಂಸಾತ್ಮರಿಗೆ ವಾಸ್ತವಿಕ ಜ್ಞಾನ ಬೋಧಿಸಿ, ಅವರನ್ನು ಸನ್ಮಾರ್ಗ ಪ್ರವರ್ತಕರನ್ನಾಗಿಸಿ, ನನ್ನ ಸತ್ಯಲೋಕಕ್ಕೆ ಕರೆದುಕೊಂಡು ಹೋಗುವೆ.

ಸುನೋ ಧರ್ಮರಾಯ, ಹಮ್ ಸಂಖೋ ಹಂಸಾಪದ ಪರಸಾಯಾ ।
ಜಿನ ಲೀನ್ಹಾ ಹಮಾರಾ ಪ್ರವಾನಾ, ಸೋ ಹಂಸಾ ಕಿಯೆ ಅಮಾನಾ" ॥

**(ಪವಿತ್ರ ಕಬೀರ್ ಸಾಗರದಲ್ಲಿ ಜೀವಿಗಳನ್ನು ಭ್ರಮೆಯಲ್ಲಿ ಇಡುವುದಕ್ಕೆ ಹಾಗೂ ತನ್ನ ಹಸಿವು ನೀಗಿಸಿ (ಹೊಟ್ಟೆ ತುಂಬಿಸಿ) ಕೊಳ್ಳಲು ತರಹ–ತರಹದ ವರ್ಣನೆಗಳು ಇವೆ.)**

ದ್ವಾದಸ ಪಂಥ ಕರೂಂ ಮೈ ಸಾಜಾ, ನಾಮ ತುಮ್ಹಾರಾ ಲೇ ಕರೂಂ ಅವಾಜಾ ।
ದ್ವಾದಸ ಯಮ ಸಂಸಾರ ಪಠಹೋ, ನಾಮ ತುಮ್ಹಾರೆ ಪಂಥ ಚಲೈ ಹೋ ॥

ಪ್ರಥಮ ಧೂತ ಮಮ್ ಪ್ರಗಟೆ ಜಾಯಿ, ಪೀಛೇ ಅಂಶ ತುಮ್ಹಾರಾ ಆಯಿ ॥
ಯಹಿ ವಿಧಿ ಜೀವನಕೋ ಭ್ರಮಾಂವು ಪುರುಷ ನಾಮ ಜೀವನ ಸಮಝಾಂವು ॥

ದ್ವಾದಸ ಪಂಥ ನಾಮ ಜೋ ಲೈಹೇ, ಸೋ ಹಮರೆ ಮುಖ ಆನ ಸಮೈ ಹೈ ।
ಕಹಾ ತುಮ್ಹಾರಾ ಜೀವ ನಹೀ ಮಾನೆ । ಹಮಾರೀ ಓರ್ ಹೋಯ ಬಾದ ಬಖಾನೈ ॥

ಮೈ ದೃಢ ಪಂದಾ ರಚೀ ಬನಾಯಿ, ಜಾಮೆ ಜೀವ ರಹೆ ಉರಝಾಯಿ ॥
ದೇವಲ–ದೇವ ಪಾಷಾನ ಪೂಜಾಯಿ, ತೀರ್ಥ, ವ್ರತ, ಜಪ, ತಪ, ಮನ ಲಾಯಿ ।

ಯಜ್ಞ, ಹೋಮ ಅರು ನೇಮ ಅಚಾರಾ, ಔರ್ ಅನೇಕ ಫಂದಮೇ ಡಾರಾ
ಜೋ ಜ್ಞಾನಿ ಜಾವೋ ಸಂಸಾರಾ, ಜೀವ ನಾ ಮಾನೈ ಕಹಾ ತುಮ್ಹಾರಾ ॥

(ಸತ್‌ಗುರು ವಚನ)

ಜ್ಞಾನಿ ಕಹೆ ಸುನೋ ಅನ್ಯಾಯಿ, ಕಾಟೋ ಫಂದ ಜೀವ ಲೇ ಜಾಯಿ ॥
ಜೆತಿಕ ಫಂದ ತುಮ ರಚೆ ವಿಚಾರೀ, ಸತ್ಯ ಶಬದ ತೈ ಸಖೈ ಬಿಂಡಾರಿ ॥

ಜೌನ ಜೀವ ಹಮ ಶಬ್ದ ದೃಢಾವೈ, ಫಂದ್ ತುಮ್ಹಾರಾ ಸಕಲ ಮುಕಾವೈ ॥
ಚೌಕಾ ಕರ ಪ್ರವಾನಾ ಪಾಯಿ, ಪುರುಷ ನಾಮ ತಿಹಿ ದೇವು ಚಿನ್ಹಾಯಿ ॥

ತಾಕೇ ನಿಕಟ ಕಾಲನಹೀ ಆವೈ, ಸಂಧಿ ದೇಖೀ ತಾಕಹಂ ಸಿರ ನಾವೈ ॥

**ಉಪರೋಕ್ತ ವಿವರಣೆಯಿಂದ ದೃಢವಾಗುತ್ತದೆ ಯಾವ ಅನೇಕ ಪಂಥಗಳು ನಡೆಯುತ್ತಿವೆಯೋ, ಅವುಗಳಲ್ಲಿ ಕಬೀರ್ ಪರಮೇಶ್ವರರ ಮೂಲಕ ತಿಳಿಸಿರುವ ಸದ್ಭಕ್ತಿ ಮಾರ್ಗವಿರುವುದಿಲ್ಲ. ಅವೆಲ್ಲವೂ ಕಾಲ ಪ್ರೇರಿತವಾಗಿದೆ. ಆದ್ದರಿಂದ ಬುದ್ಧಿವಂತರು ಯೋಚಿಸಿ–ವಿಚಾರಮಾಡಿ ಭಕ್ತಿ ಮಾರ್ಗವನ್ನು ತಮ್ಮದಾಗಿಸಿಕೊಳ್ಳಬೇಕು. ಏಕೆಂದರೆ ಮಾನವ ಜನ್ಮ ಅಮೂಲ್ಯ ಇದು ಪದೇ ಪದೇ ಸಿಗುವುದಿಲ್ಲ. ಕಬೀರ್ ಪರಮೇಶ್ವರರು ಹೀಗೆ ಹೇಳುತ್ತಾರೆ.**

ಕಬೀರ್ ಮಾನುಷ ಜನ್ಮ ದುರ್ಲಭ ಹೈ, ಮಿಲೆ ನ ಬಾರಂಬಾರ್
ತರುವರ ಸೆ ಪತ್ತಾ ಟೂಟ್ ಗಿರೆ, ಬಹುರ ನ ಲಗತಾ ಡಾರಿ ॥

# ೧೦. "ವಿಶ್ವ ವಿಜೇತ ಸಂತ"

(ಸಂತ ರಾಮ್‌ಪಾಲ್ ಮಹಾರಾಜ ರವರ ಅಧ್ಯಕ್ಷತೆಯಲ್ಲಿ, ಹಿಂದೂಸ್ಥಾನವೂ, ವಿಶ್ವಕ್ಕೆ ಧರ್ಮ ಗುರುವಿನ ರೂಪದಲ್ಲಿ ಪ್ರತಿಷ್ಠಾಪಿತವಾಗುವುದು)

"ಸಂತ ರಾಮ್‌ಪಾಲ್ ರವರ ವಿಷಯದಲ್ಲಿ ನಾಸ್ಟ್ರಾಡಾಮಸ್‌ರ ಭವಿಷ್ಯವಾಣಿ"

ನಾಸ್ಟ್ರಾಡಾಮಸ್ ರವರು ಫ್ರೆಂಚ್ (ಫ್ರಾನ್ಸ್) ದೇಶದ ಪ್ರಸಿದ್ಧ ಜ್ಯೋತಿಷಿ (ಭವಿಷ್ಯಕಾರ)ಯು 1955ರಲ್ಲಿ ಒಂದು ಸಾವಿರ ಶ್ಲೋಕಗಳಲ್ಲಿ ಭವಿಷ್ಯದ ಸಾಂಕೇತಿಕ ಸತ್ಯ ವಾಣಿಗಳನ್ನು ಬರೆದಿದ್ದಾರೆ. ನೂರು-ನೂರು (100/ 100) ಶ್ಲೋಕಗಳ 10 ಶತಕ ಮಾಡಿದ್ದಾರೆ. ಇವುಗಳಲ್ಲಿ ಇಲ್ಲಿಯವರೆಗೆ ಎಲ್ಲವೂ ಸತ್ಯವಾಗಿವೆ. ಹಿಂದೂಸ್ತಾನದಲ್ಲಿ ಸತ್ಯವಾದ ಭವಿಷ್ಯವಾಣಿಗಳಲ್ಲಿ:-

1) ಭಾರತದ ಪ್ರಥಮ ಮಹಿಳಾ ಪ್ರಧಾನಿ ಬಹಳ ಪ್ರಭಾವ ಶಾಲಿಯೂ, ಚತರರೂ ಆಗುವಳು. ಈ ಸಂಕೇತ ಸ್ವರ್ಗೀಯ ಶ್ರೀಮತಿ ಇಂದಿರಾ ಗಾಂಧಿಯವರನ್ನು ಕುರಿತದ್ದಾಗಿದೆ. ಹಾಗೂ ಅವರ ಮೃತ್ಯು ನಿಕಟವಾದ' ರಕ್ಷಕನಿಂದಲೇ ಆಗುವುದೆಂದು ಬರೆದಿತ್ತು. ಅದು ಸಹ ಸತ್ಯವಾಯಿತು.

2) ಅದಾದ ಮೇಲೆ ಅವರ ಮಗ, ಅವರ ಉತ್ತರಾಧಿಕಾರಿಯಾಗುವನು. ಬಹಳ ಕಡಿಮೆ ಅವಧಿಯವರೆಗೆ ಅಧಿಕಾರದಲ್ಲಿರುವನು ಮತ್ತು ಆಕಸ್ಮಿಕ ಮೃತ್ಯು ಹೊಂದುವನು. ಅದು ಸತ್ಯವಾಗಿದೆ. (ಪೂರ್ವ ಪ್ರಧಾನ ಮಂತ್ರಿ ಸ್ವರ್ಗೀಯ ರಾಜೀವ ಗಾಂಧಿಯ ವಿಷಯದ್ದಾಗಿದೆ.)

3) ಸಂತ ರಾಮ್‌ಪಾಲ್ ಮಹಾರಾಜ ರವರ ವಿಷಯದಲ್ಲಿ, ಭವಿಷ್ಯವಾಣಿಯು ನಾಸ್ಟ್ರಾಡಾಮಸ್‌ರ ಮೂಲಕ ವಿಸ್ತಾರವಾಗಿ ಬರೆಯಲ್ಪಟ್ಟಿದೆ.

(ಕ) ತಮ್ಮ ಭವಿಷ್ಯವಾಣಿಯ ಶತಕ '5' ರ ಕೊನೆಯ ಭಾಗದಲ್ಲಿ ಹಾಗೂ ಶತಕ '6' ರ ಆರಂಭದಲ್ಲಿ ನಾಸ್ಟ್ರಾಡಾಮಸ್‌ರು ಬರೆದಿದ್ದಾರೆ ಈಗ 1955ನೇ ಇಸವಿಯಿಂದ ಮುಂದೆ 450 ವರ್ಷಗಳ ನಂತರ ಅಂದರೆ 2006ರಲ್ಲಿ ಒಬ್ಬ ಹಿಂದು ಸಂತ (ಶಾಯರನ್) ಪ್ರಕಟವಾಗುವನು. ಅರ್ಥಾತ್ ಸಕಲ ಜಗತ್ತಿನಲ್ಲೂ ಇವರ ಚರ್ಚೆ ಆಗುವುದು.

ಆ ಸಮಯದಲ್ಲಿ ಆ ಹಿಂದು ಧಾರ್ಮಿಕ ಸಂತನ ವಯಸ್ಸು 50 ರಿಂದ 60 ವರ್ಷಗಳ ನಡುವೆ ಇರುತ್ತದೆ. ಪರಮೇಶ್ವರನು ನಾಸ್ಟ್ರಾಡಾಮಸ್‌ನಿಗೆ ಸಂತ ರಾಮ್‌ಪಾಲ್ ಮಹಾರಾಜ ರವರ ನಡುವಯಸ್ಸಿನ ಶರೀರದ ಸಾಕ್ಷಾತ್ಕಾರ ಮಾಡಿಸಿದರು. ಚಲನಚಿತ್ರದಂತೆ ಎಲ್ಲಾ ಘಟನೆಗಳನ್ನೂ ತೋರಿಸಿ ತಿಳಿಸಿದರು. ಶ್ರೀ ನಾಸ್ಟ್ರಾಡಾಮಸ್ ರವರು 16ನೇ ಶತಮಾನವನ್ನು, ಪ್ರಥಮ ಶತಕ, ಎಂದು ಹೇಳಿದ್ದಾರೆ. ಈ ಲೆಕ್ಕದಲ್ಲಿ 5ನೇ ಶತಕವು 20ನೇ ಶತಮಾನವಾಗುತ್ತದೆ. ನಾಸ್ಟ್ರಾಡಾಮಸ್‌ರು ಹೇಳಿದ್ದಾರೆ.

ಆ ಧಾರ್ಮಿಕ ಹಿಂದೂ ಮುಖಂಡನು ಅರ್ಥಾತ್ ಸಂತನು (CHYREN-ಶಾಯರನ್) 5ನೇ ಶತಕದ ಅಂತ್ಯದ ವರ್ಷದಲ್ಲಿ ಅಂದರೆ 1999ನೇ ಇಸವಿಯಲ್ಲಿ, ಮನೆ-ಮನೆಯಲ್ಲಿ ಪ್ರವಚನ ಮಾಡುವುದನ್ನು ಬಿಟ್ಟು, ಅರ್ಥಾತ್ ಚೌಕಟ್ಟನ್ನು (ಸೀಮಿತ ಸ್ಥಳವನ್ನು) ದಾಟಿ ಹೊರಗೆ ಬರುವರು. ತಮ್ಮ ಅನುಯಾಯಿಗಳಿಗೆ, ಶಾಸ್ತ್ರವಿಧಿಯನ್ನು ತಿಳಿಸುವರು. ಆ ಮಹಾನ್ ಸಂತನು ತೋರಿದ ಮಾರ್ಗವನ್ನು ಅನುಸರಿಸುವ ಅನುಯಾಯಿಗಳಿಗೆ ಅದ್ವಿತೀಯವಾದ, ಆಧ್ಯಾತ್ಮಿಕ ಮತ್ತು ಭೌತಿಕ ಲಾಭವಾಗುವುದು. ಆ ತತ್ವದರ್ಶಿಯು, ಹಿಂದೂ ಸಂತರು ತಿಳಿಸಿರುವ ಶಾಸ್ತ್ರ ಪ್ರಾಮಾಣಿಕ ತತ್ವಜ್ಞಾನವನ್ನು ತಿಳಿದುಕೊಂಡು, ತನ್ನ ಅನುಯಾಯಿಗಳಿಗೆ ತಿಳಿಸುವರು. ಪರಮಾತ್ಮವನ್ನು ಬಯಸುವ ಶ್ರದ್ಧಾಳುಗಳಿಗೆ,

ಎಂತಹ ಆಶ್ಚರ್ಯವಾಗುವುದೆಂದರೆ, ಆಳವಾದ (ಭಾರೀ ನಿದ್ರೆ) ನಿದ್ರೆಯಿಂದ ಎಚ್ಚರಗೊಂಡಂತೆ ಆಗುವುದು, ಆ ತತ್ವದರ್ಶಿ ಹಿಂದೂ ಸಂತರಿಂದ 1999 ರಲ್ಲಿ ಆರಂಭವಾದ ಆಧ್ಯಾತ್ಮಿಕ ಕ್ರಾಂತಿ 2006 ರವರೆಗೆ ನಡೆಯುವುದು. ಅಲ್ಲಿಯವರೆಗೆ, ಬಹಳಷ್ಟು ಸಂಖ್ಯೆಯಲ್ಲಿ, ಪರಮಾತ್ಮನನ್ನು ಬಯಸುವ ಭಕ್ತರು ತತ್ವಜ್ಞಾನವನ್ನು ತಿಳಿದು, ಅವರ ಅನುಯಾಯಿಯಾಗಿ ಸುಖವಾಗಿ ಇರುವರು. ಆದಾದ ನಂತರ ಆ ಸ್ಥಾನದ ಚೌಕಟ್ಟ (ಸೀಮಿತ ಸ್ಥಳವನ್ನು) ನ್ನೂ ದಾಟಿ ಹೊರಗೆ ನೆಗೆಯುವರು. ಆದಾದ ನಂತರ ಅಂದರೆ 2006ರಿಂದ ಸ್ವರ್ಣ ಯುಗದ ಆರಂಭವಾಗುವುದು.

ಟಿಪ್ಪಣಿ : ಪ್ರಿಯ ಓದುಗರೇ, ದಯವಿಟ್ಟು ಓದಿರಿ, ಕೆಳಗಿನ ಭವಿಷ್ಯವಾಣಿಯನ್ನು ನಾಸ್ಟ್ರಾಡಾಮಸ್‌ರು ಹೇಳಿದ್ದರು. ಈ ವಿಷಯದಲ್ಲಿ ಮದ್ರಾಸಿನ (ಚೆನ್ನೈ) ಕೆ. ಎಸ್. ಕೃಷ್ಣಮೂರ್ತಿ ಎಂಬ ಜ್ಯೋತಿಷ್ಯ ಶಾಸ್ತ್ರಿಗಳು ಹೇಳಿದ್ದಾರೆ "ಶ್ರೀ ನಾಸ್ಟ್ರಾಡಾಮಸ್‌ರು 1555 ರಲ್ಲಿ ಬರೆದಿರುವ ಭವಿಷ್ಯವಾಣಿಯ ಯತಾರ್ಥ ಅನುವಾದವನ್ನು ಇಸವಿ 1998ರಲ್ಲಿ ಮಹಾರಾಷ್ಟ್ರದ ಒಬ್ಬ ಜ್ಯೋತಿಷಿಯು ಮಾಡುವರು. ಆ ಜ್ಯೋತಿಷ್ಯ ಶಾಸ್ತ್ರಿಯು ನಾಸ್ಟ್ರಾಡಾಮಸ್‌ರ ಭವಿಷ್ಯವಾಣಿಯ ಸಾಂಕೇತಿಕ ಭಾಷೆಯ ಸ್ಪಷ್ಟೀಕರಣವನ್ನು ಮಾಡಿ, ಅದರಲ್ಲಿ ಬರೆದಿರುವ ಭವಿಷ್ಯದ ಘಟನೆಗಳ ಅರ್ಥವನ್ನು ಕೊಟ್ಟು, ತಮ್ಮ ಭವಿಷ್ಯ ಗ್ರಂಥವನ್ನು ಪ್ರಕಾಶಿತಗೊಳಿಸುವರು. ಅದೇ ಜ್ಯೋತಿಷ್ಯ ಶಾಸ್ತ್ರಿಯು ಯತಾರ್ಥವಾಗಿ ಅನುವಾದ ಮಾಡಿರುವ ಪುಸ್ತಕದಿಂದ ಅನುವಾದ ಕರ್ತರ ಶಬ್ದಗಳಲ್ಲಿ ಓದಿರಿ.

1. (ಪುಟ 32, 33ರಲ್ಲಿ) :– ನಿಲ್ಲಿ! ಸ್ವರ್ಣಯುಗ (ರಾಮ ರಾಜ್ಯ) ಬರುತ್ತಿದೆ, ಅರ್ಧ ಪ್ರಾಯದ (ಸುಮಾರು 50 ರಿಂದ 55ರ ವಯಸ್ಸಿನ) ಒಬ್ಬ ಉದಾರಿಯಾದ, ಅನನ್ಯ ಮಹಾ ಅಧಿಕಾರಶಾಹಿ ಭಾರತದಲ್ಲಷ್ಟೇ ಅಲ್ಲ, ಸಂಪೂರ್ಣ ಭೂಲೋಕದಲ್ಲಿ ಸ್ವರ್ಣ ಯುಗವನ್ನು ತರುವನು. ತನ್ನ ಸನಾತನ ಧರ್ಮದ ಪುನರುತ್ಥಾನವನ್ನು ಮಾಡಿ ಯತಾರ್ಥ ಭಕ್ತಿ ಮಾರ್ಗವನ್ನು ತಿಳಿಸಿ, ಸರ್ವ ಶ್ರೇಷ್ಠ ಹಿಂದೂ ರಾಷ್ಟ್ರವನ್ನಾಗಿ ಮಾಡುವನು, ಅದಾದ ನಂತರ ಬರ್ಮಾ (ಬ್ರಹ್ಮದೇಶ), ಪಾಕೀಸ್ಥಾನ, ಬಾಂಗ್ಲಾ, ಶ್ರೀಲಂಕಾ, ನೇಪಾಳ, ಟಿಬೆಟ್, ಅಫ್ಘಾನಿಸ್ತಾನ, ಮಲಯಾ ಮೊದಲಾದ ದೇಶಗಳಲ್ಲಿ ಅವನೇ ಸಾರ್ವಭೌಮ ಧಾರ್ಮಿಕ ಮುಖಂಡನಾಗುವನು. ಅಧಿಕಾರಶಾಹಿ ಚಾಂಡಾಲರ ಸೀಮೆಯಲ್ಲಿ ಅವನ ಅಧಿಕಾರವಾಗುವುದು. ಆ ಮುಖಂಡ **(CHYREN)** ಪ್ರಪಂಚಕ್ಕೆ ಆಧಾರವಾಗುವನೆಂದು ಗೊತ್ತಾಗುತ್ತದೆ. ಸುಮ್ಮನೆ ನೋಡುತ್ತಿರಿ.

2. (ಪುಟ 40ರಲ್ಲಿ ಬರೆದಿದೆ) :– ನಿಲ್ಲಿ! ರಾಮರಾಜ್ಯ (ಸ್ವರ್ಣಯಗ) ಬರುತ್ತಾ ಇದೆ. 1999 ನೇ ಇಸವಿಯಿಂದ 2006ನೇ ಇಸವಿವರೆಗೆ ನಡೆಯುವ ಉತ್ಕ್ರಾಂತಿಯಲ್ಲಿ ಸ್ವರ್ಣಯುಗದ ಉತ್ಥಾನವಾಗುವುದು. ಹಿಂದೂಸ್ತಾನದಲ್ಲಿ ಉದಯವಾಗಲಿರುವ ಪಾರುಗಾಣಿಸುವ (ಮೋಕ್ಷದಾಯಕ) ಸಂತನು ಪ್ರಪಂಚದಲ್ಲಿ ಸುಖ–ಸಮೃದ್ಧಿ ಹಾಗೂ ಶಾಂತಿಪ್ರಧಾನ ಮಾಡುವನು ನಾಸ್ಟ್ರಾಡಾಮಸ್‌ನು ಸಂಶಯವಿಲ್ಲದೆ ಹೇಳಿದ್ದಾರೆ. "ಪ್ರಕಟವಾಗಲಿರುವ ಸಂತನು ಇನ್ನೂ ತಿಳಿದಿಲ್ಲ. ಆದರೆ ಅವನು ಕ್ರೈಸ್ತ, ಮುಸಲ್ಮಾನ, ಖಂಡಿತಾ ಆಗಿರುವುದಿಲ್ಲ ಅವನು ಹಿಂದೂ ಆಗಿರುವನು. ನಾನು ನಾಸ್ಟ್ರಾಡಾಮಸ್ ಅವನ ಬಗ್ಗೆ ಈಗಲೇ ಎದೆ ತಟ್ಟಿ ಹೇಳುತ್ತೇನೆ. ಆ ದಿವ್ಯ ಸ್ವತಂತ್ರ ಸೂರ್ಯ ಸಂತ (ಶಾರನ್) ಉದಯವಾಗುತ್ತಿದ್ದಂತೆ, ಎಲ್ಲ ಮೊದಲಿನ ವಿದ್ವಾನ್ ಎಂದು ಕರೆಯಲ್ಪಡುವ ಮಹಾ ಮುಖಂಡರು ಕಳಾಹೀನರಾಗುವರು. ಅವನ ಮುಂದೆ ತಲೆಬಾಗಿ ನಮ್ರರಾಗಬೇಕಾಗುವುದು. ಆ ಹಿಂದೂಸ್ತಾನಿ ಮಹಾನ್ ತತ್ವದರ್ಶಿ ಸಂತ ಎಲ್ಲರಿಗೂ ಅಭೂತಪೂರ್ವ ರಾಜ್ಯ ಪ್ರಧಾನ ಮಾಡುವನು. ಅವನು ಸಮಾನ ಕಾನೂನು, ಸಮಾನ ನಿಯಮ ಮಾಡುವನು, ಸ್ತ್ರೀ–ಪುರುಷರಲ್ಲಿ, ಬಡವ–ಶ್ರೀಮಂತರಲ್ಲಿ, ಜಾತಿ ಮತ್ತು ಧರ್ಮದಲ್ಲಿ ಯಾವುದೇ ಭೇದ–ಭಾವ ಮಾಡುವುದಿಲ್ಲ. ಯಾರಿಗೂ ಅನ್ಯಾಯವಾಗಲು ಬಿಡುವುದಿಲ್ಲ. ಆ ತತ್ವದರ್ಶಿ ಸಂತನನ್ನು ಸರ್ವ ಜನರೂ ಸನ್ಮಾನಿಸುವರು. ತಾಯಿ–ತಂದೆಯರಂತೂ

ಗೌರವಾನ್ವಿತರೇ ಆಗುವರು. ಆದರೆ ಅಧ್ಯಾತ್ಮಿಕತೆ ಮತ್ತು ಪವಿತ್ರತೆಯ ಆಧಾರದ ಮೇಲೆ ಆ ಶಾಯರನ್‌ರ (ತತ್ವದರ್ಶಿ ಸಂತ) ಸ್ಥಾನ, ತಾಯಿ–ತಂದೆಯರಿಗಿಂತ ಪ್ರತ್ಯೇಕವಾದ ಶ್ರದ್ಧಾ ಸ್ಥಾನವಾಗುವುದು. ನಾಸ್ಟ್ರಾಡಾಮಸ್‌ನು ಸ್ವತಃ 'ಜ್ಯೂ' ವಂಶದವನಾಗಿದ್ದನು ಹಾಗೂ ಫ್ರಾನ್ಸ್ ದೇಶದ ನಾಗರಿಕನಾಗಿದ್ದನು ಅವನು ಕ್ರೈಸ್ತ್ ಧರ್ಮವನ್ನು ಸ್ವೀಕರಿಸಿದ್ದನು. ಆದರೂ ನಾಸ್ಟ್ರಾಡಾಮಸ್‌ನು ನಿಸ್ಸಂದೇಹವಾಗಿ ಹೇಳಿರುವನು "ಪ್ರಕಟವಾಗಲಿರುವ ಸಂತನು ಹಿಂದೂವೇ ಆಗಿರುವನು.

3. (ಪುಟ 41ರಲ್ಲಿ) :– ಎಲ್ಲರಿಗೂ ಸಮಾನ ಕಾನೂನು ನಿಯಮ, ಅನುಶಾಸನ ಪಾಲನೆ ಮಾಡುವಂತೆ ಮಾಡಿ, ಸತ್ಯ ಪಥದಲ್ಲಿ ತೊಡಗಿಸುವನು. ನಾನು (ನಾಸ್ಟ್ರಾಡಾಮಸ್) ಒಂದು ಮಾತನ್ನು ನಿರ್ವಿವಾದವಾಗಿ ದೃಢಪಡಿಸುವೆ ಆ ಶಾಯರನ (ಧಾರ್ಮಿಕ ಮುಖಂಡ) ಹೊಸ ಜ್ಞಾನವನ್ನು ಆವಿಷ್ಕಾರ ಮಾಡುವನು. ಸತ್ಯ ಮಾರ್ಗದರ್ಶನ ಮಾಡುವ ಆ ಸಂತನು ಮುಕ್ತಿದಾತ ಏಷ್ಯಾ ಖಂಡದಲ್ಲಿನ ಯಾವ ದೇಶದ ಹೆಸರು ಮಹಾಸಾಗರ (ಹಿಂದೂ ಮಹಾಸಾಗರ) ಆಗಿದೆ. ಅದೇ ಹೆಸರಿನ ದೇಶ (ಹಿಂದೂಸ್ತಾನ) ದಲ್ಲೇ ಅವನು ಜನಿಸುವನು. ಅವನು ಕ್ರಿಶ್ಚಿಯನ್ ಅಲ್ಲ. ಮುಸಲ್ಮಾನನೂ ಅಲ್ಲ, ಜ್ಯೂ ನೂ ಅಲ್ಲ. ನಿಸ್ಸಂದೇಹವಾಗಿ, ಹಿಂದೂವೇ ಆಗಿರುವನು. ಬೇರೆ ಹಿಂದಿನ ಮುಖಂಡರನ್ನೂ ಮೀರಿಸಿದ ಬುದ್ಧಿವಂತನಾಗಿರುವನು ಹಾಗೂ ಅಜೇಯನಾಗಿರುವನು. (ನಾಸ್ಟ್ರಾಡಾಮಸ್‌ನ ಭವಿಷ್ಯವಾಣಿಯ 6ನೇ ಶತಕದ 70ರಲ್ಲಿ ಮಹತ್ವ ಪೂರ್ಣ ಸಂಕೇತ ಸಂದೇಶ ತಿಳಿಸುತ್ತಿದ್ದಾನೆ) ಅವನನ್ನು ಎಲ್ಲರೂ ಪ್ರೀತಿಸುವರು. ಅವನದ್ದೇ ಎಲ್ಲೆಡೆ ಮಾತು. ಬಹಳ ಮುಗ್ಧನಾಗಿರುವನು. ಅವನ ಬಗ್ಗೆ ಎಲ್ಲರಿಗೂ ಭಯವೂ ಇರುತ್ತದೆ ಯಾರು ಅಕೃತ್ಯ (ಅಪಕಾರ್ಯ) ಮಾಡಲೂ ಯೋಚಿಸುವುದಿಲ್ಲ. ಅವನ ಹೆಸರು, ಕೀರ್ತಿ, ಮೂರು ಲೋಕಗಳಲ್ಲಿ ಪ್ರತಿಧ್ವನಿಸುವುದು. ಆಕಾಶದಿಂದಾಚೆಯೂ ಅವನ ಮಹಿಮೆಯು ವಿಸ್ತರಿಸುವುದು. ಈವರೆಗೂ ಅಜ್ಞಾನದ ಗಾಢ ನಿದ್ರೆಯಲ್ಲಿ ಮಲಗಿದ್ದ ಸಮಾಜವನ್ನು, ತತ್ವಜ್ಞಾನದ ಬೆಳಕಿನ ಪ್ರಕಾಶದಿಂದ ಎಚ್ಚರಿಸಲಾಗುವುದು. ಮಾನವ ಸಮಾಜದ ಸರ್ವರೂ ತಡಬಡಾಯಿಸುತ್ತಾ ಏಳುವರು. ಅವನ ತತ್ವಜ್ಞಾನದ ಆಧಾರದಿಂದ ಭಕ್ತಿ ಸಾಧನೆ ಮಾಡುವರು. ಸಮಾಜದ ಸರ್ವರಿಂದಲೂ ಸತ್ಯ ಸಾಧನೆಯನ್ನು ಮಾಡಿಸುವನು. ಈ ಕಾರಣದಿಂದಾಗಿ, ಎಲ್ಲ ಸಾಧಕರನ್ನೂ ತಮ್ಮ ಆದಿ–ಅನಾದಿಸ್ಥಾನ (ಸತ್ಯಲೋಕ)ದಲ್ಲಿ ಅವರ ಪೂರ್ವಜರ ಹತ್ತಿರ ಕರೆದೊಯ್ದು, ಅಲ್ಲಿ ಸ್ಥಿರವಾದ ಸ್ಥಾನವನ್ನು ಕೊಡಿಸುವನು (ವಾರಸುದಾರನನ್ನಾಗಿಸುವನು). ಈ ಕ್ರೂರ ಭೂಮಿಯಿಂದ ಮುಕ್ತಿ ಮಾಡಿಸುವನು ಎಂದು ಈ ಶಬ್ದ ಎಲ್ಲೆಡೆ ಕೇಳಿ ಬರುವುದು.

4. (ಪುಟ 42, 43):– ಈ ಹಿಂಸಕ ಕ್ರೂರಚಂದ್ರ (ಮಹಾಕಾಲ) ಯಾರು? ಎಲ್ಲಿರುವನು.? ಈ ಮಾತನ್ನು **CHYREN** (ತತ್ವದರ್ಶಿ ಸಂತ) ತಿಳಿಸುವನು. ಈ ಶಾಯರನ್‌ರ ಕಾರ್ಯತಂತ್ರದಲ್ಲಿ ಈ ಭೂಲೋಕದಲ್ಲಿ (ಹಿಂದೂಸ್ಥಾನದಲ್ಲಿ) ಸ್ವರ್ಣ ಯುಗದ ಅವತರಣೆಯಾಗುವುದು. ನಂತರ ಅದು ಸಂಪೂರ್ಣ ಜಗತ್ತನ್ನು ವ್ಯಾಪಿಸುವುದು. ಆ ವಿಶ್ವ ಮುಖಂಡನ, ಗುಣಗಾನವನ್ನು ಅವನ ನಂತರವೂ ಹಾಡಲಾಗುವುದು. ಅವನ ಮನಸ್ಸಿನ ನಿರ್ಮಲತೆ, ವಿನಮ್ರತೆ, ಉದ್ಧಾರತೆಗಳು ಎಲ್ಲೆಲ್ಲೂ ಹರಡಿ ಹೋಗುವುದು. ಈ ಮೊದಲೇ ನಮೂದಿಸಿರುವ 6ನೇ ಶತಕದ 70ನೇ ಶ್ಲೋಕದಲ್ಲಿ ಕಡೆಯ ಸಾಲಿನಲ್ಲಿ ಮಾಡಿರುವ ಉಲ್ಲೇಖದ ಶಬ್ದವು ತನ್ನ ತಾನೇ ಸ್ವಯಂ ಹೇಳುವಂತಾಗುತ್ತದೆ. ಅದನ್ನು ಆ 'ಶಾಯರನ್'ನ ನಾಲಿಗೆಯೇ ಹೇಳುತ್ತಿದೆ. "ಶಾಯರನ್‌ನು ತನ್ನ ಬಗ್ಗೆ ಕೇವಲ 3 ಶಬ್ದಗಳನ್ನು ಹೇಳುತ್ತಾನೆ "ಒಬ್ಬ ವಿಜಯಿ ಜ್ಞಾತಾ" ಇದಕ್ಕೆ ಇನ್ನು ಯಾವ ವಿಶೇಷಣೆಯನ್ನು ಅಂಟಿಸುವುದು ನನಗೆ ಒಪ್ಪಿಗೆಯಿಲ್ಲ. (ಇದು ಪುಟ 42ರ 4ನೇ ಉಲ್ಲೇಖವಾಣಿಯಲ್ಲಿ ಹಾಗೂ 6ನೇ ಶತಕದ 71ನೇ ಶ್ಲೋಕವಲ್ಲದೆ) ಹಿಂದೂ 'ಶಾಯರನ್'ನು ತನ್ನ ಜ್ಞಾನದಿಂದ ದೈದೀಪ್ಯಮಾನವಾದ ಅತ್ಯುನ್ನತದ ಸ್ವರೂಪಕ್ಕೆ ಮಾದರಿಯಾಗುವನು. ಪುನಃ ಯಾವುದೇ ಶರ್ತ್ ಇಲ್ಲದೆ ಬೆಳಗಿಸುವನು

**(Chyren will be chief of the world, loved feared and unchallenged)** ಮತ್ತು ಮಾನವೀಯ ಸಂಸ್ಕೃತಿಯನ್ನು ದ್ರೋಹಮಾಡದೆ, ಉಜ್ವಲ ಗೊಳಿಸುವನು. ಇದರಲ್ಲಿ ಸಂದೇಹವಿಲ್ಲ ಈಗಲೇ ಯಾರಿಗೂ ತಿಳಿದಿಲ್ಲ. ನರಸಿಂಹದೇವನಂತೆ ಇದ್ದಕ್ಕಿದ್ದಂತೆ ಪ್ರಕಟವಾಗಿ ಈ ವಿಶ್ವದ ಮಹಾನ್ ನಾಯಕ ತನ್ನ ತರ್ಕಶುದ್ಧ, ಅಚ್ಯುತವಾದ ಅಧ್ಯಾತ್ಮಿಕ ಜ್ಞಾನ ಮತ್ತು ಭಕ್ತಿಯಿಂದ ಅದರ ತೇಜಸ್ಸಿನಿಂದ ವಿಖ್ಯಾತವಾಗುವನು. ನಾನು ನಾಸ್ತ್ರೇಡಮಸ್ ಆಶ್ಚರ್ಯಗೊಂಡಿದ್ದೇನೆ. ನನಗೆ ಅವನ ದೇಶವಾಗಲಿ (ಸತ್ಯಲೋಕ) ಅವನಾಗಲಿ ತಿಳಿದಿಲ್ಲ. ನಾನು ಅವನನ್ನು ನನ್ನ ಎದುರೇ ನೋಡುತ್ತಿದ್ದೇನೆ. ಅವನ ಮಹಿಮೆಯನ್ನು ವರ್ಣಿಸಲು ಯಾವುದೇ ಶಬ್ದವೂ ಸಾಲದೆನಿಸುತ್ತದೆ.

ನಾನು ಅವನನ್ನು ಧಾರ್ಮಿಕ ಮುಖಂಡ ಎಂದಷ್ಟು ಕರೆಯುತ್ತೇನೆ. ತನ್ನ ಧರ್ಮ ಬಂಧುಗಳು ಈ ಸಮಸ್ಯೆಯಿಂದ ದಯಾನೀಯ ಅವಸ್ಥೆಯಲ್ಲಿ, ಅಶಾಂತಿಯಿಂದಿರುವುದನ್ನು ಕಂಡು, ಸ್ವತಂತ್ರ ಜ್ಞಾನ ಸೂರ್ಯನು ಉದಯವಾಗುತ್ತಾ, ತನ್ನ ಭಕ್ತಿಯ ತೇಜಸ್ಸಿನಿಂದ, ಮುಕ್ತಿದಾತ 5ನೇ ಶತಕದಲ್ಲಿನ (20ನೇ ಶತಮಾನದ ಅಂತಿಮ ವರ್ಷ) ಅಂತ್ಯದಲ್ಲಿ 1999 ಇಸವಿಯಲ್ಲಿ, ಅರ್ಧ ವಯೋಮಾನದ (ಮಾನವನ ಆಯಸ್ಸು 100 ವರ್ಷವೆಂದು ತಿಳಿದಾಗ 50 ವರ್ಷ ಅರ್ಧವಯೋಮಾನವಾಗುವುದು) ವಿಶ್ವದ ಮಹಾನ್ ಮುಖಂಡ, ತೇಜಸ್ಸಿ ಸಿಂಹಮಾನವ **(Great Chyren)** ಉದ್ವಿಜ್ಞಸ್ಥಿತಿಯಲ್ಲಿ, ತನ್ನ ಚೌಕಟ್ಟು ದಾಟುತ್ತಾ, ನನ್ನ ಮನಸ್ಸಿನ ರಹಸ್ಯತೆಗಳನ್ನು ತೆಗೆದುಕೊಳ್ಳುತ್ತಿದ್ದಾನೆ. ಹಾಗೂ ನಾನು ಅವನನ್ನು ಸ್ವಾಗತಿಸುತ್ತಾ ಆಶ್ಚರ್ಯಗೊಂಡಿದ್ದೇನೆ. ಉದಾಸವಾಗಿಯೂ ಇದ್ದೇನೆ, ಏಕೆಂದರೆ ವಿಶ್ವಕ್ಕೆ ಅವನ ಜ್ಞಾನವಿಲ್ಲದ ಕಾರಣ (ಸತ್ಯಲೋಕದ ಜ್ಞಾನ) ನನ್ನ ಶಾಯರನ್ (ತತ್ವದರ್ಶಿ ಸಂತ) ಉಪೇಕ್ಷಾ ಪಾತ್ರವಾಗುತ್ತಾನೆ.

ನಾನು (ನಾಸ್ಟ್ರಾಡಾಮಸ್‌ನು) ಮನಕಲಕುವ ಭವಿಷ್ಯವಾಣಿ ನುಡಿದಿರುವೆ. ಆ ವಿಶ್ವದಲ್ಲಿನ ಸಿಂಹ ಸದೃಶ್ಯ ಮಾನವನನ್ನು ಉಪೇಕ್ಷೆ ಮಾಡಬೇಡಿರಿ. ಅವನು ಪ್ರಕಟವಾದ ಮೇಲೆ ಹಾಗೂ ಅವನ ತೇಜಸ್ಸೀ ತತ್ವಜ್ಞಾನದ ಸೂರ್ಯ ಉದಯವಾದಾಗ, ಆದರ್ಶವಾದಿ, ಶ್ರೇಷ್ಠ ವ್ಯಕ್ತಿಗಳ ಪುನರುತ್ಥಾನ ಹಾಗೂ ಸ್ವರ್ಣಯುಗದ ಪ್ರಭಾತ (ಉಷಃಕಾಲ) ಆರಂಭವಾಗುವುದು. ಈ ಕೃತಾರ್ಥ ತತ್ವದರ್ಶಿಯನ್ನು ನಾನು ನೋಡುತ್ತಿದ್ದೇನೆ. ಶತಕ 6ರಲ್ಲಿ 1555ನೇ ಇಸವಿಯಿಂದ 450 ವರ್ಷಗಳ ನಂತರ ಅಂದರೆ 2006ನೇ ಇಸವಿಯಲ್ಲಿ (1555 + 450 = 2005 ರ ನಂತರ 2006ರಲ್ಲಿ.)

5. (ಪುಟ 44, 45, 46) : (ನಾಸ್ಟ್ರಾಡಾಮಸ್‌ರ 1ನೇ ಶತಕದ 50ನೇ ಶ್ಲೋಕದಲ್ಲಿ ಪುನಃ ಪ್ರಮಾಣಿತಗೊಳಿಸುತ್ತಿದ್ದಾರೆ) ಮೂರು ಕಡೆಯಿಂದ ಸಾಗರದಿಂದ ಸುತ್ತುವರಿದ ದ್ವೀಪದಲ್ಲಿ (ಹಿಂದೂಸ್ಥಾನದಲ್ಲಿ) ಆ ಮಹಾ ಸಂತನ ಜನ್ಮವಾಗುವುದು. ಆ ಸಮಯದಲ್ಲಿ ತತ್ವಜ್ಞಾನದ ಅಭಾವದಿಂದ ಅಜ್ಞಾನದ ಅಂಧಕಾರವಾಗುವುದು. ನೈತಿಕತೆಯ ಪತನವಾಗಿ ಹಾಹಾಕಾರ ಉಂಟಾಗುವುದು. ಆ ಶಾಯರನ್ ಅಂದರೆ ಗುರು (ಧಾರ್ಮಿಕ ಮುಖಂಡನು) ವನ್ನೇ ಶ್ರೇಷ್ಠ ಎಂದು ತಿಳಿದು, ಸಾಧನೆ ಮಾಡುವನು ಹಾಗೂ ಮಾಡಿಸುವನು (ಆ ಧಾರ್ಮಿಕ ಮುಖಂಡ ತತ್ವದರ್ಶಿ ಸಂತ) ಆ ಧಾರ್ಮಿಕ ಮುಖಂಡನು ತನ್ನ ಧರ್ಮದ ಬಲದಿಂದ ಅಂದರೆ ಭಕ್ತಿಯ ಶಕ್ತಿಯಿಂದ ಹಾಗೂ ತತ್ವಜ್ಞಾನದ ಮೂಲಕ ಸಕಲ ರಾಷ್ಟ್ರಗಳನ್ನೂ ಮಣಿಸುವನು. ಏಷ್ಯಾಖಂಡದಲ್ಲಿ ಅವನನ್ನು ತಡೆವುದು ಅಂದರೆ ಹಾಗೂ ಅವನ ಪ್ರಚಾರ ಕಾರ್ಯದಲ್ಲಿ ಅಡ್ಡಿ ಪಡಿಸುವುದು ಹುಚ್ಚುತನವೆನಿಸುವುದು. (ಶತಕ–1 ಶ್ಲೋಕ 50)

ಟಿಪ್ಪಣಿ :– ನಾಸ್ಟ್ರಾಡಾಮಸ್‌ರ ಭವಿಷ್ಯವಾಣಿಯು ಫ್ರೆಂಚ್ ಭಾಷೆಯಲ್ಲಿ ಬರೆಯಲ್ಪಟ್ಟಿತ್ತು. ನಂತರ ಪಾಲ್ ಬ್ರಂಟನ್ ಎಂಬ ಇಂಗ್ಲೀಷನೊಬ್ಬನು, ಈ ನಾಸ್ಟ್ರಾಡಾಮಸ್‌ರ ಭವಿಷ್ಯವಾಣಿಯನ್ನು "ಸೆಂಚುರಿ ಗ್ರಂಥ"ವನ್ನು ಇಂಗ್ಲೀನಲ್ಲಿ ಅನುವಾದಿಸಿದನು. ಈ ಕಾರ್ಯಕ್ಕಾಗಿ ಅವನು ಫ್ರಾನ್ಸ್

ದೇಶದಲ್ಲಿ ಕೆಲವು ಕಾಲ ಇದ್ದನು. ಅವನು "ಗುರುವರ" ಎಂಬ ಶಬ್ದವನ್ನು (ಬೃಹಸ್ಪತಿ) 'ಗುರುವಾರ' ಅಥವಾ 'ಥರ್ಸ್ಡೇ' ಎಂದು ತಿಳಿದು ಬರೆದುಬಿಟ್ಟನು. (ಇಲ್ಲಿ ಅಂದರೆ, ಇಂಗ್ಲೀಷ್‌ನಲ್ಲಿ ಗುರುವರ ಹಾಗೂ ಗುರುವಾರ ಎರಡಕ್ಕೂ ಒಂದೇ ರೀತಿಯ ಬರಹವಿರುವ ಕಾರಣ) ಅವನು ಪೂಜಾದಿನ ಗುರುವಾರವೆಂದು ಪರಿಗಣಿಸಿದ್ದನು. ಆದರೆ 'ಗುರುವರ' ಎಂಬ ಶಬ್ದದ ಅರ್ಥ ಸರ್ವರ ಸ್ವಾಮಿ ಅಂದರೆ ಜಗದ್ಗುರು ಎಂದೂ ಆಗುತ್ತದೆ. ಜಗದ್ಗುರು ಬೃಹಸ್ಪತಿ ಎಲ್ಲವೂ ಪರಮೇಶ್ವರನಿಗೆ ಅನ್ವಯವಾಗುತ್ತದೆ.

ಅವನು ತನ್ನ ಅಧೆಡ (50 ವರ್ಷದ) ವರ್ಷಗಳ ವಯೋಮಾನದಲ್ಲಿ, ತತ್ವಜ್ಞಾನದ ಜ್ಞಾತಾ ಹಾಗೂ ಜ್ಞೆಯನಾಗಿ ಮೂರು ಲೋಕಗಳಲ್ಲಿ, ಕೀರ್ತಿವಂತನಾಗುವನು. ನನಗೆ ಹೀಗೆ ಅನಿಸುತ್ತಿದೆ (ನಾಸ್ತ್ರಾಡಾಮಸ್‌ನಗೆ) ವಿಷಯುಕ್ತ ಸರ್ಪವನ್ನು ವಶಮಾಡಿಕೊಳ್ಳುವ ಗರುಡಮಂತ್ರದಂತೆ, ಅವನ ಹೊಸ ಉಪಾಯವು ತೋರುತ್ತಿದೆ. ಈ ಹೊಸ ಉಪಾಯ ಹೊಸ ಕಾನೂನು, ಕರ್ತನು, ಅಂದರೆ ತತ್ವಜ್ಞಾನಿಯೂ ವಿಶ್ವದ ಸಮ್ಮುಖದಲ್ಲಿ ಪ್ರಕಾಶಿಸುವನು. ಅವನನ್ನೇ ನಾನು (ನಾಸ್ತ್ರಾಡಾಮಸ್‌ನು) ಆಶ್ಚರ್ಯದಿಂದ, "ಗ್ರೇಟ್ ಶಾಯರನ್" ಎಂದು ಹೇಳುತ್ತಿದ್ದೇನೆ. ಅವನ ಜ್ಞಾನದ ದಿವ್ಯತೇಜಸ್ಸಿನಿಂದ, ಆ ದ್ವೀಪ ಕಲ್ಪ (ಭಾರತ ವರ್ಷ) ದಲ್ಲಿ ಅಕಾಲಿಕ ಬಿರುಗಾಳಿ ಕೋಲಾಹಲ ಉಂಟಾಗುವುದು. ಅಂದರೆ ಅಜ್ಞಾನಿಗಳಾದ ಸಂತರಿಂದ ವಿದ್ರೋಹ ಮಾಡಲಾಗುವುದು. ಅದನ್ನು ಶಮನಗೊಳಿಸುವ ತಂತ್ರವೂ ಅವನಿಗೇ ತಿಳಿದಿದೆ. ಹೇಗೆಂದರೆ, ಹಾವಾಡಿಗನು ವಿಷಸರ್ಪವನ್ನು ತನ್ನ ವಶಕ್ಕೆ ಪಡೆಯುವಂತೆ, ಅವನು ಸಿಂಹಸದೃಶ ಶಕ್ತಿಶಾಲಿ, ಹಾಗೂ ಪ್ರಕಾಶವುಳ್ಳ ವ್ಯಕ್ತಿತ್ವದವನಾಗಿರುತ್ತಾನೆ. ನಾನು (ನಾಸ್ತ್ರಾಡಾಮಸ್‌ನು) ಸ್ಪಷ್ಟ ಶಬ್ದಗಳಲ್ಲಿ ಹೇಳುತ್ತೇನೆ. ಅವನು ಕುಂಡಲಿನೀ ಶಕ್ತಿಯನ್ನು ಪಡೆದವನಾಗಿರುತ್ತಾನೆ. ಮುಂದಿನ ಸ್ಪಷ್ಟ ಶಬ್ದ ಇದಾಗಿದೆ. ಅದೇನೆಂದರೆ, ಯಾವ ಸಮಯದಲ್ಲಿ ಆ ಶಾಯರನ್ ಮಹಾಸಾಗರದ ದ್ವೀಪದಲ್ಲಿ (ಹಿಂದೂ ಮಹಾಸಾಗರ) ಪ್ರಕಟವಾಗುವನೋ, ಆ ದೇಶದ ಹೆಸರು ಸಹ ಅದೇ ಆಗಿರುವುದು. (ಹಿಂದೂಸ್ತಾನ) ವಿಶೇಷತೆ ಏನೆಂದರೆ ಆ ದೇಶದ ಭುಜಂಗ ಸರ್ಪಿಣಿ ಶಕ್ತಿಯ (ಕುಂಡಲಿನೀ ಶಕ್ತಿ) ಯ ಪೂರ್ಣ ಪರಿಚಯ ವಾಗಿರುವನು. ಆ ಮಹಾನ್ ಧಾರ್ಮಿಕ ಮುಖಂಡನು, ಉದ್ಧಾರಮತದವ, ಕೃಪಾಳು, ದಯಾಳು, ದೈದೀಪ್ಯಮಾನವಾದ ಸನಾತನ ಸಾಮ್ರಾಜ್ಯದ ಅಧಿಕಾರಿ ಆದಿ ಪುರುಷ (ಸತ್ಯಪುರುಷ)ನ ಅನುಯಾಯಿಯಾಗಿರುವನು. ಅವನ ಶಾಸನವು ಸಾರ್ವಭೌಮವಾಗುವುದು. ಅವನ ಮಹಿಮೆ, ಗುರುಶ್ರದ್ಧೆ, ಗುರುಭಕ್ತಿ, (ಗುರುವಿಲ್ಲದೆ ಯಾವ ಸಾಧನೆಯು ಸಫಲವಾಗುವುದಿಲ್ಲ) ಈ ಸಿದ್ಧಾಂತವನ್ನು ದೃಢಪಡಿಸುವುದು. ತತ್ವಜ್ಞಾನದ ಬಗ್ಗೆ ಪ್ರವಚನ ಮಾಡಿ, ಅಜ್ಞಾನದ ನಿದ್ರೆಯಲ್ಲಿ ಮಲಗಿರುವ ತನ್ನ ಬಂಧುಗಳನ್ನು ಜಾಗೃತಗೊಳಿಸುವನು. ಅಂಧವಿಶ್ವಾಸದ ಆಧಾರದಲ್ಲಿ ಸಾಧನೆ ಮಾಡುತ್ತಿರುವ ಶ್ರದ್ಧಾಳುಗಳಿಗೆ ಶಾಸ್ತ್ರ ವಿಧಿಯನ್ನು ತಿಳಿಸುವನು. ಅಶಾಸ್ತ್ರೀಯದ ಪರದೆ ಹರಿದು ಹಾಕುವನು. ಅಂದರೆ ಅಶಾಸ್ತ್ರೀಯ ಆಚರಣೆಯನ್ನು ತಡೆಯುವನು. ತತ್ವಜ್ಞಾನದ ಬೆಳಕನ್ನುಂಟು ಮಾಡುವನು. ತನ್ನ ಸನಾತನ ಧರ್ಮದ ರಕ್ಷಣೆ ಮಾಡುತ್ತಾ, ಸಮೃದ್ಧ ಶಾಂತೀಯ ಅಧಿಕಾರಿಯಾಗುವನು. ತದ ನಂತರದಲ್ಲಿ ಅವನ ತತ್ವಜ್ಞಾನವು ಸಂಪೂರ್ಣ ವಿಶ್ವದಲ್ಲಿ ಹರಡುವುದು. ಅವನ (ಮಹಾನ್ ತತ್ವದರ್ಶಿ ಸಂತನ) ಜ್ಞಾನಕ್ಕೆ ಸಮನಾದ ಜ್ಞಾನವಿರುವುದಿಲ್ಲ. ಅವನ ದೃಢ ಜ್ಞಾನದ ಮುಂದೆ (ತತ್ವಜ್ಞಾನ) ಸೂರ್ಯನ ತೇಜವೂ ಕಡಿಮೆ ಎನಿಸುವುದು. ಆದ್ದರಿಂದ ನಾನು (ನಾಸ್ತ್ರಾಡಾಮಸ್) ಆ ವಿಶ್ವಸಿಂಹ ಮಹಾಮಾನವನು ಎಷ್ಟು ಮಹಿಮಾನ್ವಿತನೆಂಬುದನ್ನು ಶಬ್ದಗಳಲ್ಲಿ ಹೇಳಲು (ಕಟ್ಟಿ ಕೊಡಲು) ಸಾಧ್ಯವಿಲ್ಲ ನಾನು (ನಾಸ್ತ್ರೇಡಮಸ್) ಆ ಮಹಾನ್ ಶಾಯರನ್‌ರನ್ನು ನೋಡುತ್ತಾ ಇರುವೆನು.

ಮೇಲಿನ ವಿವರಣೆಯ ಭಾವಾರ್ಥ : "ಆ ವಿಶ್ವಮುಖಂಡನಿಗೆ 50 ವರ್ಷದವನಿರುವಾಗ

ತತ್ವಜ್ಞಾನ–ಶಾಸ್ತ್ರಗಳಲ್ಲಿನ ಪ್ರಮಾಣಗಳು ಅರ್ಥವಾಗಿ ಜ್ಞಾನಿಯಾಗುವನು. ಆ ತತ್ವಜ್ಞಾನಿಯು, ತನ್ನ ಜ್ಞಾನವನ್ನು ಬೇರೆಯವರಿಗೆ ಪ್ರಧಾನ ಮಾಡುವಂತೆ ಆಗುವನು. (ತಿಳಿಯಲು ಯೋಗ್ಯವಾದ ಪರಮೇಶ್ವರನು ಜ್ಞಾನವನ್ನು ಬೇರೆಯವರಿಗೆ ಹೇಳುವನು) ಆವನ ಆಧ್ಯಾತ್ಮಿಕ ಜನ್ಮವು ಅಮಾವಾಸ್ಯೆಯಂದು ಆಗುವುದು. ಅವನ ಆಧ್ಯಾತ್ಮಿಕ ಜನ್ಮವಾದಾಗ ಅವನಿಗೆ ತರುಣಾವಸ್ಥೆ ಅಂದರೆ **16, 20, 25** ವರ್ಷದ್ದಾಗಿರದೆ, ಪ್ರೌಢವಾಗಿರುವುದು ಹಾಗೂ ಪ್ರಸಿದ್ಧವಾಗುವುದು. ಅವನಿಗೆ **50** ರಿಂದ **60**ರ ಮಧ್ಯೆಯ ವಯಸ್ಸಾಗಿರುವುದು.

**6.** (ಪುಟ **46, 47**) ನಾಸ್ಟ್ರಾಡಾಮಸ್‌ನು ಹೇಳುತ್ತಾನೆ :– ನಿಸ್ಸಂದೇಹವಾಗಿ ವಿಶ್ವದ ಶ್ರೇಷ್ಠ ತತ್ವಜ್ಞಾತನ ವಿಷಯದಲ್ಲಿ ನನ್ನ ಭವಿಷ್ಯವಾಣಿಯ ಪ್ರತಿಶಬ್ದವನ್ನು ಯಾರಾದರೂ ಮುಖಂಡರ ಜೊತೆ ತರ್ಕ–ವಿತರ್ಕ ಮಾಡಿ ನೋಡಿದರೆ, ಅವರಾರೂ ಸಮವಾಗಲಾರರು ನಾನು (ನಾಸ್ಟ್ರಾಡಾಮಸ್) ಎದೆತಟ್ಟಿ ಹೇಳುತ್ತಿದ್ದೇನೆ, ನಾನು ಹೇಳುತ್ತಿರುವ ತತ್ವಜ್ಞಾನಿಯ ಕತೃತ್ವ ಅವನ ರಹಸ್ಯವಾದ ಆಳವಾದ ಜ್ಞಾನ, ಎಲ್ಲರ ಅಮಲನ್ನೂ ಇಳಿಸುವುದು. **2006**ನೇ ಇಸವಿ ಬರಲಿ, ಈ ವಿಧಾನದ ಒಂದೊಂದು ಶಬ್ದಗಳ ಸಮರ್ಥನೆಯನ್ನು ಆ ಶಾಯರನ್ (ತತ್ವಜ್ಞಾನಿ) ಕೊಡುವನು.

**7.** (ಪು **52**) :– ನಾಸ್ಟ್ರಾಡಾಮಸ್‌ನು ತನ್ನ ಭವಿಷ್ಯವಾಣಿಯಲ್ಲಿ ಹೇಳಿರುವನು **21**ನೇ ಶತಮಾನದ ಆರಂಭದಲ್ಲಿ ಪ್ರಪಂಚದ ಕ್ಷಿತಿಜದಲ್ಲಿ (ಭೂಮಿ–ಆಕಾಶ ಸೇರುವಂತೆ ಕಾಣುವ ಸ್ಥಳ) ಆ 'ಶಾಯರನ್'ನ ಉದಯವಾಗುವುದು. ಯಾವುದೇ ಬದಲಾವಣೆ ಆದರೂ, ಅದು ನನ್ನ (ನಾಸ್ಟ್ರೇಡಮಸ್‌ನ) ಇಚ್ಛೆಯಂತೆ ಅಲ್ಲ, ಬದಲಾಗಿ ಆ 'ಶಾಯರನ್'ನ ಆಜ್ಞೆಯಿಂದ, ಪ್ರಕೃತಿಯ ಇಚ್ಛೆಯಿಂದ ಎಲ್ಲಾ ಬದಲಾವಣೆಗಳು ಆಗಿಯೇ ತೀರುವುದು. ಅದರಲ್ಲಿ ಹೊಸ ಬದಲಾವಣೆ ಹಿಂದೂಸ್ತಾನವು ಸರ್ವಶ್ರೇಷ್ಠ ರಾಷ್ಟ್ರವೆನಿಸುವುದು ಅನೇಕ ಶತಮಾನಗಳಿಂದ ನೋಡದ, ಹಿಂದೂಗಳ ಸುಖ–ಸಾಮ್ರಾಜ್ಯವು ದೃಷ್ಟಿಗೋಚರವಾಗುವುದು. ಆ ದೇಶದಲ್ಲಿ ಜನಿಸಿದ ಧಾರ್ಮಿಕ ಸಂತನೇ ತತ್ವದರ್ಶಿ ಹಾಗೂ ಜಗತ್ತಿನ ಮುಕ್ತಿದಾತ ಜಗತ್ತಿನ ಜನಕ ನಾಗುವನು. ಏಷ್ಯಾಖಂಡದಲ್ಲಿ ರಾಮಾಯಣ ಮಹಾಭಾರತ ಮೊದಲಾದ ಜ್ಞಾನವು ಹಿಂದುಗಳಲ್ಲಿ ಪ್ರಚಲಿತವಿದೆ. ಅದಕ್ಕಿಂತಲೂ ಮುಂದಿನ ಜ್ಞಾನವು ಆ ತತ್ವದರ್ಶಿಯದೇ ಆಗುವುದು. ಅವನು ಸತ್ಯಪುರುಷನ ಅನುಯಾಯಿಯಾಗಿರುವನು. ಅವನೊಬ್ಬ ಅದ್ವಿತೀಯ ಸಂತನಾಗುವನು.

**8.** (ಪುಟ **74**) :– ಬಹಳಷ್ಟು ಜನ ಸಂತ ಮುಖಂಡರು ಬರುವರು ಮತ್ತು ಹೋಗುವರು ಎಲ್ಲರು ಪರಮಾತ್ಮನ ದ್ರೋಹಿಯಾಗಿ, ಅಭಿಮಾನಿಯಾಗಿರುವರು. ನನಗೆ (ನಾಸ್ಟ್ರಾಡಾಮಸ್‌ನಿಗೆ) ಆಂತರಿಕ ಸಾಕ್ಷಾತ್ಕಾರ, ಆ 'ಶಾಯರನ್'ನ ಆಗಿದೆ.

ನಾಸ್ಟ್ರಾಡಾಮಸ್‌ನು ಹೇಳಿದ್ದಾನೆ. ಆ ಹಿಂದೂ ಧಾರ್ಮಿಕ ಮುಖಂಡನನ್ನು **(CHYREN)** ಗುರುತಿಸದೆ, ಅವನ ಮೇಲೆ ರಾಷ್ಟ್ರದ್ರೋಹದ ಆರೋಪ ಹೊರಿಸುವರು. ಆ ಮಹಾನ್ ಧಾರ್ಮಿಕ ಮುಖಂಡ ಉಪೇಕ್ಷೆಗೆ ಪಾತ್ರವಾಗುವನು. ಎಂಬ ದುಃಖ ನನಗಿದೆ. ಹಿಂದೂಸ್ತಾನದ ಹಿಂದೂ ಸಂತನು ಬರಲಿರುವ ಕತ್ತಲೆ (ಭಕ್ತಿ–ಜ್ಞಾನದ ಅಭಾವದ ಕತ್ತಲೆ) ಪ್ರಳಯಕಾರಿ (ಮಾಯೆಯ ಓಟದಲ್ಲಿ ಅಸಭ್ಯ ಸಮಾಜ) ಜಗತ್ತಿನಲ್ಲಿ ಹೊಸಬೆಳಕು ಕೊಡುವನು. ಅವನಿಗೆ ಮಾನವರೆಲ್ಲರು ಉದ್ಧಾರವಾಗಬೇಕೆಂಬ ಚಿಂತೆ ಬಿಟ್ಟರೆ, ಬೇರಾವ ಸ್ವಾರ್ಥವೂ ಇರುವುದಿಲ್ಲ. ಅಭಿಮಾನವೂ ಇರುವುದಿಲ್ಲ. ಇದು ನನ್ನ ಭವಿಷ್ಯವಾಣಿಯ ಗೌರವದ ಮಾತು. ವಾಸ್ತವವಾಗಿಯೂ ಆ ತತ್ವದರ್ಶಿ ಸಂತನು ವಿಶ್ವದಲ್ಲೇ ಪ್ರಸಿದ್ಧವಾಗುವನು. ಅವನಿಂದ ತಿಳಿಸಲಾಗುವ ಜ್ಞಾನವು ಶತ–ಶತಮಾನಗಳವರೆಗೂ ಇರುವುದು. ಆ ಸಂತನು ಆಧುನಿಕ ವಿಜ್ಞಾನಿಗಳನ್ನು ವಿಸ್ಮಿತಗೊಳಿಸುವನು. ಅವನು ಮಾಡುವ ಆಧ್ಯಾತ್ಮಿಕ ಚಮತ್ಕಾರಕ್ಕೆ ವಿಜ್ಞಾನಿಗಳು ಆಶ್ಚರ್ಯ ಪಡುವರು. ಅವನ ಸಕಲ ಜ್ಞಾನವೂ ಶಾಸ್ತ್ರ

ಪ್ರಮಾಣಿಕವಾಗಿರುವುದು. ನಾನು (ನಾಸ್ಟ್ರಾಡಾಮಸ್) ಹೇಳುವುದೇನೆಂದರೆ, ಬುದ್ಧಿವಂತ ವ್ಯಕ್ತಿಗಳೆ ಅವನನ್ನು ಉಪೇಕ್ಷೆ ಮಾಡಬೇಡಿ. ಅವನನ್ನು ಚಿಕ್ಕ ಜ್ಞಾನದ ದೀಪ ಎಂದು ತಿಳೀಯಬೇಡಿರಿ. ಆ ತತ್ವದರ್ಶಿ ಮಹಾಮಾನವನನ್ನು (ಶಾಯರನ್) ಸಿಂಹಾಸನದಲ್ಲಿ ಕೂಡಿಸಿ, ಅವನನ್ನು ಆರಾಧ್ಯ ದೇವ ಎಂದು ಪೂಜೆ ಮಾಡಿರಿ. ಅವನು ಆದಿ ಪುರುಷ (ಸತ್ಯಪುರುಷ)ನ ಅನುಯಾಯಿ, ಪ್ರಪಂಚದ ಮುಕ್ತಿದಾತನಾಗುವನು.

## "ಸಂತ ರಾಮ್‌ಪಾಲ್ ಮಹಾರಾಜ ರವರ ಸಮರ್ಥನೆ ಮಾಡಿರುವ ಬೇರೆ ಭವಿಷ್ಯಕಾರರ ಭವಿಷ್ಯವಾಣಿಗಳು"

1. ಇಂಗ್ಲೇಂಡಿನ ಜ್ಯೋತಿಷಿ "ಕೀರೋ"ನು ಸನ್ 1925ರಲ್ಲಿ ಬರೆದಿರುವ ಪುಸ್ತಕದಲ್ಲಿ ಭವಿಷ್ಯವಾಣಿ ಇದೆ. ಇಪ್ಪತ್ತನೇ ಶತಮಾನದ ಅರ್ಥಾತ್ ಸನ್ 2000ನೇ ಇಸವಿಯ ಉತ್ತರಾರ್ಧದಲ್ಲಿ ಸನ್ 1950ರ ನಂತರ ಉತ್ಪನ್ನವಾದ ಸಂತನು ವಿಶ್ವದಲ್ಲಿ "ಒಂದು ಹೊಸ ಸಭ್ಯತೆ"ಯನ್ನು ಹರಡಿಸುವನು. ಭಾರತದ ಆ ಒಬ್ಬ ವ್ಯಕ್ತಿ ವಿಶ್ವದಲ್ಲಿ ಜ್ಞಾನದ ಕ್ರಾಂತಿಯನ್ನುಂಟು ಮಾಡುವನು.

2. ಭವಿಷ್ಯವಕ್ತಾ "ಶ್ರೀ ವೆಜೇಲೆಟಿನ್" ನ ಪ್ರಕಾರ, 20ನೇ ಶತಮಾನದ ಉತ್ತರಾರ್ಧದಲ್ಲಿ, ವಿಶ್ವದಲ್ಲಿ ತಮ್ಮ ತಮ್ಮಲ್ಲಿ ಪ್ರೇಮದ ಅಭಾವ, ಮಾನವತೆಯ ಅಳಿವು, ಮಾಯಾ ಸಂಗ್ರಹದ ಓಟ, ಲೂಟಿಕಾರರು ಹಾಗೂ ರಾಜಮುಖಂಡರ ಅನ್ಯಾಯ ಮುಂತಾದ ಬಹಳಷ್ಟು ಅಹಿತಕರ ಘಟನೆಗಳನ್ನು ನೋಡಬಹುದು. ಆದರೆ ಭಾರತದಲ್ಲಿ ಉತ್ಪನ್ನವಾದ ಶಾಂತಿ, ಸೋದರ, ಭಾವದ ಆಧಾರದಿಂದ ಉಂಟಾದ ಹೊಸ ಸಭ್ಯತೆ, ಪ್ರಪಂಚದಲ್ಲಿ ದೇಶ, ಪ್ರಾಂತ, ಮತ್ತು ಜಾತಿ ಮೊದಲಾದ ಗಡಿರೆಖೆಗಳನ್ನು ಮುರಿದು, ವಿಶ್ವದಲ್ಲಿ ಶಾಂತಿ ಮತ್ತು ಶಿಸ್ತನ್ನು ಉತ್ಪನ್ನ ಮಾಡುತ್ತದೆ.

3. ಅಮೆರಿಕಾದ ಮಹಿಳಾ ಭವಿಷ್ಯವಕ್ತಾ "ಜೇನ್ ಡಿಕ್ಸನ್" ನಳ ಪ್ರಕಾರ 20ನೇ ಶತಮಾನದ ಕಡೆಯಲ್ಲಿ ವಿಶ್ವದಲ್ಲಿ ಒಂದು ಘೋರ ಹಾಹಾಕಾರವಾಗಿ, ಮಾನವತೆಯ ಸಂಹಾರವಾಗುವುದು. ವೈಜ್ಞಾನಿಕ ಯುದ್ಧದ ನಂತರ ಅಧ್ಯಾತ್ಮಿಕತೆ ಮೇಲೆ ಆಧಾರಿತವಾದ ಒಂದು ಹೊಸ ಸಭ್ಯತೆ ಸಂಭವತಃ ಭಾರತದ ಗ್ರಾಮೀಣ ಪರಿವಾರದ ವ್ಯಕ್ತಿಯ ಮುಖಂಡತ್ವದಲ್ಲಿ ಒಂದಾಗುವುದು. ಪ್ರಪಂಚದಲ್ಲಿ ಯುದ್ಧವನ್ನೂ ಎಂದು ಮಾಡದಂತೆ ಅದಕ್ಕೆ ವಿದಾಯ ಹೇಳುವರು.

4. ಅಮೆರಿಕದ ಶ್ರೀ "ಎಂಡರ್‌ಸನ್"ನ ಪ್ರಕಾರ 20ನೇ ಶತಮಾನದ ಅಂತ್ಯಕ್ಕೆ ಮೊದಲು ಅಥವಾ 21ನೇ ಶತಮಾನದ ಪ್ರಥಮ ಹತ್ತು ವರ್ಷಗಳಲ್ಲಿ ವಿಶ್ವದಲ್ಲಿ ನಾಗರಿಕತೆಯು ನಾಶವಾಗುವುದು. ಈ ನಡುವೆ ಭಾರತದಲ್ಲಿನ ಹಳ್ಳಿಯಲ್ಲಿರುವ ಒಬ್ಬ ಧಾರ್ಮಿಕ ಪುರುಷನು, ಒಂದು ಭಾಷೆ, ಒಂದು ಧ್ವಜದ ರೂಪರೇಖೆ ಮಾಡಿ ಸಂವಿಧಾನ ರಚಿಸುವನು. ವಿಶ್ವವನ್ನು ಸದಾಚಾರ, ಉದಾರತ್ತತೆ, ಮಾನವೀಯ ಸೇವೆ ಮತ್ತು ಪ್ರೀತಿಯ ಪಾಠ ಕಲಿಸುವನು. ಈ ತತ್ವಜ್ಞಾನಿಯು 1999 ರಿಂದ ಮುಂದೆ ಬರುವ ಸಾವಿರಾರು ವರ್ಷಗಳವರೆಗೆ ಧರ್ಮ ಮತ್ತು ಸುಖ-ಶಾಂತಿಗಳನ್ನು ಕೊಡುವನು.

5. ಹಾಲೆಂಡಿನ ಭವಿಷ್ಯಜ್ಞನು ಶ್ರೀ "ಗೆರಾರ್ಡ್ ಕ್ರೈಸೆ"ಯ ಪ್ರಕಾರ 20ನೇ ಶತಮಾನದ ಅಂತ್ಯಕ್ಕೆ ಮೊದಲು ಅಥವಾ 21ನೇ ಶತಮಾನದ ಮೊದಲ ದಶಕದಲ್ಲಿ ಭಯಂಕರ ಯುದ್ಧವಾಗುವುದು. ಅನೇಕ ದೇಶಗಳ ಅಸ್ಥಿತ್ವ ಅಳಿಸಿ ಹೋಗುವುದು. ಆದರೆ ಭಾರತದ ಒಬ್ಬ ಮಹಾಪುರುಷ ಸಂಪೂರ್ಣ ವಿಶ್ವವನ್ನು ಮಾನವತೆಯ ಒಂದು ಸೂತ್ರದಲ್ಲಿ ಒಂದುಗೂಡಿಸುವನು. ಹಿಂಸಾಚಾರ, ಕಲಹ, ದುರಾಚಾರ, ಮೋಸ ಮೊದಲಾದವುಗಳನ್ನು ಪ್ರಪಂಚದಿಂದ ನಾಶಗೊಳಿಸುವನು.

6. ಅಮೆರಿಕದ ಭವಿಷ್ಯವಕ್ತ "ಶ್ರೀ ಚಾರ್ಲ್ಸ್ ಕ್ಲಾರ್ಕ್‌ನ" ಪ್ರಕಾರ 20ನೇ ಶತಮಾನದ ಅಂತ್ಯಕ್ಕೆ

ಮೊದಲು ಒಂದು ದೇಶ ವಿಜ್ಞಾನದ ಉನ್ನತಿಯಲ್ಲಿ ಎಲ್ಲಾ ದೇಶಗಳನ್ನು ಹಿಂದೆ ಹಾಕುವುದು ಆದರೆ ಭಾರತದ ಪ್ರತಿಷ್ಠೆ ವಿಶೇಷವಾಗಿ ಇದು ಧರ್ಮ ಮತ್ತು ದರ್ಶನದಿಂದ ಆಗುವುದು. ಇದನ್ನು ಸಂಪೂರ್ಣ ವಿಶ್ವವು ತನ್ನದಾಗಿಸಿಕೊಳ್ಳುವುದು. ಈ ಧಾರ್ಮಿಕ ಕ್ರಾಂತಿ 21ನೇ ಶತಮಾನದ ಮೊದಲ ದಶಕದಲ್ಲಿ, ಸಂಪೂರ್ಣ ವಿಶ್ವವನ್ನು ಪ್ರಭಾವಿತಗೊಳಿಸುವುದು ಮತ್ತು ಮಾನವರನ್ನು ಆಧ್ಯಾತ್ಮಿಕತೆಯತ್ತ ಸೆಳೆವುದು.

7. ಹಂಗರಿಯ ಮಹಿಳಾಜ್ಯೋತಿಷಿ "ಬೋರಿಸ್ಕಾ"ಳ ಪ್ರಕಾರ 2000ನೇ ಇಸವಿಗೆ ಮೊದಲೇ ಉಗ್ರ ಪರಿಸ್ಥಿತಿ ಮತ್ತು ಲೂಟಿಕಾರರ ಹಾವಳಿ ನಡುವೆಯೇ, ಮಾನವೀಯ ಸದ್ಗುಣಗಳ ವಿಕಾಸವು, ಭಾರತದ ಒಬ್ಬ ದೇವಧೂತನಿಂದ ಆಗುವುದು. ಭೌತಿಕವಾದಗಳ ಸಂಘರ್ಷದ ಫಲವಾಗಿ ಬದಲಾವಣೆಗಳು ಚಿರಸ್ಥಾಯಿಯಾಗುವುದು. ಈ ಮಹಾನ್ ಆಧ್ಯಾತ್ಮಿಕ ವ್ಯಕ್ತಿಗೆ ಬಹಳಷ್ಟು ಜನರು ಅನುಯಾಯಿಗಳಾಗುವರು. ಭೌತಿಕವಾದವು (ಬುದ್ಧಿ ಪ್ರಧಾನವಾದ) ಆಧ್ಯಾತ್ಮಿಕತೆಗೆ ಬದಲಾಗುವುದು.

8. ಫ್ರಾನ್ಸ್‌ನ "ಡಾ॥ ಜೂಲರ್ವನ್" ಪ್ರಕಾರ 1990ನೇ ಇಸವಿಯ ನಂತರ ಯೂರೋಪಿನ ದೇಶಗಳು ಧಾರ್ಮಿಕ ಸಭ್ಯತೆಯತ್ತವಾಲುವವು, 2000ನೇ ಇಸವಿಯ ವೇಳೆಗೆ ವಿಶ್ವದ ಜನಸಂಖ್ಯೆ 640 ಕೋಟಿಗಳಷ್ಟಾಗುವುದು. ಭಾರತದಲ್ಲಿ ಇದ್ದಂತ ಜ್ಞಾನದ ಧಾರ್ಮಿಕತೆಯ ಕ್ರಾಂತಿಯು ನಾಸ್ತಿಕತೆಯನ್ನು ನಾಶಮಾಡುವುದು. ಬಿರುಗಾಳಿಯಂತೆ ವಿಶ್ವವನ್ನೇ ಆಕ್ರಮಿಸುವುದು. ಆ ಭಾರತೀಯ ಮಹಾನ್ ಆಧ್ಯಾತ್ಮಿಕ ವ್ಯಕ್ತಿಯ ಅನುಯಾಯಿಗಳು ನೋಡು–ನೋಡುತ್ತಲೇ, ಬಹುಸಂಖ್ಯಾತರಾಗಿ ಆತ್ಮಶಕ್ತಿಯಿಂದ ಸಂಪೂರ್ಣ ವಿಶ್ವವನ್ನೇ ಪ್ರಭಾವಿತ ಗೊಳಿಸುವರು.

9. ಫ್ರಾನ್ಸ್‌ನ ನಾಸ್ಟ್ರಾಡಾಮಸ್‌ನ ಪ್ರಕಾರ, ವಿಶ್ವದಾದ್ಯಂತ ಸೈನಿಕ ಕ್ರಾಂತಿಗಳಾದ ನಂತರ, ಸ್ವಲ್ಪ ಮಾತ್ರವೇ ಇರುವ ಉತ್ತಮ ಜನ ವಿಶ್ವಕ್ಕೆ ಒಳಿತನ್ನು ಮಾಡುವರು. ಅವರ ಮಹಾನ್ ಧರ್ಮನಿಷ್ಠೆ ಹಾಗೂ ವಿಶ್ವ ವಿಖ್ಯಾತ ಮುಖಂಡನು 20ನೇ ಶತಮಾನದ ಅಂತ್ಯ ಹಾಗೂ 21ನೇ ಶತಮಾನದ ಆದಿಯಲ್ಲಿ ಯಾವುದೋ, ಪೂರ್ವ ದೇಶದಲ್ಲಿ ಜನಿಸುವುದು. ಸೋದರತೆ ಹಾಗೂ ಸೌಜನ್ಯತೆಯ ಮೂಲಕ ಸಂಪೂರ್ಣ ವಿಶ್ವವನ್ನು ಏಕತೆಯ ಸೂತ್ರದಲ್ಲಿ ಬಂಧಿಸುವನು. (ನಾಸ್ಟ್ರಾಡಾಮಸ್‌ನ ಶತಕ 1ರ 50ನೇಯ ಶ್ಲೋಕದಲ್ಲಿ ಪ್ರಮಾಣಿಸುತ್ತಿದ್ದಾನೆ.) ಮೂರು ಕಡೆಯಿಂದ ಸಾಗರವು ಸುತ್ತಿರುವ ದ್ವೀಪದಲ್ಲಿ ಅವನ ಜನನವಾಗುವುದು. ನೈತಿಕತೆಯು ಪತನವಾಗುವುದು. ಎಲ್ಲೆಡೆ ಹಾಹಾಕಾರವಾಗುವುದು. ಆ ಕವಿಯು (ಧಾರ್ಮಿಕ ಮುಖಂಡ) ಗುರುವರ ಅಂದರೆ ಗುರುವನ್ನು ಶ್ರೇಷ್ಠವೆಂದು ತಿಳಿದು, ತನ್ನ ಸಾಧನೆ ಮಾಡುವನು. ಹಾಗೂ ಮಾಡಿಸುವನು. ಆ ಧಾರ್ಮಿಕ ಮುಖಂಡನು ಧರ್ಮದ ಬಲ ಅರ್ಥಾತ್ ತನ್ನ ಭಕ್ತಿಯ ಶಕ್ತಿಯಿಂದ ಇಡೀ ವಿಶ್ವವನ್ನೇ ತಲೆಬಾಗುವಂತೆ ಮಾಡುವನು ಏಷ್ಯಾದಲ್ಲಿ ಅವನನ್ನು ತಡೆಯುವುದು ಅರ್ಥಾತ್ ಅವನ ಪ್ರಚಾರಕ್ಕೆ ತಡೆಯೊಡ್ಡುವುದು ಹುಚ್ಚುತನವೆನಿಸುವುದು. (ಶತಕ 1ರ ಶ್ಲೋಕ 50) ಸೆಂಚುರಿ–1 ಕನ್ನಾ–50)

10. ಇಜರಾಯಲ್ ನ ಪ್ರೊಫೆಸರ್ 'ಹರಾರ್'ರ ಪ್ರಕಾರ, ಭಾರತ ದೇಶದ ಒಬ್ಬ ದಿವ್ಯ ಮಹಾಪುರುಷ, ಮಾನವತಾವಾದಿ ವಿಚಾರಗಳಿಂದ 2000 ನೇ ಇಸವಿಗೆ ಮೊದಲು ಆಧ್ಯಾತ್ಮಿಕ ಕ್ರಾಂತಿಯ ಬೇರನ್ನು ಗಟ್ಟಿಗೊಳಿಸುವನು. (ಬಲಗೊಳಿಸುವನು) ಸಂಪೂರ್ಣ ವಿಶ್ವವು ಅವನ ವಿಚಾರವನ್ನು ಕೇಳಲು ಬಾಧ್ಯವಾಗಬೇಕಾಗುವುದು. ಭಾರತದ ಹೆಚ್ಚಿನ ರಾಜ್ಯಗಳಲ್ಲಿ ರಾಷ್ಟ್ರಪತಿ ಆಳ್ವಿಕೆ ಉಂಟಾಗುವುದು. ನಂತರ ಮುಖಂಡತ್ವವು ಧರ್ಮನಿಷ್ಠ ವೀರ ಜನರದ್ದಾಗುವುದು. ಅವರು ಒಂದು ಧಾರ್ಮಿಕ ಸಂಘಟನೆಯ ಆಶ್ರಯ ಪಡೆಯುವರು.

11. ನಾರ್ವೆಯ ಶ್ರೀ ಆನಂದಾಚಾರ್ಯರ ಭವಿಷ್ಯವಾಣಿಯ ಪ್ರಕಾರ 1998ನೇ ಇಸವಿಯ ನಂತರ, ಒಂದು ಶಕ್ತಿಶಾಲಿ ಧಾರ್ಮಿಕ ಸಂಸ್ಥೆ ಭಾರತದಲ್ಲಿ ಪ್ರಕಾಶಕ್ಕೆ ಬರುವುದು. ಅದರ ಸ್ವಾಮಿ,

ಒಬ್ಬ ಗೃಹಸ್ಥ ವ್ಯಕ್ತಿಯ, ಆಚಾರ ಸಂಹಿತೆಯನ್ನು ಪಾಲನೆ ಮಾಡಿ, ಸಂಪೂರ್ಣ ವಿಶ್ವದಲ್ಲಿ ಪಾಲನೆಯಾಗುವುದು. ನಿಧಾನವಾಗಿ ಭಾರತವು ಔದ್ಯೋಗಿಕ, ಧಾರ್ಮಿಕ ಮತ್ತು ಆರ್ಥಿಕ ದೃಷ್ಟಿಯಿಂದ, ವಿಶ್ವದ ಮುಖಂಡತ್ವ ಮಾಡುವುದು ಭಾರತದ ವಿಜ್ಞಾನವೇ, (ಆಧ್ಯಾತ್ಮಿಕ ತತ್ವಜ್ಞಾನ) ಸಂಪೂರ್ಣ ವಿಶ್ದಲ್ಲಿ ಮಾನ್ಯತೆ ಪಡೆಯುವುದು.

ಮೇಲಿನ ಭವಿಷ್ಯವಾಣಿಗಳ ಅನುಸಾರವೇ ಇಂದು ವಶ್ವದಲ್ಲಿ ಘಟನೆಗಳು ಘಟಿಸುತ್ತಿವೆ. ಯುಗ ಪರಿವರ್ತನೆಯು ಪ್ರಕೃತಿಯ ಅಟಲ (ಸ್ಥಿರ) ಸಿದ್ಧಾಂತವಾಗಿದೆ. ವೈದಿಕ ದರ್ಶನದ ಪ್ರಕಾರ ನಲ್ಕು ಯುಗಗಳ ವ್ಯವಸ್ಥೆ ಎದೆ. 1. ಸತ್ಯಯುಗ 2. ತ್ರೇತಾಯುಗ 3. ದ್ವಾಪರಯುಗ 4. ಕಲಿಯುಗ ಯಾವಾಗ ಭೂಮಿಯ ಮೇಲೆ ಪಾಪಿಗಳ ಚಕ್ರಾಧಿಪತ್ಯವಾಗುತ್ತದೋ, ಆಗ ಭಗವಂತನು ಭೂಮಿಯ ಮೇಲೆ ಮಾನವ ರೂಪದಲ್ಲಿ ಪ್ರಕಟವಾಗುವನು.

ಮಾನವತೆಯ ಇ ಪೂರ್ಣ ವಿಕಾಸದ ಕೆಲಸವನ್ನು ಅನಾದಿಕಾಲದಿಂದಲೂ, ಭಾರತವೇ ಮಾಡುತ್ತಾ ಬಂದಿದೆ. ಇದೇ ಪುಣ್ಯ ಭೂಮಿಯಲ್ಲಿ ಅವತಾರಗಳ ಅವತರಣೆಯು, ಅನಾದಿ ಕಾಲದಿಂದ ನಡೆಯುತ್ತಾ ಬರುತ್ತಿದೆ.

ಆದರೆ ಎಂತಹ ವಿಡಂಬನೆ, ಋಷಿ ಮುನಿಗಳ, ಮಹಾಪುರುಷರ, ಹಾಗೂ ಅವತಾರ (ದೇವರ)ಗಳ ಆ ಸಮಯದಲ್ಲಿನ ಶಾಸನ ವ್ಯವಸ್ಥೆಯು ಹಾಗೂ ಜನತೆಯು, ಅವರ ದಿವ್ಯವಾಣಿಯ ಹಾಗೂ ಆದರ್ಶದ ಕಡೆ ಧ್ಯಾನ ಕೊಡಲಿಲ್ಲ. ಅವರು ಅಂತರ್ಧ್ಯಾನ ಆದ ಮೇಲೆ (ಅವರ ಜೀವಿತಾವಧಿಯನಂತರ) ಎರಡರಷ್ಟು ಉತ್ಸಾಹದಿಂದ, ಅವರ ಪೂಜೆ ಮಾಡ ತೊಡಗಿದರು. ಇದೂ ಒಂದು ವಿಡಂಬನೆ, ಏನೆಂದರೆ ನಾವು ಅವರ ಜೀವಿತ ಸಮಯದಲ್ಲಿ ಅವರನ್ನು ಒಪ್ಪುತ್ತಿರಲಿಲ್ಲ. ಅಷ್ಟೇ ಅಲ್ಲ ಅವರ ವಿರೋಧ ಹಾಗೂ ಅಪಮಾನವನ್ನೇ ಮಾಡುತ್ತಾ ಬಂದಿದ್ದೇವೆ. ಕೆಲವು ಸ್ವಾರ್ಥಿಗಳು ತಮ್ಮ ತತ್ವದಿಂದ ಜನರನ್ನು ಭ್ರಮಿತಗೊಳಿಸಿ, ಪರಮ ಸಂತರಿಗೆ ಕೆಟ್ಟ ಹೆಸರನ್ನು ತರಿಸಿ, ತೊಂದರೆ ಮಾಡುತ್ತಾರೆ. ಈ ಮಾತು ಪ್ರತಿಯುಗದಲ್ಲೂ ಇತಿಹಾಸವಾಗಿದೆ. ಮತ್ತು ಇಂದೂ ಸಹ ಆಗುತ್ತಲೇ ಇದೆ.

ಯಾವ ಸತ್ಯಪುರುಷರು ಸಾವಿರಾರು ಕಷ್ಟಗಳನ್ನು ಸಹಿಸಿಕೊಂಡು, ತಮ್ಮ ತಪಸ್ಸು ಹಾಗೂ ಸತ್ಯದಲ್ಲಿ ದೃಢವಾಗಿರುತ್ತಾರೋ, ಅವರ ಮಾತು ಅಸತ್ಯ ಆಗಲಾರದು. ಸತ್ಯದಲ್ಲಿ ದೃಢವಾಗಿದ್ದ ಕ್ರಿಸ್ತ್ ಸಂತ (ಏಸುಕ್ರಿಸ್ತ್) ನು ತನ್ನ ಶರೀರಕ್ಕೆ ಮೊಳ ಹೊಡೆದ ಭಯಂಕರ ನೋವನ್ನು ಸಹಿಸಿದನು. ಸ್ಯಾಕ್ರಟೀಸನು ವಿಷವನ್ನು ಕುಡಿದನು. ಶ್ರೀರಾಮ, ಶ್ರೀಕೃಷ್ಣ ಸಹ ಯಾತನೆಗಳಿಗೆ ಒಳಗಾದರು.

ಕ್ರಿಸ್ತ್ ಸಂತ (ಏಸುಕ್ರಿಸ್ತ್) ಹೇಳಿದ್ದನು :– "ಭೂಮಿಯ ಮೇಲೆ ಆಕಾಶ ಬೀಳಬಹುದು. ಸೂರ್ಯನ ಸ್ಥಿರ ಸಿದ್ಧಾಂತ ಉದಯಾಸ್ತಗಳು, ಅದೂ ಸಹ ಆಗದಿರಬಹುದು. (ಸೂರ್ಯಸ್ತವೇ ಉದಯವೇ ಆಗದಿರಬಹುದು) ಆದರೆ ನನ್ನ ಮಾತುಗಳು ಯಾವಾಗಲೂ ಸುಳ್ಳಾಗಲು ಸಾಧ್ಯವಿಲ್ಲ".

ಸಜ್ಜನರೇ! ಒಂದು ವೇಳೆ ಇಂದಿನ ಕೋಟ್ಯಾಂತರ ಮಾನವರು. ಆ ಪರಮ ತತ್ವವನ್ನು ತಿಳಿದಿರುವ ಸಂತರನ್ನು ಹುಡುಕಿ, ಅವರ ತತ್ವಜ್ಞಾನವನ್ನು ಸ್ವೀಕರಿಸಿ, ಅವರು ತಿಳಿಸಿರುವ ಮಾರ್ಗದಲ್ಲಿ ನಡೆದರೆ, ಅವರ ಜೀವನ ಶೈಲಿಯು ಸುಧಾರಿಸುವುದು. ಸಂಪೂರ್ಣ ವಿಶ್ವದಲ್ಲಿ ಸದ್ಭಾವನೆ, ಸೋದರತ್ವ, ದಯೆ, ಹಾಗೂ ಸದ್ಭಕ್ತಿಯ ವಾತಾವರಣ ವುಂಟಾಗುವುದು. ಇಂದಿನ ಮಾನವನು

ಬುದ್ಧಿ ಜೀವಿಯಾಗಿದ್ದಾನೆ. ಆದ್ದರಿಂದ ಆ ಸಂತನ ವಿಚಾರಗಳನ್ನು ಅವಶ್ಯಕವಾಗಿ ಸ್ವೀಕರಿಸುವನು ಹಾಗೂ ಧನ್ಯವಾಗುವನು. ಆ ಸಂತರೇ ಜಗದ್ಗುರು ತತ್ವದರ್ಶಿ ರಾಮ್‌ಪಾಲ್ ಮಹಾರಾಜ ರವರು ದಯವಿಟ್ಟು ಸಂತ ರಾಮ್‌ಪಾಲ್ ಮಹಾರಾಜ ರವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಓದಿರಿ. ಅದು ಎಲ್ಲ ಭವಿಷ್ಯವಾಣಿಗೂ ಸರಿಯಾಗಿ ಹೊಂದುವಂತಹದಾಗಿದೆ.

## "ಸಂತ ರಾಮ್‌ಪಾಲ್ ಮಹಾರಾಜ ರವರ ಸಂಕ್ಷಿಪ್ತ ಪರಿಚಯ"

ಸಂತ ರಾಮ್‌ಪಾಲ್ ರವರು 8–9–1951ರಲ್ಲಿ ಹರಿಯಾಣ ರಾಜ್ಯದ ಸೋನೀಪತ ಜಿಲ್ಲೆಯ ಧನಾನಾ ಎಂಬ ಹಳ್ಳಿಯಲ್ಲಿ ಜನಿಸಿದರು. ಇವರು ಒಂದು ರೈತ ಕುಟುಂಬದವರು. ವಿದ್ಯಾಭ್ಯಾಸವನ್ನು ಮುಗಿಸಿ, ನೀರಾವರಿ ಇಲಾಖೆಯಲ್ಲಿ ಜೂನಿಯರ್ ಇಂಜೀನಿಯರ್ ಆಗಿ 18 ವರ್ಷ ಸೇವೆ ಸಲ್ಲಿಸಿದರು. 1988ರಲ್ಲಿ ಪರಮ ಸಂತ ರಾಮದೇವಾನಂದರಿಂದ ದೀಕ್ಷೆ ಪಡೆದು, ತನು–ಮನ ಧನವನ್ನು ಅರ್ಪಿಸಿದರು. ಸಕ್ರಿಯವಾಗಿ ಸ್ವಾಮಿ ರಾಮದೇವಾನಂದರು ತಿಳಿಸಿರುವ ಭಕ್ತಿ ಮಾರ್ಗದಲ್ಲಿ ಸಾಧನೆಮಾಡಿ ಕಬೀರ್ ಪರಮಾತ್ಮನ ಸಾಕ್ಷಾತ್ಕಾರ ಮಾಡಿ ಕೊಂಡರು.

ಸಂತ ರಾಮ್‌ಪಾಲ್ ರವರಿಗೆ 17–2–1988ರ ಫಾಲ್ಗುಣ ಮಾಸದ ಅಮಾವಾಸ್ಯೆಯಂದು ರಾತ್ರಿ ನಾಮ ದೀಕ್ಷೆ ಪ್ರಾಪ್ತವಾಯಿತು. ಆ ಸಮಯದಲ್ಲಿ ಅವರಿಗೆ 37 ವಯಸ್ಸು ಆಗಿತ್ತು. ಸಂತ ಮತದಲ್ಲಿ ಅವರಿಗೆ ಉಪದೇಶವಾದ ದಿನವನ್ನೇ ಜನ್ಮದಿನ ಎಂದು ಪರಿಗಣಿಸಲಾಗುತ್ತದೆ.

ಮೇಲಿನ ವಿವರಣೆಗಳು ಶ್ರೀನಾಸ್ಟ್ರಾಡಾಮಸ್ ರವರ ಭವಿಷ್ಯವಾಣಿಯೊಂದಿಗೆ ಪೂರ್ಣ ಹೊಂದಿಕೆಯಾಗುತ್ತದೆ. ಈ ವಿಚಾರವನ್ನು ಪುಟ 44–45ರಲ್ಲಿ ಬರೆದಿದ್ದಾರೆ. "ಯಾವ ದಿನ ಆ ತತ್ವದರ್ಶಿ ಸಂತ (ಶಾಯರನ್)ನ ಆಧ್ಯಾತ್ಮಿಕ ಜನ್ಮವಾಗುವುದೋ, ಅಂದು ಕತ್ತಲೆಯ ಅಮಾವಾಸ್ಯೆಯಾಗಿರುವುದು. ಆ ಸಮಯದಲ್ಲಿ ಆ ವಿಶ್ವಮುಖಂಡನ ವಯಸ್ಸು 16, 20, 25 ಗಳಾಗಿರದೆ, ತರುಣನಾಗಿರದೆ, ಪ್ರೌಢನಾಗಿರುವನು ಹಾಗೂ ಅವನು 50 ಮತ್ತು 60 ವರ್ಷಗಳ ನಡುವಿನ ವಯಸ್ಸಿನಲ್ಲಿ ವಿಶ್ವದಲ್ಲಿ ಪ್ರಸಿದ್ಧನಾಗುವನು. ಅದು 2006ನೇ (ಪ್ರಸಿದ್ಧಿ) ಇಸವಿಯಲ್ಲಿ ಆಗುವುದು."

1993 ರಲ್ಲಿ ಸ್ವಾಮಿ ರಾಮದೇವಾನಂದ್ ಮಹಾರಾಜರು ಅವರಿಗೆ ಸತ್ಸಂಗ ಮಾಡುವ ಆದೇಶ ಕೊಟ್ಟರು. 1994ರಲ್ಲಿ ನಾಮದೀಕ್ಷೆ ಮಾಡಲು ಆದೇಶ ಪ್ರಧಾನ ಮಾಡಿದರು. ಭಕ್ತಿ ಮಾರ್ಗದಲ್ಲಿ ತಲ್ಲೀನರಾದ ಕಾರಣ ಅವರು ತಮ್ಮ ಜೆ. ಇ. ವೃತ್ತಿಗೆ 2000ನೇ ಇಸವಿಯಲ್ಲಿ ತ್ಯಾಗಪತ್ರ (ರಾಜೀನಾಮೆ ನೀಡಿದರು.) ಆ ತ್ಯಾಗ ಪತ್ರ ಕ್ರಮಾಂಕ 3492–3500, ದಿನಾಂಕ 16–5–2000 ದಲ್ಲಿ ಸ್ವೀಕೃತವಾಯಿತು. 1994 ರಿಂದ 1998ರ ವರೆಗೆ ಸಂತ ರಾಮ್‌ಪಾಲ್ ಮಹಾರಾಜ ರವರು ಮನೆ–ಮನೆ, ಹಳ್ಳಿ, ಹಳ್ಳಿ, ನಗರ–ನಗರಗಳಿಗೆ ಹೋಗಿ ಸತ್ಸಂಗ ಮಾಡಿದರು. ಬಹಳ ಸಂಖ್ಯೆಯಲ್ಲಿ ಅನುಯಾಯಿಗಳಾದರು. ಜೊತೆ–ಜೊತೆಯಲ್ಲೇ ಜ್ಞಾನ ಹೀನ ಸಂತರ ವಿರೋಧವು ಹೆಚ್ಚುತ್ತಾ ಹೋಯಿತು. 1999ರಲ್ಲಿ ಹರಿಯಾಣ ರಾಜ್ಯದ ರೋಹತಕ್ ಜಿಲ್ಲೆಯ ಕರೌಂಥಾದಲ್ಲಿ ಸತ್ಯಲೋಕ ಆಶ್ರಮವನ್ನು ಸ್ಥಾಪಿಸಿದರು. 1–6–1999 ರಿಂದ 7–6–1999 ರವರೆಗೆ ಪರಮೇಶ್ವರ ಕಬೀರರು ಪ್ರಕಟವಾದ ದಿವಸದಿಂದ 7 ದಿನಗಳ ಕಾಲ ದೊಡ್ಡ ಸತ್ಸಂಗದ ವ್ಯವಸ್ಥೆ ಮಾಡಿ ಆಶ್ರಮದ ಪ್ರಾರಂಭ ಮಾಡಿದರು. ಪ್ರತಿ ಪೂರ್ಣಿಮೆಯು ಸೇರಿದಂತೆ 3 ದಿನಗಳ ಸತ್ಸಂಗವನ್ನು ಪ್ರಾರಂಭಿಸಿದರು. ದೂರದೂರದಿಂದ ಶ್ರದ್ಧಾಳುಗಳು ಪ್ರವಚನ ಕೇಳಲು ಬರತೊಡಗಿದರು. ಹಾಗೂ ಅವರ ತತ್ವಜ್ಞಾನವನ್ನು ಅರ್ಥ ಮಾಡಿಕೊಂಡು, ಬಹು ಸಂಖ್ಯೆಯಲ್ಲಿ ಅನುಯಾಯಿಗಳು ಆಗತೊಡಗಿದರು. ಕೆಲವೇ ದಿನಗಳಲ್ಲಿ ಸಂತ ರಾಮ್‌ಪಾಲ್ ಮಹಾರಾಜ ರವರ ಅನುಯಾಯಿಗಳ ಸಂಖ್ಯೆ ಲಕ್ಷ ಗಟ್ಟಲೆ ಆಯಿತು. ಯಾವ ಜ್ಞಾನಹೀನ ಸಂತ ಹಾಗೂ ಋಷಿಗಳ ಆನುಯಾಯಿಗಳು, ಸಂತ ರಾಮ್‌ಪಾಲ್ ರವರ ಹತ್ತಿರ ಬರತೊಡಗಿದರೊ, ಅನುಯಾಯಿಗಳಾಗ ತೊಡಗಿದರೋ, ಆಗ ಆ ಅಜ್ಞಾನಿ ಸಂತರು ಪ್ರಶ್ನಿಸತೊಡಗಿದರು. ಸಂತ ರಾಮ್‌ಪಾಲ್‌ರು ಎಲ್ಲ ಜ್ಞಾನವನ್ನು ನಮ್ಮ ಸದ್‌ಗ್ರಂಥಗಳಿಗೆ ವಿರೋಧವಾಗಿ

ಹೇಳುತ್ತಿದ್ದಾರೆ. ಎಂದು ಹೇಳತೊಡಗಿದರು.

ಯಜುರ್ವೇದದ 8ನೇ ಅಧ್ಯಾಯದ 13ನೇ ಮಂತ್ರದಲ್ಲಿ ಬರೆದಿದೆ. ಪೂರ್ಣ ಪರಮಾತ್ಮನು ತನ್ನ ಭಕ್ತರ ಪಾಪಗಳನ್ನು ನಾಶ ಮಾಡುತ್ತಾನೆ. ತಮ್ಮ ಪುಸ್ತಕದಲ್ಲಿ ಬರೆದಿದೆ. "ಸತ್ಯಾರ್ಥ ಪ್ರಕಾಶ ಸಮುಲ್ಲಾಸ 7" ರಲ್ಲಿ ಬರೆದಿದೆ. "ಪರಮಾತ್ಮ ತನ್ನ ಭಕ್ತನ ಪಾಪವನ್ನು ಕ್ಷಮಿಸುವುದಿಲ್ಲ" ಸೂರ್ಯನ ಮೇಲೆ ಭೂಮಿಯ ತರಹ ಮನುಷ್ಯ ಹಾಗೂ ಅನ್ಯಪ್ರಾಣಿಗಳು ವಾಸಮಾಡುತ್ತವೆ. ಭೂಮಿಯ ಹಾಗೆ ಅಲ್ಲಿ ಎಲ್ಲಾ ಪದಾರ್ಥಗಳು ಇವೆ. ತೋಟ-ಹೊಲ, ಗದ್ದೆ ನದಿ ಎಲ್ಲಾ ಇದೆ. ಏನು ಇದು ಸಂಭವವಿದೆಯೆ? ಪವಿತ್ರ ಯಜುರ್ವೇದದ 5ನೇ ಅಧ್ಯಾಯದ 1ನೇ ಮಂತ್ರದಲ್ಲಿ ಬರೆದಿದೆ. "ಪರಮಾತ್ಮನು ಸಶರೀರಿಯಾಗಿದ್ದಾನೆ." ಎಂದು "ಅಗ್ನೆ ತನುಃ ಅಸಿ". ವಿಷ್ಣುವೈ ತ್ವಾಂ ಸೋಮಸ್ಯ ತನುರ ಅಸಿ. ಈ ಮಂತ್ರದಲ್ಲಿ 2 ಬಾರಿ ಸಾಕ್ಷಿ ಇದೆ. ಪರಮಾತ್ಮನು ಸಶರೀರಿಯಾಗಿದ್ದಾನೆ. ಎಂದು. ಆ ಅಮರ ಪುರುಷ ಪರಮಾತ್ಮನಿಗೆ ಎಲ್ಲರನ್ನೂ ರಕ್ಷಿಸಲೆಂದು ಶರೀರವಿದೆ. ಅರ್ಥಾತ್ ಪರಮಾತ್ಮನು ತನ್ನ ಭಕ್ತರಿಗೆ ತತ್ವಜ್ಞಾನವನ್ನು ತಿಳಿಸಲು, ಕೆಲ ಸಮಯದವರೆಗೆ ಅತಿಥಿ ರೂಪದಲ್ಲಿ ಈ ಪ್ರಪಂಚಕ್ಕೆ ಬರುತ್ತಾನೆ. ತನ್ನ ವಾಸ್ತವಿಕ ತೇಜೋಮಯವಾದ ಶರೀರದ ಮೇಲೆ ಹಗುರವಾದ ತೇಜಪುಂಜದ ಶರೀರವನ್ನು ಹೊದ್ದು (ತೊಟ್ಟು) ಬರುತ್ತಾನೆ. ಆದ್ದರಿಂದ ಮೇಲಿನ ಮಂತ್ರದಲ್ಲಿ 2 ಬಾರಿ ಪ್ರಮಾಣ ನೀಡಿದ್ದಾರೆ. ಈ ರೀತಿಯ ತರ್ಕದಿಂದ, ನಿರುತ್ತರರಾಗಿ. ತಮ್ಮ ಅಜ್ಞಾನದ ಪರದೆ ಕಳಚುವುದೆಂಬ ಭಯವಾಯಿತು. ಅಂತಹ ಅಜ್ಞಾನಿ ಸಂತ-ಮಹಂತರು ಹಾಗೂ ಆಚಾರ್ಯರು 'ಸತ್ಯಲೋಕ ಆಶ್ರಮ' ಕರೌಂಥಾದ ಅಕ್ಕ-ಪಕ್ಕದ ಹಳ್ಳಿಗಳಲ್ಲಿ ಸಂತ ರಾಮ್‌ಪಾಲ್ ರವರ ಹೆಸರನ್ನು ಕೆಡಿಸಲು, ಅಪಪ್ರಚಾರ ಮಾಡಲಾರಂಭಿಸಿದರು. 12-7-2006ರಲ್ಲಿ ಸಂತ ರಾಮ್‌ಪಾಲ್‌ರನ್ನು ಕೊಲ್ಲಲು ಹಾಗೂ ಆಶ್ರಮವನ್ನು ಹಾಳುಮಾಡಲು ತಾವು ಹಾಗೂ ತಮ್ಮ ಅನುಯಾಯಿಗಳೊಂದಿಗೆ, ಸತ್ಯಲೋಕ ಆಶ್ರಮದ ಮೇಲೆ ದಾಳಿ ಮಾಡಿದರು. ಪೋಲೀಸ್‌ನವರು ತಡೆಯಲು ಪ್ರಯತ್ನಿಸಿದರು. ಆ ಕಾರಣದಿಂದ ದಾಳಿ ಕೋರರಿಗೆ ಗಾಯಗಳಾದವು. ಸರ್ಕಾರವು 'ಸತ್ಯಲೋಕ' ಆಶ್ರಮವನ್ನು ತನ್ನ ವಶಕ್ಕೆ ಪಡೆಯಿತು. ಸಂತ ರಾಮ್‌ಪಾಲ್ ಮಹಾರಾಜ ರವರು ಹಾಗೂ ಕೆಲವು ಅನುಯಾಯಿಗಳ ಮೇಲೆ ಸುಳ್ಳು ಮೊಕದ್ದಮೆ ಹೂಡಿ, ಅವರನ್ನು ಜೈಲಿಗೆ ಹಾಕಿದರು. ಈ ರೀತಿ 2006ರಲ್ಲಿ ಸಂತ ರಾಮ್‌ಪಾಲ್ ಮಹಾರಾಜ ರವರು ವಿಖ್ಯಾತರಾದರು. ಸುಳ್ಳು ಆರೋಪ ಹೊರಿಸಿ ಸಂತ ರಾಮ್‌ಪಾಲ್ ರವರನ್ನು ಪ್ರಸಿದ್ಧಗೊಳಿಸಿದರು. ಆದರೆ ಸಂತ ರಾಮ್‌ಪಾಲ್‌ರು ನಿರ್ದೋಷಿಗಳು. ಪ್ರಿಯ ಓದುಗರೆ ನಾಸ್ಟ್ರೇಡಮಸ್‌ನ ಭವಿಷ್ಯವಾಣಿಯನ್ನು ಓದಿ ನೀವು ಯೋಚಿಸಬಹುದು. ರಾಮ್‌ಪಾಲ್ ರವರಿಗೆ ಇಷ್ಟು ಕೆಟ್ಟ ಹೆಸರು ಬರಲು ಹೇಗೆ ಸಾಧ್ಯವಾಯಿತು? ಇವರು ವಿಶ್ವಕ್ಕೆ ಜ್ಞಾನ ಪ್ರಚಾರ ಮಾಡುವರು ಎಂದು ಭವಿಷ್ಯವಾಣಿಯಲ್ಲಿದೆ. ಹೀಗೆ ಯೋಚಿಸುವವರಲ್ಲಿ ಪ್ರಾರ್ಥನೆ ಏನೆಂದರೆ ಪರಮಾತ್ಮನು ಕ್ಷಣ ಮಾತ್ರದಲ್ಲಿ ಪರಿಸ್ಥಿತಿಯನ್ನು ಬದಲಾಯಿಸಬಲ್ಲ.

ಕಬೀರ್, ಸಾಹೇಬ್ ಸೆ ಸಬ್ ಹೋತ ಹೈ, ಬಂದೆ ಸೆ ಕಛು ನಾಹೀ ।
ರಾಯಿ ಸೇ ಪರ್ವತೆ ಕರೆ, ಪರ್ವತ ಸೇ ಫಿರ್ ರಾಯಿ ॥

ಪರಮೇಶ್ವರ ಕಬೀರರು, ತನ್ನ ಮಕ್ಕಳ ಉದ್ಧಾರಕ್ಕಾಗಿ, ವೇಗದಲ್ಲಿ ಸಮಾಜಕ್ಕೆ ತತ್ವಜ್ಞಾನದ ಮೂಲಕ, ವಾಸ್ತವಿಕತೆಯ ಪರಿಚಯ ಮಾಡಿಸುವರು. ನಂತರ ಸಂಪೂರ್ಣ ವಿಶ್ವವು ಸಂತ ರಾಮ್‌ಪಾಲ್ ಮಹಾರಾಜ ರವರ ಜ್ಞಾನದ ಮುಂದೆ ಸೋಲನ್ನು ಒಪ್ಪುತ್ತದೆ.

ಸಂತ ರಾಮ್‌ಪಾಲ್ ಮಹಾರಾಜ ರವರು 2003 ನೇ ಇಸವಿಯಿಂದ ದೂರದರ್ಶನ ಹಾಗೂ ಪತ್ರಿಕೆಗಳಲ್ಲಿ, ಸತ್ಯ ಜ್ಞಾನದ ಪ್ರಚಾರವನ್ನು ಮಾಡಿ, ಬೇರೆ ಧರ್ಮದ ಗುರುಗಳೊಂದಿಗೆ ಹೇಳುತ್ತಿದ್ದಾರೆ. ನಿಮ್ಮ ಜ್ಞಾನವು ಶಾಸ್ತ್ರವಿರುದ್ಧವಾಗಿದೆ. ನೀವು ಭಕ್ತ ಸಮಾಜಕ್ಕೆ ಶಾಸ್ತ್ರ ವಿರುದ್ಧವಾದ

ಪೂಜೆ ತಿಳಿಸಿ ಮಾಡಿಸುತ್ತಿದ್ದಿರಿ. ನೀವು ದೋಷಿಗಳಾಗುತ್ತಿದ್ದೀರಿ. ಒಂದು ವೇಳೆ ನಾನು ತಪ್ಪಾಗಿ ಹೇಳುತ್ತಿದ್ದೇನೆ. ಎಂದಾದರೆ ಇದಕ್ಕೆ ಉತ್ತರ ನೀಡಿರಿ. ಈವರೆಗೂ ಯಾವ ಸಂತರೂ ಉತ್ತರ ನೀಡಿಲ್ಲ.

ಸಂತ ರಾಮ್‌ಪಾಲ್ ಮಹಾರಾಜ ರವರಿಗೆ 2001 ನೇ ಅಕ್ಟೋಬರ್ ತಿಂಗಳಲ್ಲಿನ ಮೊದಲು ಗುರುವಾರದಂದು ಇದ್ದಕ್ಕಿದ್ದಂತೆ ಪ್ರೇರಣೆಯಾಯಿತು. ಎಲ್ಲ ಧರ್ಮಗಳ ಸದ್‌ಗ್ರಂಥಗಳನ್ನು ಆಳವಾಗಿ ಅಧ್ಯಯನ ಮಾಡು ಎಂದು. ಇದರ ಆಧಾರದಿಂದ, ಮೊದಲು ಪವಿತ್ರ ಭಗವದ್ಗೀತೆಯನ್ನು ಅಧ್ಯಯನ ಮಾಡಿದೆ. ಹಾಗೂ "ಗಹರೀ ನಜರ್ ಗೀತಾ" ಪುಸ್ತಕ ವನ್ನು ರಚಿಸಿದೆ. ಇದರ ಆಧಾರದಲ್ಲಿ ಮೊಟ್ಟಮೊದಲು ರಾಜಸ್ಥಾನದ 'ಜೋಧಪುರ' ಪಟ್ಟಣದಲ್ಲಿ 2002ರ ಮಾರ್ಚ್‌ನಲ್ಲಿ ಪ್ರವಚನ ಪ್ರಾರಂಭಿಸಿದೆ. ಆದ್ದರಿಂದಲೇ ನಾಸ್ಟ್ರೇಡಮಸ್‌ರು ಹೇಳಿರುವುದು. ವಿಶ್ವಧಾರ್ಮಿಕ ಹಿಂದೂ ಸಂತನು 2009ರಲ್ಲಿ ಅವನ 50ನೇ ವಯಸ್ಸಿನಲ್ಲಿ ಜ್ಞಾನದಾತವಾಗಿ ಪ್ರಚಾರ ಮಾಡುವನು ಎಂಬುದಾಗಿ, ನಾಸ್ಟ್ರಾಡಾಮಸ್‌ರ ಪ್ರಕಾರ ಸಂತ ರಾಮ್‌ಪಾಲ್‌ರ ಜನ್ಮ ಒಂದು ರೈತ ಕುಟುಂಬದಲ್ಲಿ ಹಳ್ಳಿಯಲ್ಲಿ, 8-9-1951 ರಲ್ಲಿ ಆಯಿತು. ಅವರ 50ನೇ ವಯಸ್ಸು ಅಂದರೆ 2001ರಲ್ಲಿ ಜ್ಞಾನ ಪ್ರಚಾರ ಮಾಡಿದರು. ನಾಸ್ಟ್ರೇಡಮಸ್‌ರ ವಾಣಿ ಸತ್ಯವಾಯಿತು. ಆದ್ದರಿಂದ ಆ ವಿಶ್ವ ಧಾರ್ಮಿಕ ಮುಖಂಡ ಸಂತ ರಾಮ್‌ಪಾಲ್ ಮಹಾರಾಜ ರವರು ಆಗಿದ್ದಾರೆ. ಅವರ ಅಧ್ಯಕ್ಷತೆಯಲ್ಲಿ ಭಾರತ ಸಂಪೂರ್ಣ ವಿಶ್ವದಲ್ಲಿ ಆಡಳಿತ ನಡೆಸುವುದು. ಸಂಪೂರ್ಣ ವಿಶ್ವದಲ್ಲಿ ಒಂದೇ ಜ್ಞಾನವು ನಡೆಯುವುದು. (ಭಕ್ತಿ ಮಾರ್ಗ) ಒಂದೇ ಕಾನೂನು ಇರುವುದು, ಯಾರೂ ದುಃಖಿತರು ಇರುವುದಿಲ್ಲ. ವಿಶ್ವದಲ್ಲಿ ಪೂರ್ಣ ಶಾಂತಿ ಇರುವುದು ಯಾರು ವಿರೋಧೀಸುವರೋ, ಅವರೂ ಸಹ ಕೊನೆಯಲ್ಲಿ ಪಶ್ಚಾತಾಪ ಪಡುವರು. ಅವರು ತತ್ವಜ್ಞಾನವನ್ನು ಪಡೆಯಲು ಇಚ್ಛಿಸುವರು ಸಕಲ ಮಾನವ ಸಮಾಜವು ಮಾನವ ಧರ್ಮದ ಪಾಲನೆ ಮಾಡುತ್ತದೆ. ಎಲ್ಲರೂ ಪೂರ್ಣ ಮೋಕ್ಷ ಪಡೆದು ಸತ್ಯಲೋಕಕ್ಕೆ ಹೋಗುವರು.

ಯಾವ ತತ್ವಜ್ಞಾನದ ವಿಷಯದಲ್ಲಿ ನಾಸ್ಟ್ರಾಡಾಮಸ್ ರವರ ಭವಿಷ್ಯವಾಣಿಯಲ್ಲಿ ಉಲ್ಲೇಖವಿದೆಯೋ, ಆ ವಿಶ್ವ ವಿಜೇತ ಸಂತನು ಹೇಳಿರುವ ತತ್ವಜ್ಞಾನದ ಮುಂದೆ, ಹಿಂದಿನ ಎಲ್ಲ ಸಂತರು ಅಸಫಲವಾಗುವರು. ಅವರೆಲ್ಲಾ ತಲೆಬಾಗಿ ನಮ್ರರಾಗುವರು. ಇದೇ ವಿಷಯವನ್ನು ಪರಮೇಶ್ವರ ಮುಕ್ತಿದಾತರು ತನ್ನ ಅಮೃತವಾಣಿಯಲ್ಲಿ ಪವಿತ್ರ "ಕಬೀರ್ ಸಾಗರ" ಗ್ರಂಥದಲ್ಲಿ ಹೇಳಿರುವರು "ಒಂದು ಸಮಯ ಬರುವುದು, ಆಗ ಸಂಪೂರ್ಣ ವಿಶ್ವದಲ್ಲಿ ನನ್ನದೇ ಜ್ಞಾನವು ನಡೆಯುವುದು" ಸಂಪೂರ್ಣ ವಿಶ್ವವು ಶಾಂತಿ ಪೂರ್ವಕವಾಗಿ ಭಕ್ತಿ ಮಾಡುವರು. ಪರಸ್ಪರ ಪ್ರೇಮವಿರುವುದು ಸತ್ಯಯುಗದಂತಹ ಕಾಲ ಬರುವುದು (ಸ್ವರ್ಣ ಯುಗ) ಪರಮೇಶ್ವರ ಕಬೀರ್ ಮುಕ್ತಿದಾತರ ಮೂಲಕ ತಿಳಿಸಲ್ಪಟ್ಟ ಜ್ಞಾನವನ್ನು ಸಂತ ರಾಮ್‌ಪಾಲ್ ಮಹಾರಾಜ ರವರು ತಿಳಿದಿದ್ದಾರೆ. ಇದೇ ಜ್ಞಾನದ ಬಗ್ಗೆ ಕಬೀರ್ ಪರಮೇಶ್ವರರು ತಮ್ಮ ವಾಣಿಯಲ್ಲಿ ಹೇಳಿದ್ದಾರೆ.

ಕಬೀರ್, ಔರ್ ಜ್ಞಾನ ಸಬ್ ಜ್ಞಾನಡೀ, ಕಬೀರ್ ಜ್ಞಾನ ಸೋ ಜ್ಞಾನ ।
ಜೈಸೆ ಗೋಲಾ ತೋಬ ಕಾ, ಕರತಾ ಚಲೆ ಮೈದಾನ್ ॥

ಭಾವಾರ್ಥ ಹೀಗಿದೆ ಈ ತತ್ವಜ್ಞಾನ ಇಷ್ಟು ಪ್ರಬಲವಾಗಿದೆ. ಇದರ ಎದುರಿಗೆ ಬೇರೆ ಸಂತರ ಋಷಿಗಳ ಜ್ಞಾನವು ನಿಲ್ಲಲಾರದು. ಹೇಗೆ ತಿರುಗು ಬಂದೂಕಿನಿಂದ ಹಾರುವ ಗುಂಡುಗಳು ಕೋಟೆಯನ್ನು ಕೆಡವಿ, ಮೈದಾನವಾಗಿಸಿ ಬಿಡುತ್ತದೆಯೋ ಹಾಗೆ.ಇದೇ ಪ್ರಮಾಣವನ್ನು ಸಂತ ಗರೀಬ್ ದಾಸ್ ರವರು ಕೊಟ್ಟಿದ್ದಾರೆ. ಏನೆಂದರೆ ಮುಕ್ತಿದಾತ ಕಬೀರ್ ಪರಮೇಶ್ವರ ಕಳುಹಿಸಿರುವ ತತ್ವದರ್ಶಿ ಸಂತ, ಆ ಸದ್ಗುರು ದಿಲ್ಲಿ ಮಂಡಲದಲ್ಲಿ ಬರುವರು.

"ಗರೀಬ್, ಸತ್‌ಗುರು ದಿಲ್ಲೀ ಮಂಡಲ ಆಯಸೀ, ಸೂತೀ ದರಣೀ ಸೂಮ್ ಜಗಾಯಸೀ"

ಪರಮಾತ್ಮನ ಭಕ್ತಿ ಮಾಡದ ಕಂಜೂಸ್ ವ್ಯಕ್ತಿಗಳನ್ನು ಜಾಗೃತ ಗೊಳಿಸುವರು. ಧನಾನಾ ಗ್ರಾಮವು ಸೋನೀಪತ್ ಜಿಲ್ಲೆಯು ಮೊದಲು ದಿಲ್ಲಿಯ ಶಾಸನಕ್ಷೇತ್ರಕ್ಕೆ ಸೇರಿತ್ತು. ಆದ್ದರಿಂದ ಸಂತ ಗರೀಬ್‌ದಾಸ್ ಮಹಾರಾಜ ರವರು ಹೇಳುತ್ತಾರೆ. ಸದ್ಗುರು (ವಾಸ್ತವಿಕ ಜ್ಞಾನವನ್ನು ತಿಳಿದಿರುವ ಸಂತ ಅರ್ಥಾತ್ ತತ್ವದರ್ಶಿ ಸಂತ ದಿಲ್ಲಿ ಮಂಡಲಕ್ಕೆ ಬರುವುದನ್ನು ಪುನಃ ಹೇಳಿದ್ದಾರೆ –

"ಸಾಹೇಬ್ ಕಬೀರ್ ತಃಖ್ತ ಖವಾಸಾ, ದಿಲ್ಲೀ ಮಂಡಲ ಲೀಜ್ಯೆ ವಾಸಾ"

ಭಾವಾರ್ಥ :– ಮುಕ್ತಿದಾತ ಕಬೀರ್ ಪರಮೇಶ್ವರ ದರಬಾರಿನ ಮುಖ್ಯ ನೌಕರ, ಅಂದರೆ ಪರಮೇಶ್ವರನ ಪ್ರತಿನಿಧಿ ದಿಲ್ಲಿ ಮಂಡಲದಲ್ಲಿ ವಾಸ ಮಾಡುತ್ತಾರೆ. ಮೊದಲಿಗೆ ತನ್ನ ಹಿಂದುಗಳು ಬಂಧುಗಳಿಗೆ ತತ್ವಜ್ಞಾನವನ್ನು ಪರಿಚಯ ಮಾಡಿಸುವರು. ಬುದ್ಧಿವಂತ ಹಿಂದುಗಳು ನಿದ್ರೆಯಿಂದ ತಡಬಡಾಯಿಸಿ ಎದ್ದಂತೆ ಏಳುವರು. ಅಂದರೆ ಆ ಸಂತರು ಕೊಟ್ಟ ಜ್ಞಾನವನ್ನು ತಡಮಾಡದೆ ಗ್ರಹಿಸುವರು. ಹಾಗೂ ಆ ಸಂತನಿಗೆ ಶರಣಾಗುವರು. ನಂತರ ಸಂಪೂರ್ಣ ವಿಶ್ವವು ಆ ತತ್ವದರ್ಶಿ ಹಿಂದೂ ಸಂತರ ಜ್ಞಾನವನ್ನು ಸ್ವೀಕರಿಸುವುದು. ಈ ಭವಿಷ್ಯವಾಣಿಯನ್ನು ನಾಸ್ತ್ರಾಡಾಮಸ್‌ನೇ ಹೇಳಿದ್ದಾನೆ.

ನಾಸ್ತ್ರಾಡಾಮಸ್‌ನು ಇದನ್ನೂ ಹೇಳಿದ್ದಾನೆ. "ನನಗೆ ದುಃಖವಾಗುವ ಅಂಶವೆಂದರೆ, ಆ ಸಂತನ ಪರಿಚಯವಿಲ್ಲದ ಕಾರಣ, ಅವನು ಉಪೇಕ್ಷೆಗೆ ಪಾತ್ರವಾಗುವನು. ಹೇ! ಬುದ್ಧಿವಂತ ಮಾನವರೆ, ಅವರನ್ನು ಉಪೇಕ್ಷಿಸಬೇಡಿರಿ. ಅವನಂತೂ ಸಿಂಹಾಸನದ ಮೇಲೆ ಕೂರಿಸಿ ಆರಾಧ್ಯ, ದೈವದ ಪೂಜ್ಯನಂತೆ ಪೂಜಿಸಲು ಯೋಗ್ಯವಾಗಿರುವನು. ಆ ಹಿಂದೂಧಾರ್ಮಿಕ ಸಂತರು ಕವೀಯ ಆದಿಪುರುಷ (ಪೂರ್ಣ ಪರಮೇಶ್ವರ)ರ ಅನುಯಾಯಿ ಜಗತ್ತಿನ ಮುಕ್ತಿದಾತ.

ನಾಸ್ತ್ರಾಡಾಮಸ್ ಭವಿಷ್ಯಗಾರನು ತನ್ನ ಪುಸ್ತಕ 41–42 ರಲ್ಲಿ ಮೂರು ಶಬ್ದಗಳನ್ನು ಉಲ್ಲೇಖಿಸಿದ್ದಾನೆ. ಹೀಗೆ ಹೇಳಿದ್ದಾನೆ ಆ ವಿಶ್ವ ವಿಜೇತ ತತ್ವದರ್ಶಿ ಸಂತ, ಕಾಲನ ದುಃಖದಾಯಿ ಭೂಮಿಯಿಂದ ಬಿಡಿಸಿಕೊಂಡು, ತನ್ನ ಆದಿ ಪೂರ್ವಜರ ಜೊತೆ ವಾರಸುದಾರರನ್ನಾಗಿಸುವನು ಹಾಗೂ ಮುಕ್ತಿ ಕೊಡಿಸುವನು. ಇಲ್ಲಿ ಉಪದೇಶ ಮಂತ್ರದ ಕಡೆಗೆ ಸಂಕೇತಿಸಿದ್ದಾರೆ. ಆ 'ಶಾಯರನ್' ಕೇವಲ 3 ಶಬ್ಧಗಳನ್ನು ಜಪಿಸುವರು. (ಓಂ–ತತ್–ಸತ್) ಹಾಗೂ ನಾಮೋಪದೇಶ ಕೊಡುವನು. ಈ ಮೂರು ಶಬ್ದಗಳ ಜೊತೆ ಬೇರಾವ ಶಬ್ದವನ್ನೂ ಜೋಡಿಸುವುದಿಲ್ಲ. ಇದೇ ಪ್ರಮಾಣವು ಋಗ್ವೇದದ 10ನೇ ಅಧ್ಯಾಯದ 90ನೇ ಮಂಡಲದ 16ನೇ ಮಂತ್ರದಲ್ಲಿ, ಸಾಮವೇದದ ಶ್ಲೋಕ ಸಂಖ್ಯೆ 822 ಹಾಗೂ ಶ್ರೀ ಮದ್‌ಭಗದ್ಗೀತಾ ಅಧ್ಯಾಯ 17 ಮತ್ತು 23 ರಲ್ಲಿದೆ. ಪೂರ್ಣ ಸಂತನು (ತತ್ವದರ್ಶಿ ಸಂತರು) ಮೂರು ಮಂತ್ರಗಳ (ಓಂ–ತತ್–ಸತ್ ಇದರಲ್ಲಿ ತತ್ ಹಾಗೂ ಸತ್ ಸಾಂಕೇತಿಕವಾಗಿದೆ) ನಾಮೋಪದೇಶಮಾಡಿ ಪೂರ್ಣ ಪರಮಾತ್ಮ (ಆದಿ ಪುರುಷ) ನ ಭಕ್ತಿಯನ್ನು ಮಾಡಿಸಿ ಕಾಲನ ಜಾಲದಿಂದ ಮುಕ್ತಿ ಕೊಡಿಸಿ, ನಂತರ ಸಾಧಕನ ಭಕ್ತಿಗಳಿಕೆಯ ಬಲದಿಂದ, ಮೂಲ ಸೃಷ್ಠಿಯ ಉತ್ತಮ ಜೀವಿಗಳು ವಾಸಿಸುವ ಪುಣ್ಯ ಸ್ಥಾನಕ್ಕೆ ಹೋಗುತ್ತಾನೆ. ಅಲ್ಲಿಂದ ಈ ಜೀವ ತನ್ನ ಪೂರ್ವಿಕರನ್ನು ಬಿಟ್ಟು ಕ್ರುರಚಂದ್ರ (ಕಾಲನ) ಜೊತೆ ಬಂದು, ಈ ದುಃಖದ ಲೋಕದಲ್ಲಿ ಸಿಲುಕಿಕೊಂಡು, ಅನೇಕ ಕಷ್ಟ ಕೋಟಲೆಗಳನ್ನು ಅನುಭವಿಸುತ್ತಿದೆ. ನಾಸ್ತ್ರೇಡಮಸ್‌ರು ಮಧ್ಯದ ಪೀಳಿಗೆಯವರು, ತಮ್ಮ ಹಿಂದೂ ಧರ್ಮದ ಅದರ್ಶ ಜೀವನವನ್ನು ತಮ್ಮದಾಗಿಸಿ ಕೊಳ್ಳುವರೆಂದು ತಿಳಿಸಿದ್ದಾರೆ. 'ಶಾಯರನ್' (ತತ್ವದರ್ಶಿ) ತಮ್ಮ ಜ್ಞಾನದಿಂದ ದೈದೀಪ್ಯಮಾನವಾದ ಉತ್ತುಂಗವಾದ ಎತ್ತರದ ಸ್ವರೂಪವನ್ನು ಪ್ರಕಾಶಿಸುವರು. ಅಂದರೆ ಸರ್ವ ಶ್ರೇಷ್ಠವಾದಕ್ಕಿಂತ, ಶಾಸ್ತ್ರಕ್ಕೆ ಅನುಸಾರವಾದ ಭಕ್ತಿವಿಧಾನವನ್ನು ಬೆಳಕಿಗೆ ತರುವರು. ಮಾನವ ಸಂಸ್ಕೃತಿಯನ್ನು ಅಂದರೆ ಮಾನವೀಯತೆಯನ್ನು

ನಿಷ್ಕಪಟಭಾವದಿಂದ ಸಂಭಾಲಿಸುವರು.

(ಮರಾಠಿ ಭಾಷೆಯಲ್ಲಿ ಪುಟ–42ರಲ್ಲಿ) ಮಧ್ಯಕಾಲೀನ ಹಿಂದು ಧರ್ಮ ಹಾಗೂ ಹಿಂದುತ್ವದ ಆದರ್ಶವನ್ನು ಜಾರಿಗೆ ತರುವರು ಎಂದು ಬರೆದಿದೆ. ಇದರ ಭಾವಾರ್ಥ : ಮಧ್ಯದ ಪೀಳಿಗೆಯ ಉದ್ಧಾರವನ್ನು 'ಶಾಯರನ್' (ತತ್ವದರ್ಶಿ ಸಂತ) ಮಾಡುವನು. ಇದೇ ಪ್ರಮಾಣವನ್ನು ಹಿಂದಿಯಲ್ಲೂ ಹೇಳಿದೆ. ಇದೆ ಪ್ರಮಾಣವು ಸ್ವಯಂ ಪೂರ್ಣ ಪರಮಾತ್ಮ ಕಬೀರರು ಹೇಳಿದ್ದಾರೆ.

ಧರ್ಮ್‌ದಾಸ್ ತೋಹೆ ಲಾಖ ದುಹಾಯಿ,
ಸಾರಜ್ಞಾನ ವ ಸಾರ ಶಬ್ದ ಕಹೀ ಬಾಹರ್ ನ ಜಾಯಿ।
ಸಾರನಾಮ ಬಾಹರ ಜೋ ಪರಹೀ, ಬಿಚಲೀ ಪೀಢೀ ಹಂಸ ನಹೀ ತರಹೀ ।
ಸಾರಜ್ಞಾನ ತಬ್ ತಕ್ ಛುಪಾಯಿ, ಜಬ ತಕ್ ದ್ವಾದಸ ಪಂಥ ನ ಮಿಟ ಜಾಯಿ ॥

1947ನೆ ಇಸವಿಯಲ್ಲಿ ಭಾರತದೇಶ ಬ್ರಿಟಿಷರಿಂದ ಮುಕ್ತವಾಯಿತು. ಅದಕ್ಕೆ ಮೊದಲು ಭಾರತ ದೇಶದಲ್ಲಿ ಶಿಕ್ಷಣದ ಕೊರತೆ ಇತ್ತು. 1951ನೇ ಇಸವಿಯಲ್ಲಿ ಸಂತ ರಾಮ್‌ಪಾಲ್ ಮಹಾರಾಜರನ್ನು ಪರಮೇಶ್ವರರು ಭೂಲೋಕಕ್ಕೆ ಕಳುಹಿಸಿದರು. 1947ಕ್ಕೆ ಮುಂಚಿನ ಅವಧಿಯನ್ನು ಕಲಿಯುಗದ ಪ್ರಥಮ ಪಾದವೆಂದು ಭಾವಿಸಿದರೆ, 1947ರ ನಂತರದ ಅವಧಿಯನ್ನು ಮಧ್ಯವೆಂದು ಭಾವಿಸಬಹುದು ಇದು ಒಂದು ಸಾವಿರ ವರ್ಷಗಳವರೆಗೆ ಮುಂದುವರೆದು ಸತ್ಯ ಭಕ್ತಿ ಮಾರ್ಗದಲ್ಲಿ ನಡೆವುದು ಈ ಮೂಲಕ ಯಾರು ನಿಜಭಕ್ತನೋ, ಅವನು ಸತ್ಯಲೋಕಕ್ಕೆ ಹೋಗುವನು. ಯಾರು ಭಕ್ತನಲ್ಲವೋ,. ಅಥವಾ ಅರ್ಧ ಭಕ್ತನೋ, ಅವನು ಸತ್ಯಲೋಕಕ್ಕೆ ಹೋಗಲು ಸಾಧ್ಯವಿಲ್ಲ. ಇದೇ ಲೋಕದಲ್ಲಿ ಹುಟ್ಟಿ–ಸಾಯುತ್ತಾ ದುಃಖ ಅನುಭವಿಸುವನು. ಈ ರೀತಿ ಅನೇಕ ಸಾವಿರ ವರ್ಷಗಳ ವರೆಗೆ ಕಲಿಯುಗದ ಮಹಿಮೆಯು ವರ್ತಮಾನ ಕಾಲಕ್ಕಿಂತ, ಉತ್ತಮವಾಗಿ ಭಕ್ತಿಮಾರ್ಗದಲ್ಲಿ ನಡೆವುದು. ಆದರೆ ಅಂತ್ಯಯುಗದಲ್ಲಿ ಭಕ್ತಿ ರಹಿತವಾದ ಮಾರ್ಗ ಅನುಸರಿಸುವರು. ಏಕೆಂದರೆ, ಭಕ್ತಿ ಯುಗದಲ್ಲಿ ಗಳಿಸಿದ ಶುಭ ಫಲಗಳು ಪದೇ–ಪದೇ ಜನ್ಮತಾಳುವುದರಿಂದ ಸಮಾಪ್ತಿಯಾಗಿರಬಹುದು. ಆದ್ದರಿಂದ ಕಲಿಯುಗದ ಅಂತಿಮ ಪಾಪದಲ್ಲಿನ ಜನರು ಕೃತಘ್ನ (ಉಪಕಾರ ಸ್ಮರಣೆ ಇಲ್ಲದವರು) ರಾಗುವರು. ಅವರು ಭಕ್ತಿಮಾರ್ಗ ಹಿಡಿಯಲಾರರು. ಆದ್ದರಿಂದ ಈಗ ನಡೆಯುತ್ತಿರುವ ಪೀಳಿಗೆಯು ಮಧ್ಯಯುಗದ್ದಾಗಿದೆ. (1947ರಿಂದ) 2006 ರಿಂದ ಆ ಶಾಯರನ್ ಎಲ್ಲರ ಎದುರು ಪ್ರಕಟವಾಗಿದ್ದಾನೆ. ಅವರೇ ಸಂತ ರಾಮ್‌ಪಾಲ್ ಮಹಾರಾಜರು.

ಮೇಲ್ಕಂಡ ಜ್ಞಾನವನ್ನು ಪ್ರಥಮ ಮಧ್ಯ–ಹಾಗೂ ಅಂತ್ಯ ಪೀಳಿಗೆಯ ಸಂತರಾದ, ರಾಮ್‌ಪಾಲ್ ಮಹಾರಾಜರು, ತಮ್ಮ ಪ್ರವಚನಗಳಲ್ಲಿ, ಅನೇಕ ವರ್ಷಗಳಿಂದ ತಿಳಿಸುತ್ತಲೇ ಬಂದು, ನಾಸ್ಟ್ರಾಡಾಮಸ್‌ರ ಭವಿಷ್ಯವಾಣಿಯನ್ನು ಪ್ರಮಾಣಗೊಳಿಸಿದ್ದಾರೆ. ಆದ್ದರಿಂದ ಸಂತ ಗರೀಬ್‌ದಾಸ್ ರವರು ಹೇಳಿದ್ದಾರೆ. ಕಬೀರ್ ಪರಮೇಶ್ವರರ ಭಕ್ತಿ ಪೂರ್ಣ ಸಂತರಿಂದ ಉಪದೇಶ ಪಡೆದು ಅದರಂತೆ ಭಕ್ತಿಪಥದಲ್ಲಿ ಸಾಗು ಇಲ್ಲವಾದರೆ, ಈ ಅವಕಾಶ ಮತ್ತೆ ಸಿಗುವುದಿಲ್ಲ.

ಗರೀಬ್ ಸಮಝಾ ಹೈ ತೋ, ಸಿರ್ ಧರ್ ಪಾಂವ್ ।ಬಹುರ ನಹೀ ರೇ, ಐಸಾ ದಾವ್ ॥

ಭಾವಾರ್ಥ :– ನೀವು ತತ್ವಜ್ಞಾನವನ್ನು ತಿಳಿದಿದ್ದರೆ ತಲೆ ಮೇಲೆ ಕಾಲನ್ನಿರಿಸಿ, ಅರ್ಥಾತ್ ಅತಿಶೀಘ್ರವಾಗಿ ಸಂತ ರಾಮ್‌ಪಾಲ್ ಮಹಾರಾಜರಿಂದ ನಾಮೋಪದೇಶವನ್ನು ಪಡೆದು ನಿಮ್ಮ ಕಲ್ಯಾಣವನ್ನು (ಒಳಿತನ್ನು) ಮಾಡಿಕೊಳ್ಳಿರಿ. ಇಂತಹ ಸದಾವಕಾಶ ಮತ್ತೆ ದೊರೆಯುವುದಿಲ್ಲ. ಈಗ ಮಧ್ಯದ ಪೀಳಿಗೆಯವರ ಸಮಯ. ನಾವು ಮನುಷ್ಯ ಜನ್ಮ ಪಡೆದಿದ್ದೇವೆ. ಈಗಲೇ ಸಂತ ರಾಮ್‌ಪಾಲ್ ಮಹಾರಾಜರೂ ಪ್ರಕಟವಾಗಿದ್ದಾರೆ. ಒಂದು ವೇಳೆ ಈಗಲೂ ಭಕ್ತಿ ಮಾರ್ಗದಲ್ಲಿ ತೊಡಗಿಸಿಕೊಳ್ಳದಿದ್ದರೆ

ಅದರ ಬಗ್ಗೆ ಹೇಳಿದೆ.

ಯಹ್ ಸಂಸಾರ್ ಸಮಝುದಾ ನಾಹೀ, ಕಹಂದಾ ಶ್ಯಾಮ ದುಪಹರೆ ನೂಂ
ಗರೀಬ್ ದಾಸ್ ಯಹ್ ವಕ್ತ್ ಜಾತ ಹೈ, ರೋವೋಗೆ ಇಸ್ ಪಹರೆ ನೂಂ ॥

ಭಾವಾರ್ಥ :- ಸಂತ ಗರೀಬ್‌ದಾಸ್‌ರು ಹೇಳುತ್ತಿದ್ದಾರೆ. ಈ ಮುಗ್ಧ ಸಂಸಾರವು ಶಾಸ್ತ್ರ ವಿಧಿ ರಹಿತ ಸಾಧನೆ ಮಾಡುತ್ತಾ ಇದೆ. ಇದು ದುಃಖಪ್ರದವಾಗಿದೆ. ಇದನ್ನೇ ಸುಖಕರ ಎಂದು ಹೇಳುತ್ತಿದ್ದಾರೆ. ಹೇಗೆಂದರೆ ಜೂನ್ ತಿಂಗಳ ಮಧ್ಯಾಹ್ನ 12 ಘಂಟೆ ಬಿಸಿಲಿನಲ್ಲಿ ನಿಂತು, ನಿಂತು ಸುಡುತ್ತಿದ್ದಾರೆ. ಅದನ್ನೇ ಸಾಯಂಕಾಲ ಎನ್ನುತ್ತಿದ್ದಾರೆ. ಯಾರೋ ವ್ಯಕ್ತಿ ಸಾರಾಯಿ ಕುಡಿದು ರಸ್ತೆಯಲ್ಲಿ ಬಿದ್ದಿದ್ದಾನೆ. ಅವನೊಂದಿಗೆ ಯಾರೋ ಹೇಳಿದರು. "ನೀನೇಕೆ ಮಧ್ಯಾಹ್ನದ ಬಿಸಿಲಿನಲ್ಲಿ ಬಿಳುತ್ತಿರುವೆ, ನೆರಳಿಗೆ ಹೋಗು" ಎಂದರೆ ಅವನು ಸಾರಾಯಿಯ ನಶೆಯಲ್ಲಿ ಹೇಳುತ್ತಾನೆ ಸಂಜೆಯಲ್ಲಿ ಯಾರು ಹೇಳುತ್ತಿರುವುದು, ಇದು ಮಧ್ಯಾಹ್ನವೆಂದು ಇದೇ ರೀತಿ ಶಾಸ್ತ್ರ ರಹಿತ ಸಾಧನೆ ಮಾಡುವ ವ್ಯಕ್ತಿ, ಮನಬಂದಂತೆ ಆಚರಣೆ ಮಾಡುತ್ತಾ, ತನ್ನ ಜೀವನವನ್ನು ವ್ಯರ್ಥಮಾಡಿಕೊಳ್ಳುತ್ತಿದ್ದಾನೆ. ಅದನ್ನು ತ್ಯಜಿಸಲು ಬಯಸುವುದಿಲ್ಲ. ಬದಲಾಗಿ ಅದನ್ನೇ ಸರ್ವ ಶ್ರೇಷ್ಠ ಎಂದು ತಿಳಿದು ಕಾಲನ ಲೋಕದ ಬೆಂಕಿಯಲ್ಲಿ ಬೇಯುತ್ತಾ ಇದ್ದಾನೆ. ಸಂತ ಗರೀಬ್‌ದಾಸರು ಹೇಳುತ್ತಿದ್ದಾರೆ. ಇಷ್ಟೆಲ್ಲಾ ಪ್ರಮಾಣಗಳು ಸಿಕ್ಕಿದ ಮೇಲೂ ಸತ್ಯ ಸಾಧನೆಯನ್ನು (ಪೂರ್ಣ ಸಂತರು ತಿಳಿಸಿರುವ ರೀತಿಯಲ್ಲಿ) ಮಾಡದಿದ್ದರೆ, ಅಮೂಲ್ಯವಾದ ಮಾನವ ಶರೀರ, ಹಾಗೂ ಮಧ್ಯದ ಪೀಳಿಗೆಯ ಭಕ್ತಿಯುಗ ಕೈ ತಪ್ಪಿ ಹೋಗುತ್ತದೆ. ನಂತರ ಈ ಸಮಯವನ್ನು ನೆನೆದು ಅಳುವಿರಿ. ಬಹಳ ಪಶ್ಚಾತ್ತಾಪ ಪಡುವಿರಿ. ಇನ್ನೇನೂ ಆಗುವುದಿಲ್ಲ ಪರಮೇಶ್ವರ ಕಬೀರ ಮುಕ್ತಿದಾತರು ಹೇಳಿದ್ದಾರೆ.

ಆಚ್ಛೇ ದಿನ್ ಪಾಛೈ ಗಏ, ಸತ್‌ಗುರು ಸೆ ಕಿಯಾ ನಾ ಹೇತ ।
ಅಬ್ ಪಛತಾವಾ ಕ್ಯಾ ಕರೆ, ಜಬ್ ಚಿಡಿಯಾ ಚುಗ್ ಗಇ ಖೇತ್ ॥

ಸಕಲ ಮಾನವ ಸಮಾಜದಲ್ಲಿ ನನ್ನ ಪ್ರಾರ್ಥನೆ ಏನೆಂದರೆ ಪೂರ್ಣ ಸಂತ ರಾಮ್‌ಪಾಲ್ ಮಹಾರಾಜರನ್ನು ಗುರುತಿಸಿರಿ ಹಾಗೂ ನಿಮ್ಮ ಮತ್ತು ನಿಮ್ಮ ಪರಿವಾರದ ಕಲ್ಯಾಣ ಮಾಡಿಕೊಳ್ಳಿರಿ. ನಿಮ್ಮ ನೆಂಟರು ಹಾಗೂ ಮಿತ್ರರಿಗೂ ತಿಳಿಸಿರಿ ಹಾಗೂ ಪೂರ್ಣ ಮೋಕ್ಷವನ್ನು ಹೊಂದಿರಿ ಸುವರ್ಣ ಯುಗ ಆರಂಭವಾಗಿದೆ. ಲಕ್ಷಾಂತರ ಪುಣ್ಯಾತ್ಮಗಳು ಸಂತ ರಾಮ್‌ಪಾಲ್ ಮಹಾರಾಜರನ್ನು ಗುರುತಿಸಿ ಸತ್ಯ ಭಕ್ತಿ ಮಾರ್ಗದಲ್ಲಿ ತೊಡಗಿವೆ. ಅವರೆಲ್ಲಾ ಅತಿ ಸುಖಿಗಳಾಗಿದ್ದಾರೆ ಸಕಲ ವಿಕಾರಗಳನ್ನು ತ್ಯಜಿಸಿ ನಿರ್ಮಲವಾದ ಜೀವನ ನಡೆಸುತ್ತಿದ್ದಾರೆ.

ದಯವಿಟ್ಟು ಮುಂದಿನ ಪುಟದಲ್ಲಿ ನೋಡಿರಿ ಮಹಾರಾಷ್ಟ್ರದ ಜ್ಯೋತಿಷ್ಯ ಶಾಸ್ತ್ರಿಯ ಮರಾಠಿ ಭಾಷೆಯಲ್ಲಿ ನಾಸ್ಟ್ರಾಡಾಮಸ್‌ನ ಭವಿಷ್ಯವಾಣಿಯ ಪುಸ್ತಕಗಳು ಸಿಗುವ ವಿಳಾಸವನ್ನು ಮುದ್ರಿಸಲಾಗಿದೆ.

ಪ್ರಮಾಣಕ್ಕಾಗಿ ನೋಡಿರಿ ನಾಸ್ಟ್ರಾಡಮಸ್‌ರ ಫೋಟೋ ಪ್ರತಿಯನ್ನು.

ಪ್ರಥಮಕಾಲ ಮುಕ್ತಾಯವಾಗುತ್ತಿದ್ದಂತೆ, ವಿಶ್ವದಲ್ಲಿ ಯೋಗಮಾರ್ಗದಿಂದ ಸುತ್ತಾಡುತ್ತಾ ಭಾರತವನ್ನು ಶತೃತ್ವ ಭಾವದಿಂದ ಕಂಡು ಬಹಳ ತ್ರಸ್ತ ಗೊಳಿಸುವರು. ನೋಡಿರಿ, ಮೊದಲು ಮುಸ್ಲೀಂ ಸಮಾಜದ ರೂಪದಿಂದ ಶುಕ್ರ ಭಾರತ ಮೇಲೆ ಆಕ್ರಮಣ ಮಾಡಿ ಆ ಭೂಮಿಯನ್ನು ನಷ್ಟಗೊಳಿಸುವರು. ಅದಾದ ಮೇಲೆ ಭಾರತಕ್ಕೆ ನುಸುಳಿ ಆಡಳಿತದ (ರಾಜ್ಯ ನಡೆಸಲು) ಮೇಲೆ ಆಕ್ರಮಣ ಮಾಡಿ ತಮ್ಮ ವಶಕ್ಕೆ ಪಡೆಯುವರು, ಅಂಧಶ್ರದ್ಧೆಯ ಮತ್ತು ದುರ್ಬಲ ಭಾರತೀಯ ಜನತೆಯನ್ನು ಬಹಳ ಸತಾಯಿಸುವರು. ಅವರಿಗೆ ಮುಸ್ಲಿಂ ಧರ್ಮದ ದೀಕ್ಷೆ ನೀಡುವರು. ಆ ಕಾರಣದಿಂದ ಮಹಾನ್ ಭಾರತಮಾತೆ ಮುಸ್ಲಿಂರ ದಾಸಿಯಾಗುವಳು. ಭಾರತೀಯ ಪ್ರದೇಶಗಳು ಮತ್ತು ಸಮಾಜ ನಷ್ಟವಾಗುವುದು ಈ ಕೆಲಸ 1291 ರಿಂದ 1999 ವರೆಗೆ ನಡೆಯುವುದು.

ಇದೇ ಕಾಲದಲ್ಲಿ ಸಮ ಶತೃತ್ವ ಭಾವ ಧಾರಣೆಮಾಡಿ, ಪಶ್ಚಿಮ ಯೂರೋಪಿನ ಕ್ರಿಶ್ಚನರನ್ನು, ವ್ಯಾಪಾರಿ ಮತ್ತು ನಾವಿಕರನ್ನಾಗಿ ಮಾಡಿ ಭಾರತದ ಕಡೆಗೆ ಕಳುಹಿಸುವರು ಅವರು ಮೊದಲು ವ್ಯಾಪಾರಿಗಳಾಗಿ ಭಾರತವನ್ನು ಲೂಟಿ ಮಾಡುವರು ಅದಾದ ನಂತರ ಒಂದೊಂದೇ ಪ್ರದೇಶವನ್ನು ತಮ್ಮ ಹಿಡಿತಕ್ಕೆ ಪಡೆದುಕೊಂಡು, ಅಲ್ಲಿನ ಜನತೆಯನ್ನು ಕ್ರಿಶ್ಚಯರನ್ನಾಗಿ ಮಾಡಿ, ಅವರ ಮೇಲೆ ಶಾಸನ ಮಾಡುವರು, ಸಂಪೂರ್ಣ ಭಾರತವನ್ನು ತಮ್ಮ ವಶಕ್ಕೆ ಪಡೆಯುವರು. ಅದೇ ಸಮಯದಲ್ಲಿ, ಭಾರತದಲ್ಲಿನ ದುರ್ಬಲ ಗುಲಾಮ ಜನತೆ, ಮೋಕ್ಷ ಪ್ರಾಪ್ತಿಗಾಗಿ, ದೇವಾಲಯಗಳನ್ನು ನಿರ್ಮಾಣ ಮಾಡಿ, ಭಜನೆ-ಕೀರ್ತನೆ ಮಾಡತೊಡಗುವರು.

ಇದೇ ಕಾಲದಲ್ಲಿ ಮೋಸಗಾರ ಕ್ರಿಶ್ಚಯನ್ನರು ಭ್ರಷ್ಟಾಚಾರ ಗುರುವಿನ ರೂಪದಿಂದ ಬರುವರು. ಇಲ್ಲಿನ ಪ್ರಾಚೀನ ಜ್ಯೋತಿಷ್ಯಶಾಸ್ತ್ರಗಳು ಅಧ್ಯಯನ ಮಾಡಿ. "ಕಿರೋ"ನಂತಹ ಯುರೋಪಿನ ಪ್ರಸಿದ್ಧ ಜ್ಯೋತಿಷಿಗಳಾಗುವರು. ಆದರೆ ಭಾರತೀಯ ಕುರುಡ ಮತ್ತು ಸುಳ್ಳು ಜ್ಯೋತಿಷಿಗಳಿಗೆ ತಮ್ಮ ಜ್ಯೋತಿಷ್ಯ ಗ್ರಂಥದ ಅರ್ಥ ತಿಳಿಸುವುದಿಲ್ಲ. ಅವರು ಗುಲಾಮರಾಗುವರು ಆದರೆ, "ಕೀರೋ" ಸಮವಾಗಿ ಭಾರತೀಯ ಜ್ಯೋತಿಷ್ಯಶಾಸ್ತ್ರದ ಅಧ್ಯಯನ ಮಾಡಿ, ಮಹಾನ್ ವಿದ್ವತ್ ಪಡೆದ ಲೇಖಕರು ಬರೆದಿರುವ ಇಂಗ್ಲೀಷ್ ಪುಸ್ತಕದ ಆಧಾರದ ಮೇಲೆ, ಜ್ಯೋತಿಷ್ಯಶಾಸ್ತ್ರವನ್ನು ತಿಳಿಯಲಾಗುವುದಿಲ್ಲ. ಕಡೆಯಲ್ಲಿ ಅವರು ಶಾಪಕ್ಕೆ ಒಳಗಾಗುವರು. ಆ ಕಾರಣದಿಂದ ಅವರಲ್ಲಿ ಮೂರ್ಖತೆ ಮತ್ತು ಕ್ರೂರತೆ ಇರುವುದು.

ಅದರ ಕಾರಣದಿಂದ ಮಹಾಪರಿವರ್ತನ ಕಾಲದ ಆರಂಭವಾಗುವುದು ಆ ಕಾಲವು 1905 ರಿಂದ 2028ರವರೆಗೆ ಇರುವುದು. ಎಲ್ಲಕ್ಕೂ ಮೊದಲು ಭಾರತವು ಸ್ವತಂತ್ರ ಪಡೆಯಲು ಕಾಂಗ್ರೆಸ್ಸಿನ ಸ್ಥಾಪನೆಯಾಗುವುದು. ಭಾರತೀಯ ಜನತೆ ಕುಂಭಕರ್ಣನ ಮಹಾನಿದ್ರೆಯಿಂದ ಎಚ್ಚರಗೊಳ್ಳತೊಡಗುವರು. ಸುಳ್ಳು ಜ್ಯೋತಿಷ್ಯಶಾಸ್ತ್ರ ನಷ್ಟ ಮಾಡಿ ತಪ್ಪಿಲ್ಲದ ಭವಿಷ್ಯ ಜ್ಞಾನ ಕೊಡುವುದಕ್ಕಾಗಿ, ಮದ್ರಾಸಿನಲ್ಲಿ ಕೆ. ಎಸ್. ಕೃಷ್ಣಮೂರ್ತಿ ಯಜನ್ಮವಾಗಿ, ಅವರು ಭಾರತೀಯ ಜನತೆಗೆ, ಕೃಷ್ಣಮೂರ್ತಿ ಪದ್ಧತಿಯ ಜ್ಞಾನವನ್ನು ಕೊಡುವರು. 1998ರಲ್ಲಿ ಮಹಾರಾಷ್ಟ್ರದಲ್ಲಿ ಒಬ್ಬ ಜ್ಯೋತಿಷ್ಯಶಾಸ್ತ್ರಿಯು, ನಾಸ್ಟ್ರೆಡಮಸ್‌ರ ಭವಿಷ್ಯವಾಣಿಯಲ್ಲಿ ಅಂಕಿತವಾಗಿರುವ ಸಾಂಕೇತಿಕ ಭಾಷೆಯ ಸ್ಪಷ್ಟೀಕರಣ ಮಾಡುವರು. ಅದರಲ್ಲಿ ಬರೆದಿರುವ ಭವಿಷ್ಯದ ಘಟನೆಗಳ ಅರ್ಥವನ್ನು ಕೊಟ್ಟು, ತಮ್ಮ ಭವಿಷ್ಯಗ್ರಂಥವನ್ನು ಪ್ರಕಾಶಿಸುವರು. ಆ ಸಮಯದಲ್ಲಿ ಅವರು ಭಾರತದ ಅಜ್ಞಾತ ಜ್ಯೋತಿಷಿಗಳು ಬರೆದಿರುವ ಮಹಾನ್ ಭವಿಷ್ಯವಾಣಿಯಲ್ಲಿನ ಸಾಂಕೇತಿಕ ಅರ್ಥಗಳನ್ನು ಬಿಡಿಸಿ- ಅರ್ಥವನ್ನು ಸ್ಪಷ್ಟಪಡಿಸುವರು ಅವರು ಆ ಹಿಂದಿನ ಮಹಾನ್ ಜ್ಞಾನಿ ಜ್ಯೋತಿಗಳನ್ನು ಪ್ರಕಾಶಕ್ಕೆ ತರಲು ಬಿಡುವುದಿಲ್ಲ. ಆದರೆ ಅವರ ಮೇಲೆ ಸ್ವಾರ್ಥದ ಕತ್ತಲೆಯ ಸುಳ್ಳು, ಧರ್ಮ-ಜಾತಿಗಳ ಭೂತ ಸವಾರಿ ಮಾಡುವುದು ಈಗಲೂ ಅವರು ಮಾಯಾತಂತ್ರದ ಕಾರ್ಯದಲ್ಲಿ ಮಗ್ನರಾಗಿ, ಸತ್ಯದ, ಮಾನವತಾ ಧರ್ಮದ ಜ್ಯೋತಿಷ್ಯ ಜ್ಞಾನದ ಕೊಲೆ ಮಾಡುತ್ತಿರುವರು.




# नॉस्ट्राडेमस्

## यांचे जागतिक स्तरावरचे भविष्य

- डॉ. रामचंद्र ज. जोशी

२१ व्या शतकाकडे झेपावतांना
जगातील सर्वश्रेष्ठ भविष्यवेत्ता!
# मायकेल द नॉत्रदेम (नॉस्ट्राडेमस)
यांचे जागतिक स्तरावरचे भाविष्य

डॉ. रामचंद्र ज. जोशी.

ग्रंथ मिळण्याचे ठिकाण

| | |
|---|---|
| **जोशी ब्रदर्स**<br>अप्पा बळवंत चौक,<br>पुणे २.<br>फोनः ४४५९४२४ | **श्री गजानन बुक डेपो**<br>भरत नाट्य मंदिरासमोर,<br>पुणे ३०.<br>फोन : ४४७३३०४ |
| **श्री गजानन बुक डेपो**<br>कबुतरखाना, दादर,<br>मुंबई २८.<br>फोन: ४२२७५८४ | **श्री गजानन बुक डेपो**<br>बिल्डिंग नं. १३२, पहिला माळा,<br>पंतनगर, घाटकोपर, मुंबई ७५.<br>फोन: ५१३८००९ |

...(32)...

आफ्रिकेला वळसा घालण्याचा द्राविडी-प्राणायाम त्या सुवेज कालव्याच्या निर्मितीने कमी झाला हे खरेच, पण त्या कालव्याच्या निर्मितीची कल्पना नॉस्ट्राडेमसच्या विलक्षण भाकिताने फ्रेंच वास्तुशास्त्रविशारद लेसेप्स याला सुचलेली आहे ही वस्तुस्थिती आहे.

पाहिल्या प्रकरणातच स्पष्ट केले आहे की, १९९९ साली छेडल्या जाणाऱ्या तिसऱ्या जागतिक महायुध्दात, आज वरवर पाहता परस्पर विरोधी राष्ट्रे मित्र बनून, अमेरिका व रशिया यांचे एकत्रित बळ प्रचंड असेल. नॉस्ट्राडेमसच्या मृत्यूनंतर २०९ वर्षांनी जन्माला आलेली अमेरिका आपल्या सामर्थ्याच्या शिखरावर असेल असे, शतक २, श्लोक ४९ मध्ये हा द्रष्टा ज्योतिर्विद सांगतो हे सत्य किती चित्तथरारक आहे?

## 'भारत' सर्वश्रेष्ठ हिंदु राष्ट्र?

या पूर्वीच्या लेखात कै. इंदिरा गांधींचा नॉस्ट्राडेमसने केलेला उल्लेख आपण वाचला. त्या संदर्भात हेन्री सी रॉबर्टस 'कंप्लीट प्रोफेसीज ऑफ नॉस्ट्राडेमस' या १९४२ साली प्रसिध्द झालेल्या आपल्या पुस्तकात लिहितो- 'डॉमिनन्ट प्रिमियर' (म्हणजेच प्रभावी पंतप्रधान) इंदिराजी गांधी यांच्या आकस्मिक खुनानंतर दोन बदल होतील. त्यातील क्रमांक पहिल्या बदलाप्रमाणे त्यांचे पुत्र राजीव गांधी जरी पंतप्रधान झाले असले तरी दुसरा जो बदल होणार आहे तो म्हणजे एक मध्यम वयाचा नेता पाकिस्तान, ब्रह्मदेश, बांगला देश, श्रीलंका, नेपाळ, तिबेट, अफगाणिस्तान, मलाया आदी देश जिंकून हिंदुस्थानाला जगातील सर्वश्रेष्ठ हिंदुराष्ट्र म्हणून निर्माण करणार आहे. तो सार्वभौम असेल. औदार्यात अजोड व आपल्या सनातन धर्माला पुनरुज्जीवन देईल आणि भारत खंडातच नव्हे तर साऱ्या पृथ्वीवर सुवर्णयुग आणील. (सेंच्युरी शतक ५, श्लोक ४१ वा). या श्लोकाबद्दल सर्वच भाष्यकारांत एकमत आहे. वरील दोन बदलांच्या दरम्यानच्या काळात सत्ताधारी मंडळीत वावरणारी चांडाळ चौकडी सत्ताकेंद्र आपल्या ताब्यात ठेवून बराच काळ मनमानी करील. वर उल्लेख केलेला नेता फक्त जगाला अद्याप माहीत व्हायचा आहे!

...(33)...

: ४ :

# थांबा, इ. स. २००६ मध्ये

# रामराज्य येतेय!

## हिंदु जगज्जेता भूतलावर सुवर्ण-युग आणणार आहे!

### ज्योतिष हे हि एक शास्त्र आहे

'शितावरून भाताची परीक्षा' या वाकप्रचारानुसार नॉस्ट्राडेमस यांनी वर्तविलेल्या अनेक भाकितांचे खरेपण आपण गेल्या प्रकरणात पाहिले. नॉस्ट्राडेमस यांना हे सर्व ज्ञान आगामी पिढीला देणे आवश्यक वाटले; व त्याने 'सेंच्युरीं' मंध्ये दहा शतके (१००० श्लोक) लिहिलीं व १५५५ साली तें पुस्तक प्रसिध्द झाले. या पुस्तकातील श्लोकांची वर्गवारी केली तर असे आढळते की पहिले सुमारे १०० श्लोक फ्रान्स व युरोपसाठी, म्हणजे नॉस्ट्राडेमसच्या काळातील घटनांबद्दल केलेल्या भाकितांवरच खर्च झाले आहेत. त्यानंतर ३५० - ४०० श्लोक १९ - २० व्या शतकातील घटनांच्या भाकितांचा ऊहापोह करण्यात लागले असून उरलेल्या ४५० - ५०० श्लोकांत २१ व्या शतकापासून इ. स. ३७९२ पर्यंतच्या कालखंडात होऊ घातलेल्या भाकितांचे विवरण आलेले आहे.

-ज्योतिष शास्त्र हे असे चमत्कारिक शास्त्र आहे की सर्वसामान्य माणसांपासून अधिकारी वर्ग, देशा-राष्ट्रांचे शास्ते, धनाढ्य, श्रीमंत, राजेरजवाड्यापर्यंत सर्वांनाच त्याचे आकर्षण आहे. उघडरीत्या त्या शास्त्राचा निषेध, परंतु खाजगीरीत्या त्याची चाचपणीच केवळ नव्हे तर आवर्जून त्या शास्त्राच्या पारंगत ज्योतिर्विदाची मनधरणी करण्याची प्रथा सर्वकाली व सर्व देशांतून रूढ असल्याचे दिसते. ज्योतिष हे शास्त्र आहे, त्याचे आकाशस्थ ग्रहांच्या गतीनुसार ठरलेले आडाखे आहेत. इथून तिथून निसर्ग हा सारखाच असल्याने त्या त्या काळच्या ग्रहस्थितीनुसार व्यक्ति, समाज, देश नि त्यांचे धर्म, संस्कृती यावर परिणाम घडत असतात. ज्योतिषी फक्त त्याने केलेल्या शास्त्राभ्यासाच्या आधाराने मिळविलेल्या ज्ञानाने जे परिणाम घडायचे असतात त्याची आगाऊ माहिती सांगतो, त्याचे आनंददायी, सुखसंवर्धक बदल स्पष्ट करतो. ते बदल केव्हा कसे होतील त्याबद्दल भाकित वर्तवतो. त्याचप्रमाणे दुःख वर्धक उलथापालथी काय होतील त्याचीही नोंद करीत असतो. जे घडायचे असते ते ज्योतिषाला टाळता येत नाही - किंवा तो ते घडवीतही नाही. म्हणून नॉस्ट्राडेमससारखे जगप्रसिध्द ज्योतिर्विद आत्मविश्वासाने म्हणतात की, 'मी लिहिले, सांगितले - त्यात काहीही बदल करण्याची माझी इच्छा नाही.'




**ಮೇಲೆ ಬೇರು ಕೆಳಗೆ ಶಾಖೆಯುಳ್ಳ ಹಿಮ್ಮುಖವಾಗಿ ತೂಗಾಡುತ್ತಿರುವ ಸಂಸಾರ (ಜಗತ್ತು) ರೂಪಿ ಮರದ ಚಿತ್ರ**

ಚಿನ್ನದ್ದು, ಸ್ವರ್ಣಧಾತು ವಾಸ್ತವದಲ್ಲಿ ಅವಿನಾಶಿ ನಾಶವಾಗುವುದಿಲ್ಲ.

ಹೇಗೆಂದರೆ ಪರಬ್ರಹ್ಮನನ್ನು (ಅಕ್ಷರ ಪುರುಷನನ್ನು) ಅವಿನಾಶಿ ಎಂದು ಹೇಳಲಾಗಿದೆ. ಹಾಗೂ ವಾಸ್ತವದಲ್ಲಿ ಅವಿನಾಶಿ ಈ ಎರಡಕ್ಕಿಂತ ಬೇರೆಯವನೇ ಇದ್ದಾನೆ. ಆದ್ದರಿಂದ ಅಕ್ಷರ ಪುರುಷನನ್ನು ಅವಿನಾಶಿ ಎಂದು ಹೇಳಲಾಗಿಲ್ಲ. ಕಾರಣವೇನೆಂದರೆ, 7 ಜನ ರಜಗುಣ ಬ್ರಹ್ಮಾನ ಮೃತ್ಯುವಿನ ನಂತರ, ಒಬ್ಬ ಸತೋಗುಣ ವಿಷ್ಣುನ ಮೃತ್ಯು,7 ಜನ ವಿಷ್ಣುವಿನ ಮೃತ್ಯು ಆದ ನಂತರ 1 ತಮೋಗುಣ ಶಿವನ ಮೃತ್ಯುವಾಗುತ್ತದೆ. ಯಾವಾಗ ತಮೊಗುಣ ಶಿವನ 70 ಸಾವಿರ ಬಾರಿ ಮೃತ್ಯುವಾಗುತ್ತದೋ, ಆಗ ಒಬ್ಬ ಕ್ಷರ ಪುರುಷನ (ಬ್ರಹ್ಮನ) ಮೃತ್ಯುವಾಗುತ್ತದೆ. ಇದು ಪರಬ್ರಹ್ಮನ (ಅಕ್ಷರ ಪುರುಷ) ಒಂದು ಯುಗ. ಇಂತಹ ಒಂದು ಸಾವಿರ ಯುಗದ ಪರಬ್ರಹ್ಮನ ಒಂದು ದಿನ ಹಾಗೂ ಅಷ್ಟೇ ರಾತ್ರಿಯಾಗುತ್ತದೆ. 30 ದಿನಗಳ ರಾತ್ರಿಯ ಒಂದು ತಿಂಗಳು, 12 ತಿಂಗಳುಗಳ ಒಂದು ವರ್ಷ ಹಾಗೂ 100 ವರ್ಷಗಳು, ಪರಬ್ರಹ್ಮನ (ಅಕ್ಷರ ಪುರುಷ) ಆಯಸ್ಸು ಇರುತ್ತದೆ. ಆಗ ಈ ಪರಬ್ರಹ್ಮ ಹಾಗೂ ಸರ್ವ ಬ್ರಹ್ಮಾಂಡಗಳು, ಯಾವುದು ಸತ್ಯಲೋಕದ ಕೆಳಗೆ ಇವೆಯೋ, ಅವು ನಷ್ಟವಾಗುತ್ತವೆ. ಕೆಲ ಸಮಯದ ನಂತರ, ಕೆಳಗಿನ ಎಲ್ಲ ಬ್ರಹ್ಮಾಂಡಗಳ (ಬ್ರಹ್ಮ ಹಾಗೂ ಪರಬ್ರಹ್ಮ ಲೋಕಗಳ) ರಚನೆಯನ್ನು ಪೂರ್ಣ ಬ್ರಹ್ಮ ಅಂದರೆ ಪರಮ ಅಕ್ಷರ ಪುರುಷನು ಮಾಡುತ್ತಾನೆ. ಈ ರೀತಿ ಈ ತತ್ವಜ್ಞಾನವನ್ನು ತಿಳಿಯಬೇಕಾಗಿದೆ.

ಆದರೆ, ಪರಮ ಅಕ್ಷರ ಪುರುಷ ಅಂದರೆ ಪೂರ್ಣ ಬ್ರಹ್ಮ (ಸತ್ಯಪುರುಷ) ಹಾಗೂ ಅವನ ಸತ್ಯಲೋಕ (ಖುತ್‌ಧಾಮ) ಸಹಿತ, ಮೇಲಿನ ಅಲಖ್‌ಲೋಕ, ಅಗಮಲೋಕ ಹಾಗೂ ಅನಾಮಿಲೋಕ ಯಾವಾಗಲೂ ನಷ್ಟವಾಗುವುದಿಲ್ಲ. (ಅವಿನಾಶಿ) ಆದ್ದರಿಂದ ಗೀತೆಯ 15ನೇ ಅಧ್ಯಾಯದ, 17ನೇ ಶ್ಲೋಕದಲ್ಲಿ ಹೇಳಿರುವಂತೆ, ವಾಸ್ತವವಾಗಿ ಉತ್ತಮ ಪ್ರಭುವು ಅಂದರೆ ಪುರುಷೋತ್ತಮನಾದವನು, ಬ್ರಹ್ಮ (ಕ್ಷರ ಪುರುಷ) ಹಾಗೂ ಪರಬ್ರಹ್ಮ (ಅಕ್ಷರಪುರುಷ) ನಿಗಿಂತ ಬೇರೆಯವರೇ ಆಗಿದ್ದಾರೆ, ಅವನೇ ಪೂರ್ಣ ಬ್ರಹ್ಮ, (ಪರಮ ಅಕ್ಷರ ಪುರುಷ) ಅವನೇ ವಾಸ್ತವದಲ್ಲಿ ಅವಿನಾಶಿ ಅವನೇ ಎಲ್ಲರನ್ನು ರಕ್ಷಿಸುವ ಸಂಸಾರವೆಂಬ ವೃಕ್ಷದ ಮೂಲ ರೂಪವಾದ ಪೂರ್ಣ ಪರಮಾತ್ಮ ವೃಕ್ಷದ ಯಾವ ಭಾಗವೂ ಭೂಮಿಯ ಮೇಲೆ ಕಾಣುತ್ತದೋ, ಅದುವೇ ಕಾಂಡ. ಅದನ್ನು ಅಕ್ಷರ ಪುರುಷ (ಪರಬ್ರಹ್ಮ) ಎಂದು ತಿಳಿಯಿರಿ. ಕಾಂಡಕ್ಕೂ ಸಹ ಆಹಾರವು ಬೇರಿನಿಂದಲೇ ದೊರೆಯುತ್ತದೆ. ಪುನಃ ಕಾಂಡದಿಂದ ಅನೇಕ ಕೊಂಬೆಗಳು ಹೊರಡುತ್ತದೆ. ಅವುಗಳಲ್ಲಿ ಒಂದು ಕೊಂಬೆ ಬ್ರಹ್ಮ (ಕ್ಷರ ಪುರುಷ) ನಾಗಿದ್ದಾನೆ. ಇದಕ್ಕೂ (ಕೊಂಬೆ) ಆಹಾರ ಬೇರಿನಿಂದಲೇ ಅಂದರೆ ಪರಮ ಅಕ್ಷರ ಪುರುಷನಿಂದಲೇ ಪ್ರಾಪ್ತವಾಗುತ್ತದೆ. ಆ ಕೊಂಬೆ (ಕ್ಷರ ಪುರುಷ / ಬ್ರಹ್ಮ) ಅಂದರೆ ಮೂರು ಗುಣ (ರಜೋಗುಣ–ಬ್ರಹ್ಮಾ–ಸತೋಗುಣ–ವಿಷ್ಣು, ಹಾಗೂ ತಮೋಗುಣ–ಶಿವ) ರೂಪದ ಮೂರು ಕೊಂಬೆಗಳು ಇವೆ. ಇವುಗಳಿಗೂ ಆಹಾರ (ಪರಮ ಅಕ್ಷರ ಪುರುಷ ಅರ್ಥಾತ್ ಪೂರ್ಣ ಬ್ರಹ್ಮ) ಮೂಲದಿಂದಲೇ ದೊರೆಯುತ್ತದೆ. ಈ ಮೂರು ಕೊಂಬೆಗಳಿಂದ 'ಎಲೆ' ರೂಪದಲ್ಲಿ ಅನ್ಯಪ್ರಾಣಿಗಳು ಆಶ್ರಯವನ್ನು ಪಡೆದಿವೆ. ಅವುಗಳಿಗೂ ಕೂಡ ಆಹಾರ ಮೂಲದಿಂದಲೇ ದೊರೆಯುತ್ತದೆ. ಆದ್ದರಿಂದ ಸರ್ವರಿಗೂ ಪೂಜ್ಯ. "ಪೂರ್ಣ ಪರಮಾತ್ಮನೇ" ಎಂದು ಸಿದ್ಧವಾಯಿತು.. ಏನೆಂದರೆ, ಎಲೆಗಳವರೆಗೆ ಆಹಾರವನ್ನು ತಲುಪಿಸುವಲ್ಲಿ, ಕಾಂಡಕೊಂಬೆಗಳು ಹಾಗೂ ಗರಿ (ಚಿಕ್ಕಕೊಂಬೆ)ಗಳ ಸಹಕಾರವಿಲ್ಲವೆಂದು ಹೇಳಲಾಗುವುದಿಲ್ಲ ಆದ್ದರಿಂದಲೇ ಎಲ್ಲವೂ ಗೌರವಾನ್ವಿತವಾಗಿವೆ. ಆದರೆ ಪೂಜ್ಯನೀಯವಂತೂ ಬೇರೆಯೇ ಆಗಿರುತ್ತದೆ. ಸತ್ಕಾರ ಹಾಗೂ ಪೂಜೆಯಲ್ಲಿ ಅಂತರವಿರುತ್ತದೆ. ಹೇಗೆಂದರೆ ಪತಿವ್ರತಾ 'ಸ್ತ್ರೀ'ಯು ಭಾವನವರನ್ನು ಅಣ್ಣನಂತೆ, ಮೈದುನನನ್ನು ತಮ್ಮನಂತೆ, ಆದರೆ ಪೂಜೆಯನ್ನು ತನ್ನ ಗಂಡನಿಗೇ ಮಾಡುತ್ತಾಳೆ, ಅರ್ಥಾತ್

ಯಾವ ಭಾವ ತನ್ನ ಪತಿಯಲ್ಲಿರುತ್ತದೋ, ಆ ಭಾವ ಅನ್ಯರಲ್ಲಿ ಇರುವುದಿಲ್ಲ. ಎರಡನೆಯ ಉದಾಹರಣೆ : ಒಮ್ಮೆ ಹರಿಯಾಣ ಪ್ರಾಂತದಲ್ಲಿ ಪ್ರವಾಹ ಬಂದಿತ್ತು. ಆ ಸಮಯದಲ್ಲಿ 600 ಕೋಟಿಗಳಷ್ಟು ಹಾನಿಯಾಗಿತ್ತು. ಅದನ್ನು ಹರಿಯಾಣ ಸರ್ಕಾರ ಪೂರ್ತಿ ಮಾಡಲು ಆಗುತ್ತಿರಲಿಲ್ಲ. ಏಕೆಂದರೆ ಹರಿಯಾಣ ಸರ್ಕಾರದ ವಾರ್ಷಿಕ ಬಜೆಟ್ 900 ಕೋಟಿ ರೂಗಳು. ಆಗಿತ್ತು. ದೇಶದ ಪ್ರಧಾನ ಮಂತ್ರಿಗಳು ಆಗ ಈ ಕೊರತೆ ತುಂಬಿದ್ದರು. ಆ 600 ಕೋಟಿ ರೂ. ಗಳ ವಿತರಣೆಯನ್ನು, ಸರಕಾರದ ಅಧಿಕಾರಿಗಳು ಹಾಗೂ ಕರ್ಮಚಾರಿಗಳು ಮಾಡಿದ್ದರು. ಪರಿಹಾರ ಪಡೆದಾತರು ಜ್ಞಾನವಿಲ್ಲದವರು. ಅವರು ವಿತರಣೆ ಮಾಡಿದವರನ್ನೇ ಪರಿಹಾರ ನೀಡಿದಾತ ಎಂದು ತಿಳಿಯುತ್ತಾರೆ. ಅವರಿಂದಲೇ ಮುಂದೆಯೂ ಸಹ, ಬೇರೆ ಪರಿಹಾರ ಪಡೆವ ಆಸೆ ಮಾಡುತ್ತಲಿರುತ್ತಾರೆ. ಅವರನ್ನೇ ಪೂಜಿಸುತ್ತಾರೆ. (ಲಂಚ ಮೊದಲಾದವನ್ನು ಪಡೆವ) ಆದರೆ ಯಾರು ಶಿಕ್ಷಿತರೋ, ಅವರು ತಿಳಿದಿರುತ್ತಾರೆ. ಈ ಕರ್ಮಚಾರಿಯ ಪಾತ್ರ ಎಷ್ಟು ಎಂಬುದನ್ನು, ಅವರು ಅವನನ್ನು ಆದರಿಸುತ್ತಾರೆ. ಆದರೆ ಪೂಜಿಸುವುದಿಲ್ಲ. ಬೇರೆ ಕಾರ್ಯಸಿದ್ಧಿಯ ಆಸೆಯನ್ನು ಅವರಿಂದ ಬಯಸುವುದಿಲ್ಲ.

ಪ್ರವಾಹ ಪರಿಹಾರ ಹಣವನ್ನು ವಿತರಣೆ ಮಾಡಿದ ನಂತರ, ಅದೇ ಕ್ಷೇತ್ರದ ಮಂತ್ರಿ ಅಲ್ಲಿಗೆ ಬಂದಿದ್ದರು. ಅವರು ಹೇಳಿದರು "ನಾನೇ ನಿಮ್ಮ ಕ್ಷೇತ್ರಕ್ಕೆ 10 ಲಕ್ಷ ರೂಪಾಯಿಗಳನ್ನು ಕೊಟ್ಟಿರುವೆ" ಅದೇ ಹಳ್ಳಿಯ ಪಟ್ಟಿಯಿಂದ ಹೆಸರನ್ನು ಓದಿ ಹೇಳಿದರು.

1. ರಾಮ ಅವತಾರನಿಗೆ 10 ಸಾವಿರ ರೂಪಾಯಿ.. ಮುಂತಾಗಿ ಕೊಟ್ಟಿರುವ ನಂತರ ಆ ಪ್ರಾಂತದ ಮುಖ್ಯಮಂತ್ರಿ ಅಲ್ಲಿಗೆ ಬಂದಿದ್ದರು. ಅವರು ಸಹ ಅದೇ ಪಟ್ಟಿಯನ್ನೇ ಓದಿ ಹೇಳಿದರು. ಏನೆಂದರೆ, " ನಾನು ಈ ಹಳ್ಳಿಗೆ 10 ಲಕ್ಷ ರೂಪಾಯಿಗಳನ್ನು ಕೊಟ್ಟಿರುವೆ',

1. ರಾಮ ಅವತಾರನಿಗೆ 10 ಸಾವಿರ ರೂಪಾಯಿಗಳು ಮುಂತಾಗಿ ಕೊಟ್ಟಿರುವೆ, ನಂತರ ಹಳ್ಳಿಗೆ ಪ್ರಧಾನ ಮಂತ್ರಿ ಬಂದಿದ್ದರು. ಅವರೂ ಸಹ ಹೇಳಿದರು. "ನಾನು ಈ ಹಳ್ಳಿಗೆ 10 ಲಕ್ಷ ರೂಪಾಯಿಗಳನ್ನು ಕೊಟ್ಟಿರುವೆ," 1. ರಾಮ ಅವತಾರನಿಗೆ ಹತ್ತು ಸಾವಿರ ರೂಪಾಯಿ, ಮುಂತಾಗಿ ಕೊಟ್ಟಿರುವೆ. ಆ ಸೂಚಿಯಲ್ಲಿ ಇದ್ದಂತೆ ಓದಿ ಹೇಳಿದರು. ಆದರೆ ರಾಮ ಅವತಾರ ಹೇಳುತ್ತಿದ್ದಾನೆ ಇವರೆಲ್ಲ ಸುಳ್ಳು ಹೇಳುತ್ತಿದ್ದಾರೆ. ನನಗೆ ರೂಪಾಯಿ ಕೊಟ್ಟವನು ಪಟವಾರಿ. ರಾಮ ಅವತಾರನು ಅಜ್ಞಾನ ವಶವಾಗಿ ಹಳ್ಳಿಯ ಪಟವಾರಿವನ್ನೇ ಪೂಜಿಸಿ, ತನ್ನ ಬೇರೆ ಎಲ್ಲ ಕೆಲಸಗಳಲ್ಲಿ ಸಿದ್ಧಿಯನ್ನು ಬಯಸುತ್ತಾನೆ. ಯಾರು ಜ್ಞಾನಿಗಳೋ, ಅವರಿಗೆ ತಿಳಿದಿದೆ. ಏನೆಂದರೆ ಪ್ರಧಾನ ಮಂತ್ರಿಗಳು ಪರಿಹಾರ ಧನವನ್ನು ಕೊಡದೆ ಇದ್ದಿದ್ದರೆ, ಮುಖ್ಯಮಂತ್ರಿ, ಮಂತ್ರಿ ಹಾಗೂ ಪಟವಾರಿ ಏನನ್ನೂ ಕೊಡಲು ಸಾಧ್ಯವಾಗುತ್ತಿರಲಿಲ್ಲವೆಂದು. ಒಂದು ವೇಳೆ ಮುಖ್ಯಮಂತ್ರಿಗಳು, ತಮ್ಮ ಪರಿಹಾರ ನಿಧಿಯಿಂದ, ಪರಿಹಾರವಿತರಿಸಿದ್ದರೆ 100 ರೂಪಾಯಿಗಳನ್ನು ಬಹಳ ಕಷ್ಟದಿಂದ ಸಂತ್ರಸ್ತರಿಗೆ ಹಂಚಲು ಬರುತ್ತಿತ್ತು. ಅದು ಹೆಸರಿಗಷ್ಟೆ ಆಗುತ್ತಿತ್ತು. ಇದರಿಂದ ತಿಳುವಳಿಕೆಯುಳ್ಳವನು (ಜ್ಞಾನಿ) ಅರಿಯುತ್ತಾನೆ. ಯಾರಿಗೆ, ಎಷ್ಟು ಕ್ಷಮತೆ (ಯೋಗ್ಯತೆ) ಇದೆಯೆಂಬುದನ್ನು, ಅದೇ ಆಧಾರದಲ್ಲಿ ಅವರಲ್ಲಿ ನಂಬಿಕೆಯಿರುತ್ತದೆ. ಅಗೌರವಾನ್ವಿತರು ಯಾರೂ ಇರುವುದಿಲ್ಲ. ಆದರೆ ಪೂಜೆಮಾಡಲು, ಯೋಚಿಸಿ, ತಿಳಿದು, ಆರಿಸಿ ಮಾಡುತ್ತಾರೆ. ಸರಿಯಾಗಿ ಇದೇ ರೀತಿಯಲ್ಲಿ ಗೀತೆಯ 2ನೇ ಅಧ್ಯಾಯದ 46ನೇ ಶ್ಲೋಕದಲ್ಲಿ ಹೇಳಿದೆ.

ಏನೆಂದರೆ "ಅರ್ಜುನ ಬಹಳ ದೊಡ್ಡ ಜಲಾಶಯವು (ಅದರ ನೀರು ಹತ್ತು ವರ್ಷ ಮಳೆಯಾಗದಿದ್ದರೂ ಬತ್ತುವುದಿಲ್ಲ) ದೊರೆತ ನಂತರ, ಚಿಕ್ಕ ಜಲಾಶಯ (ಇದರ ನೀರು ಒಂದು ವರ್ಷ ಮಳೆಯಾಗದಿದ್ದರೆ, ಬತ್ತಿ ಹೋಗುತ್ತದೆ) ದಲ್ಲಿ ಹೇಗೆ ನಂಬಿಕೆಯಿರುತ್ತದೋ, ಅದೇ ರೀತಿ ಪೂರ್ಣ ಪರಮಾತ್ಮನನ್ನು ಸೇರುವವರು, ಲಾಭದ ಜ್ಞಾನದಿಂದ ಪರಿಚಿತರಾದ ನಂತರ, ನಿನ್ನ

ನಂಬಿಕೆಯು, ಬೇರೇ ಪ್ರಭುವಿನಲ್ಲಿ, ಹಾಗೇಯೇ ಇರುವುದು, ಆ ಚಿಕ್ಕ ಜಲಾಶಯ ಕೆಟ್ಟದೆನಿಸುವುದಿಲ್ಲ. ಆದರೆ ಅದರ ಯೋಗ್ಯತೆಯು ಎಷ್ಟೆಂಬ ಅರಿವಿದೆ. ಇದಂತೂ ಸದ್ಯಕ್ಕೆ ಕೆಲಸ ಮಾಡುವುದು.

ಗೀತೆಯ 7ನೇ ಅಧ್ಯಾಯದ 12 ರಿಂದ 15ನೇ ಶ್ಲೋಕಗಳಲ್ಲಿ ಹೇಳಿದೆ– ಮೂರು ಗುಣಗಳಿಂದ ಏನೆಲ್ಲಾ ಆಗುತ್ತಿದೆಯೋ (ಹೇಗೆ, ರಜೋಗುಣ–ಬ್ರಹ್ಮಾ ನಿಂದ ಜೀವಿಗಳ ಉತ್ಪತ್ತಿ, ಸತೋಗುಣ–ವಿಷ್ಣುವಿನಿಂದ ಸ್ಥಿತಿ ಹಾಗೂ ತಮೋಗುಣ–ಶಿವನಿಂದ ಸಂಹಾರ) ಇವುಗಳಿಗೆಲ್ಲಾ ಮುಖ್ಯ ಕಾರಣ ನಾನೇ ಆಗಿರುವೆ. (ಕಾಲ ಬ್ರಹ್ಮ) ಯಾವ ಸಾಧಕರು ಮೂರು ಗುಣಗಳ ಪೂಜೆ (ರಜೋಗುಣ–ಬ್ರಹ್ಮಾ, ಸತೋಗುಣ– ವಿಷ್ಣು, ತಮೋಗುಣ–ಶಿವ) ಮಾಡುತ್ತಾರೆ, ಅವರು ರಾಕ್ಷಸ ಸ್ವಭಾವವನ್ನು ಧಾರಣೆಮಾಡಿದವರಾಗಿ, ಮನುಷ್ಯರಲ್ಲಿ ನೀಚ ದುಷ್ಕರ್ಮ ಮಾಡುವವರಾದ ಮೂರ್ಖರು, ನನ್ನಲ್ಲಿ ಭಕ್ತಿ ಇಟ್ಟಿರುವುದಿಲ್ಲ ನನ್ನ ಭಕ್ತಿಯು ಸಹ ಬಹಳ ಕೀಳಾದ್ದು (ಅನುತ್ತಮ) ಎಂದು ಹೇಳಿದ್ದಾನೆ. (ಗೀತೆಯ 7ನೇ ಅಧ್ಯಾಯದ ಶ್ಲೋಕ 18ರಲ್ಲಿ) ಆದ್ದರಿಂದ ಗೀತೆಯ 15ನೇ ಅಧ್ಯಾಯದ ಶ್ಲೋಕ 4 ಹಾಗೂ ಅಧ್ಯಾಯ, 18ರ ಶ್ಲೋಕ 62ರಲ್ಲಿ ಹೇಳಿದೆ– ಪೂರ್ಣ ಪರಮಾತ್ಮನ ಭಕ್ತಿ ಮಾಡುವುದರಿಂದಲೇ, ಪೂರ್ಣ ಮೋಕ್ಷ ಪ್ರಾಪ್ತವಾಗುತ್ತದೆ ಅದು ಶಾಸ್ತ್ರವಿಧಿಗೆ ಅನುಸಾರವಾದ ಭಕ್ತಿ, ಅನ್ಯ ಪ್ರಭುಗಳ ಭಕ್ತಿ ಇಷ್ಟ ರೂಪದ ಸಾಧನೆಗಾಗಿ ಮಾಡುವ ಭಕ್ತಿ ಅದು ಶಾಸ್ತ್ರ ವಿರುದ್ಧವಾದ್ದರಿಂದ ವ್ಯರ್ಥ, (ಪ್ರಮಾಣ ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳಲ್ಲಿದೆ.)

ಹೇಗೆ ನರ್ಸರಿಯಿಂದ ಮಾವಿನ ಸಸಿಯನ್ನು ತಂದು, ಭೂಮಿಯೊಳಗೆ ಗುಂಡಿ ತೆಗೆದು, ನೆಡುವರೋ ಹಾಗೆ, ನಂತರ ಬೇರಿಗೆ ನೀರು ಹಾಕುವರು. ಆ ಸಸಿ ಬೆಳೆದು ಗಿಡವಾಗುವುದು. ದೊಡ್ಡದಾಗಿ ಮರವಾಗುವುದು. ನಂತರ ಕೊಂಬೆಗಳಲ್ಲಿ ಹಣ್ಣು ಬಿಡುವುದು. ಒಂದು ವೇಳೆ ಕೊಂಬೆಯ (ಮೇಲಿನ ಭಾಗ) ಭಾಗವನ್ನು ಭೂಮಿಯಲ್ಲಿ ನೆಟ್ಟು ಬೇರು ಮೇಲೆ ಮಾಡಿ, ನೀರು ಹಾಕಿದರೆ ಗಿಡ ಒಣಗಿ ಹೋಗುವುದು. (ಇದೇ ಪುಸ್ತಕದಲ್ಲಿರುವ ಸೀದಾ ಇರುವ, ಉಲ್ಟಾ ಇರುವ ವೃಕ್ಷಗಳ ಚಿತ್ರಗಳನ್ನು ದಯವಿಟ್ಟು ಇದೆ ಪುಸ್ತಕದಲ್ಲಿ ಪುಟ ಸಂಖ್ಯೆ 231 ಮತ್ತು 232 ರಲ್ಲಿ ನೋಡಿರಿ)

ಭಾವಾರ್ಥ ಹೀಗಿವೆ ಸಾಧಕನು ಪೂರ್ಣ ಪರಮಾತ್ಮನ (ಮೂಲ) ಸಾಧನೆ (ಪೂಜೆ) ಯನ್ನು ಇಷ್ಟರೂಪದಲ್ಲಿ ಮಾಡಿದರೆ, ಅದರ ಫಲವು ಮೂರು ಜನ ಬ್ರಹ್ಮಾ–ವಿಷ್ಣು–ಶಿವರು ಪ್ರಧಾನ ಮಾಡುವರು. ಏಕೆಂದರೆ ಭಗವಂತನಲ್ಲಿ ಭಕ್ತಿಯ ಫಲವನ್ನು ಬೇಡುವವರು, ಹೇಗೆ ಭಕ್ತಿ ಮಾಡುವವರೋ ಹಾಗೇ ಫಲವನ್ನು ಪಡೆಯುತ್ತಾರೆ.

ಉದಾಹರಣೆಗೆ, ನಿಮಗೆ ಯಾವುದೋ ಒಂದು ಕಂಪನಿಯಲ್ಲಿ ನೌಕರಿ ಪಡೆಯಬೇಕಿದೆ. ಎಂದರೆ ಕಂಪನಿಯ ಮಾಲಿಕನ ಮನಕ್ಕೆ ಒಪ್ಪುವಂತೆ (ಪೂಜೆ) ವಿನಂತಿಸಬೇಕು. ಪ್ರಾರ್ಥನಾ ಪತ್ರದ ಮೂಲಕ, ಅವರಲ್ಲಿ ಬೇಡಿದರೆ ನೌಕರಿ ಮಾಡಲು ದೊರೆಯುವುದು. ನೌಕರಿ ಮಾಲೀಕನದ್ದೇ ಆಗಿರುತ್ತದೆ. ಕೆಲಸ ಅವನದ್ದನ್ನೇ ಮಾಡುವಿರಿ, ಮಾಲೀಕ ಯಾವ ಕೆಲಸ ಹೇಳುವನೋ, ಅದನ್ನು ಮಾಡುತ್ತೀರಿ. ಆ ಕೆಲಸವನ್ನು ಅವನ ಸೇವಾ ಅವಧಿಯಲ್ಲಿ ಮಾಡುವಿರಿ. ಈ ಪೂಜೆ (ನೌಕರಿ) ಮಾಲೀಕನಿಗೆ ಆಯಿತು. ನೌಕರಿಗೆ ಸಂಬಂಧಿಸಿದ ತಿಂಗಳ ಸಂಬಳವನ್ನು ಅವನ ಬೇರೆ ನೌಕರ (ಕರ್ಮಚಾರಿ ಅಥವಾ ಅಧಿಕಾರಿ) ಕೊಡುತ್ತಾನೆ. ಹೇಗೆ ಪಾಳಿಯಲ್ಲಿನ ಅಧಿಕಾರಿ ನಿಮ್ಮ ವೇತನದ ಮಾಹಿತಿ ತಯಾರಿಸಿ ಖಜಾಂಜಿ (ಕ್ಯಾಶಿಯರ್)ಗೆ ಕಳುಹಿಸುತ್ತಾನೆ. ಅಲ್ಲಿಂದ ಆ ನೌಕರನ ವೇತನ ಅಂದರೆ ಸೇವೆಯ ಫಲ ಪ್ರಾಪ್ತವಾಗುತ್ತದೆ. ಪಾಳಿಯ ಅಧಿಕಾರಿ ಹಾಗೂ ಕ್ಯಾಶಿಯರ್ ಕೇವಲ ಕ್ರಿಯಾ ಕರ್ಮವನ್ನು ಮಾತ್ರ ಕೊಡುತ್ತಾರೆ. ಅದರಲ್ಲಿ ಯಾರೂ ಪರಿವರ್ತನೆ ಮಾಡಲಾಗುವುದಿಲ್ಲ. ಅವರು ಒಂದು ರೂಪಾಯಿ ಹೆಚ್ಚಾಗಲಿ ಒಂದು ರೂಪಾಯಿ ಕಡಿಮೆಯಾಗಲಿ ಕೊಡಲು ಸಾಧ್ಯವಿಲ್ಲ. ಒಂದು ವೇಳೆ ಆ ನೌಕರನು. ಆ ಕಂಪನಿಯ ಮಾಲೀಕನ ಸೇವೆಯನ್ನು (ಪೂಜೆ) ಪ್ರಾಮಾಣಿಕವಾಗಿ,

ರೀತಿ–ನೀತಿಯಾಗಿ ಮಾಡಿದರೆ ಆ ಮಾಲೀಕನು ಅದೇ ಸೇವೆಗೆ ಇನ್ನೂ ಹೆಚ್ಚಿನ ಹಣವನ್ನು ಕೊಡುತ್ತಾನೆ. ಹಾಗೂ ಪ್ರತ್ಯೇಕ ಬಹುಮಾನದ ರೂಪದಲ್ಲೂ, ಹಣವನ್ನು ಹೆಚ್ಚಾಗಿ ಕೊಡುತ್ತಾನೆ. ಒಂದು ವೇಳೆ ಯಾರಾದರೂ ಮಾಲಿಕನ ನೌಕರಿ (ಪೂಜೆ)ಯನ್ನು ಬಿಟ್ಟು, ಬೇರೆ ಅಧಿಕಾರಿಗಳ ನೌಕರಿ (ಪೂಜೆ) ಮಾಡತೊಡಗಿದರೆ, ಅವನಿಗೆ ಮಾಲೀಕನಿಂದ ದೊರೆಯುತ್ತಿದ್ದ. ಹಣವು ನಿಂತು ಹೋಗುತ್ತದೆ. ಈ ಕಾರಣದಿಂದ, ಆ ಅಜ್ಞಾನಿಯು ಧನಹೀನನಾಗುತ್ತಾನೆ. ಅಧಿಕಾರಿಗಳು ಅವನಿಗೆ ಅಷ್ಟೊಂದು ವೇತನವನ್ನು ಕೊಡಲಾರರು. ಕಂಪನಿಯ ಮಾಲೀಕನಿಗೆ ಹೋಲಿಸಿದರೆ, ಬಹಳ ಕಡಿಮೆ ಸೌಕರ್ಯ ಸಿಗುವ ಕಾರಣದಿಂದ, ಅವನು ಬೇರೊಬ್ಬ ಅಧಿಕಾರಿಯ ಸೇವಕನಾಗಿ, ಅರ್ಥಾತ್ ಒಬ್ಬ ಮಾಲೀಕನನ್ನು ತೊರೆದು ಬೇರೆಯವರ ಸೇವೆಗೆ ತೊಡಗುವನು. ಅಂದರೆ ವಾಮಾಚಾರದ ಪೂಜೆಯನ್ನು ಮಾಡುತ್ತಾ ದುಃಖವನ್ನು ಅನುಭವಿಸುವನು. ಇದೇ ರೀತಿಯ ತತ್ವಜ್ಞಾನದ ಆಧಾರದಿಂದ ಪವಿತ್ರ ಶ್ರೀಮದ್ ಭಗವದ್ಗೀತೆಯ ಜ್ಞಾನವನ್ನು ತಿಳಿಯಿರಿ.

ಪೂರ್ಣ ಬ್ರಹ್ಮನ (ಮಾಲೀಕನ) ಪೂಜೆಯನ್ನು ಬಿಟ್ಟು, ಬೇರೆ ದೇವತೆಗಳ ಪೂಜೆ ಮಾಡುವುದರಿಂದ, ಸಾಧಕನಿಗೆ ಪೂರ್ಣ ಲಾಭ ದೊರೆಯುವುದಿಲ್ಲ. ಹಾಗೂ ಸಾಧಕ ಸಾಧನೆಯನ್ನು ಮಾಡುತ್ತ– ಮಾಡುತ್ತಾ ಮಹಾ ಕಷ್ಟ ಪಡುತ್ತಿರುತ್ತಾನೆ.

ಆದ್ದರಿಂದ ಪವಿತ್ರ ಗೀತೆಯ 7ನೇ ಅಧ್ಯಾಯದ 12 ರಿಂದ 15 ಹಾಗೂ 20 ರಿಂದ 23 ರವರೆಗಿನ ಶ್ಲೋಕಗಳಲ್ಲಿ, ಮೂರು ಗುಣಗಳ ಅರ್ಥಾತ್ ಮೂರು ದೇವತೆಗಳ (ರಜೋಗುಣ– ಬ್ರಹ್ಮಾ, ಸತೋಗುಣ– ವಿಷ್ಣು ಹಾಗೂ ತಮೋಗುಣ–ಶಿವ) ಪೂಜೆ ಮಾಡುವವರನ್ನು, ರಾಕ್ಷಸ ಸ್ವಭಾವವನ್ನು ಧರಿಸಿರುವ, ಮನುಷ್ಯರಲ್ಲಿ ನೀಚ, ಕೆಟ್ಟ ಕೆಲಸ ಮಾಡುವ ಮೂರ್ಖ ಎಂದು ಹೇಳಿದೆ. ಅವರು ನನ್ನ (ಬ್ರಹ್ಮ ಕ್ಷರ ಪುರುಷ ಅರ್ಥಾತ್ ಕಂಪನಿಯ ಮಾಲಿಕನ ಶಿಷ್ಯ ಅಧಿಕಾರಿಯ) ಪೂಜೆ (ನೌಕರಿ) ಮಾಡುವುದಿಲ್ಲ. ಭಾವಾರ್ಥ :– ಅವರು ಮೂರು ದೇವತೆಗಳ ಹಾಗೂ ಬೇರೆ ದೇವತೆಗಳ ಪೂಜೆ ಮಾಡುತ್ತಾರೆ. (ಕ್ಯಾಶಿಯರ್‌ನ ನೌಕರಿ ಮಾಡುತ್ತಾರೆ) ಅವರನ್ನು ಮೂರ್ಖ ಹಾಗೂ ರಾಕ್ಷಸ ಸ್ವಭಾವದವರು ಎಂದು ಕರೆಯುತ್ತಾರೆ. ಹೇಗೆ ಯಾವುದೇ ವ್ಯಕ್ತಿಯ ವರಮಾನ ಕಡಿಮೆಯಾಗುತ್ತದೋ, ಅವನು ಸ್ವಲ್ಪ ಏರು–ಪೇರನ್ನು ಅವಶ್ಯಕವಾಗಿ ಮಾಡುತ್ತಾನೆ. ಕೆಲವು ಸಮಯ ಕಳ್ಳತನ, ಕಲಬೆರಕೆ, ಮುಂತಾದ ಮೋಸ, ವಂಚನೆಯ ಮಾರ್ಗವನ್ನು ಹಿಡಿಯುತ್ತಾನೆ. ಈ ಕಾರಣದಿಂದ ಸಮಾಜದಲ್ಲಿ ಕೆಡುಕಾಗುತ್ತದೆ ಹಾಗೂ ದಾರಿದ್ರವಾಗುತ್ತದೆ. ಈ ರೀತಿ ಮೂರು ದೇವರುಗಳು (ಶ್ರೀ ಬ್ರಹ್ಮಾ–ಶ್ರೀ ವಿಷ್ಣು–ಶ್ರೀ ಶಿವ) ಮತ್ತು ಅನ್ಯ ದೇವರುಗಳ ಪೂಜೆಯಿಂದ ಪೂರ್ಣ ಲಾಭ ಪ್ರಾಪ್ತವಾಗುವುದಿಲ್ಲ. ಈ ಕಾರಣದಿಂದಾಗಿ ಸಾಧಕನು ಸುಳ್ಳು, ಕಪಟ ಹಾಗೂ ಅನ್ಯ ವಿಕಾರಗಳನ್ನು ಸಹ ಮಾಡುತ್ತಿರುತ್ತಾನೆ. ನಂತರ ಪಾಪ ಕರ್ಮದ ಶಿಕ್ಷೆಯನ್ನು ಸಹ ಅನುಭವಿಸಬೇಕಾಗುತ್ತದೆ. ಆದ್ದರಿಂದ ಬ್ರಹ್ಮ ಅರ್ಥಾತ್ ಕ್ಷರ ಪುರುಷ (ಪಾಳಿಯ ಅಧಿಕಾರಿ) ಹೇಳುತ್ತಿದ್ದಾನೆ. ಈ ಅಜ್ಞಾನಿ ಸಾಧಕರು ನನ್ನ ಪೂಜೆ (ನೌಕರಿ) ಯನ್ನೂ ಸಹ ಮಾಡುವುದಿಲ್ಲ. ನಾನು ಈ ಬ್ರಹ್ಮಾ, ವಿಷ್ಣು ಶಿವನಿಗಿಂತ ಹೆಚ್ಚಿನ ವೇತನ ಕೊಡಬಲ್ಲೆನು. ಅವನು ಮೇಲೆ ಹೇಳಿರುವ ಪ್ರಭುಗಳಿಗಿಂತ ಹೆಚ್ಚಿನವನಾಗಿದ್ದಾನೆ. ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹೇಳಿದೆ ನನ್ನ ಪೂಜೆ (ನೌಕರಿ)ಯಿಂದಲೂ ಪೂರ್ಣ ಲಾಭವಿಲ್ಲ. ಆದ್ದರಿಂದ ತನ್ನ ಪೂಜೆಯನ್ನು ಸಹ, ಗೀತಾ ಜ್ಞಾನದಾತನು (ಕಾಲಬ್ರಹ್ಮ / ಕ್ಷರಪುರುಷ) ಬಹಳ ಕೆಳಮಟ್ಟದ್ದು ಅರ್ಥಾತ್ ಅತಿ ನಿಮ್ನ ಸ್ಥರದ್ದೆಂದು ಹೇಳಿದ್ದಾನೆ. ಆದ್ದರಿಂದ ಗೀತೆಯ 15ನೇ ಅಧ್ಯಾಯದ 4ನೇ ಶ್ಲೋಕ ಹಾಗೂ ಅಧ್ಯಾಯ 18ರ 62ನೇ ಶ್ಲೋಕದಲ್ಲಿ ಹೇಳಿದೆ ಯಾವ ಪರಮೇಶ್ವರನ ಶರಣು ಹೋಗುವುದರಿಂದ, ಅವನ ಕೃಪೆಯಿಂದ ಪರಮ ಶಾಂತಿ ಸತ್ಯಲೋಕ (ಶಾಶ್ವತ ಸ್ಥಾನ)ವನ್ನು ಪಡೆಯಬಹುದೋ, ಆ ಪರಮೇಶ್ವರನಲ್ಲಿ

ಶರಣು ಹೋಗು, ಅಲ್ಲಿ ಹೋದ ನಂತರ ಸಾಧಕನು ಪುನಃ ಜನ್ಮತಾಳುವುದಿಲ್ಲ. ಅಂದರೆ ಅನಾದಿ ಮೋಕ್ಷ (ಪೂರ್ಣ ಮೋಕ್ಷ) ಪ್ರಾಪ್ತವಾಗುವುದು. ಹಾಗೂ ಗೀತಾಜ್ಞಾನದಾತ ಪ್ರಭು (ಕ್ಷರ ಪುರುಷ/ಬ್ರಹ್ಮ) ಹೇಳುತ್ತಿದ್ದಾನೆ, ತಾನೂ ಸಹ ಆ ಆದಿ ಪುರುಷ ಪರಮೇಶ್ವರನಲ್ಲಿ ಶರಣಾಗಿದ್ದೇನೆ.

ಗೀತೆಯ 7ನೇ ಅಧ್ಯಾಯದ 12 ರಿಂದ 15, 18 ಮತ್ತು 20 ರಿಂದ 23ರ ಶ್ಲೋಕವನ್ನು ತಿಳಿಯಲು, ದಯವಿಟ್ಟು ಕೆಳಗಿನ ವಿವರಣೆಯನ್ನು ಧ್ಯಾನ ಪೂರ್ವಕವಾಗಿ ಓದಿರಿ.

## "ಮೂರು ಗುಣಗಳು ಏನು? ಪ್ರಮಾಣ ಸಹಿತ"

ಮೂರು ಗುಣಗಳು ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವನಾಗಿದ್ದಾನೆ. ಬ್ರಹ್ಮ (ಕಾಲ) ಹಾಗೂ ಪ್ರಕೃತಿ (ದುರ್ಗಾ) ಯಿಂದ ಉತ್ಪನ್ನರಾಗಿದ್ದಾರೆ. ಮೂವರೂ ನಾಶವಾಗುತ್ತಾರೆ.

ಪ್ರಮಾಣ :– ಗೀತಾಪ್ರೆಸ್, ಗೊರಖಪುರದಿಂದ ಪ್ರಕಾಶಿತ ಗೊಂಡಿರುವ "ಶಿವ ಮಹಾಪುರಾಣ" ಇದರ ಸಂಪಾದಕರು, ಹನುಮಾನ ಪ್ರಸಾದ್ ಪೋದ್ದಾರ್, ಪುಟ ಸಂಖ್ಯೆ 110, ಅಧ್ಯಾಯ 9 ರುದ್ರ ಸಂಹಿತೆಯಲ್ಲಿ ಈ ರೀತಿ ಬ್ರಹ್ಮಾ, ವಿಷ್ಣು ಹಾಗೂ ಶಿವ, ಮೂವರು ದೇವರುಗಳಲ್ಲಿ ಗುಣವಿದೆ" ಆದರೆ ಶಿವ ಗುಣಾತೀತ ಎಂದು ಹೇಳಲಾಗಿದೆ.

ಎರಡನೆಯ ಪ್ರಮಾಣ :– ಗೀತಾಪ್ರೆಸ್ ಗೊರಖಪುರದಿಂದ ಪ್ರಕಾಶಿತ ಗೊಂಡಿರುವ "ಶ್ರೀಮದ್ ದೇವಿ ಭಾಗವತಪುರಾಣ" ಇದರ ಸಂಪಾದಕರು ಹನುಮಾನ ಪ್ರಸಾದ ಪೋದ್ದಾರ, ಚಿಮನಲಾಲ ಗೋಸ್ವಾಮಿ, ಮೂರನೆಯ ಸ್ಕಂದ 5ನೇ ಅಧ್ಯಾಯ 123ನೇ ಪುಟ :– ಭಗವಾನ್ ವಿಷ್ಣುವು ದುರ್ಗಾಳ ಸ್ತುತಿ ಮಾಡಿದ, ಹೀಗೆ ಹೇಳಿದ ನಾನು (ವಿಷ್ಣು) ಬ್ರಹ್ಮಾ ಹಾಗೂ ಶಂಕರ, ನಿಮ್ಮ ದಯೆಯಿಂದ ಉತ್ಪನ್ನರಾಗಿದ್ದೇವೆ. ನಮಗೆ ಅವಿರ್ಭಾವ (ಹುಟ್ಟು) ಹಾಗೂ ತಿರೋಭಾವ (ಸಾವು) ಆಗುತ್ತದೆ. ನಾವು ನಿತ್ಯ (ಅವಿನಾಶಿ)ರಲ್ಲ. ನೀನೇ ನಿತ್ಯಳು. ಜಗತ್ತಿನ ತಾಯಿ, ಪ್ರಕೃತಿ ಮತ್ತು ಸನಾತನ ದೇವಿಯಾಗಿರುವೆ. ಭಗವಾನ್ ಶಂಕರ ಹೇಳಿದನು :– ಭಗವಾನ ಬ್ರಹ್ಮಾ ಹಾಗೂ ಭಗವಾನ್ ವಿಷ್ಣು ನಿಮ್ಮಿಂದಲೇ ಉತ್ಪನ್ನವಾಗಿದ್ದರೆ, ಅವರ ನಂತರ ಉತ್ಪನ್ನವಾದ ನಾನು, ತಮೋಗುಣದ ಲೀಲೆ ಮಾಡುವ ಶಂಕರ ನಿಮ್ಮ ಸಂತಾನವಲ್ಲವೆ? ಅರ್ಥಾತ್ ನನ್ನನ್ನೂ ಉತ್ಪತ್ತಿ ಮಾಡಿದವಳು ನೀನೇ ಆಗಿರುವೆ. ಈ ಪ್ರಪಂಚದ ಸೃಷ್ಠಿ–ಸ್ಥಿತಿ ಲಯಗಳಲ್ಲಿ ನಿಮ್ಮ ಗುಣ ಎಂದಿಗೂ ಯಾವಾಗಲೂ ಇದೆ. ಈ ಮೂರು ಗುಣಗಳಿಂದ ಉತ್ಪನ್ನರಾದ ನಾವು, ಬ್ರಹ್ಮಾ, ವಿಷ್ಣು ಹಾಗೂ ಶಂಕರ, ನಿಯಮಾನುಸಾರವಾಗಿ ಕಾರ್ಯದಲ್ಲಿ ತತ್ಪರರಾಗಿರುತ್ತೆವೆ.

ಮೇಲಿನ ಈ ವಿವರಣೆ ಕೇವಲ ಹಿಂದಿಯಲ್ಲಿ ಅನುವಾದಿತವಾಗಿರುವ "ಶ್ರೀ ದೇವಿ ಮಹಾಪುರಾಣ" ದಿಂದ ತೆಗೆದು ಕೊಂಡಿದೆ. ಇದರಲ್ಲಿ ಕೆಲವು ತತ್ವಗಳನ್ನು ಅಡಗಿಸಿಡಲಾಗಿದೆ. ಆದ್ದರಿಂದ ಇದೇ ಪ್ರಮಾಣವನ್ನು ನೋಡಿ. "ಶ್ರೀ ಮದ್ ದೇವಿಭಾಗವತ ಮಹಾಪುರಾಣ" ಸಭಾಷಟಿಕಮ್ ಸಮಹಾತ್ಯಮ್, ಖೇಮರಾಜ ಶ್ರೀ ಕೃಷ್ಣ ದಾಸ್, ಪ್ರಕಾಶನ ಮುಂಬಯಿ, ಇದರಲ್ಲಿ ಸಂಸ್ಕೃತ ಸಹಿತ ಹಿಂದಿ ಅನುವಾದ ಮಾಡಿದೆ. ಮೂರನೆಯ ಸ್ಕಂದ, 4ನೇ ಅಧ್ಯಾಯ ಪುಟ 10, ಶ್ಲೋಕ 42.

ಬ್ರಹ್ಮಾ–ಅಹಂ ಮಹೇಶ್ವರಃ ಫಿಲ ತೇ ಪ್ರಭಾವಾತ್ಸರ್ವೇ ವಯಂ ಜನಿ ಯುತಾ
ನ ಯದಾ ತೂ ನಿತ್ಯಾಃ ಕೆ ಅನ್ಯೆ ಸುರಾಃ ಶತಮುಖ ಪ್ರಮುಖಾಃ
ಚ ನಿತ್ಯಾ ನಿತ್ಯಾ ತ್ವಮೇವ ಜನನಿ ಪ್ರಕೃತಿಃ ಪುರಾಣಾ

ಅನುವಾದ :– (ವಿಷ್ಣು ಹೇಳಿದನು) ಹೇ ಮಾತೆ! ಬ್ರಹ್ಮಾ, ನಾನು ಹಾಗೂ ಶಿವ ನಿನ್ನದೇ ಪ್ರಭಾವದಿಂದ ಜನನವಾಗಿದ್ದೇವೆ. ನಿತ್ಯರಲ್ಲ. ಅಂದರೆ ಅವಿನಾಶಿಯಲ್ಲ. ಅನ್ಯ ಇಂದ್ರಾದಿ ಬೇರೆ ದೇವರುಗಳು ಹೇಗೆ ನಿತ್ಯರಾಗಲು ಸಾಧ್ಯ? ನೀನೇ ಅವಿನಾಶಿಯಾಗಿರುವೆ. ನಮ್ಮೆಲ್ಲರ ಜನನಿ, ಅರ್ಥಾತ್ ಉತ್ಪನ್ನ ಮಾಡಿದ ಮಾತೆಯಾಗಿರುವೆ. ಪ್ರಕೃತಿ ಹಾಗೂ ಸನಾತನಿ ದೇವಿಯಾಗಿರುವೆ.

**ಪುಟ 11–12 ಅಧ್ಯಾಯ 5, ಶ್ಲೋಕ 8.**

ಯದಿ ದಯಾರ್ದ್ರಮನಾ ನ ಸದಾಂಬಿಕೆ ಕಥಮಹಂ ವಿಹಿತಃ

ಚ ತಮೋಗುಣಃ ಕಮಲಜಶ್ಚ ರಜೋಗುಣ ಸಂಭವಃ ಸುವಿಹಿತಃ ಕಿಮು ಸತ್ವಗುಣೋ ಹರಿಃ

**ಅನುವಾದ :– ಭಗವಾನ್ ಶಂಕರ ಹೇಳಿದ : ಹೇ ಮಾತೆ ! ನಿನಗೆ ನಮ್ಮ ಮೇಲೆ ದಯೆ ಇದ್ದರೆ, ನನ್ನನ್ನು ತಮೋಗುಣದವನಾಗಿ ಏಕೆ ಮಾಡಿದೆ? ಕಮಲದಿಂದ ಉತ್ಪನ್ನವಾದ ಬ್ರಹ್ಮಾನನ್ನು ರಜೋಗುಣದವನಾಗಿ ಏತಕ್ಕಾಗಿ ಮಾಡಿದೆ? ಹಾಗೂ ವಿಷ್ಣುವನ್ನು ಸತೋಗುಣದವನಾಗಿ ಏಕೆ ಮಾಡಿದೆ? ಅರ್ಥಾತ್ ಜೀವಗಳನ್ನು ಜನ್ಮ–ಮೃತ್ಯು ರೂಪದ ದುಷ್ಕರ್ಮದಲ್ಲಿ ಏಕೆ ತೊಡಗಿಸಿದೆ?**

**ಶ್ಲೋಕ 12 :** "ರಮಯಸೆ ಸ್ವಪತಿಂ ಪುರುಷಂ ಸದಾ ತವ ಗತಿಂ ನ ಹಿ ವಿಹ ವಿದಮ್ ಶಿವೇ"

**ಅನುವಾದ :– ನಿನ್ನ ಪತಿ ಪುರುಷ ಅರ್ಥಾತ್ ಕಾಲ ಭಗವಂತನೊಂದಿಗೆ ಯಾವಾಗಲೂ ಭೋಗ ವಿಲಾಸ ಮಾಡುತ್ತಲಿರುವೆ. ನಿನ್ನ ಗತಿಯನ್ನು ಯಾರೂ ತಿಳಿದಿಲ್ಲ.**

**ಮೂರನೆಯ ಸ್ಕಂದ ಪುಟ 14 : ಅಧ್ಯಾಯ 5 ಶ್ಲೋಕ 43.**

ಏಕ ಮೇವಾ ದ್ವಿತೀಯಂ ಯತ್ ಬ್ರಹ್ಮ ವೇದಾ ವದಂತಿ ವೈ ।

ಸಾ ಕಿಂ ತ್ವಮ್ ವಾಪ್ಯಸೌ ವಾ ಕಿಂ ಸಂದೇಹಂ ವಿನಿವರ್ತಯ ॥

**ಅನುವಾದ :– ವೇದದಲ್ಲಿ ಹೇಳಿರುವ ಅದ್ವಿತೀಯ ಕೇವಲ ಒಬ್ಬ ಪೂರ್ಣ ಬ್ರಹ್ಮನೆಂದು ಹೇಳಿದ್ದಾರೆ. ಅದು ನೀನೆ ಆಗಿರುವೆಯಾ? ಅಥವಾ ಬೇರೆಯಾರು ಇದ್ದಾರೆ? ನನ್ನ ಈ ಅನುಮಾನವನ್ನು ನಿವಾರಣೆ ಮಾಡು ಬ್ರಹ್ಮಾನ ಪ್ರಾರ್ಥನೆ ಕೇಳಿ ದೇವಿ ಹೇಳಿದಳು:**

ದೇವ್ಯೂವಾಚ ಸದೈಕತ್ವಂ ನ ಭೇದೋಸ್ತಿ ಸರ್ವದೈವ ಮಮಾಸ್ಯ ಚ ।

ಯೋಸೌ ಸಾಹಮಹಂ ಯೋಸೌ ಭೇದೋಸ್ತಿ ಮತಿ ವಿಭ್ರಮಾತ್ ॥ (2)

ಆವಯೋರಂತರಂ ಸೂಕ್ಷ್ಮಂ ಯೋ ವೇದ ಮತಿಮಾಹ್ನಿ ಸಃ ॥

ವಿಮುಕ್ತಃ ಸತೂ ಸಂಸಾರಾನ್ಮುಚ್ಯತೆ ನಾತ್ರ ಸಂಶಯಃ ॥ (3)

**ಅನುವಾದ :– ದೇವಿಯು ಹೇಳಿದಳು ಇವನೇ ನಾನು, ನಾನೇ ಇವನು, ಮತಿಯ ವಿಭ್ರಮೆಯಿಂದಾಗಿ ಪ್ರತ್ಯೇಕವೆಂದು ಭಾಸ ವಾಗುತ್ತದೆ.॥ (2)**

**ನಮ್ಮಿಬ್ಬರಲ್ಲಿನ ಸೂಕ್ಷ್ಮ ಅಂತರವನ್ನು ಯಾರು ತಿಳಿಯುವರೋ, ಅವರೇ ಬುದ್ಧಿವಂತರು ಅರ್ಥಾತ್ ತತ್ವದರ್ಶಿಯಾಗಿರುವರು. ಅವರು ಸಂಸಾರದಿಂದ ಬಿಡುಗಡೆಹೊಂದಿ ಮುಕ್ತರಾಗುತ್ತಾರೆ. ಇದರಲ್ಲಿ ಸಂಶಯವಿಲ್ಲ.(3)**

ಸುಮರಣಾದ್ದರ್ಶನಂ ತುಭ್ಯಂ ದಾಸ್ಯೇಹಂ ವಿಷಮೆ ಸ್ಥಿತೇ ॥ ಸ್ವರ್ತವ್ಯಾಹಂ ಸದಾ ದೇವಾಃ ಪರಮಾತ್ಮ ಸನಾತನಃ ॥ 80 ॥ ಉಭಯೋಃ ಸುಮರಣಾದೇವ ಕಾರ್ಯಸಿದ್ಧಿರ ಸಂಶಯಂ ॥ ಬ್ರಹ್ಮೋವಾಚ ॥ ಇತ್ಯುಕ್ತ್ವಾ ವಿಸಸರ್ಜಾಸ್ಮಾಂದ ತಾಂಶ್ವ ಶಕ್ತಿಃ ಸುಸಂಸ್ಕೃತಾನ್ ॥ 81 ॥ ವಿಷ್ಣುವೇಥ ಮಹಾಲಕ್ಷ್ಮೀ ಮಹಾಕಾಲೀ ಶಿವಾಯ ಚ ॥ ಮಹಾಸರಸ್ವತಿ ಮಹ್ಯಾಂ ಸ್ಥಾನಾತ್ತಸ್ಮಾದ್ದಿಸರ್ಜಿತಾಃ ॥ 82 ॥

**ಅನುವಾದ :– ದೇವತೆಗಳೇ! ಸಂಕಟವಾದಾಗ ನನ್ನ ಸ್ಮರಣೆ ಮಾಡಿರಿ. ಆ ಕೂಡಲೇ ನಾನು ದರ್ಶನ ಕೊಡುತ್ತೇನೆ. ಪರಮಾತ್ಮಾ ಸನಾತನ ದೇವರ, ಶಕ್ತಿರೂಪದಿಂದ ಸದಾ ನನ್ನನ್ನು ಸ್ಮರಣೆ ಮಾಡಿರಿ ॥ 80 ॥**

**ಇಬ್ಬರ ಸ್ಮರಣೆಯಿಂದ ಅವಶ್ಯನಾಗಿ ಕಾರ್ಯ ಸಿದ್ಧಿಯಾಗುವುದು.**

**ಬ್ರಹ್ಮಾ ಹೇಳಿದನು ಈ ರೀತಿಯಾಗಿ ಸಂಸ್ಕಾರ ನೀಡಿ, ಶಕ್ತಿ ನೀಡಿ ನಮ್ಮನ್ನು ಬೀಳ್ಕೊಟ್ಟಳು ॥81॥**

**ವಿಷ್ಣುವಿಗಾಗಿ ಮಹಾಲಕ್ಷ್ಮಿ, ಶಿವನಿಗಾಗಿ ಮಹಾಕಾಳಿ, ಮತ್ತು ನನಗೆ ಮಹಾ ಸರಸ್ವತಿಯನ್ನು ನೀಡಿ ಬೀಳ್ಕೊಟ್ಟಳು ॥ 82 ॥**

ಮಮ ಚೈವ ಶರೀರಂ ವೈ ಸೂತ್ರ ಮಿತ್ಯಾಭಿಧೀಯತೆ ।
ಸ್ಥೂಲಂ ಶರೀರಂ ವಕ್ಷ್ಯಾಮಿ ಬ್ರಹ್ಮಣಃ ಪರಮಾತ್ಮನಃ ॥ 83 ॥

**ಅನುವಾದ :– ನನ್ನ ಶರೀರವನ್ನು ಸೂತ್ರ ರೂಪವೆನ್ನುತ್ತಾರೆ. ಪರಮಾತ್ಮನದು (ಬ್ರಹ್ಮ) ಸ್ಥೂಲ ಶರೀರವೆನ್ನುವರು ॥ 83 ॥**

## "ಪುರಾಣ ವಾಕ್ಯಗಳ ಸಾರ"

ಇದು ಸ್ಪಷ್ಟವಾಯಿತು ಶ್ರೀ ಬ್ರಹ್ಮಾ–ರಜೋಗುಣನು, ಶ್ರೀ ವಿಷ್ಣು–ಸತೋಗುಣನು ಹಾಗೂ ಶ್ರೀ ಶಿವನು ತಮೋಗುಣನಾಗಿದ್ದಾನೆ. ಮೂರು ಪ್ರಭುಗಳು ನಾಶವಾಗುವವರು. ಹಾಗೂ ಇವರಿಗೆ ಜನನ–ಮರಣಗಳುಂಟಾಗುತ್ತದೆ. ದುರ್ಗಾಳನ್ನು ಪ್ರಕೃತಿಯೆಂದೂ ಕರೆಯುತ್ತಾರೆ. ದುರ್ಗಾಳ ಪತಿ ಬ್ರಹ್ಮ (ಕ್ಷರ ಪುರುಷ/ ಕಾಲ) ನಾಗಿದ್ದಾನೆ. ಅವಳು ಅವನೊಂದಿಗೆ ಪತಿ–ಪತ್ನಿ ವ್ಯವಹಾರ ಮಾಡುತ್ತಾ ಇರುತ್ತಾಳೆ, ದುರ್ಗಾ ಮತ್ತು ಬ್ರಹ್ಮರು ಸ್ಥೂಲಶರಿರದಲ್ಲಿ ಸಾಕಾರದಲ್ಲಿದ್ದಾರೆ.

ಇದೇ ಪ್ರಮಾಣವು ಗೀತೆಯ 14ನೇ ಅಧ್ಯಾಯದ 3 ರಿಂದ 5ನೇ ಶ್ಲೋಕಗಳಲ್ಲಿದೆ. ಗೀತಾ ಜ್ಞಾನ ದಾತನು ಕಾಲ ಬ್ರಹ್ಮ ನೆಂದು ಹೇಳುತ್ತಿದ್ದಾನೆ. ಪ್ರಕೃತಿ (ದುರ್ಗಾ) ಯು ನನ್ನ ಪತ್ನಿ ನಾನು ಇವಳ ಯೋನಿಯಲ್ಲಿ (ಗರ್ಭದಾನ ಸ್ಥಾನ) ಬೀಜ ಸ್ಥಾಪನೆ ಮಾಡುತ್ತೇನೆ. ಇದರಿಂದ ಸಕಲ ಪ್ರಾಣಿಗಳ ಉತ್ಪತ್ತಿಯಾಗುತ್ತದೆ. ನಾನು ಎಲ್ಲರ ತಂದೆ (21 ಬ್ರಹ್ಮಾಂಡಗಳ ಪ್ರಾಣಿಗಳಿಗೆ) ಹಾಗೂ ಪ್ರಕೃತಿ ಎಲ್ಲರ ತಾಯಿ. (ದುರ್ಗಾ/ ಅಷ್ಟಾಂಗಿ) ಇದೇ ದುರ್ಗಳಿಂದ (ಪ್ರಕೃತಿ/ ಅಷ್ಟಾಂಗಿ) ಉತ್ಪನ್ನವಾದ ಮೂರು ಗುಣಗಳು (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ) ಬೇರೆ ಪ್ರಾಣಿಗಳನ್ನು, ಕರ್ಮಗಳ ಬಂಧನದಲ್ಲಿ ಕಟ್ಟುತ್ತಾರೆ.

## "ತ್ರಿಗುಣ ಮಾಯೆ (ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು ಹಾಗೂ ತಮೋಗುಣ ಶಿವ) ಜೀವವನ್ನು ಮುಕ್ತನಾಗಲು ಬಿಡುವುದಿಲ್ಲ"

ಪವಿತ್ರ ಗೀತೆಯ 7ನೇ ಅಧ್ಯಾಯದ 1 ಮತ್ತು 2ನೇ ಶ್ಲೋಕಗಳಲ್ಲಿ ಬ್ರಹ್ಮ ಹೇಳುತ್ತಲಿದ್ದಾನೆ. ಯಾವ ಜ್ಞಾನವನ್ನು ತಿಳಿದ ಮೇಲೆ, ತಿಳಿಯಲು ಮತ್ತೇನೂ ಇರುವುದಿಲ್ಲವೋ, ಅಂತಹ ಜ್ಞಾನವನ್ನು ಅರ್ಜುನ ನಾನು ನಿನಗೆ ಈಗ ಹೇಳುವೆನು. ಗೀತೆಯ 7ನೇ ಅಧ್ಯಾಯದ 12ನೇ ಶ್ಲೋಕ : ಗೀತಾಜ್ಞಾನದಾತ ಕಾಲ ಬ್ರಹ್ಮ ಹೇಳುತ್ತಿದ್ದಾನೆ. ಮೂರು ಗುಣಗಳಿಂದ ಏನೆಲ್ಲಾ ಆಗುತ್ತಿದೆಯೋ, ಅದು ನನ್ನಿಂದಲೇ ಆಗುತ್ತಿದೆ ಎಂದು ತಿಳಿ. ಹೇಗೆ ರಜೋಗುಣ (ಬ್ರಹ್ಮಾ) ದಿಂದ ಉತ್ಪತ್ತಿ, ಸತೋಗುಣ (ವಿಷ್ಣು)ದಿಂದ ಪಾಲನೆ ಪೋಷಣೆಯ ಸ್ಥಿತಿ. ಹಾಗೂ ತಮೋಗುಣ (ಶಿವ) ದಿಂದ ಪ್ರಳಯದ ಕಾರಣ ಕಾಲ ಭಗವಾನನೇ ಆಗಿರುವನು. ಪುನಃ ನಾನು ಇವುಗಳಲ್ಲಿ ಇಲ್ಲ" ಎಂದೂ ಹೇಳುತ್ತಿದ್ದಾನೆ. ಏಕೆಂದರೆ ಕಾಲನು ಬಹಳ ದೂರದಲ್ಲಿರುವನು (21 ಬ್ರಹ್ಮಾಂಡಗಳಲ್ಲಿನ ನಿಜಲೋಕದಲ್ಲಿ ಇರುತ್ತಾನೆ) ಆದರೆ ಮನಸ್ಸಿನ ರೂಪಿನಲ್ಲಿ ಆನಂದವನ್ನು (ಮಜಾ) ಕಾಲನೇ ಮಾಡಿಸುತ್ತಿದ್ದಾನೆ. ಹಾಗೂ ರಿಮೋಟ್‌ನಿಂದ (ನಿಯಂತ್ರಣ ಶಕ್ತಿಯಿಂದ) ಬ್ರಹ್ಮಾ, ವಿಷ್ಣು ಹಾಗೂ ಶಿವನನ್ನು ಯಂತ್ರದಂತೆ ನಡೆಸಿಕೊಳ್ಳುತ್ತಾನೆ. ಗೀತೆಯನ್ನು ಹೇಳಿರುವ, ಬ್ರಹ್ಮನು ಹೇಳುತ್ತಿದ್ದಾನೆ. ನನ್ನ 21 ಬ್ರಹ್ಮಾಂಡದ ಜೀವಿಗಳಿಗೆ ನನ್ನ ಪೂಜೆಯಿಂದಲೇ ಶಾಸ್ತ್ರ ಅನುಕೂಲವಾದ ಸಾಧನೆಯು ಪ್ರಾರಂಭವಾಗುವುದು. ಯಾವುದು ವೇದಗಳಲ್ಲಿ ವರ್ಣಿಸಲ್ಪಟ್ಟಿದೆಯೋ ಅದುವೇ ಶಾಸ್ತ್ರ, ನನ್ನ ಒಳಗೆ ಎಷ್ಟು ಪ್ರಾಣಿಗಳಿವೆಯೋ, ಅವುಗಳ ಬುದ್ಧಿ ನನ್ನ ಕೈಯಲ್ಲಿದೆ. ನಾನು ಕೇವಲ 21 ಬ್ರಹ್ಮಾಂಡಗಳ ಮಾಲಿಕನಾಗಿರುವೆ. ಆದ್ದರಿಂದ

(ಗೀತೆಯ 7ನೇ ಅಧ್ಯಾಯದ 12 ರಿಂದ 15ನೇ ಶ್ಲೋಕಗಳವರೆಗೆ) ಮೂರು ಗುಣಗಳಿವೆ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು ಹಾಗೂ ತಮೋಗುಣ–ಶಿವ ಇವರಿಂದ ಸೃಷ್ಠಿ, ಸ್ಥಿತಿ, ಲಯಗಳು) ಏನೆಲ್ಲಾ ಆಗುತ್ತಿರುವುದೋ ಅದರ ಮುಖ್ಯ ಕಾರಣ ನಾನೇ ಆಗಿರುವೆ (ಕಾಲ ಬ್ರಹ್ಮ) (ಏಕೆಂದರೆ ಕಾಲನಿಗೆ ಒಂದು ಲಕ್ಷ ಜೀವಿಗಳನ್ನು ಕೊಂದು, ಅದರ ಕೊಳೆ ತೆಗೆದು ತಿನ್ನುವ ಶಾಪವಿದೆ.) ಯಾರು ನನ್ನ ಸಾಧನೆ ಮಾಡದೆ, ತ್ರಿಗುಣ ಮಯವಾದ ಮಾಯೆ (ರಜೋಗುಣ ಬ್ರಹ್ಮಾ, ಸತೋಗುಣ–ವಿಷ್ಣು ಹಾಗೂ ತಮೋಗುಣ–ಶಿವ) ಯ ಸಾಧನೆ ಮಾಡಿ, ಕ್ಷಣಿಕ ಲಾಭ ಪಡೆಯುತ್ತಾರೆ. ಇದರಿಂದ ಹೆಚ್ಚು ಕಷ್ಟವನ್ನು ಅನುಭವಿಸುತ್ತಿರುತ್ತಾರೆ. ಜೊತೆಯಲ್ಲೇ ಸಂಕೇತ ಮಾಡಿರುವನು. ಏನೆಂದರೆ ಇವರುಗಳಿಗಿಂತ ಹೆಚ್ಚಿನ ಲಾಭವನ್ನು ನಾನು ಕೊಡಬಲ್ಲೆ.

(ಕಾಲ ಬ್ರಹ್ಮ) ಆದರೆ ಈ ಮೂರ್ಖ ಸಾಧಕರು, ತತ್ವಜ್ಞಾನದ ಕೊರತೆಯಿಂದ, ಈ ಮೂರು ಗುಣಗಳ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು ಹಾಗೂ ತಮೋಗುಣ–ಶಿವ) ವರೆಗಿನ ಸಾಧನೆಯನ್ನು, ಮಾಡುತ್ತಿರುತ್ತಾರೆ. ಇವರ ಬುದ್ಧಿ ಈ ಮೂರು ಪ್ರಭುಗಳ ವರೆಗೆ ಸೀಮಿತವಾಗಿದೆ. ಆದ್ದರಿಂದಲೇ ಇವರು ರಾಕ್ಷಸ ಸ್ವಭಾವವನ್ನು ಹೊಂದಿದವರಾಗಿ, ಮನುಷ್ಯರಲ್ಲಿ ನೀಚರಾಗಿ, ಶಾಸ್ತ್ರವಿರುದ್ದ ಸಾಧನೆ ಮಾಡಿ, ದುಷ್ಕರ್ಮ ಮಾಡುತ್ತಾ, ಮೂರ್ಖತನದಿಂದ ನನ್ನನ್ನು ಭಜಿಸುವುದಿಲ್ಲ. ಇದೇ ಪ್ರಮಾಣವು, ಗೀತೆಯ 16ನೇ ಅಧ್ಯಾಯದ 4 ರಿಂದ 20 ಮತ್ತು 23, 24 ರವರೆಗಿನ ಶ್ಲೋಕಗಳಲ್ಲಿ, 17ನೇ ಅಧ್ಯಾಯದ 2 ರಿಂದ 14 ಹಾಗೂ 19 ಮತ್ತು 20ನೇ ಶ್ಲೋಕಗಳಲ್ಲಿ ಸಹ ಇದೆ.

ವಿಚಾರ ಮಾಡಿರಿ :– ರಾವಣನು, ಭಗವಾನ್ ಶಿವನನ್ನು ಅಜರ, ಅಮರ, ಸರ್ವೇಶ್ವರ ಎಂದು ತಿಳಿದು ಪೂಜಿಸಿದನು. 10 ಬಾರಿ ತಲೆಯನ್ನು ಕತ್ತರಿಸಿ ಸಮರ್ಪಿಸಿದ, ಅದಕ್ಕೆ ಬದಲಾಗಿ, ಯುದ್ಧ ಸಮಯದಲ್ಲಿ ರಾವಣನಿಗೆ ಹತ್ತು ತಲೆಗಳು ಪ್ರಾಪ್ತವಾದವು. ಆದರೆ ಮುಕ್ತಿಸಿಗಲಿಲ್ಲ. 'ರಾಕ್ಷಸ' ಎಂದು ಕರೆಸಿಕೊಂಡ. ಈ ದೋಷವು ರಾವಣನ ಗುರುದೇವರದು. ಈ ಅಜ್ಞಾನಿಗಳು ವೇದಗಳನ್ನು ಸರಿಯಾಗಿ ತಿಳಿಯದೆ, ಯೋಚಿಸದೆ, ತಮ್ಮ ಆಲೋಚನೆಯಂತೆ, ತಮೋಗುಣಯುಕ್ತ ಭಗವಾನ್ ಶಿವನನ್ನೇ ಪೂರ್ಣ ಪರಮಾತ್ಮ ಎಂದು ತಿಳಿಸಿದರು. ಮೂರ್ಖ ರಾವಣನು ಸುಳ್ಳಿನ ಗುರುವಿನಿಂದಾಗಿ, ಅವರನ್ನು ನಂಬಿ ತನ್ನ ಜೀವನ ಹಾಗೂ ತನ್ನ ಕುಲವನ್ನೇ ನಾಶಮಾಡಿಕೊಂಡ.

1. "ಭಸ್ಮಾಗಿರಿ" ಎಂಬ ಒಬ್ಬ ಸಾಧಕನಿದ್ದ. ಅವನು ಶಿವನನ್ನೇ (ತಮೋಗುಣ) ಇಷ್ಟದೇವನನ್ನಾಗಿ ಸ್ವೀಕರಿಸಿ, ಶೀರ್ಷಾಸನ (ತಲೆ ಕೆಳಗೆ ಕಾಲುಗಳು ಮೇಲೆ) ಮಾಡಿ, 12 ವರ್ಷಗಳ ಕಾಲ ಸಾಧನೆ ಮಾಡಿದ. ಭಗವಾನ್ ಶಿವನಿಂದ ವರ (ವಚನ) ಪಡೆದು, ಭಸ್ಮಕಂಡವನ್ನು ತೆಗೆದುಕೊಂಡನು. ಅವನು ಭಗವಾನ್ ಶಿವನನ್ನೇ ಹೊಡೆಯತೊಡಗಿದ, ಅವನ ಉದ್ದೇಶ ಶಿವನನ್ನು ಸಾಯಿಸಿ, ಅವನ ಪತ್ನಿ ಪಾರ್ವತಿಯನ್ನು ತನ್ನ ಪತ್ನಿ ಮಾಡಿ ಕೊಳ್ಳುವುದಾಗಿತ್ತು. ಭಗವಾನ್ ಶಿವನು ಭಯದಿಂದ ಓಡಿ ಹೋದನು. ನಂತರ ವಿಷ್ಣುವು, ಆ ಭಸ್ಮಾಸುರ ನಿಂದ ನೃತ್ಯಮಾಡಿಸಿ, ತಾನೂ ವೇಷ ಬದಲಾಯಿಸಿಕೊಂಡು (ಮೋಹಿನಿ) ಅವನನ್ನು (ಭಸ್ಮಾಸುರನನ್ನು) ಅವನ ಕೈಯಿಂದಲೇ ಸಾಯುವಂತೆ ಮಾಡಿದ. ಆ ಶಿವನು (ತಮೋಗುಣ) ಸಾಧಕನು 'ರಾಕ್ಷಸ' ಎಂದು ಕರೆಸಿಕೊಂಡ. ಹಿರಣ್ಯಕಶ್ಯಪು ಬ್ರಹ್ಮಾನನ್ನು (ರಜೋಗುಣ) ಪೂಜಿಸಿ 'ರಾಕ್ಷಸ' ಎಂದು ಕರೆಸಿಕೊಂಡ.

2. ಈಗ (ಸನ್ 2006) ಸುಮಾರು 335 ವರ್ಷಗಳ ಮೊದಲು "ಹರ ಕೀ ಪೈಡಿ" ಮೇಲೆ (ಶಾಸ್ತ್ರವಿಧಿ ರಹಿತ ಸಾಧನೆ ಮಾಡುವವರ) ಕುಂಭಮೇಳದ ಹಬ್ಬದ ಕಾರಣ ಜನರು ಸೇರಿದ್ದರು. ಇಲ್ಲಿ ಎಲ್ಲ (ತ್ರಿಗುಣ ಉಪಾಸಕರು) ಮಹಾತ್ಮರು, ಸ್ನಾನ ಮಾಡಲು ಬಂದರು. ಗಿರಿ, ಪುರೀ, ನಾಥ, ನಾಗಾ ಮೊದಲಾದ, ಭಗವಾನ್ ಶಿವನ ಉಪಾಸಕರು, (ತಮೋಗುಣ) ಹಾಗೂ ವಿಷ್ಣು ಭಗವಾನನ

(ಸತೋಗುಣ) ಉಪಾಸಕರು ಇದ್ದರು. ಮೊದಲ ಸ್ನಾನ ಮಾಡುವ ಸಲುವಾಗಿ, ನಾಗಾ ಹಾಗೂ ವಿಷ್ಣು ಉಪಾಸಕರಿಗೆ ಘೋರ ಜಗಳ (ಯುದ್ಧ) ವಾಯಿತು. ಸುಮಾರು 25000 ತ್ರಿಗುಣ ಉಪಾಸಕರು ಮರಣಹೊಂದಿದರು. ಯಾರು ಅಲ್ಪ ಮಾತಿಗಾಗಿ, ನರಸಂಹಾರ (ಹತ್ಯಾಕಾಂಡಾ) ವನ್ನು ಮಾಡುತ್ತಾರೋ, ಅವರು ಸಾಧುಗಳೋ ಅಥವಾ ರಾಕ್ಷಸರೋ? ವಿಚಾರ ಮಾಡಿರಿ. ಯಾರೂ ಒಬ್ಬ ವ್ಯಕ್ತಿ ಸಹ ಎಲ್ಲೋ, ಸ್ನಾನ ಮಾಡುತ್ತಿದ್ದಾನೆ. ಎಂದು ಕೊಳ್ಳೋಣ. ಬೇರೆ ಒಬ್ಬ ವ್ಯಕ್ತಿ ಬಂದು ದಯವಿಟ್ಟು ನನಗೂ ಸ್ವಲ್ಪ ಸ್ನಾನ ಮಾಡಲು ಅವಕಾಶ ಕೊಡಿರಿ ಎಂದು ಶಿಷ್ಟಾಚಾರದಿಂದ ಕೇಳಿದರೆ ಆಗ ಅವರು 'ಬನ್ನಿ ನೀವೂ ಸ್ನಾನ ಮಾಡಿರಿ ಎಂದು ಆತನೆ ಈ ಕಡೆ ಸರಿದು ಜಾಗ ಮಾಡಿಕೊಟ್ಟು, ಸ್ನಾನಕ್ಕೆ ಅವಕಾಶ ಕಲ್ಪಿಸಿ ಕೊಡುತ್ತಾರೆ.' ಆದ್ದರಿಂದ ಪವಿತ್ರ ಗೀತೆಯ 7ನೇ ಅಧ್ಯಾಯದ 12 ರಿಂದ 15ನೇ ಶ್ಲೋಕಗಳವರೆಗೆ ಹೇಳಿದ್ದಾರೆ. ಯಾರಲ್ಲಿ ನನ್ನ ತ್ರಿಗುಣಯುಕ್ತ ಮಾಯೆಯು (ಬ್ರಹ್ಮಾ–ರಜೋಗುಣ, ವಿಷ್ಣು–ಸತೋಗುಣ ಹಾಗೂ ಶಿವ–ತಮೋಗುಣ) ಪೂಜೆಯ ಮೂಲಕವೂ ಕೂಡಿದ್ದು, ಉತ್ತಮ ಜ್ಞಾನವಿಲ್ಲದವರಾಗಿರುವರೋ ಅವರಲ್ಲಿ, ಕೇವಲ ಗೌರವ ಹೆಚ್ಚಿಸಿಕೊಳ್ಳುವ ಹಸಿವು, ರಾಕ್ಷಸ ಸ್ವಭಾವವು ಇರುವುದು, ಅಂತಹವರು ಮನುಷ್ಯರಲ್ಲಿ ನೀಚರು. ಸಾಮಾನ್ಯ ಜನರಿಗಿಂತ ಕೆಳಸ್ತರದವರು, ದುಷ್ಕರ್ಮ ನಿರತರು ಹಾಗೂ ಮೂರ್ಖರಾಗಿರುತ್ತಾರೆ. ಅವರಿಗೆ ಮುಕ್ತಿಯು ಇಲ್ಲ. ನನ್ನ ಭಕ್ತಿಯು ಇಲ್ಲ. ಗೀತೆಯ ಅಧ್ಯಾಯ 7ರಲ್ಲಿನ 16 ರಿಂದ 18 ಶ್ಲೋಕಗಳಲ್ಲಿ, ಪವಿತ್ರ ಗೀತೆಯನ್ನು ಹೇಳಿರುವವನು. (ಬ್ರಹ್ಮ) ಹೇಳುತ್ತಿದ್ದಾನೆ ನನ್ನ ಉಪಾಸನೆಯನ್ನು (ಬ್ರಹ್ಮಸಾಧನೆ) ನಾಲ್ಕು ಪ್ರಕಾರಗಳ ಸಾಧಕರು ಮಾಡುತ್ತಾರೆ.

1. ಅರ್ಥಾರ್ಥಿ (ಧನಲಾಭ ಬಯಸುವವನು) ಅವನು ವೇದ ಮಂತ್ರಗಳಿಂದಲೇ ಜಂತ್ರ–ಮಂತ್ರ ಹವನ ಮುಂತಾದವುಗಳನ್ನು ಮಾಡುತ್ತಿರುತ್ತಾನೆ.

2. ಆರ್ತ (ಸಂಕಟ ನಿವಾರಣೆಗಾಗಿ, ವೇದಗಳ ಮಂತ್ರಗಳಿದ ಯಂತ್ರ–ಮಂತ್ರ ಹವನ ಮೊದಲಾದವುಗಳನ್ನು ಮಾಡುತ್ತಿರುತ್ತಾನೆ)

3. ಜಿಜ್ಞಾಸು (ಅವನು ಪರಮಾತ್ಮನ ಬಗ್ಗೆ ಜ್ಞಾನವನನ್ನು ಹೊಂದಲು) ಕೇವಲ ಜ್ಞಾನ ಸಂಗ್ರಹಕ್ಕಾಗಿ, ವಕ್ತಾ (ಹೇಳುವವನು) ಆಗುತ್ತಾನೆ. ಬೇರೆಯವರ ಹೋಲಿಕೆಯಲ್ಲಿ ಜ್ಞಾನದ ಆಧಾರದಲ್ಲಿ ಶ್ರೇಷ್ಠನೆನಿಸುತ್ತಾನೆ. ಜ್ಞಾನವಂತನೂ, ಅಭಿಮಾನವುಳ್ಳವನೂ ಆಗಿ ಭಕ್ತಿಹೀನನಾಗುತ್ತಾನೆ.

4. ಜ್ಞಾನಿ ಮಾನವ ಶರೀರವು ಪದೇ–ಪದೇ ಸಿಗುವುದಿಲ್ಲ. ಎಂಬ ಜ್ಞಾನ ಇವನಿಗಿರುತ್ತದೆ. ಆದ್ದರಿಂದ ಈಗ ಪ್ರಭುವಿನ ಉಪಾಸನೆ (ಭಕ್ತಿ) ಮಾಡದಿದ್ದರೆ ಜನ್ಮ ವ್ಯರ್ಥವಾಗುವುದು ಎಂದು ತಿಳಿದು, ವೇದಗಳನ್ನು ಓದಿ ಅದರಿಂದ ಜ್ಞಾನ ಲಭಿಸಿ (ಬ್ರಹ್ಮಾ–ವಿಷ್ಣು–ಶಿವ) ಮೂರು ಗುಣಗಳು, ಬ್ರಹ್ಮ (ಕ್ಷರ ಪುರುಷ) ಪರಬ್ರಹ್ಮ (ಅಕ್ಷರ ಪುರುಷ) ಇವರೆಲ್ಲರಿಗೂ ಮೀರಿದ ಪೂರ್ಣ ಬ್ರಹ್ಮನ ಉಪಾಸನೆ ಮಾಡಬೇಕು. ಬೇರೆ ದೇವರುಗಳ ಉಪಾಸನೆಯನ್ನಲ್ಲ ಎಂದು ತಿಳಿದ ಆ ಜ್ಞಾನಿ ಹಾಗೂ ಉದಾರ ಆತ್ಮಗಳಿಗೆ ನಾನು ಬಹಳ ಇಷ್ಟವಾಗುತ್ತೇನೆ.

ನನಗೆ ಅವರು ಇಷ್ಟವಾಗುತ್ತಾರೆ. ಏಕೆಂದರೆ, ಅವರು ಮೂರು ಗುಣಗಳಿಂದ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ಹಾಗೂ ತಮೋಗುಣ–ಶಿವ) ಮೇಲೆ ಬಂದು, ನನ್ನ (ಬ್ರಹ್ಮ) ಸಾಧನೆಯನ್ನಂತೂ ಮಾಡತೊಡಗುತ್ತಾರೆ. ಬೇರೆ ದೇವರುಗಳಿಗಿಂತ ಉತ್ತಮವೆಂದು ತಿಳಿದು, ಆದರೆ ವೇದಗಳಲ್ಲಿನ "ಓಂ" ನಾಮವು, ಕೇವಲ ಬ್ರಹ್ಮ ಸಾಧನೆಯ ಮಂತ್ರವಾಗಿದೆ. ಅದನ್ನೇ ವೇದ ಓದುವ ವಿದ್ವಾಂಸರು, ತಮ್ಮ–ತಮ್ಮಲ್ಲೇ ವಿಚಾರ ವಿಮರ್ಶೆ ಮಾಡಿ, ಪೂರ್ಣ ಬ್ರಹ್ಮನ ಮಂತ್ರವೆಂದು ತಿಳಿದು, ಅನೇಕ ವರ್ಷಗಳ ವರೆಗೆ ಸಾಧನೆ ಮಾಡುತ್ತಿರುವರು. ಪ್ರಭುವು ದೊರೆಯಲಿಲ್ಲ. ಬೇರೆ ಸಿದ್ಧಿಗಳು ಪ್ರಾಪ್ತವಾದವು. ಏಕೆಂದರೆ ಪವಿತ್ರ ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕ,

ಹಾಗೂ ಪವಿತ್ರ ಯಜುರ್ವೇದದ 40ನೇ ಅಧ್ಯಾಯದ 10ನೇ ಮಂತ್ರದಲ್ಲಿ ವರ್ಣಿತವಾಗಿರುವ ತತ್ವದರ್ಶಿ ಸಂತ ಸಿಕ್ಕಿಲ್ಲ. ಅವರು ಪೂರ್ಣ ಬ್ರಹ್ಮನ ಸಾಧನೆಯನ್ನು 3 ಮಂತ್ರಗಳಿಂದ ತಿಳಿಸುತ್ತಾರೆ. ಆದ್ದರಿಂದ ಜ್ಞಾನಿಗಳು ಸಹ ಬ್ರಹ್ಮ (ಕಾಲ) ಸಾಧನೆ ಮಾಡಿ, ಹುಟ್ಟು-ಸಾವುಗಳ ಚಕ್ರದೊಳಗೆ ಉಳಿದರು.

ಒಬ್ಬ ಜ್ಞಾನಿ ಉದಾರಾತ್ಮ ಮಹರ್ಷಿ ಚುಣಕರು, ವೇದಗಳನ್ನು ಓದಿದರು ಹಾಗೂ ಒಬ್ಬ ಪೂರ್ಣ ಪ್ರಭುವಿನ ಭಕ್ತಿಯ ಮಂತ್ರ, ಓಂ ಎಂದು ತಿಳಿದು, ಇದೇ ನಾಮದಿಂದ ಅನೇಕ ವರ್ಷಗಳವರೆಗೆ ಸಾಧನೆ ಮಾಡಿದರು. ಒಬ್ಬ ಮಾನಧಾತಾ ಚಕ್ರವರ್ತಿ ಇದ್ದ (ಇಡೀ ಭೂಮಿಯ ಒಡೆಯ) ಅವನು ತನ್ನ ಅಧೀನದ ಎಲ್ಲ ರಾಜರಿಗೂ ಯುದ್ಧಕ್ಕೆ ಆಹ್ವಾನ ಕೊಟ್ಟು ಒಂದು ಪತ್ರ ಬರೆದು, ಅದನ್ನು ಕುದುರೆಯ ಕೊರಳಿಗೆ ಕಟ್ಟಿ, ರಾಜ್ಯದಲ್ಲೆಲ್ಲಾ ಓಡಾಡಿಸಿದ. ಅವನ ಶರತ್ತು ಹೀಗಿತ್ತು- "ಯಾರು ಮಾನಧಾತಾನ ಅಧೀನತೆಯನ್ನು (ಗುಲಾಮಗಿರಿ) ಒಪ್ಪುವುದಿಲ್ಲವೋ ಅವರು ಯುದ್ಧ ಮಾಡಬೇಕಾಗುತ್ತದೆ. ಅವರು ಈ ಕುದುರೆಯನ್ನು ಹಿಡಿದು ಕಟ್ಟಿ ಹಾಕಲಿ." ಯಾರೂ ಕುದುರೆಯನ್ನು ಕಟ್ಟಲೇ ಇಲ್ಲ. ಮಹರ್ಷಿ ಚುಣಕರಿಗೆ, ರಾಜನು ಬಹಳ ಅಭಿಮಾನಿ ಎಂದು ಗೊತ್ತಾಯಿತು. "ನಾನು ಈ ರಾಜನೊಂದಿಗೆ ಯುದ್ಧ ಮಾಡುವೆ" ಎಂದು ಹೇಳಿದರು. ಯುದ್ಧ ಆರಂಭವಾಯಿತು. ಮಾನಧಾತಾ ರಾಜನ ಬಳಿ 72 ಕೋಟಿ ಸೈನ್ಯ ಇತ್ತು ಅದನ್ನು 4 ಭಾಗಮಾಡಿ, (ಒಂದು ಭಾಗಕ್ಕೆ 18 ಕೋಟಿಯಂತೆ) ಮಹರ್ಷಿ ಚುಣುಕರ ಮೇಲೆ ಆಕ್ರಮಣ ಮಾಡಿದ. ಈ ಕಡೆ ಮಹರ್ಷಿ ಚುಣುಕರು. ತಮ್ಮ ಸಿದ್ಧಿ ಶಕ್ತಿಯಿಂದ ನಾಲ್ಕು ಬಾಂಬ್‌ಗಳನ್ನು ಮಾಡಿದರು ಹಾಗೂ ರಾಜನ ನಾಲ್ಕೂ ಸೇನೆಯನ್ನು ನಾಶ ಮಾಡಿದರು.

ವಿಶೇಷ :- ಶ್ರೀ ಬ್ರಹ್ಮಾ-ವಿಷ್ಣು-ಶಿವ ಹಾಗೂ ಬ್ರಹ್ಮ ಮತ್ತು ಪರಬ್ರಹ್ಮರ ಉಪಾಸನೆಯಿಂದ, ಪಾಪ ಹಾಗೂ ಪುಣ್ಯಗಳ ಫಲವನ್ನು ಅನುಭವಿಸಬೇಕಾಗುವುದು. ಪುಣ್ಯ ಸ್ವರ್ಗದಲ್ಲಿ, ಪಾಪ ನರಕದಲ್ಲಿ ಹಾಗೂ 84 ಲಕ್ಷ ಪ್ರಾಣಿಗಳ ಶರೀರದಲ್ಲಿ, ನಾನಾ ವಿಧದ 'ಓಂ' ನಾಮದ ಗಳಿಕೆ ಮಾಡಿದರು. ಅದನ್ನು ಕೆಲವು ಸಿದ್ಧಿ-ಶಕ್ತಿಗಳಲ್ಲಿ ವ್ಯಯ ಮಾಡಿದರು. (ನಾಲ್ಕು ಬಂಬ್‌ಗಳನ್ನು ಮಾಡಿ) ಇದರಿಂದ ಮಹರ್ಷಿ ಎನಿಸಿದರು. ಕೆಲವು ಸಾಧನೆಯ ಫಲವನ್ನು ಮಹಾ ಸ್ವರ್ಗದಲ್ಲಿ ಅನುಭವಿಸಿ ನಂತರ ನರಕಕ್ಕೆ ಹೋಗುವರು. ಪುನಃ 84 ಲಕ್ಷ ಪ್ರಾಣಿಗಳ ಶರೀರ ಧಾರಣೆ ಮಾಡಿ ಕಷ್ಟದ ಮೇಲೆ ಕಷ್ಟ ಅನುಭವಿಸುವರು. ಯಾರು 72 ಕೋಟಿ ಪ್ರಾಣಿಗಳ ಸಂಹಾರವನ್ನು ತನ್ನ ವಚನದಿಂದ ಮಾಡಿದನೋ, ಅದರ ಫಲವನ್ನು ಅನುಭವಿಸಬೇಕಾಗುವುದು. ಯಾರಾದರೂ, ಶಸ್ತ್ರಗಳಿಂದ ಹತ್ಯೆ ಮಾಡಲಿ, ಅಥವಾ ವಚನ ರೂಪದ ಕತ್ತಿಯಿಂದ ಹತ್ಯೆ ಮಾಡಿದರೂ, ಎರಡೂ ರೀತಿಗೆ ಒಂದೇ ಬಗೆಯ ದಂಡ(ಶಿಕ್ಷೆ) ನೀಡಲಾಗುವುದು. ಯಾವಾಗ ಚುಣಕ ಮಹರ್ಷಿಗಳು ನಾಯಿಯ ಶರೀರದಲ್ಲಿ ಜನಿಸುವರೋ, ಆಗ ಅದರ ತಲೆಗೆ ಗಾಯವಾಗುವುದು, ಗಾಯದಲ್ಲಿ ಕೀಡೆಗಳು ಸೇರಿ (ಸೈನಿಕರು) ಸೇಡು ತೀರಿಸಿಕೊಳ್ಳುವವು. ಮತ್ತೆ ಯಾವಾಗಲೋ ಕಾಲು ಮುರಿವುದು, ಹಿಂದಿನ ಎರಡೂ ಕಾಲು ಮುರಿದು ಮುಂದಿನ ಎರಡು ಕಾಲುಗಳಿಂದ ತೆವಳುತ್ತಾ ನಡೆವುದು ಹಾಗೂ ನೋವಿನ ಕಷ್ಟ ಅಸಹನೀಯವಾಗುವುದು. ನಾನಾ ಪ್ರಕಾರದ ಕಷ್ಟಗಳನ್ನು ಅನುಭವಿಸಬೇಕಾಗುವುದು.

ಆದ್ದರಿಂದ ಪವಿತ್ರ ಗೀತೆಯನ್ನು ಹೇಳಿರುವ ಬ್ರಹ್ಮ (ಕಾಲ) ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಸ್ವಯಂ ಹೇಳಿರುವನು ಈ ಎಲ್ಲ ಜ್ಞಾನಿ ಆತ್ಮಗಳು ಉದಾರ ಗುಣದವಾಗಿವೆ. ಆದರೆ ಪೂರ್ಣ ಪರಮಾತ್ಮನ 3 ಮಂತ್ರಗಳ, ವಾಸ್ತವಿಕ ಜ್ಞಾನವನ್ನು ತಿಳಿಸುವ, ತತ್ವದರ್ಶಿ ಸಂತ ಸಿಗದಿರುವ ಕಾರಣ, ಇವರೆಲ್ಲ ನನ್ನನ್ನೇ ಅತಿ ಶ್ರೇಷ್ಠ, ಮುಕ್ತಿದಾತ ಎಂದು ತಿಳಿದು, ಆಸೆಯಿಂದ,

ಆಶ್ರಿತರಾಗಿರುವರು, ಅರ್ಥಾತ್ ನನ್ನ ಉಪಾಸನೆಯೂ (ಅನುತ್ತಮಾಮ್) ಅಶ್ರೇಷ್ಠವಾದುದಾಗಿದೆ. ಆದ್ದರಿಂದ ಪವಿತ್ರ ಗೀತೆಯ 18ನೇ ಅಧ್ಯಾಯದ 62ನೇ ಶ್ಲೋಕದಲ್ಲಿ ಹೇಳಿದ್ದಾನೆ –ಹೇ ಅರ್ಜುನ! ನೀನು ಸರ್ವಭಾವದಿಂದ ಪೂರ್ಣ ಪರಮಾತ್ಮನಿಗೆ ಶರಣು ಹೋಗು ಅದರಿಂದ ಅವನ ಕೃಪೆ ದೊರೆತು, ನಿನಗೆ ಪರಮಶಾಂತಿ ಹಾಗೂ ಸನಾತನ ಪರಮ ಧಾಮ (ಸತ್ಯಲೋಕ) ಪ್ರಾಪ್ತವಾಗುವುದು. ಪವಿತ್ರ ಗೀತೆಯನ್ನು ಶ್ರೀ ಕೃಷ್ಣನ ಶರೀರದಲ್ಲಿ ಕಾಲ ಬ್ರಹ್ಮನು ಪ್ರೇತ ರೂಪದಲ್ಲಿ ಪ್ರವೇಶಿಸಿ ಹೇಳಿರುವನು. ನಂತರ ಅನೇಕ ವರ್ಷಗಳು ಕಳೆದ ಮೇಲೆ ನಾಲ್ಕು ವೇದಗಳನ್ನು ಮಹರ್ಷಿ ವ್ಯಾಸರ ಶರೀರದಲ್ಲಿ ಪ್ರೇತ ರೂಪದಲ್ಲಿ ಕಾಲ ಬ್ರಹ್ಮನು ಸ್ವಯಂ ಪ್ರವೇಶಿಸಿ ಲಿಪಿಬದ್ಧ ಮಾಡಿಸಿದನು. ಇದರಲ್ಲಿ ಪರಮಾತ್ಮ ಹೇಗಿದ್ದಾನೆ? ಹೇಗೆ ಅವನ ಭಕ್ತಿ ಮಾಡಬೇಕು? ಅದರಿಂದ ಏನೇನು ದೊರೆಯುವುದು? ಎಂಬುದರ ಬಗೆಗಿನ ಪೂರ್ಣ ಜ್ಞಾನವಿದೆ. ಆದರೆ ಪೂಜಾಕ್ರಮವು ಬ್ರಹ್ಮ (ಕ್ಷರ ಪುರುಷ) ಅರ್ಥಾತ್ ಜ್ಯೋತಿನಿರಂಜನ(ಕಾಲ) ನ ವರೆಗೆ ಮಾತ್ರ ಇದೆ.

ಪೂರ್ಣ ಬ್ರಹ್ಮನ ಭಕ್ತಿಗಾಗಿ ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕದಲ್ಲಿ ಗೀತೆಯನ್ನು ಹೇಳಿರುವ ಬ್ರಹ್ಮನು ಹೇಳಿದ್ದಾನೆ "ಪೂರ್ಣ ಪರಮಾತ್ಮನ ಭಕ್ತಿ ಹಾಗೂ ಅವರ ಪ್ರಾಪ್ತಿಗಾಗಿ ಯಾರಾದರೂ ತತ್ವಜ್ಞಾನಿ ಸಂತರನ್ನು ಹುಡುಕಿ", ನಂತರ ಅವರು ತಿಳಿಸುವ ರೀತಿಯಲ್ಲಿ ನಡೆಯಿರಿ. ಪವಿತ್ರ ಗೀತೆಯನ್ನು ಬೋಧಿಸಿದ ಪ್ರಭುವೇ ಹೇಳುತ್ತಿದ್ದಾನೆ.– "ಪೂರ್ಣ ಪರಮಾತ್ಮನ ಪೂರ್ಣ ಜ್ಞಾನ ಹಾಗೂ ಉಪಾಸನಾ ವಿಧಿ ನನಗೆ ತಿಳಿದಿಲ್ಲ." ತನ್ನ ಸಾಧನೆಗಾಗಿ ಗೀತೆಯ 8ನೇ ಅಧ್ಯಾಯದ 13ನೇ ಶ್ಲೋಕದಲ್ಲಿ ಹೇಳಿದ್ದಾರೆ ನನ್ನ ಭಕ್ತಿಯ ನಾಮ ಕೇವಲ "ಓಂ" ಅಕ್ಷರ ಆಗಿದೆ. ಅದನ್ನು ಉಚ್ಚರಿಸುತ್ತಾ (ತ್ಯಜನ ದೇಹಮ್) ಮರಣದವರೆಗೆ ಜಪ ಮಾಡಿದರೆ ನನ್ನ ಪರಮಗತಿಯನ್ನು ಪಡೆಯುತ್ತಾರೆ. ಪುನಃ ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹೇಳಿದೆ ಪ್ರಭುವನ್ನು ಬಯಸುವ ಆತ್ಮಗಳಿಗೆ, ತತ್ವದರ್ಶಿ ಸಂತರು ಸಿಗದ ಕಾರಣ ನನ್ನ (ಅನುತ್ತಮ) ಪರಮಗತಿಯಲ್ಲಿ ಉಳಿಯುತ್ತವೆ. (ಸ್ವತಃ ಗೀತೆಯನ್ನು ಬೋಧಿಸಿರುವ ಪ್ರಭುವೇ ಹೇಳುತ್ತಿದ್ದಾನೆ ನನ್ನ ಸಾಧನೆಯಿಂದ ದೊರಕುವ ಗತಿ ಅರ್ಥಾತ್ ಮುಕ್ತಿಕೂಡ ಶ್ರೇಷ್ಠವಲ್ಲ)

## "ಅನ್ಯ ದೇವರುಗಳ ಪೂಜೆಯನ್ನು ತಿಳುವಳಿಕೆ ಇಲ್ಲದವರು ಮಾಡುತ್ತಾರೆ (ರಜೋಗುಣ–ಬ್ರಹ್ಮಾನ, ಸತೋಗುಣ–ವಿಷ್ಣುವಿನ ಹಾಗೂ ತಮೋಗುಣ–ಶಿವನಪೂಜೆ)"

ಭಗವದ್ಗೀತೆಯ 7ನೇ ಅಧ್ಯಾಯದ 20ನೇ ಶ್ಲೋಕದಲ್ಲಿ ಹೇಳಿದೆ (ಅವರ ಸಂಬಂಧ ಅಧ್ಯಾಯ 7ರ 15 ರಿಂದಲೂ ಇದೆ) ತ್ರಿಗುಣಮಯಿ ಮಾಯೆಯ (ಬ್ರಹ್ಮಾ–ವಿಷ್ಣು–ಶಿವ) ಮೂಲಕ ಆಯಾಯಾ ಭೋಗಗಳ ಕಾಮನೆಯ ಜ್ಞಾನವು ಅಪಹರಿಸಲ್ಪಟ್ಟಿದೆಯೋ, ಅಂತಹ ರಾಕ್ಷಸ ಸ್ವಭಾವದ ನೀಚ ವ್ಯಕ್ತಿ, ದುಷ್ಕರ್ಮ ನಿರತ ಮೂರ್ಖ, ನನ್ನನ್ನು ಭಜಿಸುವುದಿಲ್ಲ. ಆ ಜನರು ತಮ್ಮ ಸ್ವಭಾವದಿಂದ ಪ್ರೇರಿತರಾಗಿ, ಆಯಾಯಾ ನಿಯಮಗಳನ್ನು ಧಾರಣೆ, ಮಾಡಿ, ಬೇರೆ ದೇವರುಗಳನ್ನು ಭಜಿಸುತ್ತಾರೆ. ಅರ್ಥಾತ್ ಪೂಜಿಸುತ್ತಾರೆ. ಗೀತೆಯ ಅಧ್ಯಾಯ 7ರ 21ನೇ ಶ್ಲೋಕದಲ್ಲಿ ಹೇಳಿದೆ ಯಾವ–ಯಾವ ಭಕ್ತರು, ಯಾವ ಯಾವ ದೇವರ ಸ್ವರೂಪವನ್ನು ಶ್ರದ್ಧೆಯಿಂದ ಪೂಜಿಸಲು ಬಯಸುತ್ತಾರೋ, ಆಯಾ ಭಕ್ತನ ಶ್ರದ್ಧೆಯನ್ನು ನಾನು ಅದೇ ದೇವರ ಕುರಿತು ಸ್ಥಿರಗೊಳಿಸುತ್ತೇನೆ.

ಗೀತೆಯ ಅಧ್ಯಾಯ 7ರ 22ನೇ ಶ್ಲೋಕದಲ್ಲಿ ಹೇಳಿದೆ ಯಾವ ಶ್ರದ್ಧೆಯಿಂದ ಯುಕ್ತನಾಗಿ ವ್ಯಕ್ತಿಯು, ಯಾವ ದೇವರ ಪೂಜೆಯನ್ನು ಮಾಡುತ್ತಾನೆ ಮತ್ತು ಆ ದೇವರಿಂದ ನನ್ನಿಂದಲೇ ವಿಧಿಸಲ್ಪಟ್ಟ, ಕೆಲವು ಬಯಸಿದ ಭೋಗಗಳನ್ನು ನಿಸ್ಸಂದೇಹವಾಗಿ ಪಡೆಯುತ್ತಾನೆ. ಹೇಗೆಂದರೆ,


'ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರ'
ಗೀತೆ ಅಧ್ಯಾಯ ಸ. 15
ಶ್ಲೋಕ ಸ.1 ರಿಂದ 4
ಹಾಗೂ ಶ್ಲೋಕ ಸ.16
ಮತ್ತು 17 ರ ತಾತ್ಪರ್ಯ
ಮೂಲ ಬೇರು
(ಪರಮ ಅಕ್ಷರ ಪುರುಷ)
ಕಬೀರ್, ಅಕ್ಷರ ಪುರುಷ ಏಕ್ ಪೇಡ್ ಹೈ,
ನಿರಂಜನ ಬಾಕೀ ಡಾರ್।
ತೀನೊಂ ದೇವಾ ಶಾಖಾ ಹೈ,
ಪಾತ ರೂಪ ಸಂಸಾರ್॥
ಕಾಂಡ 'ಪರಬ್ರಹ್ಮ'
(ಅಕ್ಷರ ಪುರುಷ)
ಕೊಂಬೆ (ಡಾರ್)
'ಬ್ರಹ್ಮ' (ಕ್ಷರ ಪುರುಷ)
ಶಿವ (ಶಾಖೆಗಳು)
ವಿಷ್ಣು
ಬ್ರಹ್ಮಾ
ಶಾಸ್ತ್ರದ ವಿರುದ್ಧ ಸಾಧನೆ ಅಂದರೆ
ಹಿಮ್ಮುಖವಾಗಿ ನೆಟ್ಟಿರುವ ಭಕ್ತಿ ರೂಪಿ ಸಸ್ಯ (ಗಿಡ)


ಶಿವ
ಗೀತೆ ಅಧ್ಯಾಯ ಸ. 15
ಶ್ಲೋಕ ಸ. 1 ರಿಂದ 4
ಹಾಗೂ ಶ್ಲೋಕ ಸ. 16
ಮತ್ತು 17 ರ ತಾತ್ಪರ್ಯ
ವಿಷ್ಣು
ಬ್ರಹ್ಮಾ
[ಶಾಖೆಗಳು]
ಕೊಂಬೆ (ಡಾರ್)
'ಬ್ರಹ್ಮ' (ಕ್ಷರ ಪುರುಷ)
ಕಬೀರ್, ಅಕ್ಷರ ಪುರುಷ ಎಕ್ ಪೇಡ್ ಹೈ,
ನಿರಂಜನ ಬಾಕೀ ಡಾರ್।
ತೀನೊಂ ದೇವಾ ಶಾಖಾ ಹೈ,
ಪಾತ ರೂಪ ಸಂಸಾರ್॥
ಕಾಂಡ 'ಪರಬ್ರಹ್ಮ'
(ಅಕ್ಷರ ಪುರುಷ)
ಮೂಲ ಬೇರು
'ಪೂರ್ಣ ಬ್ರಹ್ಮ'
ಕಬೀರ್ ಪರಮೇಶ್ವರ
(ಪರಮ ಅಕ್ಷರ ಪುರುಷ)
ಶಾಸ್ತ್ರದ ಅನುಕೂಲ ಸಾಧನೆ ಅಂದರೆ
ನೇರವಾಗಿ ನೆಟ್ಟಿರುವ ಭಕ್ತಿ ರೂಪಿ ಸಸ್ಯ (ಗಿಡ)

ಮುಖ್ಯಮಂತ್ರಿ ಹೇಳುತ್ತಾನೆ ಕೆಳಗಿನ ಅಧಿಕಾರಿಗಳು ನನ್ನ ನೌಕರರಾಗಿದ್ದಾರೆ. ನಾನೇ ಅವರಿಗೆ ಕೆಲವು ಅಧಿಕಾರಗಳನ್ನು ಕೊಟ್ಟಿರುವೆ ಯಾರು ಅವರ (ಅಧಿಕಾರಿಗಳ) ಆಶ್ರಿತರಾಗಿದ್ದಾರೆ. ಆ ಲಾಭವು ಸಹ, ನನ್ನ ಮೂಲಕವೇ ಕೊಡಲ್ಪಟ್ಟಿದೆ. ಆದರೆ ಪೂರ್ಣ ಲಾಭದಲ್ಲಿ ಭಗವದ್ಗೀತೆಯ ಅಧ್ಯಾಯ 7ರ 23ನೇ ಶ್ಲೋಕದಲ್ಲಿ ವರ್ಣಿತವಾಗಿದೆ.– ಆ ಮಂದಬುದ್ಧಿಯವರ, ಆ ಫಲವು ನಾಶವಾಗುವಂತಹದಾಗಿದೆ. ದೇವರುಗಳನ್ನು ಪೂಜಿಸುವವರು, ದೇವರುಗಳನ್ನು ಪಡೆಯುತ್ತಾರೆ ಮತಾವಲಂಬಿಗಳು ಯಾರು ವೇದಗಳಲ್ಲಿ ತಿಳಿಸಿರುವ ಭಕ್ತಿಯ ವಿಧಿ ಅನುಸಾರ ಭಕ್ತಿ ಮಾಡುವ ಭಕ್ತರು ನನ್ನನ್ನೇ ಸೇರುತ್ತಾರೆ. ಅರ್ಥಾತ್ ಕಾಲನ ಜಾಲದಿಂದ ಯಾರೂ ಹೊರಗೆ ಇಲ್ಲ.

ವಿಶೇಷ :– ಭಗವದ್ಗೀತೆಯ ಅಧ್ಯಾಯ 7ರ 20ನೇ ಶ್ಲೋಕದಿಂದ 23ನೇ ಶ್ಲೋಕದವರೆಗೆ ಹೇಳಲಾಗಿದೆ ಅವರವರ ಸ್ವಭಾವಕ್ಕೆ ಅನುಗುಣವಾಗಿ, ಪಿತೃ, ಭೂತ, ದೇವ–ದೇವತೆ ಮೊದಲಾದ ಪೂಜೆಗಳನ್ನು ಮಾಡುತ್ತಾರೆ. ನಾನು (ಕಾಲ ಬ್ರಹ್ಮ) ಆ ಮಂದ ಬುದ್ಧಿಯ ಜನರನ್ನು (ಭಕ್ತರನ್ನು) ಅದೇ ದೇವರುಗಳ ಬಗ್ಗೆ ಆಸಕ್ತಿ ತಾಳುವಂತೆ ಮಾಡುತ್ತೇನೆ. ನಾನೇ (ಕಾಲನೇ) ಆ ದೇವರುಗಳಿಗೆ ಕೆಲವು ಶಕ್ತಿಗಳನ್ನು ಕೊಟ್ಟಿರುವೆನು. ಅದಕ್ಕೆ ಅನುಸಾರವಾಗಿಯೇ ಅವರ ಪೂಜೆ ಮಾಡುವವರಿಗೆ, ಆಯಾ ದೇವರುಗಳು ಪ್ರಾಪ್ತವಾಗುತ್ತಾರೆ. ಆದರೆ ಆ ಬುದ್ಧಿಹೀನ ಭಕ್ತರ ಪೂಜೆಯು, ಅವರನ್ನು ಶೀಘ್ರವಾಗಿ 84 ಲಕ್ಷ ಯೋನಿಗಳಲ್ಲಿ ಕರೆದೊಯ್ಯುವುದಾಗಿದೆ ಹಾಗೂ ಯಾರು ನನ್ನನ್ನು (ಕಾಲನನ್ನು) ಭಜಿಸುವರೋ, ಅವರು ತಪ್ತಶಿಲೆಯ ಮೇಲೆ, ಪುನಃ ನನ್ನ ಮಹಾ ಸ್ವರ್ಗಕ್ಕೆ (ಬ್ರಹ್ಮಲೋಕ) ಹೋಗುತ್ತಾರೆ. ಆದಾದ ನಂತರ ಜನನ–ಮರಣಗಳ ಸುಳಿಯಲ್ಲೇ ಇರುತ್ತಾರೆ. ಮೋಕ್ಷ ಪ್ರಾಪ್ತವಾಗುವುದಿಲ್ಲ.

ಭಾವಾರ್ಥ :– ದೇವ–ದೇವತೆಗಳ ಹಾಗೂ ಬ್ರಹ್ಮಾ–ವಿಷ್ಣು–ಶಿವ ಹಾಗೂ ಮಾತೆಯ ಪೂಜೆಗಿಂತ, ಬ್ರಹ್ಮನ ಪೂಜೆ ಅಧಿಕ ಲಾಭದಾಯಕವಾದದ್ದು, ಮಹಾಸ್ವರ್ಗಕ್ಕೆ ಹೋದ ಸಾಧಕರ ಸ್ವರ್ಗವಾಸದ ಅವಧೀ ಒಂದು ಮಹಾಕಲ್ಪದವರೆಗೂ ಇರಬಹುದು. ಆದರೆ ಮಹಾಸ್ವರ್ಗದಲ್ಲಿ ಶುಭ ಕರ್ಮಗಳ ಸುಖವನ್ನು ಅನುಭವಿಸಿ, ಪುನಃ ನರಕ ಹಾಗೂ ಅನ್ಯ ಪ್ರಾಣಿಗಳ ಶರೀರದಲ್ಲಿ ಕಷ್ಟ ಪಡಬೇಕಾಗುವುದು. ಪೂರ್ಣ ಮೋಕ್ಷ ದೊರೆಯುವುದಿಲ್ಲ. ಅರ್ಥಾತ್ ಕಾಲನ ಜಾಲದಿಂದ ಮುಕ್ತಿ ಇಲ್ಲ.

## "ಅನ್ಯ ಪ್ರಮಾಣ"

ಪವಿತ್ರ ಭಗವದ್ಗೀತೆ ಮತ್ತು ಪವಿತ್ರ ವೇದಗಳಲ್ಲಿ ಅನ್ಯ ದೇವರುಗಳ ಪೂಜೆ ಹಾಗೂ ಪಿತೃ ಪೂಜೆ (ಶ್ರಾದ್ಧ) ಮಾಡುವುದು ಹಾಗೂ ಭೂತ ಪೂಜೆ ಮಾಡುವುದು (ಅಸ್ಥಿ ಬಿಡುವುದು, ಪಿಂಡ ಪ್ರಧಾನ, ಹೂವು ಎತ್ತುವುದು, ಪಿಂಡ ತುಂಬುವುದು. ಸಮಾಧಿ ಪೂಜೆ) ಇವುಗಳನ್ನು ನಿಷೇಧಿಸಿದೆ.

## "ಪವಿತ್ರವಾದ ನಾಲ್ಕು ವೇದಗಳ ಪ್ರಕಾರ ಸಾಧನೆಯ ಪರಿಣಾಮ ಕೇವಲ ಸ್ವರ್ಗ ಅಥವಾ ಮಹಾ ಸ್ವರ್ಗ ಪ್ರಾಪ್ತಿ ಮುಕ್ತಿಯಲ್ಲ".

ಪವಿತ್ರ ಗೀತೆಯ ಅಧ್ಯಾಯ 9ರ ಶ್ಲೋಕ 20,21ರಲ್ಲಿ ಹೇಳಿದೆ ಯಾರು, ಮನೋಕಾಮನೆಯ ಸಿದ್ಧಿಗಾಗಿ, ನನ್ನ ಪೂಜೆಯನ್ನು ಮೂರು ವೇದಗಳಲ್ಲಿ ವರ್ಣಿಸಿರುವಂತೆ, ಶಾಸ್ತ್ರಾನುಕೂಲವಾಗಿ ಮಾಡುತ್ತಾರೋ, ಅವರು ಅವರ ಕರ್ಮಗಳಿಗೆ ಅನುಸಾರವಾಗಿ, ಮಹಾ ಸ್ವರ್ಗದಲ್ಲಿ ಆನಂದದಿಂದ ಇದ್ದು, ಪುನಃ ಜನ್ಮ ಮರಣಗಳಿಗೆ ಒಳಪಡುತ್ತಾರೆ. ಅರ್ಥಾತ್ ಶಾಸ್ತ್ರಾನುಕೂಲವಾಗಿ ಯಜ್ಞಗಳನ್ನು ಮಾಡಿದರೂ, ಅವುಗಳ ಏಕಮಾತ್ರ ಲಾಭ, ಸಾಂಸಾರಿಕ ಭೋಗ, ಸ್ವರ್ಗ, ಪುನಃ ನರಕ ಮತ್ತು 84

ಲಕ್ಷ ಯೋನಿಗಳಲ್ಲಿ ಬರುವುದೇ ಆಗಿದೆ. ಎಲ್ಲಿಯವರೆಗೆ ಮೂರು ಮಂತ್ರ (ಓಂ–ತತ್–ಸತ್)ಗಳೂ, ಪೂರ್ಣ ಸಂತರಿಂದ ಪ್ರಾಪ್ತವಾಗುವುದಿಲ್ಲವೋ, ಅಲ್ಲಿಯವರೆಗೆ ಪೂರ್ಣ ಮೋಕ್ಷ, ಪರಮ ಶಾಂತಿ–ಪರಂಧಾಮ ಲಭ್ಯವಿಲ್ಲ. ಅಧ್ಯಾಯ 9ರ 22ನೇ ಶ್ಲೋಕದಲ್ಲಿ ಹೇಳಿದೆ–

ಯಾರು ನನ್ನನ್ನು ನಿಷ್ಕಾಮ ಭಾವದಿಂದ ಶಾಸ್ತ್ರಾನುಕೂಲವಾಗಿ ಪೂಜೆ ಮಾಡುತ್ತಾರೋ, ಅವರ ಪೂಜೆಯ ಸಾಧನೆಯ ರಕ್ಷೆಯನ್ನು ನಾನೇ ಸ್ವತಃ ಮಾಡುವೆನು. ಆದರೆ ಮುಕ್ತಿಯಲ್ಲ.

## "ಶಾಸ್ತ್ರವಿಧಿ ವಿರುದ್ಧ ಸಾಧನೆಯು ಪತನಕ್ಕೆ ಕಾರಣ"

ಪವಿತ್ರ ಗೀತೆಯ 9ನೇ ಅಧ್ಯಾಯದ 23, 24ನೇ ಶ್ಲೋಕದಲ್ಲಿ ಹೇಳಿದೆ ಯಾವ ವ್ಯಕ್ತಿ ಬೇರೆ ದೇವರುಗಳ ಪೂಜೆ ಮಾಡುವರೋ, ಅವರೂ ಸಹ ನನ್ನ (ಕಾಲ ಜಾಲದಲ್ಲಿ) ಪೂಜೆ ಮಾಡುತ್ತಿರುವರು. ಅವರ ಈ ಪೂಜೆಯು, ಸ್ವ ಇಚ್ಛೆ ಪೂರ್ವಕವಾಗಿದೆ. (ಅರ್ಥಾತ್ ಶಾಸ್ತ್ರ ವಿರುದ್ಧವಿದೆ. ಭಾವಾರ್ಥ : ಅನ್ಯದೇವರುಗಳನ್ನು ಪೂಜಿಸಬಾರದು) ಏಕೆಂದರೆ ಸಂಪೂರ್ಣ ಯಜ್ಞಗಳನ್ನು ಭೋಗಿಸುವ ಸ್ವಾಮಿ ನಾನೇ ಆಗಿರುವೆ. ಆ ಭಕ್ತರು ನನ್ನ ಅನುತ್ತಮ ರೀತಿಯನ್ನು ತಿಳಿದಿಲ್ಲ. ಆದ್ದರಿಂದ ಅವರ ನರಕ ಹಾಗೂ 84 ಲಕ್ಷ ಯೋನಿಗಳ ಕಷ್ಟ ಮತ್ತು ಪತನಕ್ಕೆ ನಾನೇ ಕಾರಣ. ಹೇಗೆಂದರೆ ಗೀತೆಯ 3ನೇ ಅಧ್ಯಾಯದ 14–15ನೇ ಶ್ಲೋಕಗಳಲ್ಲಿ ಹೇಳಿದೆ. ಯಾರಿಗೆ ಎಲ್ಲ ಪ್ರತಿಷ್ಠಿತ ಯಜ್ಞವನ್ನು ಸಮರ್ಪಣೆ ಮಾಡುತ್ತಾರೋ, ಆ ಪರಮಾತ್ಮ (ಸರ್ವಗತಮ್ ಬ್ರಹ್ಮ) ಪೂರ್ಣ ಬ್ರಹ್ಮನಾಗಿದ್ದಾನೆ. ಅವನೇ ಕರ್ಮಾಧಾರವಾಗಿ, ಎಲ್ಲ ಪ್ರಾಣಿಗಳನ್ನು ಪ್ರಧಾನ ಮಾಡುತ್ತಾನೆ. ಆದರೆ ಪೂರ್ಣ ಸಂತ ಸಿಗುವ ತನಕ ಎಲ್ಲ ಯಜ್ಞದ ಭೋಗ (ಆನಂದ) ವನ್ನು ಕಾಲನೇ (ಮನ ರೂಪದಲ್ಲಿ) ಅನುಭವಿಸುತ್ತಾನೆ. ಅದಕ್ಕಾಗಿಯೇ ಹೇಳಿರುವುದು, ನಾನು ಎಲ್ಲ ಯಜ್ಞಗಳ ಭೋಗಿಸುವ ಸ್ವಾಮಿ ಎಂದು.

## "ಶ್ರಾದ್ಧ ಮಾಡುವವರು ಪಿತೃ ಆಗುತ್ತಾರೆ ಆದರೆ ಮುಕ್ತಿ ಸಿಗುವದಿಲ್ಲ"

ಗೀತೆಯ 9ನೇ ಅಧ್ಯಾಯದ 25ನೇ ಶ್ಲೋಕದಲ್ಲಿ ಹೇಳಿದೆ– ದೇವರುಗಳನ್ನು ಪೂಜಿಸುವವರು ದೇವರುಗಳನ್ನು ಪಡೆಯುತ್ತಾರೆ. ಪಿತೃಗಳನ್ನು ಪೂಜಿಸುವವರು. ಪಿತೃಗಳನ್ನು ಪಡೆಯುತ್ತಾರೆ. ಭೂತಗಳನ್ನು ಪೂಜಿಸುವವರು ಭೂತಗಳನ್ನು (ಪಿಂಡ ದಾನ ಮಾಡುವ) ಪಡೆಯುತ್ತಾರೆ. ಅರ್ಥಾತ್ ಭೂತವಾಗುತ್ತಾರೆ. ಶಾಸ್ತ್ರಾನುಕೂಲ (ಪವಿತ್ರ ವೇದಗಳು ಹಾಗೂ ಗೀತೆಯ ಅನುಸಾರ) ಪೂಜೆ ಮಾಡುವವರು (ನನ್ನನ್ನು ಪೂಜಿಸುವವರು) ನನ್ನನ್ನೇ ಪಡೆಯುತ್ತಾರೆ. ಅರ್ಥಾತ್ ಕಾಲನ ಮೂಲಕ ಮಾಡಲ್ಪಟ್ಟಿರುವ, ಸ್ವರ್ಗ ಹಾಗೂ ಮಹಾ ಸ್ವರ್ಗ ಮೊದಲಾದುವುಗಳಲ್ಲಿ, ಹೆಚ್ಚು ಸಮಯ ಆನಂದ ಪಡುತ್ತಾರೆ.

ವಿಶೇಷ :– ಉದಾಹರಣೆಗೆ ಯಾರಾದರೂ ತಹಸೀಲ್ದಾರರಲ್ಲಿ ನೌಕರಿ (ಸೇವಾ–ಪೂಜಾ) ಮಾಡುತ್ತಿದ್ದರೆ, ತಹಸೀಲ್ದಾರರಾಗಲು ಸಾಧ್ಯವಿಲ್ಲ. ಹೌದು, ಅವರ ಅಧೀನದಲ್ಲೇ ಇರುವನು. ಸರಿಯಾಗಿ ಇದೇ ರೀತಿ ಯಾರು ಯಾವ ದೇವರ ಪೂಜೆ ಮಾಡುವರೋ, (ಬ್ರಹ್ಮಾ–ವಿಷ್ಣು–ಶಿವ ಅರ್ಥಾತ್ ಮೂರು ದೇವರ) ಅವರಿಂದ ಸಿಗುವ ಲಾಭವನ್ನೇ ಪಡೆಯುತ್ತಾರೆ. ತ್ರಿಗುಣಮಯಿ ಮಾಯೆ ಅರ್ಥಾತ್ ಮೂರು ಗುಣ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ಹಾಗೂ ತಮೋಗುಣ–ಶಿವ) ಗಳ ಪೂಜೆಯ ನಿಷೇಧವನ್ನು ಪವಿತ್ರ ಗೀತೆಯ, 7ನೇ ಅಧ್ಯಾಯದ 12 ರಿಂದ 15ನೇ ಶ್ಲೋಕಗಳಲ್ಲಿ ಹಾಗೂ 20 ರಿಂದ 23ನೇ ಶ್ಲೋಕಗಳಲ್ಲಿ ಸಹ ತಿಳಿಸಿದೆ. ಇದೇ

ಪ್ರಕಾರ, ಯಾರು ಪಿತೃ ಪೂಜೆಮಾಡುವರೋ, ಅವರು ಪಿತೃಗಳ ಹತ್ತಿರ ಚಿಕ್ಕ ಪಿತೃವಾಗಿ, ಅವರ ಹತ್ತಿರವೇ ಕಷ್ಟ ಅನುಭವಿಸಬೇಕು. ಇದೇ ಪ್ರಕಾರ ಯಾರು ಭೂತಗಳ ಪೂಜೆ ಮಾಡುವರೋ, (ಪ್ರೇತ) ಅವರು ಭೂತವಾಗುವರು. ಏಕೆಂದರೆ ಜೀವನ ಪೂರ್ತಿಯಾಗಿ ಯಾವುದರಲ್ಲಿ ಆಶಾಯುಕ್ತರಾಗಿರುವರೋ, ಕಡೆಯಲ್ಲಿ ಮನಸ್ಸು ಅದರಲ್ಲಿಯೇ ಸಿಲುಕುತ್ತದೆ. ಈ ಕಾರಣದಿಂದ, ಅವುಗಳ ಜೊತೆಗೆ ಹೋಗುತ್ತಾರೆ. ಕೆಲವರು ಹೀಗೆ ಹೇಳುತ್ತಾರೆ ಪಿತೃ-ದೇವರು-ಭೂತಗಳ ಪೂಜೆಗಳನ್ನೂ ಮಾಡುವೆವು. ತಮ್ಮಿಂದ ಉಪದೇಶ ಪಡೆದು ಸಾಧನೆಯನ್ನೂ ಮಾಡುವೆವು. ಹೀಗೆ ನಡೆಯುವುದಿಲ್ಲ. ಯಾವ ಸಾಧನೆಯನ್ನು ಪವಿತ್ರ ಗೀತೆ ಹಾಗೂ ಪವಿತ್ರ ನಾಲ್ಕು ವೇದಗಳು ನಿಷೇಧಿಸಿವೆ, ಅದನ್ನು ಮಾಡಿದರೆ, ಶಾಸ್ತ್ರ ವಿರುದ್ಧವಾಗುವುದು. ಯಾವುದನ್ನು ಪವಿತ್ರ ಗೀತೆಯ 16ನೆಯ ಅಧ್ಯಾಯದ 23-24ನೇ ಶ್ಲೋಕಗಳಲ್ಲಿ ನಿಷೇಧಿಸಿದೆ, ಅದನ್ನು ಯಾರು ಶಾಸ್ತ್ರ ನಿಯಮವನ್ನು ವಿರೋಧಿಸಿ, ಮನಬಂದಂತೆ ಆಚರಣೆ (ಪೂಜೆ) ಮಾಡುವರೋ, ಅವರು ಸುಖವನ್ನಾಗಲಿ, ಪರಮಗತಿಯನ್ನಾಗಲಿ ಪಡೆಯುವುದಿಲ್ಲ. ಯಾವುದೆ ಕೆಲಸದ ಸಿದ್ಧಿಗಾಗಿ ಸಾಧನೆ ಮಾಡಿದರೆ ಸಿದ್ಧಿಯನ್ನು ಮಾತ್ರ ಪಡೆಯುತ್ತಾರೆ ಅರ್ಥಾತ್ ಜೀವನವನ್ನು ವ್ಯರ್ಥ ಮಾಡಿಕೊಳ್ಳುತ್ತಾರೆ. ಆದ್ದರಿಂದ ಅರ್ಜುನ ನಿನ್ನ ಕರ್ತವ್ಯ (ಯಾವುದು ಸಾಧನೆಗಾಗಿ ಕರ್ಮ ಮಾಡಲು ಯೋಗ್ಯವೋ) ಹಾಗೂ ಅಕರ್ತವ್ಯದ (ಯಾವುದು ಸಾಧನೆಗಾಗಿ ಕರ್ಮ ಮಾಡಲು ಯೋಗ್ಯವಿಲ್ಲವೋ) ವ್ಯವಸ್ಥೆ (ನಿಯಮ) ಯಲ್ಲಿ ಶಾಸ್ತ್ರವೇ ಪ್ರಮಾಣವಿದೆ.

ಇದರ ಪ್ರಮಾಣವು "ಮಾರ್ಕಂಡೇಯ ಪುರಾಣ" (ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತ ಪುಟ 237ರಲ್ಲಿದೆ. ಇದರಲ್ಲಿ ಮಾರ್ಕಂಡೇಯ ಪುರಾಣ ಹಾಗೂ ಬ್ರಹ್ಮ ಪುರಾಣಗಳು ಒಟ್ಟಾಗಿ ಇವೆ) 'ರುಚೀ' ಎಂಬ ಹೆಸರಿನ ಒಬ್ಬ ಸಾಧಕ ಬ್ರಹ್ಮಚಾರಿಯು, ವೇದಗಳ ಅನುಸಾರವಾಗಿ ಸಾಧನೆ ಮಾಡುತ್ತಿದ್ದ. ಅವನಿಗೆ 40 ವರ್ಷವಾದಾಗ, ತನ್ನ ನಾಲ್ಕು ಜನ ಪೂರ್ವಜರು, ಶಾಸ್ತ್ರ ವಿರುದ್ಧದ ಸಾಧನೆ ಮಾಡಿ, ಪಿತೃವಾಗಿದ್ದರು ಹಾಗೂ ಕಷ್ಟ ಪಡುತ್ತಿದ್ದರು. ಈ ರೀತಿ ಅವನಿಗೆ ಕಾಣಿಸಿತು. ಪಿತೃಗಳು ಹೇಳಿದರು. ಮಗನೆ, ಮದುವೆ ಮಾಡಿಕೊಂಡು, ನಮ್ಮ ಶ್ರಾದ್ಧವನ್ನು ಮಾಡು. ನಾವು ದುಃಖಿತರಾಗಿದ್ದೇವೆ. "ರುಚೀ ಋಷಿ" ಯು ಹೇಳಿದನು "ಪಿತೃ ಮಹರೇ, ವೇದದಲ್ಲಿ ಕರ್ಮಕಾಂಡ ಮಾರ್ಗವನ್ನು (ಶ್ರಾದ್ಧ, ಪಿಂಡ ಪ್ರಧಾನ ಆದಿ) ಮೂರ್ಖರ ಸಾಧನೆ ಎಂದು ಹೇಳಿದ್ದಾರೆ. ಆದರೆ ನೀವು ಏಕೆ ನನ್ನನ್ನು ತಪ್ಪು ದಾರಿ ಹಿಡಿಯಲು (ಶಾಸ್ತ್ರ ವಿಧಿ ರಹಿತ) ತಿಳಿಸುತ್ತಿರುವಿರಿ". ಪಿತೃಗಳು ಹೇಳಿದರು ಮಗನೆ, ನಿನ್ನ ಈ ಮಾತುಗಳು ಸತ್ಯವಾಗಿದೆ. ವೇದದಲ್ಲಿ ಪಿತೃ ಪೂಜೆ, ಭೂತ ಪೂಜೆ, ದೇವ-ದೇವತೆಯರ ಪೂಜೆ (ಕರ್ಮ ಕಾಂಡ) ಯನ್ನು ಅವಿದ್ಯೆ ಎಂದೇ ಹೇಳಿದೆ. ಇದರಲ್ಲಿ ಎಳ್ಳಷ್ಟು ಸುಳ್ಳಿಲ್ಲ." ಇದೇ ಮೇಲಿನ ಮಾರ್ಕಂಡೇಯ ಪುರಾಣದಲ್ಲಿ, ಇದೇ ಬರಹದಲ್ಲಿ ಪಿತೃಗಳು ಹೇಳಿದರು- ಪಿತೃಗಳು ಸ್ವಲ್ಪ ಲಾಭವನ್ನು ಕೊಡುತ್ತಾರೆ.

ವಿಶೇಷ :- ಇದು ಕೆಲವು ಪಿತೃಗಳು ವಚಾರ, (ಮಾಡಬೇಕೆಂದು ತಿಳಿಸಿದ್ದಾರೆ) ಅದನ್ನು ನಾವು ಪಾಲಿಸಬೇಕಿಲ್ಲ. ಏಕೆಂದರೆ, ಪುರಾಣದಲ್ಲಿನ ಆದೇಶವು ಒಬ್ಬ ಋಷಿಯದ್ದು ಮಾತ್ರ ಆಗಿರುತ್ತದೆ. ಅವರು ಪಿತೃಪೂಜೆ, ಭೂತ ಅಥವಾ ಅನ್ಯ ದೇವ-ದೇವಿಯರ ಪೂಜೆಯನ್ನು ತಿಳಿಸಿದ್ದಾರೆ. ಆದರೆ ವೇದಗಳಲ್ಲಿ ಪ್ರಮಾಣವು ಇಲ್ಲದಿರುವ ಕಾರಣ, ಇದು ಪ್ರಭುವಿನ ಆದೇಶವಲ್ಲ. ಆದ್ದರಿಂದ ಯಾವುದೋ ಋಷಿ ಅಥವಾ ಸಂತ ಹೇಳಿರುವುದನ್ನು ಮಾಡಿದರೆ, ಪ್ರಭುವಿನ ಆಜ್ಞೆಯನ್ನು ಉಲ್ಲಂಘನೆ ಮಾಡಿ, ಶಿಕ್ಷೆಗೆ ಭಾಗಿಯಾಗುವರು.

ಒಮ್ಮೆ ಒಬ್ಬ ವ್ಯಕ್ತಿಯ ಗೆಳೆತನ, ಒಬ್ಬ ಪೋಲಿಸ್‌ನವನೊಂದಿಗೆ ಆಯಿತು. ಆ ವ್ಯಕ್ತಿಯು, ತನ್ನ

ಗೆಳೆಯ ಪೋಲಿಸ್‌ರಲ್ಲಿ ಹೇಳಿದ– "ನನ್ನ ಪಕ್ಕದವನು ನನಗೆ ಬಹಳ ತೊಂದರೆ ಕೊಡುತ್ತಾನೆ." ಪೋಲಿಸ್ ಠಾಣೇದಾರ್ (ಋ.ಊ.ಔ) ಹೇಳಿದ– "ಅವನಿಗೆ ದೊಣ್ಣೆಯಿಂದ ಹೊಡಿ, ನಾನು ನಿನ್ನನ್ನು ಬಚಾವು ಮಾಡುವೆನು". ಗೆಳೆಯನ ಮಾತಿನಂತೆ ಆ ವ್ಯಕ್ತಿ ಪಕ್ಕದ ಮನೆಯವನ ತಲೆಗೆ ದೊಣ್ಣೆಯಿಂದ ಹೊಡೆದ. ತಲೆಯಲ್ಲಿ ಬಾರಿ ಗಾಯವಾಗಿ ಪಕ್ಕದವನು ಸತ್ತುಹೋದ. ಅದೇ ಪ್ರಾಂತದ ಅಧಿಕಾರಿಯಾಗಿದ್ದ ಪೋಲಿಸ್ ಗೆಳೆಯ, ಹೊಡೆದ ತನ್ನ ಗೆಳೆಯನನ್ನು ಹಿಡಿದು ಜೈಲಿಗೆ ಹಾಕಿದ, ಮೃತ್ಯು ದಂಡದ ಸಜಾ ವಿಧಿಸಿದ ಪೋಲಿಸ್ ಗೆಳೆಯನಿಗೆ ತನ್ನ ಗೆಳೆಯನನ್ನು ಬಚಾವು ಮಾಡಲು ಸಾಧ್ಯವಾಗಲಿಲ್ಲ. ತನ್ನ ಗೆಳೆಯನಿಗೆ ಸಹಾಯ ಮಾಡಲಾಗಲಿಲ್ಲ. ಏಕೆಂದರೆ, ಸಂವಿಧಾನ ಹೇಳುವ ಪ್ರಕಾರ, ಯಾವುದೇ ವ್ಯಕ್ತಿ ಯಾರನ್ನಾದರೂ ಕೊಲೆ ಮಾಡಿದರೆ, ಅವರಿಗೆ ಮೃತ್ಯು ದಂಡವು ಪ್ರಾಪ್ತವಾಗುವುದು. ಆ ಅಜ್ಞಾನಿ ವ್ಯಕ್ತಿಯು ತನ್ನ ಗೆಳೆಯ ಪೋಲಿಸ್‌ನ ಮಾತು ಕೇಳಿ, ರಾಜನ ಸಂವಿಧಾನದ ರೀತಿಯನ್ನು ಭಂಗ ಮಾಡಿದ, ಇದರಿಂದಾಗಿ ಜೀವನವನ್ನೇ ಕಳೆದುಕೊಳ್ಳಬೇಕಾಯಿತು. ಸರಿಯಾಗಿ ಇದೇ ಪ್ರಕಾರ. ಪವಿತ್ರ ಗೀತೆ ಹಾಗೂ ಪವಿತ್ರ ವೇದ, ಈ ಪ್ರಭುವಿನ ಸಂವಿಧಾನವಾಗಿದೆ. ಅದರಲ್ಲಿ ಒಬ್ಬ ಪೂರ್ಣ ಪರಮಾತ್ಮನ ಪೂಜೆಯ ವಿಧಾನವಿದೆ. ಅನ್ಯ ದೇವರುಗಳ, ಪಿತೃಗಳ, ಭೂತಗಳ ಪೂಜೆಯನ್ನು ನಿಷೇಧಿಸಿದೆ.

ಪುರಾಣಗಳಲ್ಲಿ ಋಷಿಗಳ (ಠಾಣೇದಾರನ) ಆದೇಶವಿದೆ. ಅವರ ಆಜ್ಞೆಯನ್ನು ಪಾಲನೆ

ಮಾಡುವುದರಿಂದ, ಸಂವಿಧಾನ ಭಂಗವಾಗುವ ಕಾರಣ, ಕಷ್ಟದ ಮೇಲೆ ಕಷ್ಟ ಪಡಯಬೇಕಾಗುತ್ತದೆ. ಆದ್ದರಿಂದ ವಾಮಾಚಾರ ಉಪಾಸನೆಯು, ಪೂರ್ಣ ಮೋಕ್ಷಕ್ಕೆ ಬಾಧಕವಾಗಿದೆ

## "ಸತ್ಯ ಕಥೆ"

ನನ್ನ ಪೂಜ್ಯ ಗುರುದೇವರು, ಸ್ವಾಮೀ ರಾಮದೇವಾನಂದರು, ಸುಮಾರು 16 ವರ್ಷದವರಿದ್ದಾಗ, ಪೂರ್ಣ ಪರಮಾತ್ಮನನ್ನು ಪಡೆಯುವುದಕ್ಕಾಗಿ, ಇದ್ದಕ್ಕಿದ್ದಂತೆ ಮನೆ ಬಿಟ್ಟು ಹೊರಟರು. ತಮ್ಮ ಬಟ್ಟೆಯನ್ನು ತಮ್ಮ ಗದ್ದೆಯ ಹತ್ತಿರ ಇದ್ದ ದಟ್ಟ ಕಾಡಿನಲ್ಲಿ, ಯಾವುದೋ ಮೃತ ಪ್ರಾಣಿಯ ಅಸ್ಥಿಯ ಹತ್ತಿರ ಹಾಕಿದರು. ಸಂಜೆಗೆ ಮನೆಗೆ ಬಾರದ ಕಾರಣ. ಮೆನಯವರು ಕಾಡಿನಲ್ಲಿ ಹುಡುಕಿದರು. ರಾತ್ರಿಯ ವೇಳೆಯಾಗಿತ್ತು. ಬಟ್ಟೆಯನ್ನು ಗುರುತಿಸಿದರು. ಬಹಳ ದುಃಖಿಸಿದರು. ಮೃತ ಪ್ರಾಣೀಯ ಮೂಳೆಯನ್ನು, ಮಗು (ರಾಮದೇವಾನಂದರ) ವಿನ ಅಸ್ಥಿ ಎಂದು ತಿಳಿದು, ಅದನ್ನು ಎತ್ತಿ ತಂದರು. ಯಾವುದೋ ಕಾಡು ಪ್ರಾಣಿ ಮಗುವನ್ನು ತಿಂದಿರಬಹುದು ಎಂದು ಯೋಚಿಸಿದರು. ಅಂತ್ಯ ಸಂಸ್ಕಾರ ಮಾಡಿದರು. ಎಲ್ಲಾ ಕ್ರಿಯೆಗಳನ್ನು ಮಾಡಿದರು. ಹದಿಮೂರನೆಯ ದಿನದ ತಿಥಿ ಮುಂತಾದವುಗಳನ್ನು ಮಾಡಿ, ಶ್ರಾದ್ಧ ಮಾಡತೊಡಗಿದರು. ಸುಮಾರು 104 ವರ್ಷದವರಾದಾಗ, ಇದ್ದಕ್ಕಿದ್ದಂತೆ ತನ್ನ ಹಳ್ಳಿ ಹರಿಯಾಣದ, ಭಿವಾನಿ ಜಿಲ್ಲೆಯ, ಚರಖೀದಾದರೀ ತಾಲ್ಲೂಕಿನ, ದೊಡ್ಡ ಪೈಂತಾವಾಸದಲ್ಲಿನ ತಮ್ಮ ಮನೆಗೆ ಬಂದರು. ಸ್ವಾಮೀಜಿಯ ಬಾಲ್ಯದ ಹೆಸರು ಶ್ರೀ ಹರಿದ್ವಾರಿ ಎಂದಿತ್ತು. ಪವಿತ್ರ ಬ್ರಾಹ್ಮಣ ಕುಲದಲ್ಲಿ ಜನಿಸಿದ್ದರು. ನನಗೆ (ದಾಸನಿಗೆ) ಗೊತ್ತಾಯಿತು. ನಾನೂ ದರ್ಶನ ಪಡೆಯಲು ಹೋದೆ, ಸ್ವಾಮೀಯವರ ಅತ್ತಿಗೆ ಸುಮಾರು 92 ವರ್ಷದವರು. ನಾನು ಸಹ ಅವರನ್ನು ಕೇಳಿದೆ. "ನಮ್ಮ ಗುರುಗಳು ಮನೆ ಬಿಟ್ಟ ನಂತರ ನಿಮಗೆ ಏನನ್ನಿಸಿತು? (ನಿಮ್ಮ ಅನುಭವ ಹೇಗಿತ್ತು) ಆ ವಯೋವೃದ್ಧೆ ಹೇಳಿದಳು. "ನಮ್ಮವರಿಗೆ ಹರಿದ್ವಾರಿ ಎಂಬ ಸೋದರ ಇದ್ದ. ಅವನನ್ನು ಯಾವುದೋ ಕ್ರೂರ ಪ್ರಾಣಿ ಕಾಡಿನಲ್ಲಿ ತಿಂದು ಹಾಕಿತ್ತು. ಅವರ ಶ್ರಾದ್ಧ ಮಾಡುತ್ತಾ ಬಂದಿದ್ದೇವೆ."

ನನಗೂ ಅವರ ಶ್ರಾದ್ಧ ಮಾಡಲು ತಿಳೀಸಿದ್ದಾರೆ. 70 ಶ್ರಾದ್ಧಗಳನ್ನು ನಾನೇ ಮಾಡಿದ್ದೇನೆ.

ಯಾವಾಗಲಾದರೂ ಬೆಳೆ ಸರಿಯಾಗಿ ಆಗದಿದ್ದರೆ, ಮನೆಯಲ್ಲಿ ಯಾರಾದರೂ ರೋಗಗ್ರಸ್ತರಾದರೆ, ಪುರೋಹಿತರನ್ನು ಕಾರಣ ಕೇಳುತ್ತಿದ್ದರು. ಅವರು ಹೇಳುತ್ತಿದ್ದರು. "ಹರಿದ್ವಾರಿಯು ಪಿತೃವಾಗಿದ್ದಾನೆ. ಅವನೇ ನಿಮಗೆ ದುಃಖವನ್ನುಂಟು ಮಾಡುತ್ತಿದ್ದಾನೆ. ಶ್ರಾದ್ಧ ಮಾಡುವಾಗ, ಏನೋ ಅಶುದ್ಧಿಯಾಗಿದೆ" ಎಂದರು. "ಈ ಬಾರಿ ಎಲ್ಲ ಕ್ರಿಯೆಗಳನ್ನು ನಾನೇ ಸ್ವತಃ ನನ್ನ ಕೈಯಿಂದಲೇ ಮಾಡುವೆನು. ಮೊದಲು ನನಗೆ ಸಮಯ ಸಿಕ್ಕಿರಲಿಲ್ಲ. ಏಕೆಂದರೆ ಒಂದೇ ದಿನದಲ್ಲಿ ಅನೇಕ ಜಾಗಗಳಲ್ಲಿ ಶ್ರಾದ್ಧ ಕ್ರಿಯೆಗಳನ್ನು ನಡೆಸಲು ಹೋಗಬೇಕಾಗುತ್ತಿತ್ತು. ಆದ್ದರಿಂದ ಮಕ್ಕಳನ್ನು ಕಳುಹಿಸಿದ್ದೆ, ಶ್ರಾದ್ಧದವರಿಗೆ ಅವರನ್ನು ಶಾಂತಿಗೊಳಿಸಲು ಸ್ವಲ್ಪ ಕೊಡುಗೆ ಅರ್ಪಿಸು ಎಂದು ಹೇಳಿದ್ದರು. 21 ಅಥವಾ 51 ಏನೇ ಹೇಳಿದರೂ ಹೆದರಿಕೊಂಡು ಕೊಡುಗೆ ಅರ್ಪಿಸುತ್ತಿದ್ದೆವು ಪುನಃ ಶ್ರಾದ್ಧದ ಸಮಯದಲ್ಲಿ, ಗುರುಗಳೇ ಸ್ವತಃ ಶ್ರಾದ್ಧ ಮಾಡುತ್ತಿದ್ದರು." ಆಗ ನಾನು ಹೇಳಿದೆ "ತಾಯಿ! ಈಗ ಇದನ್ನೆಲ್ಲಾ ಬಿಟ್ಟು ಬಿಡಿರಿ. ಇದು ಗೀತೆಗೆ ವಿರುದ್ಧವಾಗಿದೆ. ಇಲ್ಲವಾದರೆ ನೀವೂ ಸಹ ಪ್ರೇತವಾಗುವಿರಿ. ಭಗವದ್ಗೀತೆಯ 9ನೇ ಅಧ್ಯಾಯದ 25ನೇ ಶ್ಲೋಕವನ್ನು ಹೇಳಿದೆ. ಆಗ ಆ ವೃದ್ಧೆ ಹೇಳಿದಳು_ ನಾನೂ ಗೀತೆಯನ್ನು ಓದುತ್ತೇನೆ, ದಾಸ ಹೇಳಿದನು ನೀವೂ ಓದಿರುವಿರಿ? ಆದರೆ ನೀವು ಸರಿಯಾಗಿ ತಿಳಿದುಕೊಂಡಿಲ್ಲ. ಮುಂದಾದರೂ ಈ ಅಜ್ಞಾನ ಸಾಧನೆಯನ್ನು ನಿಲ್ಲಿಸಿರಿ." ವೃದ್ಧಳು ಉತ್ತರ ಕೊಟ್ಟಳು ಇಲ್ಲಪ್ಪ ಸೋದರ. ಹೇಗೆ ನಿಲ್ಲಿಸಲು ಸಾಧ್ಯ. ಇದಂತೂ ನೂರಾರು ವರ್ಷಗಳಿಂದ ನಡೆದು ಬಂದಿದೆ. ಇದಂತೂ ತುಂಬಾ ಹಳೆಯ ಪರಂಪರೆಯಾಗಿದೆ. ಈ ದೋಷವು ಮುಗ್ಧ ಆತ್ಮಗಳದ್ದಲ್ಲ. ಈ ದೋಷವು ಮೂರ್ಖ ಗುರುಗಳದ್ದಾಗಿದೆ. ಇವರು ತಮ್ಮ ಪವಿತ್ರ ಶಾಸ್ತ್ರವನ್ನು ತಿಳಿಯದೆ, ಮನ ಬಂದಂತೆ ಆಚರಿಸಲು ತಿಳಿಸಿದ್ದಾರೆ. ಇದರಿಂದ ಯಾವುದೇ ಕೆಲಸವು ಸಿದ್ಧವಾಗದು. ಯಾವುದೇ ಸುಖ ಸಿಗದು. ಪರಮ ಗತಿಯೂ ದೊರೆಯುವುದಿಲ್ಲ. ಇದಕ್ಕೆ ಪ್ರಮಾಣವು, ಭಗವದ್ಗೀತೆಯ 16ನೇ ಅಧ್ಯಾಯದ 23, 24ನೇ ಶ್ಲೋಕದಲ್ಲಿದೆ.

ಈಗ ಈ ದಾಸನ ಪ್ರಾರ್ಥನೆ ಏನೆಂದರೆ, ಶಿಕ್ಷಿತ ವರ್ಗದವರು ಅವಶ್ಯಕವಾಗಿ ಗಮನಕೊಡಿ ಶಾಸ್ತ್ರವಿಧಿಗೆ ಅನುಸಾರವಾಗಿ ಸಾಧನೆ ಮಾಡಿ. ಸನಾತನದ ಪರಂಧಾಮ (ಶಾಶ್ವತಮ್ ಸ್ಥಾನಮ್)ವನ್ನು ಅರ್ಥಾತ್ ಸತ್ಯಲೋಕವನ್ನು ಪಡೆಯಿರಿ. ಇದರಿಂದ ಪೂರ್ಣ ಮೋಕ್ಷ ಹಾಗೂ ಪರಮ ಶಾಂತಿ ಸಿಗುವುದು (ಗೀತೆಯ 18ನೇ ಅಧ್ಯಾಯದ 62ನೇ ಶ್ಲೋಕ)ಇದಕ್ಕಾಗಿ ತತ್ವದರ್ಶಿ ಸಂತರನ್ನು ಹುಡುಕಿರಿ. (ಭಗವದ್ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕ)

ಒಬ್ಬ ಶ್ರದ್ಧಾಳು ಹೇಳಿದನು–ತಮ್ಮಿಂದ ಉಪದೇಶವನ್ನು ಪಡೆದು, ಅದರಂತೆ (ತಾವು ತಿಳಿಸಿದಂತೆ) ಸಾಧನೆಯನ್ನು ಮಾಡುವೆನು. ಹಾಗೂ ಶ್ರಾದ್ಧ ಕರ್ಮಗಳನ್ನೂ ಮಾಡುವೆನು. ಮನೆಯ ದೇವ–ದೇವತೆಯರನ್ನೂ ಮನವಿಟ್ಟು ಪೂಜಿಸುವೆನು. ಇದರಲ್ಲಿ ಏನು ದೋಷವಿದೆ?

ದಾಸನ ಪ್ರಾರ್ಥನೆ :– ಸಂವಿಧಾನದ ಯಾವುದೇ ನಿಯಮವನ್ನು ಉಲ್ಲಂಘಿಸಿದರೆ, ಶಿಕ್ಷೆಯು ಖಂಡಿತಾ ಸಿಗುವುದು. ಆದ್ದರಿಂದ ಪವಿತ್ರ ಗೀತೆ ಹಾಗೂ ಪವಿತ್ರವಾದ ನಾಲ್ಕೂ ವೇದಗಳಲ್ಲಿ ವರ್ಣಿತವಾಗಿರುವ ಮತ್ತು ವರ್ಜಿತ ವಿಧಿ (ಬಿಡಬೇಕಾದ ವಿಧಿ)ಗೆ ವಿರುದ್ಧವಾಗಿ ಸಾಧನೆ ಮಾಡುವುದು ವ್ಯರ್ಥ. (ಇದಕ್ಕೆ ಪ್ರಮಾಣ. ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳಲ್ಲಿದೆ) ಉದಾ : ಯಾರೋ ಹೇಳಿದನು. ನಾನು ಕಾರಿನಲ್ಲಿ ಉದಾಸೀನದಿಂದ ಪಂಚೇರ್ ಮಾಡುವೆ. ಇಲ್ಲ! ಹೀಗೆ ರಾಮ ನಾಮದ ಗಾಡಿಯಲ್ಲಿ, ಪಂಚೇರ್ ಮಾಡುವುದು, ಶಾಸ್ತ್ರವಿರುದ್ಧ ಸಾಧನೆ ಹಾಗೂ ಹಾನಿಕಾರಕವಾಗಿದೆ.

ಒಬ್ಬ ಶ್ರದ್ಧಾಳು ಹೇಳಿದರು ನಾನು ಬೇರೇನೂ ಅಪಚಾರವನ್ನು (ಸಾರಾಯಿ–ಮಾಂಸ ಸೇವನೆ) ಮಾಡುವುದಿಲ್ಲ. ಕೇವಲ ತಂಬಾಕು (ಬೀಡಿ ಸಿಗರೇಟು–ಹುಕ್ಕಾ) ಸೇವನೆ ಮಾಡುವೆನು. ನೀವು

ತಿಳಿಸಿರುವ ಪೂಜೆ ಮತ್ತು ಜ್ಞಾನ ಅತ್ಯುತ್ತಮವಾಗಿದೆ. ನಾನು ಗುರುವನ್ನು ಮಾಡಿಕೊಂಡಿರುವೆ. ಆದರೆ ಈ ಜ್ಞಾನ ಈವರೆಗೆ ಯಾವ ಸಂತರ ಬಳಿಯೂ ಇಲ್ಲ. ನಾನು 25 ವರ್ಷಗಳಿಂದ ಸುತ್ತಾಡುತ್ತಿದ್ದೇನೆ ಹಾಗೂ 3 ಜನ ಗುರುಗಳನ್ನು ಬದಲಾಯಿಸಿದ್ದೇನೆ. ದಯವಿಟ್ಟು ನನಗೆ ತಂಬಾಕು ಸೇವನೆಗೆ ವಿನಾಯಿತಿ ಕೊಡಿರಿ. ಉಳಿದೆಲ್ಲ ಶರತ್ತುಗಳು ಒಪ್ಪಿಗೆ ಇದೆ ತಂಬಾಕುವಿನಿಂದ ಭಕ್ತಿಯಲ್ಲಿ ಏನು ತೊಂದರೆ ಬರುತ್ತದೆ?

ದಾಸನ ಪ್ರಾರ್ಥನೆ :– ಈ ದಾಸ ಪ್ರಾರ್ಥಿಸಿದನು ನಮ್ಮ ಶರೀರಕ್ಕೆ ಆಮ್ಲಜನಕದ ಅವಶ್ಯಕತೆ ಇದೆ. ತಂಬಾಕುವಿನ ಹೊಗೆ ಕಾರ್ಬನ್ ಡೈ ಆಕ್ಸೈಡ್ ಆಗಿದೆ. ಅದು ಶ್ವಾಸಕೋಶಗಳನ್ನು ದುರ್ಬಲಗೊಳಿಸುತ್ತದೆ. ಹಾಗೂ ರಕ್ತವನ್ನು ಮಲಿನಗೊಳಿಸುತ್ತದೆ. ಮಾನವನ ಶರೀರವು ಪ್ರಭುವನ್ನು ಪಡೆಯುವುದು ಹಾಗೂ ಆತ್ಮಕಲ್ಯಾಣ ಮಾಡಿಕೊಳ್ಳಲೆಂದೇ ದೊರೆತಿದೆ. ಇದರಲ್ಲಿ ಪರಮಾತ್ಮನನ್ನು ಪಡೆಯುವ ದಾರಿಯು, ಸುಷ್ಮನಾಡಿಯಿಂದಲೇ ಪ್ರಾರಂಭವಾಗುತ್ತದೆ. ಮೂಗಿನ ಎರಡು ಹೊಳ್ಳೆಗಳಲ್ಲಿ ಬಲಭಾಗದ್ದು "ಈಡಾ" ಹಾಗೂ ಎಡ ಭಾಗದ್ದು "ಪಿಂಗಳಾ" ಎಂದು ಕರೆಯುತ್ತಾರೆ. ಈ ಎರಡರ ನಡುವೆ "ಸುಷ್ಮನಾ" ನಾಡಿ ಇದೆ. ಅದರಲ್ಲಿ ಒಂದು ಚಿಕ್ಕ ಸೂಜಿಯನ್ನು ಪೋಣಿಸುವಷ್ಟು ರಂಧ್ರವಿರುವ ಸ್ಥಳವಿದೆ. ಅದು ತಂಬಾಕು ಸೇವನೆಯಿಂದ ಮುಚ್ಚಿಹೋಗುತ್ತದೆ. ಆದ್ದರಿಂದ ಪ್ರಭುವನ್ನು ಪಡೆಯುವ ರಸ್ತೆಯೇ ಬಂದ್ ಆದರೆ, ಮಾನವ ಶರೀರ ವ್ಯರ್ಥವಾಗುವುದು ಆದ್ದರಿಂದ ಪ್ರಭುಭಕ್ತಿ ಮಾಡುವ ಸಾಧಕರಿಗೆ, ನಶೆಯ (ಮತ್ತಿನ) ಪದಾರ್ಥಗಳು, ಅಖಾದ್ಯ (ಮಾಂಸ ಮುಂತಾದ) ಪದಾರ್ಥಗಳನ್ನು ನಿಷೇಧಿಸಿದೆ.

ಒಬ್ಬ ಶ್ರದ್ಧಾಳು ಕೇಳಿದ ನಾನು ತಂಬಾಕುವನ್ನು ಉಪಯೋಗಿಸುವುದಿಲ್ಲ. ಆದರೆ ಮಾಂಸ ಹಾಗೂ ಮದಿರಾ ಸೇವನೆಯನ್ನು ಅವಶ್ಯವಾಗಿ ಮಾಡುತ್ತೇನೆ. ಇದರಿಂದ ಭಕ್ತಿಗೆ ಯಾವ ತೊಂದರೆ? ಇದಂತೂ ತಿನ್ನಲು ಕುಡಿಯಲು ಎಂದೇ ಮಾಡಿರುವುದು, ಹಾಗೂ ಮರ–ಗಿಡಗಳಲ್ಲೂ ಜೀವವಿದೆ, ಅದನ್ನು ತಿನ್ನುವುದೂ, ಮಾಂಸ ಭಕ್ಷಣೆಗೆ ಸಮಾನವಾಗಿದೆ.

ದಾಸನ ಪ್ರಾರ್ಥನೆ :– ಒಂದು ವೇಳೆ, ನಮ್ಮ ತಾಯಿ–ತಂದೆ, ಅಣ್ಣ–ತಂಗಿ ಹಾಗೂ ಮಕ್ಕಳು ಮೊದಲಾದವರನ್ನು ಕೊಂದು ತಿಂದರೆ, ಹೇಗೆನಿಸುತ್ತದೆ? "ಹೇಗೆ ನಮಗೆ ನೋವಾಗುವುದೋ, ಎಲ್ಲರಿಗೂ ಹಾಗೇ ಆಗುವುದು". ಕಬೀರ್‌ರು ಹೇಳುತ್ತಾರೆ :

"ಜೈಸಾ ದರ್ದ್ ಆಪನೆ ಹೋವೈ, ವೈಸಾ ಜಾನ್ ಬಿರಾನೆ ।
ಕಹೈ ಕಬೀರ್, ವೆ ಜಾಯೆ ನರಕ ಮೆ, ಜೊ ಕಾಟೆಂ ಶಿಶ ಖುರಾಂನೆ"

ಯಾರು ಪಶುಗಳನ್ನು ವಧೆ ಮಾಡಿ ದಯೆ ಇಲ್ಲದವರಾಗಿ ಅದರ ಕಾಲಿನ ಗೊರಸು ಹಾಗೂ ತಲೆಯನ್ನು ಕತ್ತರಿಸಿ, ಮಾಂಸವನ್ನು ತಿನ್ನುವವರು ನರಕಕ್ಕೆ ಹೋಗುವರು. ಎಂತಹ ದುಃಖ ತಮ್ಮ ಮಕ್ಕಳು ಹಾಗೂ ಸಂಬಂಧಿಕರ ಹತ್ಯೆಯಿಂದಾಗುವುದೋ, ಅಷ್ಟೇ ದುಃಖ ಬೇರೆಯವರಿಗೂ ಆಗುವುದೆಂದು ತಿಳಿಯಬೇಕು. ಮರ–ಗಿಡಗಳ ಮಾತು ಹಾಗಿರಲಿ ಇವುಗಳನ್ನು ತಿನ್ನಲು, ಪ್ರಭುವಿನ ಆದೇಶವಿದೆ. ಹಾಗೂ ಇವು (ಜಡಜೂನಿ) ಬೇರು ಬಿಟ್ಟವುಗಳಾಗಿವೆ. ಬೇರೆ ಪ್ರಾಣಿಗಳ ವಧೆಯು ಪ್ರಭುವಿನ ಆದೇಶಕ್ಕೆ ವಿರುದ್ಧವಾಗಿದೆ ಆದ್ದರಿಂದ ಅಪರಾಧ (ಪಾಪ)ವಾಗಿವೆ.

ಸಾರಾಯಿಯನ್ನು ಕುಡಿಯಲು ಪ್ರಭುವಿನ ಆದೇಶವಿಲ್ಲ. ಹಾಗೂ ಸ್ಪಷ್ಟವಾಗಿ ನಿಷೇಧಿಸಿದೆ. ಇವು ಮಾನವನ ಜೀವನವನ್ನು ಹಾಳು ಮಾಡುತ್ತವೆ. ಸಾರಾಯಿ ಕುಡಿದಿರುವ ವ್ಯಕ್ತಿ ಸ್ವಲ್ಪವಾದರೂ ತಪ್ಪನ್ನು ಮಾಡಿಯೇ ಇರುತ್ತಾನೆ. ಸಾರಾಯಿಪಾನವು, ಧನ–ತನು ಹಾಗೂ ಪಾರಿವಾರಿಕ ಶಾಂತಿ

ಹಾಗೂ ಸಮಾಜದ ಸಭ್ಯತೆಗೆ ಮಹಾ ಶತ್ರುವಾಗಿದೆ. ಮುದ್ದಿನ ಮಕ್ಕಳ ಭವಿಷ್ಯದ ಮೇಲೆ, ಕೆಟ್ಟ ಪರಿಣಾಮ ಬೀರುತ್ತದೆ. ಸಾರಾಯಿ ಸೇವನೆ ಮಾಡುವ ವ್ಯಕ್ತಿಯು ಎಷ್ಟಾದರೂ ಪ್ರಾಮಾಣಿಕನಿರಲಿ, ಅವನನ್ನು ಯಾರೂ ನಂಬುವುದೇ ಇಲ್ಲ. ಒಮ್ಮೆ ಈ ದಾಸನು ಹಳ್ಳಿಯೊಂದರಲ್ಲಿ ಪ್ರವಚನ ಮಾಡಲು ಹೋಗಿದ್ದನು ಆ ದಿನ ಸಾರಾಯಿ ನಿಷೇಧದ ಬಗ್ಗೆ ಪ್ರವಚನ ಮಾಡಿದೆ. ಪ್ರವಚನದ ನಂತರ ಹನ್ನೊಂದು ವರ್ಷದ ಬಾಲಕಿಯೊಬ್ಬಳು, ಬಿದ್ದು ಬಿದ್ದು ಅಳತೊಡಗಿದಳು. ಕಾರಣ ಕೇಳಿದಾಗ, ಆ ಬಾಲಕಿ ಹೇಳಿದಳು ಮಹಾರಾಜರೇ! ನಮ್ಮ ತಂದೆಯವರು, ಪಾಲಮ್ ವಿಮಾನ ನಿಲ್ದಾಣದಲ್ಲಿ ದೊಡ್ಡ ನೌಕರಿಯಲ್ಲಿದ್ದಾರೆ.

ಆದರೆ ದುಡಿದ ಹಣವನ್ನು ಸಾರಾಯಿ ಕುಡಿಯಲು ಖರ್ಚು ಮಾಡುತ್ತಾರೆ. ನಮ್ಮ ತಾಯಿ ಸಾರಾಯಿ ಕುಡಿಯಬೇಡಿ ಎಂದು ತಡೆದಾಗ, ಮೈ ಮೇಲೆ ಬಾಸುಂಡೆ ಬರುವಂತೆ ಹೊಡೆಯುತ್ತಾರೆ ಒಂದು ದಿನ, ನಮ್ಮ ಅಮ್ಮನಿಗೆ ಹೊಡೆಯತೊಡಗಿದರು. ನಾನು ಅವರನ್ನು ಕಾಪಾಡಲು ಅವರ ಮೇಲೆ ಮಲಗಿದೆ. ನನಗೂ ಹೊಡೆದರು. ಆ ಏಟಿನಿಂದ ನನ್ನ ತುಟಿ ಊದಿಕೊಂಡಿತು. 10ದಿನ ಕಳೆದ ಮೇಲೆ ಸರಿಯಾಯಿತು. ನಮ್ಮ ಅಮ್ಮ ನಮ್ಮನ್ನೆಲ್ಲ ಬಿಟ್ಟು, ನಮ್ಮ ಮಾನವ ಮನೆಗೆ ಹೊರಟು ಹೋದರು. 6 ತಿಂಗಳಾದ ಮೇಲೆ ನಮ್ಮ ಅಜ್ಜಿ (ತಂದೆಯ ತಾಯಿ) ಅವರನ್ನು ಕರೆದುಕೊಂಡು ಬಂದರು. ಅಲ್ಲಿಯವರೆಗೆ ನಾವು ನಮ್ಮ ಅಜ್ಜಿಯ ಹತ್ತಿರವೇ ಇದ್ದೆವು. ಅಪ್ಪನು ಔಷಧಿಯನ್ನು ಕೊಡಿಸಲಿಲ್ಲ. ಬೆಳಿಗ್ಗೆ ಬೇಗ ಎದ್ದು, ನೌಕರಿಗೆ ಹೊರಟು ಹೋದರು. ಸಂಜೆಗೆ ಸಾರಾಯಿ ಕುಡಿದು ಬರುವುದು ನಾವು ಮೂವರು ಸೋದರಿಯರು. ಇಬ್ಬರು ನನಗಿಂತ ಚಿಕ್ಕವರು. ಅಪ್ಪ ಸಂಜೆಗೆ ಮನೆಗೆ ಬರುತ್ತಾರೆ. ಆಗ ನಾವೆಲ್ಲಾ ಚಾಪೆಯನ್ನು ಮರೆಮಾಡಿಕೊಂಡು ಇರುವೆವು.

ವಿಚಾರ ಮಾಡಿರಿ, ಪುಣ್ಯಾತ್ಮರೆ, ಯಾವ ಮಕ್ಕಳನ್ನು ತಂದೆ ಎದೆಗೆ ಅಪ್ಪಿಕೊಳ್ಳಬೇಕಿತ್ತೋ, ಅವರು ಹೀಗೆ, ಮಕ್ಕಳು ತಂದೆಯ ದಾರಿ ಕಾಯುತ್ತಾ, ಅಪ್ಪ ಬರುವರು, ಹಣ್ಣು ತರುವರು ಎಂದು ಹಿಗ್ಗಿನಿಂದ ಇರಬೇಕಿತ್ತು. ಈ ದಿನಗಳಲ್ಲಿ ಮಾನವ ಸಮಾಜದ ಶತ್ರುವಾದ ಈ ಸಾರಾಯಿ ಮನೆಯನ್ನು ನಾಶ ಮಾಡುತ್ತಿದೆ. ಕುಡುಕ ವ್ಯಕ್ತಿಯು ತನಗೂ ಹಾನಿ ಮಾಡಿಕೊಳ್ಳುತ್ತಾನೆ. ಜೊತೆಗೆ ಬಹಳ ವ್ಯಕ್ತಿಗಳ ದುಃಖದ ಪಾಪವನ್ನು ತಲೆಯ ಮೇಲೆ ಹೊರುತ್ತಾನೆ. ಹೆಂಡತಿಯ ದುಃಖದಲ್ಲಿ ಅವರ ತಾಯಿ–ತಂದೆ ಸೋದರ ಸೋದರಿಯರು, ದುಃಖಿತರಾಗುತ್ತಾರೆ. ಆ ವ್ಯಕ್ತಿಯ (ಕುಡುಕನ) ತಾಯಿ–ತಂದೆ ಅಣ್ಣ–ತಂಗಿ, ಅಜ್ಜ–ಅಜ್ಜಿ ಎಲ್ಲರೂ ದುಃಖಿತರಾಗುತ್ತಾರೆ. ಒಬ್ಬ ಕುಡುಕನು, ಅಕ್ಕ–ಪಕ್ಕದ ಸಜ್ಜನರ ಶಾಂತಿಗೆ ಭಂಗ ತರುತ್ತಾನೆ. ಏಕೆಂದರೆ ಕುಡಿತದ ಅಮಲಿನಲ್ಲಿ ಮನೆಯಲ್ಲಿ ಕಿರುಚಾಡುತ್ತಾ ಜಗಳ ಮಾಡುತ್ತಿದ್ದರೆ, ಅಕ್ಕ–ಪಕ್ಕದ ಸಜ್ಜನರ ಶಾಂತಿಗೆ ಭಂಗ ತರುತ್ತಾನೆ. ಏಕೆಂದರೆ ಕುಡಿತದ ಅಮಲಿನಲ್ಲಿ ಮನೆಯಲ್ಲಿ ಕಿರುಚಾಡುತ್ತಾ ಜಗಳ ಮಾಡುತ್ತಿದ್ದರೆ, ಅಕ್ಕ–ಪಕ್ಕದವರು ಮಧ್ಯೆ ಪ್ರವೇಶಿಸಿ, ಜಗಳ ತಪ್ಪಿಸಲು, ಕುಡುಕನ ಕುತ್ತಿಗೆ ಹಿಡಿದು ಗಲಾಟೆ ನಿಲ್ಲಿಸುತ್ತಾರೆ. ಇಲ್ಲವಾದರೆ ಸಭ್ಯವ್ಯಕ್ತಿಗಳಿಗೆ ನಿದ್ರೆ ಬರುವುದಿಲ್ಲ. ಈ ದಾಸನ ಉಪದೇಶ ಪಡೆದ ಮೇಲೆ, ಪ್ರತಿದಿನ ಸಾರಾಯಿ ಕುಡಿಯುವ, ಸುಮಾರು 1 ಲಕ್ಷ ಜನರು, ನಶೆಯ ವಸ್ತುಗಳ ಸೇವನೆ, ಮಾಂಸ ಭಕ್ಷಣೆಯನ್ನು ಸಂಪೂರ್ಣವಾಗಿ ತ್ಯಜಿಸಿದ್ದಾರೆ. ಸಂಜೆ ವೇಳೆಯಲ್ಲಿ ಸಾರಾಯಿ ಕುಡಿದು ಗಲಾಟೆ ಮಾಡುತ್ತಿದ್ದರು. ಈಗ ಅವರೆಲ್ಲಾ ತಮ್ಮ ಮಕ್ಕಳೊಂದಿಗೆ, ಸಂಜೆಯಲ್ಲಿ ದೇವರ ಆರತಿ ಮಾಡುತ್ತಾರೆ. ಹರಿಯಾಣ ಪ್ರದೇಶ ಹಾಗೂ ಅದರ ಹತ್ತಿರದ ಹಳ್ಳಿ, ಪಟ್ಟಣದಲ್ಲಿ (ಸುಮಾರು 10ಸಾವಿರ ಹಳ್ಳಿಗಳಲ್ಲಿ) ಇಂದಿಗೂ 4–5 ಚಾಂಪಿಯನ್ (ನಂಬರ್ 1 ಕುಡುಕರು) ಉದಾಹರಣೆಯಾಗಿದ್ದಾರೆ. ಅವರು ತಮ್ಮ ಎಲ್ಲ ವಿಕಾರಗಳನ್ನು ಬಿಟ್ಟು, ಮಾನವ ಜೀವನವನ್ನು ಸಫಲ ಮಾಡಿಕೊಳ್ಳುತ್ತಿದ್ದಾರೆ. ಕೆಲವರು ಹೇಳುತ್ತಾರೆ "ನಾವೇನು ಅಷ್ಟೊಂದು ಕುಡಿದು–ತಿಂದು ಮಾಡುವುದಿಲ್ಲ. ಸ್ವಲ್ಪ ಎಲ್ಲೋ ಒಮ್ಮೆ ತೆಗೆದುಕೊಳ್ಳುತ್ತೇವೆ." ವಿಷವು ಸ್ವಲ್ಪವಾದರೂ

ಕೆಟ್ಟದೇ ಆಗಿರುತ್ತದೆ. ಅದು ಭಕ್ತಿಗೆ ಮುಕ್ತಿಗೆ ಬಾಧಕವಾಗುತ್ತದೆ.

ಹೀಗೆ ತಿಳಿಯಿರಿ. 2ಕೆ.ಜಿ ತುಪ್ಪದ ಹಲವಾ ಮಾಡಿದರು. (ಸತ್ಯಭಕ್ತಿಯ) ಅದರಲ್ಲಿ 250 ಗ್ರಾಂ ಮರಳನ್ನು ಹಾಕಿದರು. (ತಂಬಾಕು, ಮಾಂಸ, ಸಾರಾಯಿ ಸೇವನೆ ಹಾಗೂ ವಾಮಾಚಾರ ಮಾಡಿದರು) ಇದರಿಂದ ಮಾಡಿದ್ದೆಲ್ಲಾ ವ್ಯರ್ಥವಾದಂತೆಯೇ ಸರಿ. ಆದ್ದರಿಂದ ಪೂರ್ಣ ಪರಮಾತ್ಮನ (ಪರಮ ಅಕ್ಷರ ಬ್ರಹ್ಮ) ಪೂಜೆಯನ್ನು, ಪೂರ್ಣ ಜ್ಞಾನಿ ಸಂತರ ಉಪದೇಶ ಪಡೆದು, ಜೀವನ ಪರ್ಯಂತ ಭಕ್ತಿ ಮಾಡಿದರೆ ಪೂರ್ಣ ಮೋಕ್ಷ ಪ್ರಾಪ್ತವಾಗುವುದು.

### "ತತ್ವಜ್ಞಾನ ಪಡೆದ ನಂತರವೇ ಭಕ್ತಿ ಪ್ರಾರಂಭವಾಗುತ್ತದೆ"

ಗೀತೆಯ 9ನೇ ಅಧ್ಯಾಯದ 26, 27, 28ನೇ ಶ್ಲೋಕದ ಭಾವಾರ್ಥವಿದೆ. ಯಾರಾದರು ಆಧ್ಯಾತ್ಮಿಕ ಅಥವಾ ಸಾಂಸಾರಿಕ ಕೆಲಸ ಮಾಡುತ್ತಿರಲಿ. ಎಲ್ಲರೂ ನನ್ನ ಅಭಿಮತದಂತೆ ವೇದಗಳಲ್ಲಿ ವರ್ಣಿತವಾಗಿರುವ, ಪೂಜಾ ವಿಧಿಯ ಅನುಸಾರವೇ ಕೆಲಸ ಮಾಡಿದರೆ, ಆ ಉಪಾಸಕನು ನನ್ನಿಂದ (ಕಾಲಬ್ರಹ್ಮ) ಲಾಭ ಹೊಂದುತ್ತಾನೆ. ಇದರ ವರ್ಣನೆಯನ್ನು 9ನೇ ಅಧ್ಯಾಯದ 20–21ನೇ ಶ್ಲೋಕದಲ್ಲಿ ಮಾಡಿದೆ. 9ನೇ ಅಧ್ಯಾಯದ 29ನೇ ಶ್ಲೋಕದಲ್ಲಿ ಭಗವಂತ ಹೇಳುತ್ತಾನೆ ನನಗೆ ಯಾರಲ್ಲಿಯೂ ದ್ವೇಷವಾಗಲೀ, ಪ್ರೀತಿಯಾಗಲಿ ಇಲ್ಲ. ಆದರೆ, ಯಾರು ನನ್ನನ್ನು ಪ್ರೇಮದಿಂದ ಭಜಿಸುವರೋ, ಅವರು ನನಗೆ ಪ್ರಿಯರು, ಹಾಗೂ ನಾನು ಅವರಿಗೆ ಪ್ರಿಯನಾಗಿರುವೆ, ಅರ್ಥಾತ್ ಅವರು ನನ್ನಲ್ಲಿ, ನಾನು ಅವರಲ್ಲಿ ಇರುವೆ, ರಾಗ ಮತ್ತು ದ್ವೇಷದ ಪ್ರತ್ಯಕ್ಷ ಪ್ರಮಾಣ ಪ್ರಹ್ಲಾದನು ವಿಷ್ಣುವನ್ನು ಆಶ್ರಯಿಸಿದ್ದನು. ಹಾಗೂ ಹಿರಣ್ಯಕಶ್ಯಪು ದ್ವೇಷಿಸುತ್ತಿದ್ದ. ಆಗ ಭಗವಂತನು ನರಸಿಂಹ ರೂಪವನ್ನು ಧಾರಣೆ ಮಾಡಿಕೊಂಡು, ತನ್ನ ಪ್ರೀಯ ಭಕ್ತನನ್ನು ರಕ್ಷಿಸಿದ. ಹಾಗೂ ರಾಕ್ಷಸ ಹಿರಣ್ಯಕಶ್ಯಪುನ ಕರುಳನ್ನು ಬಗೆದು ಅವನನ್ನು ಸಂಹರಿಸಿದ. ಪ್ರಹ್ಲಾದನೊಂದಿಗೆ ಪ್ರೇಮ, ಹಿರಣ್ಯಕಶ್ಯಪುನೊಂದಿಗೆ ದ್ವೇಷದಲ್ಲಿ, ಪ್ರತ್ಯಕ್ಷ ಪ್ರಮಾಣವಿದೆ. ಆದ್ದರಿಂದಲೇ ಪವಿತ್ರ ಭಗವದ್ಗೀತೆಯ 2ನೇ ಅಧ್ಯಾಯದ 53ನೇ ಶ್ಲೋಕದಲ್ಲಿ ಹೇಳಿದೆ ತತ್ವಜ್ಞಾನವಾದ ಮೇಲೆ ನಾನಾ ಪ್ರಕಾರದ ಭ್ರಮೆಗಿಳಿಸುವ ವಚನಗಳಿಂದ, ವಿಚಲಿತವಾದ ನಿನ್ನ ಬುದ್ಧಿಯು, ಒಬ್ಬ ಪೂರ್ಣ ಪರಮಾತ್ಮನಲ್ಲಿ ದೃಢವಾಗಿ ಸ್ಥಿರವಾಗುವುದು. ಆಗ ನೀನು ಯೋಗಿ ಆಗುವೆ ಅಂದರೆ ನೀನು ಅನನ್ಯ ಮನಸ್ಸಿನಿಂದ ನಿಸ್ಸಂದೇಹವಾಗಿ ಒಬ್ಬ ಪೂರ್ಣ ಪರಮಾತ್ಮನ ಭಕ್ತಿ ಮಾಡುವೆ.

ಭಗವದ್ಗೀತೆಯ 2ನೇ ಅಧ್ಯಾಯದ 46ನೇ ಶ್ಲೋಕದಲ್ಲಿ ಹೇಳಿದೆ ಎಲ್ಲ ಕಡೆಗಳಿಂದ ತುಂಬಿದ ದೊಡ್ಡ ಜಲಾಶಯವು ದೊರೆತಾಗ, ಸಣ್ಣ ಜಲಾಶಯದ ಅವಶ್ಯಕತೆ ಮನುಷ್ಯನಿಗೆ ಇರುವುದಿಲ್ಲ ಹಾಗೆಯೇ, ಪೂರ್ಣ ಪರಮಾತ್ಮ (ಪರಮ ಅಕ್ಷರ ಪುರುಷ)ನ ಗುಣಗಳ ಜ್ಞಾನವು, ತತ್ವಜ್ಞಾನದ ಮೂಲಕ ಆದ ನಂತರ, ನಿನ್ನ ನಂಬಿಕೆಯು ಅನ್ಯ ಜ್ಞಾನಗಳಲ್ಲಿ ಹಾಗೂ ಅನ್ಯ ದೇವರಲ್ಲಿ (ಬ್ರಹ್ಮಾ–ವಿಷ್ಣು ಹಾಗೂ ಶಿವ–ಕ್ಷರ ಪುರುಷ ಅರ್ಥಾತ್ ಬ್ರಹ್ಮನಲ್ಲಿ ಹಾಗೂ ಅಕ್ಷರ ಪುರುಷ ಅರ್ಥಾತ್ ಪರಬ್ರಹ್ಮರಲ್ಲಿ) ಅಷ್ಟೇ ಇರುತ್ತದೆ. ಹೇಗೆ ಚಿಕ್ಕ ಜಲಾಶಯವು ಕೆಟ್ಟದಾಗಿರುವುದಿಲ್ಲ. ಆದರೂ ಅದರ ಕ್ಷಮತೆಯು ಗೊತ್ತಾದ ಮೇಲೆ, ಅದರಿಂದ ಎಷ್ಟು ಸಾಧ್ಯವೋ ಅಷ್ಟು ಕೆಲಸ ಸಾಧ್ಯವಾಗುತ್ತದೆ. ಆದರೆ ಅದು ಜೀವನಕ್ಕೆ ಸಾಲದಾಗುತ್ತದೆ. ದೊಡ್ಡ ಜಲಾಶಯ ಸಿಕ್ಕಿದ ಮೇಲೆ, ಕ್ಷಾಮ ಬಂದರೂ ಸಹ ಸಮಸ್ಯೆಯುಂಟಾಗುವುದಿಲ್ಲ. ಆಗ ಚಿಕ್ಕ ಜಲಾಶಯವನ್ನು ಬಿಟ್ಟು, ದೊಡ್ಡ ಜಲಾಶಯದ ಆಶ್ರಯ ಪಡೆಯುತ್ತೇವೆ. ಇದೇ ರೀತಿ ಪೂರ್ಣ ತತ್ವಜ್ಞಾನಿ ಸಂತನು ಸಿಕ್ಕಿದ ಮೇಲೆ ಸಾಧಕನು (ಅನನ್ಯ ಮನದಿಂದ) ಪೂರ್ಣ ಪರಮಾತ್ಮನನ್ನು ಪಡೆಯಲು ಇಚ್ಛಿಸುತ್ತಾನೆ. ಆ ಪೂರ್ಣ ಪರಮಾತ್ಮನನ್ನು ಆಶ್ರಯಿಸುತ್ತಾನೆ.

ಗೀತೆಯ 18ನೇ ಅಧ್ಯಾಯದ 62ನೇ ಶ್ಲೋಕದಲ್ಲಿ ಹೇಳಿದೆ– ಹೇ ಅರ್ಜುನ! ನೀನು ಸರ್ವಭಾವದಿಂದ ಆ ಪರಮೇಶ್ವರನಲ್ಲಿ ಶರಣು ಹೋಗು ಆ ಪರಮಾತ್ಮನ ಕೃಪೆಯಿಂದಲೇ ನೀನು ಪರಮ ಶಾಂತಿಯನ್ನು ಹಾಗೂ ಸನಾತನವಾದ ಪರಮಧಾಮವನ್ನು ಪಡೆಯುವೆ. ಅರ್ಥಾತ್ ಎಂದೂ ನಷ್ಟವಾಗದ ಸತ್ಯಲೋಕ ಪ್ರಾಪ್ತವಾಗುವುದು.

ಗೀತೆಯ ಅಧ್ಯಾಯ 18ರ 63ನೇ ಶ್ಲೋಕದಲ್ಲಿ ಹೇಳಿದೆ ನಾನು ನಿನಗೆ ಅತಿ ಗೌಪ್ಯನೀಯವಾದ (ರಹಸ್ಯವಾದ) ಜ್ಞಾನವನ್ನು ಹೇಳಿರುವೆ ಈಗ ನೀನು ಹೇಗೆ ಇಚ್ಛಿಸುವೆಯೋ ಹಾಗೆಯೇ ಮಾಡು. (ಏಕೆಂದರೆ, ಇದು ಗೀತೆಯ ಅಂತಿಮ ಅಧ್ಯಾಯದ, ಅಂತಿಮ ಶ್ಲೋಕವಾಗಿವೆ ಆದ್ದರಿಂದಲೇ ಹೇಳಿರುವೆ)

## "ಗೀತೆಯ ಜ್ಞಾನದಾತ ಬ್ರಹ್ಮನ ಪೂಜ್ಯ ದೇವರು ಪೂರ್ಣ ಬ್ರಹ್ಮನಾಗಿದ್ದಾನೆ"

ಗೀತೆಯ 18ನೇ ಅಧ್ಯಾಯದ 64ನೇ ಶ್ಲೋಕದಲ್ಲಿ ಹೇಳಿದೆ– ಸರ್ವ ಗೌಪ್ಯನೀಯಕ್ಕಿಂತಲೂ ಅತಿ ಗೌಪ್ಯನೀಯವಾದ ನನ್ನ ಪರಮ ರಹಸ್ಯಯುಕ್ತವಾದ ಮಾತನ್ನು ನೀನು ಇನ್ನೊಮ್ಮೆ ಕೇಳು, ಇವನೇ ಪೂರ್ಣ ಪರಮಾತ್ಮ (ಇವನ ವಿಷಯದಲ್ಲಿ 18ನೇ ಅಧ್ಯಾಯದ 62ನೇ ಶ್ಲೋಕದಲ್ಲಿ ಹೇಳಿದೆ) ನನ್ನ ಪರಮ ಪೂಜ್ಯದೇವ ನಾನು (ಬ್ರಹ್ಮ–ಕ್ಷರ ಪುರುಷ) ಸಹ ಅವನ ಪೂಜೆಯನ್ನೇ ಮಾಡುವೆನು, ಇದನ್ನು ನಿನ್ನ ಹಿತಕ್ಕಾಗಿ ಹೇಳುವೆನು. ಏಕೆಂದರೆ ಇದೇ ತಿಳುವಳಿಕೆಯನ್ನು, ಭಗವದ್ಗೀತೆಯ ಜ್ಞಾನ ದಾತ ಪ್ರಭುವು ಗೀತೆಯ 15ನೇ ಅಧ್ಯಾಯದಲ್ಲಿನ 4ನೇ ಶ್ಲೋಕದಲ್ಲೂ ಹೇಳಿದ್ದಾನೆ. ಅದರಲ್ಲಿ "ನಾನೂ ಅದೇ ಆದಿ ಪುರುಷ ಪರಮೇಶ್ವರನಿಗೆ ಶರಣಾಗಿದ್ದೇನೆ. ಆದ್ದರಿಂದಲೇ ಇಲ್ಲಿ ಹೇಳಿದೆ ಗುಪ್ತಕ್ಕಿಂತ ಅತಿಗುಪ್ತಜ್ಞಾನ, ಪುನಃ ಕೇಳು" ಎಂದು ಹೇಳಿದನು.)

ವಿಶೇಷ :– ಗೀತೆಯ ಬೇರೆ ಅನುವಾದಕರು, "ಇಷ್ಟಃ ಅಸಿ ಮೆ ದೃಢಮ್ ಇತಿ" ಅಂದರೆ "ನೀನು ನನ್ನ ಪ್ರಿಯನು" ಎಂದು ತಪ್ಪಾಗಿ ಅನುವಾದ ಮಾಡಿದ್ದಾರೆ. ಇದರ ಸರಿಯಾದ ಅರ್ಥ ಈ ಕೆಳಗಿನಂತಿದೆ.

**<u>ಅಧ್ಯಾಯ 18ರ 64ನೇ ಶ್ಲೋಕ.</u>**

ಸರ್ವ ಗುಹ್ಯತಮಮಂ ಭೂಯಃ ಶೃಣು ಮೇ ಪರಮಂ ವಚಃ ।
ಇಷ್ಟೋಸಿ ಮೇ ದೃಢಮಿತಿ ತತಃ ವಕ್ಷ್ಯಾಮಿ ತೆ ಹಿತಮ್ ॥

**ಅನುವಾದ :–** (ಸರ್ವಗುಹ್ಯತಮಂ) ಸರ್ವ ಗೌಪ್ಯನೀಯಕ್ಕಿಂತಲೂ ಅತಿ ಗೌಪ್ಯನೀಯವಾದ (ಮೆ) ನನ್ನ (ಪರಮಂ) ಪರಮ ರಹಸ್ಯ ಯುಕ್ತವಾದ (ಹಿತಮ್) ಹಿತಕರವಾದ (ವಚಃ) ವಚನ (ತೆ) ನಿನಿಗೆ (ಭೂಯಃ) ಪುನಃ (ವಕ್ಷ್ಯಾಮಿ) ಹೇಳುವೆನು. (ತತಃ) ಇದನ್ನು (ಶೃಣು) ಕೇಳು (ಇತಿ) ಈ ಪೂರ್ಣ ಬ್ರಹ್ಮ, (ಮೆ) ನನ್ನ (ದೃಢಮ್) ದೃಢ (ಇಷ್ಟಃ) ಪೂಜ್ಯದೇವ (ಅಸ) ಇದ್ದಾನೆ.

ಗೀತೆಯ 18ನೇ ಅಧ್ಯಾಯದ 65ನೇ ಶ್ಲೋಕದಲ್ಲಿ ಗೀತಾ ಜ್ಞಾನ ದಾತಾ ಪ್ರಭು (ಕಾಲ ಭಗವಾನ್/ ಕ್ಷರ ಪುರುಷ) ಹೇಳುತ್ತಿದ್ದಾನೆ : ನನ್ನಲ್ಲಿ ಶರಣಾಗುವ ಮನವಿದ್ದರೆ, ನನ್ನ ಪೂಜೆಯನ್ನು ಅನನ್ಯ ಮನದಿಂದ ಮಾಡು. ಬೇರೆ ದೇವರುಗಳ (ಬ್ರಹ್ಮಾ, ವಿಷ್ಣು, ಶಿವ) ಹಾಗೂ ಪಿತೃಗಳ ಪೂಜೆಯನ್ನು ಬಿಡು. ನಂತರ ನನ್ನ ಪ್ರಾಪ್ತಿಯಾಗುವುದು. ಅರ್ಥಾತ್ ಬ್ರಹ್ಮ ಲೋಕದಲ್ಲಿನ, ಮಹಾಸ್ವರ್ಗಕ್ಕೆ ಹೋಗುವೆ ನಾನು ನಿನ್ನ ಮುಂದೆ ಸತ್ಯ ಪ್ರತಿಜ್ಞೆ ಮಾಡುವೆನು. "ನೀನು ನನಗೆ

ಪ್ರಿಯವಾಗಿರುವೆ".

**ಗೀತೆಯ 18ನೇ ಅಧ್ಯಾಯದ 66ನೇ ಶ್ಲೋಕದಲ್ಲಿ ಹೇಳಿದೆ ಆ ಅದ್ವಿತೀಯ ಅರ್ಥಾತ್ ಅನನ್ಯ. ಆ ಒಂದು ಸರ್ವ ಶಕ್ತಿವಂತ, ಸಕಲ ಬ್ರಹ್ಮಾಂಡದ ರಚನೆಕಾರ, ಎಲ್ಲರ ಧಾರಣೆ ಪೋಷಣೆ ಮಾಡುವ ಆ ಪರಮೇಶ್ವರನಲ್ಲಿ ಶರಣು ಹೋಗುವುದಾದರೆ, ನನ್ನ ಸ್ತರದ ಸಾಧನೆಯ 'ಓಂ' ನಾಮ ಜಪದ ಗಳಿಕೆಯ ಪುಣ್ಯವನ್ನು ಅನ್ಯ ಧಾರ್ಮಿಕ ಶಾಸ್ತ್ರಕ್ಕೆ ಅನುಸಾರದ ಸಾಧನೆಗಳನ್ನು ನನ್ನಲ್ಲಿ ಬಿಟ್ಟು ಬಿಡು. (ಇದರಿಂದ ನೀನು ನನ್ನ ಋಣದಿಂದ ಮುಕ್ತವಾಗುವೆ) ಆ ಒಬ್ಬನೇ ಅದ್ವಿತೀಯ ಅರ್ಥಾತ್ ಅವನಿಗೆ ಸರಿಸಾಟಿ ಬೇರೆ ಯಾರೂ ಇಲ್ಲದವನಲ್ಲಿ ಶರಣು ಹೋಗು. ನಾನು ನಿನ್ನನ್ನು ಸರ್ವ ಪಾಪಗಳಿಂದ ಮುಕ್ತ ಮಾಡುವೆನು. ನೀನು ಚಿಂತೆಯನ್ನು ಮಾಡಬೇಡ.**

**ವಿಶೇಷ :– ಗೀತೆಯ ಅನ್ಯ, ಅನುವಾದ ಕರ್ತನು 18 ಅಧ್ಯಾಯದ 66ನೇ ಶ್ಲೋಕದ ಅನುವಾದವನ್ನು ತಪ್ಪಾಗಿ ಮಾಡಿದ್ದಾರೆ. 'ವ್ರಜ'ದ ಅರ್ಥವನ್ನು ಬರುವುದು (ಬಾ) ಎಂದು ಮಾಡಿದ್ದಾರೆ, ವ್ರಜದ ಅರ್ಥ ಹೋಗುವುದು (ಹೊಗು) ಎಂದಾಗುತ್ತದೆ. ದಯವಿಟ್ಟು ವಾಸ್ತವಿಕವಾದ ಅನುವಾದವನ್ನು (ಈ ಕೆಳಗೆ ಇದೆ) ಓದಿರಿ.**

**<u>ಅಧ್ಯಾಯ 18ರ 66ನೇ ಶ್ಲೋಕ.</u>**

ಸರ್ವ ಧರ್ಮಾನ್, ಪರಿತ್ಯಜ್ಯ, ಮಾಮ್, ಏಕಮ್, ಶರಣಮ್, ವ್ರಜ ।
ಅಹಂ ತ್ವಾ, ಸರ್ವ ಪಾಪೇಭ್ಯೋ ಮೋಕ್ಷ ಯಿಷ್ಯಾಮಿ ಮಾ ಶುಚಃ ॥

**ಅನುವಾದ :–** (ಮಾಮ್) ನನ್ನ (ಸರ್ವ ಧರ್ಮಾನ್) ಸಂಪೂರ್ಣ ಪೂಜೆಗಳನ್ನು (ಪರಿತ್ಯಜ್ಯ) ತ್ಯಜಿಸಿ, ನೀನು ಕೇವಲ (ಏಕಮ್) ಒಬ್ಬನೇ ಆದ ಆ ಪೂರ್ಣ ಪರಮಾತ್ಮನಲ್ಲಿ (ಶರಣಮ್) ಶರಣಾಗು. (ಅಹಮ್) ನಾನು (ತ್ವಾ) ನಿನಗೆ (ಸರ್ವಪಾಪೇ ಭ್ಯಃ) ಸಂಪೂರ್ಣ ಪಾಪಗಳಿಂದ (ಮೋಕ್ಷುಷ್ಯಾಮಿ) ಮುಕ್ತಿಗೊಳಿಸುವೆನು (ಮಾ ಶುಚಃ) ಶೋಕ ಮಾಡಬೇಡ.

## "ಕಾಲಬ್ರಹ್ಮನ ಸಾಧಕರು ಬ್ರಹ್ಮನನ್ನು, ಹಾಗೂ ಪೂರ್ಣ ಬ್ರಹ್ಮನ ಸಾಧಕರು ಪೂರ್ಣ ಬ್ರಹ್ಮನನ್ನು ಪಡೆಯುತ್ತಾರೆ"

**ಗೀತೆಯ 8ನೇ ಅಧ್ಯಾಯದ ಶ್ಲೋಕ 5 ರಿಂದ 10 ಹಾಗೂ 13, ಗೀತೆಯ 17 ಅಧ್ಯಾಯದ 23ನೇ ಶ್ಲೋಕಗಳಲ್ಲಿ ನಿರ್ಣಾಯಕ ಜ್ಞಾನವಿದೆ. ಗೀತೆಯ 8ನೇ ಅಧ್ಯಾಯದ 13ನೇ ಶ್ಲೋಕದಲ್ಲಿ ಹೇಳಿದೆ ನನ್ನ (ಬ್ರಹ್ಮನ) ಸಾಧನೆಯ ಮಂತ್ರವು ಕೇವಲ 'ಓಂ' ಅಕ್ಷರ ಜಪ ಮಾಡುವುದಾಗಿದೆ. ಯಾವ ಸಾಧಕನು ತನ್ನ ಅಂತಿಮ ಉಸಿರಿನವರೆಗೆ ಈ ನಾಮ ಜಪ ಮಾಡುವನೋ, ಅವನು ನನ್ನ ಪರಮಗತಿಯನ್ನು ಪಡೆಯುತ್ತಾನೆ. (ತನ್ನ ಪರಮಗತಿಯನ್ನು, ಗೀತೆ ಜ್ಞಾನ ದಾತಾ ಪ್ರಭುವು, ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹೇಳಿದ್ದಾನೆ. ಅದು ಅನುತ್ತಮವೆಂದು ಅರ್ಥಾತ್ ಕೆಳಸ್ತರದ್ದೆಂದು)**

**ಗೀತೆಯ 17ನೇ ಅಧ್ಯಾಯದ 23ನೇ ಶ್ಲೋಕದಲ್ಲಿ ಹೇಳಿದೆ– ಪೂರ್ಣ ಪರಮಾತ್ಮನ ಪ್ರಾಪ್ತಿಗೆ ಕೇವಲ ಮೂರು ಮಂತ್ರಗಳಾದ "ಓಂ–ತತ್–ಸತ್" ಜಪದ ನಿರ್ದೇಶನವಿದೆ. (ಇದರಲ್ಲಿ 'ಓಂ' ಜಪವು ಬ್ರಹ್ಮನದಾಗಿದೆ. 'ತತ್' ಇದು ಸಾಂಕೇತಿಕವಾಗಿದೆ. ಇದು ಪರಬ್ರಹ್ಮನ ಜಪವಾಗಿದೆ. 'ಸತ್' ಇದು ಸಾಂಕೇತಿಕವಾಗಿದೆ. ಇದು ಪೂರ್ಣ ಬ್ರಹ್ಮನ ಜಪವಾಗಿದೆ.) ಆ ಪೂರ್ಣ ಪರಮಾತ್ಮನ ತತ್ವಜ್ಞಾನವನ್ನು ತತ್ವದರ್ಶಿ ಸಂತರು ಮಾತ್ರ ತಿಳಿದಿರುತ್ತಾರೆ ಅವರಿಂದ ಅದನ್ನು ಪಡೆದುಕೊ, ನನಗೆ (ಗೀತೆಯ ಜ್ಞಾನ ದಾತಾ ಕ್ಷರ ಪುರುಷನಿಗೆ) ತಿಳಿದಿಲ್ಲ.**

ಗೀತೆಯ 8ನೇ ಅಧ್ಯಾಯದ 6ನೇ ಶ್ಲೋಕದಲ್ಲಿ ಹೇಳಿದೆ– ಯಾರು (ಸಾಧಕರು) ಯಾವ ಪ್ರಭುವಿನ ನಾಮಜಪವನ್ನು, ತಮ್ಮ ಅಂತ್ಯ ಕಾಲದಲ್ಲಿ ಮಾಡುವರೋ ಅವರು ಆ ಪ್ರಭುವನ್ನೇ ಪಡೆಯುವರು. ಇದೇ ವಿಧಾನವಾಗಿದೆ.

ಗೀತೆಯ 8ನೇ ಅಧ್ಯಾಯದ 5 ರಿಂದ 7ನೇ ಶ್ಲೋಕಗಳಲ್ಲಿ ಹೇಳಿದೆ ಯಾರು ಅಂತ್ಯಕಾಲದಲ್ಲಿ ನನ್ನ ಸ್ಮರಣೆ ಮಾಡುತ್ತಾರೋ, (ಬ್ರಹ್ಮನನ್ನು ಸ್ಮರಿಸುತ್ತಾ ಪ್ರಾಣ ಬಿಡುತ್ತಾರೋ) ಅವರು ನನ್ನ (ಬ್ರಹ್ಮನ) ಭಾವದಲ್ಲಿ ಭಾವಿತರಾಗಿರುತ್ತಾರೆ. ಪುನಃ ಮನುಷ್ಯ ಜನ್ಮವಾದರೆ ಆ ಸಾಧಕರು ತನ್ನ ಸಾಧನೆಯನ್ನು 'ಬ್ರಹ್ಮ' ನಿಂದಲೇ ಪ್ರಾರಂಭಿಸುತ್ತಾರೆ. ಅವರ ಸ್ವಭಾವವು ಹಾಗೆಯೇ ಇರುತ್ತದೆ. (ಇದರ ಪ್ರಮಾಣವು ಗೀತೆಯ ಅಧ್ಯಾಯ 16 ಮತ್ತು 17ರಲ್ಲಿ ಸಹ ಇದೆ. ಯಾವ ಸಾಧಕರು ಪೂರ್ವ ಜನ್ಮದಲ್ಲಿ ಯಾವ ಸಾಧನೆಯನ್ನು ಮಾಡಿ ಬಂದಿರುತ್ತಾರೋ, ಮುಂದಿನ ಜನ್ಮದಲ್ಲಿ ಸಹ ಸ್ವಭಾವವಶದಿಂದ ಅದೇ ಸಾಧನೆ ಮಾಡುತ್ತಾರೆ.) ಗೀತೆಯ 8ನೇ ಅಧ್ಯಾಯದ 7ನೇ ಶ್ಲೋಕದಲ್ಲಿ ಹೇಳಿದೆ– ಎಲ್ಲ ಕಾಲದಲ್ಲೂ ನನ್ನ ಸ್ಮರಣೆ ಮಾಡು ಹಾಗೂ ಯುದ್ಧವನ್ನು ಮಾಡು ನಿಸ್ಸಂದೇಹವಾಗಿ ನನ್ನನ್ನೇ ಪಡೆಯುವೆ.

ಗೀತೆಯ 8ನೇ ಅಧ್ಯಾಯದ 8 ರಿಂದ 10 ಶ್ಲೋಕಗಳಲ್ಲಿ ಸ್ಪಷ್ಟ ಪಡಿಸಿದ್ದಾರೆ ಯಾವ ಸಾಧಕನು ಅನನ್ಯ ಮನದಿಂದ ಪರಮೇಶ್ವರನ (ಪೂರ್ಣ ಬ್ರಹ್ಮ) ನಾಮ ಜಪ ಮಾಡುತ್ತಾರೋ, ಅವರು ಸದಾ ಅವನನ್ನೇ ಸ್ಮರಿಸುವವನಾಗಿ (ಪರಮ ದಿವ್ಯಂ ಪುರುಷ ಯಾತಿ) ಆ ಪರಮ ದಿವ್ಯ ಪುರುಷ ಅರ್ಥಾತ್, ಪರಮೇಶ್ವರ (ಪೂರ್ಣ ಬ್ರಹ್ಮ)ನನ್ನು ಪಡೆಯುತ್ತಾರೆ. (ಅಧ್ಯಾಯ 8ರ 8ನೇ ಶ್ಲೋಕ)

ಆ ಸಾಧಕರು ಅನಾದಿ, ಸರ್ವರನ್ನು ನಿಯಂತ್ರಿಸುವ, ಸೂಕ್ಷ್ಮಕ್ಕಿಂತ ಅತಿ ಸೂಕ್ಷ್ಮ, ಎಲ್ಲರ ಪಾಲನೆ, ಪೋಷಣೆ ಮಾಡುವ ಸೂರ್ಯನ ರೀತಿಯಲ್ಲಿ ಸ್ವಪ್ರಕಾಶಿತ ಅರ್ಥಾತ್ ತೇಜೋಮಯ ಶರೀರ ಯುಕ್ತರು, ಅಜ್ಞಾನದ ರೂಪ ಅಂಧಕಾರದಿಂದ ಹೊರತಾದ (ಕವಿರ್) ಕವಿರ್ದೇವ ಸಚ್ಚಿದಾನಂದ ಘನಬ್ರಹ್ಮ ಪರಮೇಶ್ವರನ ಸ್ಮರಣೆ ಮಾಡುತ್ತಾರೆ (ಅಧ್ಯಾಯ 8ರ 9ನೇ ಶ್ಲೋಕ)

ಈ ಭಕ್ತಿಯುಕ್ತ ಸಾಧಕರು ಮೂರು ಮಂತ್ರ ಜಪಗಳ ಸಾಧನಾ ಶಕ್ತಿ (ನಾಮ ಜಪಗಳಿಗೆ) ಯಿಂದ, ಅಂತ್ಯದವೇಳೆಯಲ್ಲಿ ಶರೀರವನ್ನು ತ್ಯಜಿಸುವ ಸಮಯದಲ್ಲಿ ತ್ರಿಕುಟಿಯನ್ನು ತಲುಪಿ, ಅಭ್ಯಾಸ ಬಲದಿಂದ ಸಾರನಾಮವನ್ನು ಸ್ಮರಿಸುತ್ತಾ, ಆ ದಿವ್ಯರೂಪ ಅರ್ಥಾತ್ ತೇಜೋಮಯ ಸಾಕಾರ (ಪರಮ ಪುರುಷ) ಪರಮೇಶ್ವರನನ್ನು ಪಡೆಯುತ್ತಾರೆ. (ಅಧ್ಯಾಯ 8 ರ ಶ್ಲೋಕ 10ರಲ್ಲಿ)

## "ಕಾಲಬ್ರಹ್ಮನ ಸಾಧನೆ (ಕ್ಷರ ಪುರುಷನ) ಅನುತ್ತಮವಾಗಿದೆ."

ಗೀತೆಯ 2ನೇ ಅಧ್ಯಾಯದ 12ನೇ ಶ್ಲೋಕ ಹಾಗೂ 4ನೇ ಅಧ್ಯಾಯದ 5ನೇ ಶ್ಲೋಕ ಹಾಗೂ 7ನೇ ಅಧ್ಯಾಯದ 18ನೇ ಶ್ಲೋಕಗಳಲ್ಲಿ ಹೇಳಿದೆ ನಾನು (ಗೀತೆ ಜ್ಞಾನ ದಾತಾ) ನಾಶವಾಗುತ್ತೇನೆ. ಜನನ–ಮರಣಗಳು ನನಗೆ ಹಾಗೂ ನಿನಗೂ ಸದಾ ಇರುವುದು. ಕೇವಲ ನಾವು ಮಾಡಿರುವ ಕರ್ಮಫಲಗಳು ದೊರೆಯುವುದು. ಮೋಕ್ಷವಾಗುವುದಿಲ್ಲ. ನನ್ನ ಸಾಧನೆ ಮಾಡುವವರು ಒಳ್ಳೆಯ ಉದ್ಧಾರ ಸಾಧಕರು ಆದರೂ ಸಹ ನನ್ನ, ಅತಿ ಕೆಳಸ್ತರದ (ಅನುತ್ತಮಾಮ್) ಸಾಧನೆಯಲ್ಲಿ ನಿರತರಾಗಿದ್ದಾರೆ. ಆದ್ದರಿಂದ ಗೀತೆಯ 18ನೇ ಅಧ್ಯಾಯದಲ್ಲಿನ 62, 64, 66ನೇ ಶ್ಲೋಕಗಳಲ್ಲಿ ಹೇಳಿದೆ ನೀನು ಪರಮೇಶ್ವರನಲ್ಲಿ ಶರಣು ಹೋಗು, ಹಾಗೂ ನನ್ನ ಪೂಜ್ಯ ದೇವನೂ ಅವನೇ ಆಗಿದ್ದಾನೆ.

ಪ್ರಾರ್ಥನೆ :– ಮೇಲಿನ ಮೂರು ಮಂತ್ರಗಳ ಸಾಧನೆಯು, ನನ್ನ ದಾಸರಿಗೆ ದಾಸ (ರಾಮ್‌ಪಾಲ್ ದಾಸ್)ನ ಹತ್ತಿರ ದೊರೆಯುವುದು. ಸ್ವಯಂ ಪೂರ್ಣ ಪರಮಾತ್ಮ ಕವಿರ್ದೇವರು. ತಮ್ಮ ಆತ್ಮಗಳ ಮೇಲೆ ದಯೆ ಇರಿಸಿ ಪ್ರಧಾನ ಮಾಡಿದ್ದಾರೆ. ಈಗ ಮಧ್ಯದ ಪೀಳಿಗೆ ನಡೆಯುತ್ತಿದೆ. ಏಕೆಂದರೆ ಕಲಿಯುಗದ ಪ್ರಾರಂಭದಲ್ಲಿ, ನಮ್ಮ ಪೂರ್ವಜರು, ಅಶಿಕ್ಷಿತರಾಗಿದ್ದರು. ಆ ಸಮಯದಲ್ಲಿ ಪರಮೇಶ್ವರನ ತತ್ವಜ್ಞಾನವನ್ನು, ನಕಲಿ ಸಂತರು, ಗುರುಗಳು, ಮಹಂತರು ಹಾಗೂ ಅಚಾರ್ಯರು ಮೇಲೆ ಬರಲು ಬಿಡಲಿಲ್ಲ. ಹಾಗೂ ಕಲಿಯುಗದ ಅಂತ್ಯದಲ್ಲಿ, ಎಲ್ಲ ಜನರು ಭಕ್ತಿಹೀನರು ಹಾಗೂ ಮಹಾವಿಕಾರಿಗಳಾಗುವರು. ಈಗ ಈ ವರ್ತಮಾನ ಸಮಯದಲ್ಲಿ 20ನೇ ಶತಮಾನದಿಂದ, ಶಿಕ್ಷಿತ ಸಮಾಜ ಪ್ರಾರಂಭವಾಯಿತು.ಈಗ ಮಧ್ಯದ ಪೀಳಿಗೆ ನಡೆಯುತ್ತಿದೆ.

ವಾಸ್ತವಿಕ ಜ್ಞಾನವು ನಮ್ಮ ಸದ್‌ಗ್ರಂಥಗಳಲ್ಲಿದೆ. ಅವನ್ನು ನಕಲಿ ಸಂತರು, ಗುರುಗಳು, ಆಚಾರ್ಯರು ಹಾಗೂ ಮಹಂತರು ತಿಳಿಯಲಾಗಲಿಲ್ಲ. ಈ ಕಾರಣದಿಂದ ಸಕಲ ಭಕ್ತ ಸಮಾಜವು, ಶಾಸ್ತ್ರ ವಿರುದ್ಧ ಜ್ಞಾನದ ಆಧಾರದಿಂದ ದಂತ ಕಥೆಗಳ (ಲೋಕವೇದ) ಆಧಾರ ಪಡೆದು ಶಾಸ್ತ್ರ ವಿಧಿಯನ್ನು ತ್ಯಜಿಸಿ ಮನಬಂದಂತೆ ಆಚರಣೆ ಮಾಡುತ್ತಿದ್ದಾರೆ. ಮಾನವ ಜೀವನವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ.

ಶಾಸ್ತ್ರ ವಿಧಿಗೆ ಅನುಸಾರವಾಗಿ ಸಾಧನೆ :–

1. ಪ್ರಥಮ ಚರಣದಲ್ಲಿ, ಬ್ರಹ್ಮ ಗಾಯತ್ರಿ ಮಂತ್ರೋಪದೇಶ ಕೊಡಲಾಗುತ್ತದೆ. ಅದು ಕಮಲಗಳನ್ನು ತೆರೆಯುವುದಾಗಿದೆ. ಉಪದೇಶ ಪಡೆದ ಭಕ್ತಾತ್ಮ ಹೀಗೆ ಯೋಚಿಸುವನು :– ಮೂರು ಗುಣಗಳ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ) ಪೂಜೆ ಮಾಡಬೇಡಿರಿ ಎಂದು ಹೇಳುತ್ತಿದ್ದರು ಆದರೆ ಮಂತ್ರ ಜಪವು ಅವರದ್ದೆ ಕೊಟ್ಟಿದ್ದಾರೆ. ಅವರಲ್ಲಿ ಪ್ರಾರ್ಥನೆ ! ಇದು ಪೂಜೆಯಲ್ಲ ನಾವು ಕಾಲನ ಲೋಕದಲ್ಲಿ ಇದ್ದೇವೆ. ಇಲ್ಲಿ ನಮಗೆ ಯಾವ ಅನುಕೂಲತೆಗಳ ಬಯಕೆ ಇದೆಯೋ, ಅದನ್ನು ಬ್ರಹ್ಮಾ, ವಿಷ್ಣು, ಶಿವ ಮೊದಲಾದವರು ಪ್ರಾಧಾನ ಮಾಡುವರು.

ಹೇಗೆ ನಾವು ಕರೆಂಟಿನ ಕನೆಕ್ಷನ್ (ಲಾಭ) ಪಡೆದಿದ್ದೇವೆ. ಅದರ ಬಿಲ್ಲನ್ನು (ಖರ್ಚನ್ನು) ಕಟ್ಟಬೇಕು. ನಾವು ಇಲ್ಲಿ ವಿದ್ಯುತ್ ಮಂತ್ರಿಯ ಅಥವಾ ಆ ವಿಭಾಗದ ಪೂಜೆ ಮಾಡುತ್ತಿಲ್ಲ. ನಾವು ಕಟ್ಟಬೇಕಾದ (ಫೀ–ಚಾರ್ಜ್) ಹಣವನ್ನು ಕಟ್ಟಿದ್ದರೆ, ವಿದ್ಯುತ್ತಿನ ಲಾಭ ದೊರೆಯುತ್ತಲಿರುವುದು. ಇದೇ ಪ್ರಕಾರ, ಟೆಲಿಫೋನ್ ಬಿಲ್, ನೀರಿನ ಬಿಲ್, ಮೊದಲಾದವನ್ನು ಕಟ್ಟುತ್ತ ಇರುವೆವು. ಆಗ ನಮಗೆ ಅನುಕೂಲತೆಗಳು (ಅವುಗಳ) ದೊರೆಯುತ್ತಲಿರುವುದು. ನೀವು ಶಾಸ್ತ್ರ ವಿಹೀನ ಸಾಧನೆ ಮಾಡಿ ಭಕ್ತಿಹೀನರಾಗಿರುವಿರಿ. ಅರ್ಥಾತ್ ಪುಣ್ಯ ಹೀನರಾಗಿರುವಿರಿ. ಆ ಕಾರಣದಿಂದಲೇ ನಿಮಗೆ ಧನಲಾಭ ಮೊದಲಾದವು ಆಗುತ್ತಿಲ್ಲ. ಈ ದಾಸ್ (ರಾಮ್ ಪಾಲ್‌ದಾಸ್) ನಿಮ್ಮ ಗ್ಯಾರೆಂಟರ್ (ಜವಬ್ದಾರ) ಆಗಿ, ಈ ಕಾಲ ಲೋಕದ, ಒಂದು ಬ್ರಹ್ಮಾಂಡದ ಶಕ್ತಿಗಳಿಂದ (ದುರ್ಗಾ–ಬ್ರಹ್ಮಾ–ವಿಷ್ಣು–ಶಿವ–ಗಣೆಶ– ಮೊದಲಾದ) ನಿಮಗೆ ಎಲ್ಲ ಸೌಲಭ್ಯಗಳನ್ನು ಪುನಃ ಪ್ರಾರಂಭಿಸುವನು. ಆದರೆ ನೀವು ಈ ಮಂತ್ರದ ಜಪದಿಂದ ಇವರ ಬಿಲ್ಲುಗಳನ್ನು ತುಂಬುತ್ತಿರಬೇಕು. (ಕಟ್ಟಬೇಕು) ಯಾವುದು ಪ್ರಥಮ ಮಂತ್ರವೋ, (ಸತ್ಯ–ಸುಕೃತ್–ಅವಿಗತ್ ಕಬೀರ್) ಅದು ನಿಮ್ಮ ಪೂಜೆಯಾಗಿದೆ. ಇವನು ಪೂರ್ಣ ಪರಮಾತ್ಮನಾಗಿದ್ದಾನೆ. ಹಾಗೂ ನಿನಗೆ ನಾಶವಿಲ್ಲದ ಫಲ ಪ್ರಾಪ್ತವಾಗುವುದು. 'ಸತ್ಯ' ಅಂದರೆ ಅವಿನಾಶಿ ಅರ್ಥಾತ್ ನಾವು ಅವಿನಾಶಿ ಪದವನ್ನು ಪಡೆಯಬೇಕಿದೆ. ಈ ಮಂತ್ರ ಉಪದೇಶದ ನಾಲ್ಕು ತಿಂಗಳ ಮೇಲೆ, ನಿಮಗೆ ಸತ್ಯನಾಮ ಮತ್ತೆ ಸಿಗುವುದು. ಅದು 2 ಮಂತ್ರದ್ದಾಗಿದೆ.

**ಅದರ ಒಂದು ಮಂತ್ರ, ಕಾಲನ 21 ಬ್ರಹ್ಮಾಂಡದ ಋಣವನ್ನು ತೀರಿಸುವುದಾಗಿದೆ. ಅದನ್ನು ಗಳಿಸಿ ನಾವು ಬ್ರಹ್ಮನ (ಕ್ಷರ ಪುರುಷ) ಅರ್ಥಾತ್ ಕಾಲನ ಋಣ ತೀರಿಸುವುದು. ನಂತರ ಈ ಕಾಲನು ನಮ್ಮನ್ನು ಎಲ್ಲ ಪಾಪಗಳಿಂದ ಮುಕ್ತ ಗೊಳಿಸುವನು.**

**ಗೀತೆಯ 18ನೇ ಅಧ್ಯಾಯದ 62–66ನೇ ಶ್ಲೋಕದಲ್ಲಿ ವರ್ಣಿತವಾಗಿದೆ–**

**ಅಧ್ಯಾಯ 18ರ 62ನೇ ಶ್ಲೋಕ.**

ತಮ್, ಏವ, ಶರಣಮ್, ಗಚ್ಛ, ಸರ್ವ ಭಾವೇನ, ಭಾರತ ।
ತತ್, ಪ್ರಸಾದಾತ್, ಪರಾಮ, ಶಾಂತಿಮ್, ಸ್ಥಾನಮ್, ಪ್ರಾಪ್ಸ್ಯಸಿ ಶಾಶ್ವತಮ್ ॥

**ಅನುವಾದ :–** (ಭಾರತ) ಹೇ ಭಾರತ ನೀನು (ಸರ್ವಭಾವೇನ) ಎಲ್ಲ ರೀತಿಯಿಂದ (ತಮ್) ಆ ಪರಮೇಶ್ವರನಲ್ಲಿ (ಶರಣಮ್) ಶರಣು (ಗಚ್ಛ) ಹೋಗು. (ತತ್ಪ್ರಸಾದಾತ್) ಆ ಪರಮೇಶ್ವರನ, ಕೃಪೆಯಿಂದಲೇ ನೀನು (ಪರಮ ಶಾಂತಿಮ್) ಪರಮ ಶಾಂತಿಯನ್ನು ಹಾಗೂ (ಶಾಶ್ವತಮ್) ಸನಾತನ (ಸ್ಥಾನಮ್) ಪರಂಧಾಮವನ್ನು (ಪ್ರಾಪ್ಸ್ಯಸಿ) ಪಡೆಯುವೆ.

**ಅನುವಾದ :– ಹೇ ಅರ್ಜುನ! (ಭಾರತ) ನೀನು ಎಲ್ಲಾ ಪ್ರಕಾರದಿಂದಲೂ ಆ ಪರಮೇಶ್ವರನಲ್ಲಿ ಶರಣು ಹೋಗು ಆ ಪರಮೇಶ್ವರನ ಕೃಪೆಯಿಂದ ನೀನು ಪರಮ ಶಾಂತಿಯನ್ನು ಹಾಗೂ ಸನಾತನವಾದ ಪರಂಧಾಮವನ್ನು ಪಡೆಯುವೆ.**

**ಅಧ್ಯಾಯ 18ರ 66ನೇ ಶ್ಲೋಕ.**

ಸರ್ವಧರ್ಮಾನ್, ಪರಿತ್ಯಜ್ಯ, ಮಾಮ್, ಏಕಮ್, ಶರಣಮ್, ವ್ರಜ, ಅಹಮ್, ತ್ವಾ ಸರ್ವ ಪಾಪೇಭ್ಯಃ, ಮೋಕ್ಷುಷ್ಯಾಮಿ, ಮಾ,ಶುಚಃ ॥

**ಅನುವಾದ :–** (ಮಾಮ್) ನನ್ನ (ಸರ್ವಧರ್ಮಾನ್) ಎಲ್ಲ ಪೂಜೆಗಳನ್ನು (ಪರಿತ್ಯಜ್ಯ) ತ್ಯಜಿಸಿ ನೀನು ಕೇವಲ (ಏಕಮ್) ಒಬ್ಬ ಆ ಪರಮಾತ್ಮನ (ಶರಣಮ್) ಶರಣು (ವ್ರಜ) ಹೋಗು, (ಅಹಮ್) ನಾನು (ತ್ವಾ) ನಿನಗೆ (ಸರ್ವ ಪಾಪೇಭ್ಯಃ) ಎಲ್ಲ ಪಾಪಗಳಿಂದ (ಮೋಕ್ಷಯಿಷ್ಯಾಮಿ) ಬಿಡುಗಡೆ (ಮುಕ್ತಿ) ಕೊಡಿಸುವೆನು. (ಮಾಶುಚಃ) ಶೋಕ ಮಾಡಬೇಡ.

**ಅನುವಾದ :– ನನ್ನ ಎಲ್ಲ ಪೂಜೆಗಳನ್ನು ತ್ಯಜಿಸಿ, ನೀನು ಕೇವಲ ಒಬ್ಬ ಪೂರ್ಣ ಪರಮಾತ್ಮನ ಶರಣು ಹೋಗು. ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತಿ (ಬಿಡುಗಡೆ) ಕೊಡಿಸುವೆ. ನೀನು ಶೋಕಿಸಬೇಡ.**

**ಮೇಲಿನ ಶ್ಲೋಕಗಳ ಭಾವಾರ್ಥ ಇದಾಗಿದೆ ಕಾಲ (ಬ್ರಹ್ಮ ಅರ್ಥಾತ್ ಕ್ಷರ ಪುರುಷ) ಹೇಳುತ್ತಿದ್ದಾನೆ. ಅರ್ಜುನ ನೀನು ನನ್ನ ಶರಣಾಗಿರಲು ಇಷ್ಟ ಪಡುವೆಯಾದರೆ, ಜನ್ಮ–ಮರಣಗಳು ಇದ್ದೇ ಇರುವುದು. ನೀನು ಪರಮಶಾಂತಿ ಹಾಗೂ ಸತ್ಯಲೋಕಕ್ಕೆ ಹೋಗಲು ಬಯಸಿದ್ದರೆ, ಪೂರ್ಣ ಪರಮಾತ್ಮನಲ್ಲಿ ಶರಣು ಹೋಗು, ಅದಕ್ಕಾಗಿ ನನ್ನ ಎಲ್ಲ ಧಾರ್ಮಿಕ ಪೂಜೆಗಳನ್ನು ಅರ್ಥಾತ್ ಸತ್ಯನಾಮದ, ಮೊದಲ ಮಂತ್ರದ ಜಪದ ಗಳಿಕೆಯನ್ನು ನನ್ನಲ್ಲೇ ಬಿಟ್ಟು, ಪುನಃ ಸರ್ವ ಭಾವದಿಂದ, ಆ ಒಬ್ಬ (ಸರ್ವಶಕ್ತಿಮಾನ್, ಅರ್ಥಾತ್ ಸಮನಾದ ಬೇರೆಯಾರೂ ಇಲ್ಲದ ಆ ಪರಮೇಶ್ವರ) ನಲ್ಲಿ ಶರಣು ಹೋಗು. ನಂತರ ನಾನು ಎಲ್ಲ ಪಾಪಗಳಿಂದ ನಿನಗೆ ಮುಕ್ತಿ ಕೊಡುವೆನು. ನೀನು ಚಿಂತಿಸಬೇಡ ಹಾಗೂ ಸತ್ಯನಾಮದ ಎರಡನೆಯ ಮಂತ್ರದ ಗಳಿಕೆಯನ್ನು ಅರ್ಥಾತ್ ಪರಬ್ರಹ್ಮ ಅಕ್ಷರ ಪುರುಷನಿಗೆ ಅರ್ಪಿಸಬೇಕು ಏಕೆಂದರೆ ನಾವು ಅಕ್ಷರ ಪುರಷನ ಲೋಕದ ಮೂಲಕವೇ, ಸತ್ಯಲೋಕಕ್ಕೆ ಹೋಗಬೇಕಾಗಿದೆ. ಅವನ ಋಣ ತಿರಿಸಬೇಕು. ನಂತರ (ಸತ್ಯ ಶಬ್ದ) ಮೂರನೆಯ**

ಮಂತ್ರ 'ಸತ್' ಅರ್ಥಾತ್ ಸಾರನಾಮ ಸಿಗುವುದು, ಅದು ಸತ್ಯಲೋಕದಲ್ಲಿ ಶಾಶ್ವತ ಸ್ಥಾನವನ್ನು ಪ್ರಾಪ್ತಿ ಮಾಡಿಸುವುದು. ಯಾರಾದರೂ ವಿದೇಶಕ್ಕೆ ಹೋಗಿದ್ದರೆ, ಅಲ್ಲಿ ಅವರ ಮೇಲೆ ಆ ಸರಕಾರದ ಋಣವಿರುವುದು. ಪುನಃ ವಾಪಸ್ಸು ಸ್ವದೇಶಕ್ಕೆ ಬರಬಯಸಿದರೆ, ಅವರು ಮೊದಲು ಆ ದೇಶದ ಋಣದಿಂದ ಮುಕ್ತರಾಗಬೇಕು. ನಂತರ **(No Due Certificate)** ಋಣ ಮುಕ್ತ ಪ್ರಮಾಣ ಪತ್ರ ಕೊಡಲಾಗುವುದು. ಆಗ ಅವರು ವಾಪಸ್ ಬರಲು ಪಾಸ್ ಪೋರ್ಟ್ ಆಗುವುದು. ಇಲ್ಲವಾದರೆ ಅವರನ್ನು ವಾಪಸ್ಸು ಬರಲು ಬಿಡುವುದಿಲ್ಲ.

ತಾವು ಇದೇ ಪ್ರಕಾರ ಈ ಕಾಲನ ಲೋಕದಲ್ಲಿ ಶಾಸ್ತ್ರ ವಿರುದ್ಧವಾದ ಸಾಧನೆ ಮಾಡಿ, ಭಕ್ತಿಹೀನರಾಗಿ, ಋಣಿಯಾಗಿರುವಿರಿ. ಮೊದಲು ನಿಮ್ಮನ್ನು ಸಾಹುಕಾರರನ್ನಾಗಿ ಮಾಡಲಾಗುವುದು. ಅದಕ್ಕಾಗಿಯೇ ಕವಿರ್ದೇವ (ಕಬೀರ್ ಪರಮೇಶ್ವರ) ರು ನನ್ನನ್ನು (ಸಂತ ರಾಮ್‌ಪಾಲ್ ದಾಸ್‌ನನ್ನು) ತನ್ನ ಪ್ರತಿನಿಧಿಯನ್ನಾಗಿ **(Representative)** ಮಾಡಿ ಕಳಿಸಿದ್ದಾರೆ ಆ ಪರಮೇಶ್ವರನ ಕಡೆಯಿಂದ ಈ ದಾಸನು ನಿಮ್ಮ **(Guaranter)** ಜವಾಬ್ದಾರಿತನಾಗುವನು. ಹಾಗೂ ಬ್ರಹ್ಮಾ–ವಿಷ್ಣು–ಶಿವ ಮೊದಲಾದವರ ಶಕ್ತಿಗಳಿಂದ ನಿಮ್ಮನ್ನು ಪುನಃ ಸಂಪರ್ಕಕ್ಕೆ (ಕನೆಕ್ಷನ್) ಪ್ರಾರಂಭಿಸುವನು. ನೀವು ಅವರ ಮಂತ್ರದ ಗಳಿಕೆಮಾಡಿ, ಕಂತುಗಳಲ್ಲಿ ಬಿಲ್ಲು ತುಂಬಿಸಬೇಕು. (ಕಟ್ಟಬೇಕು) ಎಲ್ಲಿಯವರೆಗೆ ನೀವು ಇಲ್ಲಿಂದ ಮುಕ್ತಿ ಹೊಂದುವುದಿಲ್ಲವೋ, ಅಲ್ಲಿಯವರೆಗೆ ನಿಮಗೆ ಎಲ್ಲ ಭೌತಿಕ ಅನುಕೂಲಗಳು (ಸೌಕರ್ಯಗಳು) ಜೋರಾಗಿಯೇ ದೊರೆಯುತ್ತಿರುವುದು. ಹಾಗೂ ತಾವು ಪುಣ್ಯದಾನ ಮೊದಲಾದವನ್ನು ಮಾಡಿ, ಹೆಚ್ಚಿನ ಭಕ್ತಿಯ ಶ್ರೀಮಂತರಾಗಲು ಸಾಧ್ಯ. ಎರಡನೇ ಶಬ್ದದಲ್ಲಿ, ಹೇಗೆ ನಮ್ಮ ಶರೀರದಲ್ಲಿ ಕಮಲ (ಚಕ್ರ) ಮಾಡಿದೆ. ಯಾವಾಗ ನಾವು ಶರೀರ ತ್ಯಜಿಸಿ, ಪರಮಾತ್ಮನ ಹತ್ತಿರ ಹೋಗುವೆವು. ಆಗ ನಾವು ಈ ಕಮಲದ ಮೂಲಕ ಹೋಗಬೇಕಾಗಿದೆ.

ಉದಾ:–

1. ಮೂಲ ಕಮಲದಲ್ಲಿ ಶ್ರೀ ಗಣೇಶ
2. ಸ್ವಾದ ಕಮಲದಲ್ಲಿ ಶ್ರೀ ಬ್ರಹ್ಮಾ–ಸಾವಿತ್ರಿ
3. ನಾಭಿ ಕಮಲದಲ್ಲಿ ಶ್ರೀ ವಿಷ್ಣು–ಲಕ್ಷ್ಮಿ
4. ಹೃದಯ ಕಮಲದಲ್ಲಿ ಶ್ರೀ ಶಿವ–ಪಾರ್ವತಿ
5. ಕಂಠ ಕಮಲದಲ್ಲಿ ಶ್ರೀ ದುರ್ಗಾ(ಅಷ್ಟಂಗಿ)

ಈ ಎಲ್ಲ ಕಮಲಗಳನ್ನು ಹಾದು ಹೋಗಬೇಕಾದರೆ, ನಾವು ಇವುಗಳ ಋಣ ತೀರಿಸಬೇಕಾಗುವುದು. ಮೊದಲ ಉಪದೇಶದಿಂದಲೇ ನಿಮ್ಮ ಎಲ್ಲ ಕಮಲಗಳು ಅರಳುವವು. ಅಂದರೆ ನೀವು ಋಣ ಮುಕ್ತರಾಗುವಿರಿ. ಯಾವಾಗ ನೀವು ಅಂತ್ಯಕಾಲದಲ್ಲಿ ಶರೀರ ಬಿಟ್ಟು ಹೋಗುವಿರೋ, ಆಗ ನಿಮ್ಮ ಹಾದಿ ಸುಗಮವಾಗುವುದು. ಅಂದರೆ ನಿಮಗೆ ಎಲ್ಲ ಋಣಮುಕ್ತ ಪ್ರಮಾಣ ಪತ್ರ ಸಿದ್ಧವಾಗಿ ದೊರೆವುದು.

ಆದರೆ ನಾವು ಪೂಜೆಯನ್ನು ನಮ್ಮ ಮೂಲ ಪ್ರಭು ಕವಿರ್ದೇವರಿಗೆ (ಕಬೀರ್ ಪರಮೇಶ್ವರ) ಮಾಡಬೇಕು. ಹೇಗೆ ಪತಿವ್ರತಾ ಸ್ತ್ರೀ ತನ್ನ ಗಂಡನಿಗೆ ಪೂಜಿಸುತ್ತಾಳೆ. ಆದರೆ ಯಥೋಚಿತ ಸತ್ಕಾರವನ್ನು ಎಲ್ಲರಿಗೂ ಮಾಡುತ್ತಾಳೇ. ಹೇಗೆಂದರೆ : ಮೈದುನನನ್ನು ಮಗನಂತೆ, ಭಾವವನ್ನು ಅಣ್ಣನಂತೆ, ಹಾಗೂ ಅತ್ತೆ–ಮಾವರನ್ನು ತಾಯಿ–ತಂದೆಯಂತೆ ಆದರಿಸುವಳು. ಆದರೆ ಯಾವಭಾವ ತನ್ನ ಪತಿಯಲ್ಲಿರುವುದೋ, ಆ ಭಾವವು ಅನ್ಯರಲ್ಲಿ ಇರಲು ಸಾಧ್ಯವಿಲ್ಲ. ಸರಿಯಾಗಿ ಇದೇ ಪ್ರಕಾರ, ಕಬೀರ್ ಪರಮೇಶ್ವರರ ಭಕ್ತರಿಗೆ ತಮ್ಮ ಭಕ್ತಿಯನ್ನು ಸಫಲ ಮಾಡಿಕೊಳ್ಳಬೇಕಿದೆ. ಆದ್ದರಿಂದ ಬೇರೆಯವರ ಶಾಸ್ತ್ರ ವಿರುದ್ಧವಾದ ಕೆಲಸಕ್ಕೆಬಾರದ ವಿಚಾರದ ಕಡೆ ಗಮನ ಕೊಡದೆ ನೀವು ಪೂರ್ಣ ವಿಶ್ವಾಸದಿಂದ

ಈ ದಾಸನು ತಿಳಿಸಿರುವ ಭಕ್ತಿ ಮಾರ್ಗದಲ್ಲಿ ತೊಡಗಿಕೊಂಡಿರಿ. ಈ ಭಕ್ತಿಯು ಎಲ್ಲ ಶಾಸ್ತ್ರಗಳ ಆಧಾರವಾಗಿದೆ.

2. ಎರಡನೆಯ ಚರಣದಲ್ಲಿ 'ಸತ್ಯನಾಮ'ವನ್ನು ಪ್ರಧಾನ ಮಾಡಲಾಗುತ್ತದೆ. ಅದು ಎರಡು ಮಂತ್ರಗಳದ್ದಾಗಿದ್ದು (1.ಓಂ, 2.ತತ್) ಅದು ಸಾಂಕೇತಿಕ" ಕೇವಲ ಸಾಧಕನಿಗೆ ಮಾತ್ರ ತಿಳಿಸಲಾಗುತ್ತದೆ.

3. ಮೂರನೆಯ ಚರಣದಲ್ಲಿ 'ಸಾರನಾಮ'ವನ್ನು ಪ್ರಧಾನ ಮಾಡಲಾಗುತ್ತದೆ. ಅದು ಮೂರು ಮಂತ್ರಗಳದ್ದಾಗಿದೆ. (1. ಓಂ, 2. ತತ್ 3. ಸತ್) ತತ್–ಸತ್ ಸಾಂಕೇತಿಕವಾಗಿದೆ. ಅದನ್ನು ಸಾಧಕರಿಗೆ ಮಾತ್ರ ತಿಳಿಸಲಾಗುತ್ತದೆ. ಈ ಪ್ರಕಾರವಾಗಿ ಸಾರನಾಮದ ಸ್ಮರಣೆಯ ಅಭ್ಯಾಸವು ಸಾಧಕರಿಗೆ ಪರಮ ದಿವ್ಯ ಪುರುಷ ಅರ್ಥಾತ್ ಪರಮೇಶ್ವರ ಕವಿರ್ದೇವರು ದೊರೆಯುವರು. ಹಾಗೂ ಸತ್ಯಲೋಕದಲ್ಲಿ ಪರಮ ಶಾಂತಿ ಅರ್ಥಾತ್ ಪೂರ್ಣ ಮೋಕ್ಷವು ಪ್ರಾಪ್ತವಾಗುವುದು.

ವಿಶೇಷ :– ವರ್ತಮಾನದಲ್ಲಿ ಈ ವಾಸ್ತವಿಕ ಸಾಧನೆ ಈ ದಾಸನ ಬಳಿಯಲ್ಲದೆ. ಬೇರೆ ಯಾರಲ್ಲೂ ಇಲ್ಲ. ಯಾರಾದರೂ ಈ ದಾಸನಿಂದ ಕದ್ದು, ಸ್ವಯಂ ಗುರುವಾಗಿ, ನಕಲಿ ಶಿಷ್ಯರನ್ನು ಮಾಡುತ್ತಿದ್ದರೆ, ಎಚ್ಚರ! ಅವರು ಮನುಷ್ಯ ಜೀವನದ ಶತ್ರುವಾಗಿದ್ದಾರೆ. ಆ ಅನಧಿಕಾರಿಯು ತನ್ನ ಜೀವನವನ್ನು ನಷ್ಟ ಮಾಡಿಕೊಳ್ಳುತ್ತಿರುವುದರ ಜೊತೆಗೆ, ಅಜ್ಞಾನಿ ಅನುಯಾಯಿಗಳನ್ನೂ ಸಹ ನರಕಭಾಗಿಯಾಗಿಸುತ್ತಾ ಇದ್ದಾರೆ ಅವರನ್ನು ಕಾಲನು ಕಳಿಸಿರುವ ಧೂತರೆಂದು ತಿಳಿಯಿರಿ.

## "ಸಂದೇಹ ನಿವಾರಣೆ"

ಮೇಲಿನ ಗೀತೆಯಸಾರದಿಂದ, ಬ್ರಹ್ಮಾ–ವಿಷ್ಣು–ಶಿವನ ಪೂಜೆಯು, ವ್ಯರ್ಥ ಎಂದು ಸಿದ್ಧವಾಗುತ್ತದೆ. ಆದರೆ ನಾನಂತೂ 30 ವರ್ಷಗಳಿಂದ ಶಿವನ ಪೂಜೆ ಮಾಡುತ್ತಾ ಇದ್ದೇನೆ. ಹಾಗೂ ಭಗವಂತ ಶ್ರೀ ಕೃಷ್ಣನು ನನಗೆ ಬಹಳ ಪ್ರೀಯ, ನಾನು ಈ ದೇವರುಗಳನ್ನು ಬಿಡುವುದಿಲ್ಲ ನನಗೆ ಇವರೊಂದಿಗೆ ಪ್ರೀತಿ ಬೆಳೆದಿದೆ. ಭಗವದ್ಗೀತೆಯ ಪಾಠವನ್ನು ನಿತ್ಯವೂ ಮಾಡುತ್ತೇವೆ ಹರೇರಾಮ, ಹರೇ ಕೃಷ್ಣ, ರಾಧಾಶ್ಯಾಮ, ಸೀತಾರಾಮ, ಓಂ ನಮಃ ಶಿವಾಯ, ಓಂ ನಮೋ ಭಗವತೇ ವಾಸುದೇವಾಯ ಮೊದಲಾದ ನಾಮ ಜಪ ಮಾಡುತ್ತೇನೆ. ಸೋಮವಾರದ ವ್ರತವನ್ನು ಮಾಡುವೆ, ತೀರ್ಥವನ್ನೂ ತರುವೆ. ಮಂದಿರಗಳಲ್ಲಿ ದಾನ ಮಾಡಲು ಹೋಗುತ್ತೇನೆ. ಮೂರ್ತಿ ಪೂಜೆಯನ್ನು ಮಾಡಲು ದೇವಾಲಯಗಳಿಗೆ ಹೋಗುತ್ತೇನೆ. ಸ್ವರ್ಗ ಪ್ರಾಪ್ತಿಯ ಬಯಕೆಯು ಇದೆ. ಹಾಗೂ ಪರಂಪರೆಯಿಂದ ಬಂದಿರುವ ಪೂಜೆಯ ಕಾರಣ, ಮಹಂತರಿಂದ ಉಪದೇಶವನ್ನೂ ಪಡೆದಿರುವೆನು.

ಉತ್ತರ :– ದಯವಿಟ್ಟು ತಾವು ಪುನಃ, ಮೇಲಿನ ಭಗವದ್ಗೀತೆಯ ಸಾರವನ್ನು ಓದಿರಿ. ಎಲ್ಲಿಯವರೆಗೆ ತತ್ವಜ್ಞಾನದ ಪೂರ್ಣ ಪರಿಚಯ ನಮಗಾಗುವುದಿಲ್ಲವೋ, ಅಲ್ಲಿಯವರೆಗೆ ಈ ಸಂಶಯ ಎಂಬ ಮುಳ್ಳು ಚುಚ್ಚುತ್ತಲೇ ಇರುತ್ತದೆ. ಮೇಲಿನ ಉದಾಹರಣೆಯಂತೆ ತಲೆಕೆಳಗಾಗಿ ನೇತಾಡುತ್ತಿರುವ, ಈ ಸಂಸಾರವೆಂಬ ವೃಕ್ಷದ ಬೇರು, ಪೂರ್ಣ ಪರಮಾತ್ಮ ಪರಮೇಶ್ವರನೇ ಆಗಿದ್ದಾನೆ. ಈ ಮೂರು ಗುಣ ರೂಪಿ ಶಾಖೆಗಳಿವೆ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು ಹಾಗೂ ತಮೋಗುಣ–ಶಿವ) ನೀವು ಮಾವಿನ ಗಿಡವನ್ನು ನೆಟ್ಟು, ಬೇರಿಗೆ ನೀರು ಹಾಕಿದರೆ, ಆ ಗಿಡಬೆಳೆದು ವೃಕ್ಷವಾಗುವುದು. ನಂತರ ಅದರ ಕೊಂಬೆಗಳಲ್ಲಿ ಹಣ್ಣುಗಳು ಬಿಡುವುದು ಕೆಲವರು ಕೊಂಬೆಗಳನ್ನು ಮುರಿದು ಬಿಡಿ ಎಂದೂ ಹೇಳುತ್ತಾರೆ. ಇದನ್ನು ನೋಡಿರಿ. ಸೀದಾ (ನೇರವಾಗಿ) ಬೀಜದಿಂದ ಬಂದ ಭಕ್ತಿರೂಪಿ ಗಿಡ ಅಂದರೆ, ಶಾಸ್ತ್ರ ವಿಧಿಯಂತೆ ಸಾಧನೆಯಾಗಿದೆ.

ಇದೇ ರೀತಿ ಪೂಜೆಯನ್ನು ಮೂಲಕ್ಕೆ ಮಾಡಬೇಕು. (ಪೂರ್ಣ ಪರಮಾತ್ಮನಿಗೆ) ನಂತರ ಕರ್ಮಫಲವು, ಮೂರೂ ಗುಣ (ಬ್ರಹ್ಮಾ–ವಿಷ್ಣು–ಶಿವ) ರೂಪಿ ಶಾಖೆಗಳಲ್ಲಿ ಬಿಡುತ್ತದೆ. ಆದ್ದರಿಂದ ಯಾವುದನ್ನೂ ಬಿಡಬಾರದು, ನಿಮ್ಮ ಭಕ್ತಿರೂಪದ ಗಿಡವನ್ನು ನೇರವಾಗಿ ಬೆಳಸಬೇಕು. ಅಂದರೆ ಶಾಸ್ತ್ರವಿಧಿಗೆ ಅನುಸಾರವಾಗಿ, ಸಾಧನೆ ಆರಂಭಿಸಬೇಕು.

ವರ್ತಮಾನ ಕಾಲದಲ್ಲಿ (ಈಗ) ಸರ್ವ ಪವಿತ್ರ ಭಕ್ತ ಸಮಾಜವು, ಶಾಸ್ತ್ರವಿಧಿಯನ್ನು ತ್ಯಜಿಸಿ, ಮನಬಂದಂತೆ ಆಚರಣೆ ಮಾಡುತ್ತಿದೆ. ಅರ್ಥಾತ್ ಭಕ್ತಿರೂಪದ ಗಿಡವು ತಲೆಕೆಳಗಾಗಿ ಇದೆ. ಯಾರದರೂ ಹೀಗೆ ಉಲ್ಟಾ ಗಿಡವನ್ನು ನೆಟ್ಟಿದ್ದರೆ, ಅವರನ್ನು ಮೂರ್ಖ ಎಂದು ಪರಿಗಣಿಸಬಹುದು. (ದಯವಿಟ್ಟು ನೋಡಿರಿ ಉಲ್ಟಾ ಇರುವ ಭಕ್ತಿ ರೂಪದ ಗಿಡದ ಚಿತ್ರವನ್ನು)

ಗೀತೆಯ 7ನೇ ಅಧ್ಯಾಯದ 12 ರಿಂದ 18ರವರೆಗೆ ಇರುವ ಶ್ಲೋಕಗಳಲ್ಲಿ (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ) ಮೂರು ಗುಣಗಳ ಪೂಜೆಗೆ ಮಾತ್ರ ಸೀಮಿತರಾಗಿರುವವರು. ಇವರನ್ನು ಬಿಟ್ಟು ಯಾರನ್ನೂ ಪೂಜಿಸುವುದಿಲ್ಲ. ಅವರನ್ನು ರಾಕ್ಷಸ ಸ್ವಭಾವ ಧಾರಣೆಮಾಡಿರುವವರು ಎನ್ನುತ್ತಾರೆ. ಮನುಷ್ಯರಲ್ಲಿ ನೀಚರು, ದುಷ್ಕರ್ಮ ಮಾಡುವ ಮೂರ್ಖರು ಎಂದು ಹೇಳಲಾಗಿದೆ ಇವರು ನನ್ನನ್ನೂ ಪೂಜಿಸುವುದಿಲ್ಲ. ಗೀತೆಯ ಜ್ಞಾನದಾತ (ಬ್ರಹ್ಮ / ಕ್ಷರಪುರುಷ) ನು ತನ್ನ ಪೂಜೆಯನ್ನು ಕೆಳಸ್ತರದ್ದು (ಅನುತ್ತಮ್) ಎಂದು ಹೇಳಿದ್ದಾನೆ. ಆದ್ದರಿಂದ ಗೀತೆಯ 18ನೇ ಅಧ್ಯಾಯದ, 62, 64, 66 ಮತ್ತು ಅಧ್ಯಾಯ 15ರಲ್ಲಿ 1ರಿಂದ 4ರವರೆಗಿನ ಶ್ಲೋಕಗಳಲ್ಲಿ ಹೇಳಿದೆ. ಆ ಪೂರ್ಣ ಪರಮಾತ್ಮನ ಶರಣು ಹೋಗು. ಅವನ ಪೂಜೆಯನ್ನು ತತ್ವದರ್ಶಿ ಸಂತರು ತಿಳಿಸುವ ಮಾರ್ಗದಂತೆ ಮಾಡು. (ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕದಲ್ಲಿ, ತತ್ವದರ್ಶಿ ಸಂತರ ಬಗ್ಗೆ ಸಂಕೇತ ಮಾಡಲಾಗಿದೆ) ಅದೇ ಪೂರ್ಣ ಪರಮಾತ್ಮನನ್ನು, ಶಾಸ್ತ್ರವಿಧಿಗೆ ಅನುಸಾರವಾಗಿ ಸಾಧನೆ (ಉಪಾಸನೆ) ಮಾಡುವುದರಿಂದ ಪರಮಶಾಂತಿ ಹಾಗೂ ಸತ್ಯಲೋಕವು ಪ್ರಾಪ್ತವಾಗುವುದು ಅರ್ಥಾತ್ ಪೂರ್ಣ ಮೋಕ್ಷವು ದೊರೆಯುವುದು. ಗೀತೆಯ ಜ್ಞಾನದಾತ ಪ್ರಭು (ಕ್ಷರ ಪುರುಷ/ ಕಾಲ) ಹೇಳುತ್ತಿದ್ದಾನೆ. ನಾನೂ ಸಹ ಅವನಲ್ಲೇ ಶರಣು ಹೋಗಿದ್ದೇನೆ ಅರ್ಥಾತ್ ನನ್ನ ಇಷ್ಟ ದೇವ ಕೂಡ ಪೂರ್ಣ ಪರಮಾತ್ಮನೇ ಆಗಿದ್ದಾನೆ. ನಾನೂ ಅವನ ಪೂಜೆ ಮಾಡುತ್ತೇನೆ. ಬೇರೆಯವರೂ ಸಹ ಅವನ ಪೂಜೆಯನ್ನೇ ಮಾಡಬೇಕು. ನೀವು ನಿತ್ಯ ಗೀತೆಯ ಪಾಠವನ್ನು ಮಾಡುವಿರಿ. ಆದರೆ ಸಾಧನೆಯನ್ನು ಗೀತೆಯ ವಿರುದ್ಧವಾದ ವಿಧಿಯಲ್ಲಿ ಮಾಡುವಿರಿ. ಯಾವ ಮಂತ್ರಗಳ (ಹರೇ ರಾಮ, ಹರೇ ಕೃಷ್ಣ, ರಾಧೇಶ್ಯಾಮ, ಸೀತಾರಾಮ, ಓಂ ನಮಃ ಶಿವಾಯ, ಓಂ ನಮೋ ಭಗವತೇ ವಾಸುದೇವಾಯ ಮೊದಲಾದ ಮಂತ್ರದ) ಜಪ ಮಾಡುವರು ಅನ್ಯ ಸಾಧನೆ ಮಾಡುವುದು, ವ್ರತ ಮಾಡವುದು ತೀರ್ಥ ತರುವುದು. ತೀರ್ಥ ಕ್ಷೇತ್ರ, ಧಾಮಗಳಲ್ಲಿ ದಾನ ಮಾಡುವುದು. ಗಂಗಾ ಸ್ನಾನ ಹಾಗೂ ತೀರ್ಥ ಕ್ಷೇತ್ರಗಳಲ್ಲಿ ಸ್ನಾನ, ಇವೆಲ್ಲವನ್ನೂ ಗೀತೆಯಲ್ಲಿ ಹೇಳಿಲ್ಲ. ಆದ್ದರಿಂದ ಇದು ಶಾಸ್ತ್ರ ವಿಧಿಯನ್ನು ತ್ಯಜಿಸಿ, ಮಾಡುತ್ತಿರುವ ಮನಬಂದಂತಹ ಆಚರಣೆಯಾಗುತ್ತದೆ. ಇದನ್ನು ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳಲ್ಲಿ ವ್ಯರ್ಥ ಎಂದು ಹೇಳಲಾಗಿದೆ.

## "ಗದ್ದುಗೆ (ಪೀಠ) ಹಾಗೂ ಮಹಂತ ಪರಂಪರೆಯ ತಿಳುವಳಿಕೆ"

ಮಹಂತ ಮತ್ತು ಪೀಠದ ಪರಂಪರೆಯ ತಿಳುವಳಿಕೆ : ಯಾವುದೋ ಒಂದು ಏಕಾಂತ ಸ್ಥಾನದಲ್ಲಿ, ಪಟ್ಟಣ ಅಥವಾ ಯಾವುದೊ ಹಳ್ಳಿಯಲ್ಲಿ ಯಾರೊ ಮಹಾತ್ಮ ಸಂತ ಅಥವಾ ಸಾಧಕ ಇದ್ದ. ಅವರು ಶರೀರವನ್ನು ತ್ಯಜಿಸಿದ ನಂತರ, ಅವರ ಶರೀರದ ಅಂತ್ಯ ಸಂಸ್ಕಾರದ ಸ್ಥಳದಲ್ಲಿ

ಒಂದು ಕಲ್ಲು ಅಥವಾ ಇಟ್ಟಿಗೆಯಿಂದ ಸ್ಮಾರಕವನ್ನು ಕಟ್ಟಲಾಗುತ್ತದೆ. ನಂತರ, ಆ ಪವಿತ್ರಾತ್ಮರ ಅನುಯಾಯಿಗಳು ಅಥವಾ ವಂಶಜರು ಅವರ ಕಲ್ಲಿನ ಮೂರ್ತಿಯನ್ನು ಇಡುತ್ತಾರೆ. ಕೆಲ ಸಮಯದ ನಂತರ ಶ್ರದ್ಧಾಳು ಹೋಗುತ್ತಾರೆ. ಸ್ವಲ್ಪ ಹಣವನ್ನು ದಾನ ಮಾಡತೊಡಗುತ್ತಾರೆ. ಅದಕ್ಕೆ ಮಂದಿರದ ರೂಪವನ್ನು ಕೊಡುತ್ತಾರೆ ಹಾಗೂ ಆ ಸಂತ ಅಥವಾ ಋಷಿಯ ವಂಶಜರಿಗೆ, ಹಣ ಗಳಿಸುವ ದುರಾಸೆ ಯಾಗುತ್ತದೆ ಅವರು ಹೀಗೆ ಹೇಳುತ್ತಾರೆ "ಇವರನ್ನು ಯಾರು ದರ್ಶನ ಮಾಡಲು ಬರುವರೋ, ಅವರಿಗೆ ಪೂರ್ಣ ಮೋಕ್ಷ ಪ್ರಾಪ್ತವಾಗುವುದು" ಎಲ್ಲ ಲಾಭ ಸಿಗುವುದು. ಈ ಮಹಾಪುರುಷರ ಜೀವಿತಾವಧಿಯಲ್ಲಿ ಅವರ ಶಿಷ್ಯರಿಗೆ ಸಿಗುತ್ತಿದ್ದ ರೀತಿಯಲ್ಲೇ ನಿಮಗೂ ಪೂರ್ಣ ಮೋಕ್ಷ ಸಿಗುವುದು. ಈ ಮೂರ್ತಿಯನ್ನು ಅದೇ ಸಂತ ಎಂದು ತಿಳಿಯಿರಿ. ಯಾರು ಇಲ್ಲಿಗೆ ಬರುವುದಿಲ್ಲವೋ, ಅವರಿಗೆ ಮೋಕ್ಷ ದೊರೆವ ಸಂಭವವಿಲ್ಲ ಮೊದಲಾಗಿ" ಆ ಅಜ್ಞಾನಿಗಳಿಗೆ ಹೇಳುವವರು ಯಾರು.

ಉದಾ :– ಒಬ್ಬ ವೈದ್ಯನಿದ್ದ, ಅವನು ನಾಡಿ ನೋಡಿ ಔಷಧ ಕೊಡುತ್ತಿದ್ದ, ರೋಗಿ ಆರೋಗ್ಯಗೊಳ್ಳುತ್ತಿದ್ದ. ಆ ವೈದ್ಯನ ಮೃತ್ಯುವಿನ ನಂತರ, ಆ ವೈದ್ಯನ ಮೂರ್ತಿಯನ್ನು ಮಾಡಿಸಿ, ಸ್ಥಾಪನೆ ಮಾಡಿ, ಯಾರೋ ದುರಾಸೆಯವರು ಹೇಳಿದರು ಈ ಮೂರ್ತಿಯೂ, ಆ ವೈದ್ಯರಂತೆ ಕೆಲಸ ಮಾಡುತ್ತದೆ. ಯಾರು ಇವರ ದರ್ಶನ ಮಾಡಲು ಬರುವರೋ, ಅವರು ಆರೋಗ್ಯವಂತರಾಗುವರು. ಅಥವಾ ತಾನೇ ನಕಲಿ ವೈದ್ಯರಾಗಿ ಕುಳಿತುಕೊಂಡು "ನಾನೇ ಔಷಧಿ ಕೊಡುವೆ" ಎನ್ನುತ್ತಾ, ಎಲ್ಲ ಔಷಧಿಗಳನ್ನು ಔಷಧಿ ಗ್ರಂಥಕ್ಕೆ ವಿರುದ್ಧವಾಗಿ ಕೊಡುತ್ತಿದ್ದ ಅವರು ಮೋಸ ಮಾಡುತ್ತಿದ್ದಾರೆ. ಏಕೆಂದರೆ ಕೇವಲ ಧನ ಉಪಾರ್ಜನೆಯೇ ಅವನ ಉದ್ದೇಶವಾಗಿದೆ. ಯಾವುದೇ ಸಂತ ಅಥವಾ ದೇವರ ಮೂರ್ತಿಯು ಗೌರವಾನ್ವಿತ ಸ್ಮಾರಕವಾಗುವುದು ಪೂಜ್ಯನೀಯವಲ್ಲ.

ಇದೇ ರೀತಿ ಯಾವುದೇ ಸಂತ ಅಥವಾ ಪ್ರಭುವಿನ ಮೂರ್ತಿಯನ್ನು ಮಾಡಿ, ಅದರ ನೆರಳಿನಲ್ಲಿ (ಆಶ್ರಯದಲ್ಲಿ) ಯಾರೋ ಪೂಜಾರಿ ಅಥವಾ ಮಹಂತರು ಹೇಳುವರು "ನಾನೂ ಸಹ ನಾಮೋಪದೇಶ ಕೊಡುತ್ತೇನೆ." ಎಂದರೆ, ಆ ಮಹಾನುಭಾವರು ಎಲ್ಲ ಸಾಧನೆಯನ್ನು, ಪವಿತ್ರ ಶಾಸ್ತ್ರಕ್ಕೆ ವಿರುದ್ಧವಾಗಿ ಕೊಡುತ್ತಿದ್ದಾರೆ ಎಂದರ್ಥ.

ಆ ಮಹಾನ್ ಸಂತರು ತನ್ನ ಅನುಭವವನ್ನು ಬರೆದಿದ್ದಾರೆ. ಈ ನಕಲೀ ಸಂತರು ಹಾಗೂ ಮಹಂತರು ಸ್ವಯಂ ದೋಷಿಯಾಗಿದ್ದಾರೆ. ಹಾಗೂ ಅನುಯಾಯಿಗಳ ಜೀವನವನ್ನು ಸಹ ವ್ಯರ್ಥ ಮಾಡುವ ಭಾರವನ್ನು ತಮ್ಮ ತಲೆಯ ಮೇಲೆ ಹಾಕಿಕೊಳ್ಳುತ್ತಿದ್ದಾರೆ. ಸಂತರಂತೂ ಒಂದು ಕಾಲದಲ್ಲಿ ಒಬ್ಬರೇ ಬರುತ್ತಾರೆ. ಅವರ ಹಾದಿಯಲ್ಲಿ ಕೋಟ್ಯಾಂತರ ನಕಲಿ ಸಂತರು, ಮಹಂತರು ಹಾಗೂ ಆಚಾರ್ಯರು ಅಡ್ಡಿ ಮಾಡುತ್ತಾರೆ.

ಯಾವುದೇ ಸಂತರು ಶರೀರ ತ್ಯಜಿಸಿದ ನಂತರ, ಸಂತರ ಅಥವಾ ಮಹಂತರ ಪರಂಪರೆಯು ಪ್ರಾರಂಭವಾಗುತ್ತದೆ. ಪೂರ್ವ ಸಂತರ ಸ್ಥಾನದ ರಕ್ಷಣೆಗಾಗಿ, ಒಬ್ಬ ವ್ಯವಸ್ಥಾಪಕರನ್ನು ಆರಿಸಲಾಗುತ್ತದೆ. ಅವರನ್ನು ಮಹಂತ ಎಂದು ಕರೆಯಲಾಗುತ್ತದೆ. ಅವರನ್ನು ಕೇವಲ, ಆ ಪವಿತ್ರ ಸ್ಮಾರಕದ ರಕ್ಷಣೆಗಾಗಿಯೇ ನಿಯುಕ್ತಗೊಳಿಸಲಾಗುತ್ತದೆ. ನಂತರ ದುರಾಸೆಗೆ ಒಳಗಾಗಿ, ಅವರೇ ಸ್ವಯಂ ಗುರುವಾಗಿ ಬಿಡುತ್ತಾರೆ. ಹಾಗೂ ಭಕ್ತಿಯನ್ನು ಬಯಸುವ, ಪ್ರೀತಿಯ ಆತ್ಮಗಳು, ಅವರನ್ನು ಅನುಸರಿಸಿ ತಮ್ಮ ಜೀವನವನ್ನು ವ್ಯರ್ಥ ಮಾಡಿಕೊಳ್ಳುತ್ತಾರೆ. ಮಹಂತ ಪರಂಪರೆಯ ನಿಯಮವನ್ನು ಹೀಗೆ ಮಾಡಿದ್ದಾರೆ. ಪೂರ್ವ ಮಹಂತರ ಹಿರಿಯ ಮಗ ಮಹಂತ ಪದವಿಯ ಅಧಿಕಾರಿಯಾಗುವನು. ಅವನು ಕುಡುಕನೇ ಇರಲಿ, ಅಜ್ಞಾನಿಯೇ ಆಗಿರಲಿ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಇದು ಭಕ್ತಿ

ಮಾರ್ಗವಲ್ಲ. ಇದರಲ್ಲಿ "ಕೇವಲ ಪೂರ್ಣ ಸಂತರೇ ಜೀವಿಗಳ ಉದ್ಧಾರ ಮಾಡಬಲ್ಲರು ಈ ದಾಸನು ಎರಡು–ಮೂರು ಮಹಂತ ಪರಂಪರೆಯ ಪುಸ್ತಕವನ್ನು ಓದಿ ಅವುಗಳಲ್ಲಿ ನೋಡಿದ್ದಾನೆ." ಅದರಲ್ಲಿ

1. ಒಂದು–ಎರಡು ವರ್ಷದ ಮಗುವನ್ನೇ ಪೀಠದಲ್ಲಿ ಕೂರಿಸಿದ್ದಾರೆ. ನಂತರ ಅವನು ದೊಡ್ಡವನಾಗಿ ನಾಮೋಪದೇಶ ಕೂಡ ಮಾಡತೊಡಗಿದ. ಎರಡನೆಯ ಪುಸ್ತಕದಲ್ಲಿ ಓದಿದೆ, ಒಂದು ಮಗು 5ವರ್ಷದ್ದು ಅವರ ತಂದೆಯ ಆಕಸ್ಮಿಕ ಮರಣದಿಂದಾಗಿ, ಆ ಮಗು (ಬಾಲಕ)ವನ್ನೇ ಪೀಠದಲ್ಲಿ ಕೂರಿಸಿದ್ದರು. ಕೆಲ ವರ್ಷಗಳ ನಂತರ, ಅವನೇ ಗುರುವಾದನು.

2. ಒಂದು ಮಹಂತ ಪರಂಪರೆಯ ಇತಿಹಾಸವನ್ನು ಓದಿದೆ ಆ ಮಹಂತನಿಗೆ ಮಕ್ಕಳಿರಲಿಲ್ಲ. ಅವನ ಮರಣವಾಯಿತು. ಅವನ ಸೋದರನ ಮರಣವು ಮೊದಲೇ ಆಗಿತ್ತು. ಅವನಿಗೂ ಸಂತಾನವಿರಲಿಲ್ಲ. ಪೀಠದ ರಕ್ಷಣೆಗಾಗಿ, ಒಬ್ಬ ಸೇವಕನನ್ನು ಅಸ್ಥಾಯಿಯಾಗಿ ನೇಮಿಸಿದರು. ಆ ವಂಶದಲ್ಲಿ ಸಂತಾನವಾಗುವವರೆಗೆ ಮಾತ್ರ ಮಹಂತನಾಗಿರಲು ಕೆಲ ಸಮಯದ ನಂತರ ಮಹಂತ ಕುಲದಲ್ಲಿ ಸಂತಾನವಾಯಿತು. ಅಸ್ಥಾಯಿ ಮಹಂತನು ಪೀಠದೊಂದಿಗೆ ಓಡಿಹೋದ. ಬೇರೆ ಪಟ್ಟಣದಲ್ಲಿ ಸ್ವತಃ ಪೀಠ ಸ್ಥಾಪನೆ ಮಾಡಿಕೊಂಡು ಮಹಂತನಾಗಿ ಕುಳಿತ ಅಲ್ಲೇ ಹೊಸ ಅಂಗಡಿ ತೆರೆದ ಹಾಗೂ ಪೂರ್ವ ಸ್ಥಾನದಲ್ಲಿ ಒಂದೊವರೆ ವರ್ಷದ ಮಗು ಮಹಂತನಾದ.

3. ಇನ್ನೊಂದು ಮಹಂತರ ಇತಿಹಾಸದಲ್ಲಿ ದೊಡ್ಡ ಮಗ ಮನೆಬಿಟ್ಟು ಹೋದ ಅವನಿಗಿಂತ ಚಿಕ್ಕವವನನ್ನು ಮಹಂತ ಸ್ಥಾನಕ್ಕೆ ನೇಮಕಮಾಡಲಾಯಿತು. ಕೆಲ ಸಮಯದ ನಂತರ ಅಲ್ಲಿ ದೇವಾಲಯ ಕಟ್ಟಲಾಯಿತು. ಹಾಗೂ ಹೆಚ್ಚು ಕಾಣಿಕೆ (ಕೊಡುಗೆ ಪೂಜಾಧನ) ಬರತೊಡಗಿತು. ಆ ದೊಡ್ಡ ಮಗನ–ಮಗನು ಹೇಳಿದ, ಈ ದೇವಾಲಯದ ಮೇಲೆ ನಮ್ಮ ಅಧಿಕಾರವಿದೆ. ಈ ಕಾರಣದಿಂದ ಜಗಳ ಶುರುವಾಯಿತು. ಪೀಠದಲ್ಲಿ ಕುಳಿತಿದ್ದ, ಮಹಂತನನ್ನು ಹತ್ಯೆ ಮಾಡಲಾಯಿತು. ನಂತರ ಅವರ ದೊಡ್ಡ ಮಗ ಮಹಂತ ಪೀಠದ ಅಧಿಕಾರಿಯಾದ ಅವನನ್ನೂ ಹತ್ಯೆ ಮಾಡಲಾಯಿತು. ಪುನಃ ಅವನ ಎರಡನೆಯ ಸಹೋದರನನ್ನು ಪೀಠದಲ್ಲಿ ಕೂರಿಸಲಾಯಿತು. ಎರಡನೆಯವನು, ತಾನು ಅಧಿಕಾರಿ ಎಂದು ಹೇಳುತ್ತಿದ್ದವನು. ಅವನೇ ಹೊಸ ಸ್ಥಾನ ಮಾಡಿಕೊಂಡು, ಹೊಸ ಅಂಗಡಿ ತೆರೆದು ಬಿಟ್ಟರು ಇನ್ನೊಬ್ಬರ ಮೇಲೆ ಮೊಕದ್ದಮೆ ಹೂಡಿ, ಸುಖಮಯ ಜೀವನವನ್ನು, ದುರಾಸೆಯಿಂದ ನರಕ ಮಾಡಿಕೊಂಡರು. ಆ ಧಾಮ ಎಲ್ಲಿದೆ? ಅದಂತೂ ಕುರುಕ್ಷೇತ್ರ ಯುದ್ಧ (ಮಹಾಭಾರತದ) ಮೈದಾನವಾಯಿತು. ಕೆಲವು ಮಹಂತರು, ಸಂತರನ್ನು ಮಾಡಲು ಏಜೆಂಟ (ಪ್ರತಿನಿಧಿ)ರಾದರು. ಕೆಂಪು ವಸ್ತ್ರ ಧಾರಣೆ ಮಾಡಿಸುತ್ತಿದ್ದರು. ಪೂರ್ವದ ಹೆಸರನ್ನು ಬದಲಾಯಿಸಿ ಬೇರೆ ಹೆಸರನ್ನು ಇಡುತ್ತಿದ್ದರು ನಂತರ ಆ ಬನಾವಟೀ (ನಾಟಕೀಯ) ಮಹಂತರ, ಬನಾವಟಿ ಶಿಷ್ಯ (ನಕಲಿ ಶಿಷ್ಯ) ನಕಲಿ ಸಂತನಾಗಿ, ಮುಗ್ಧ ಆತ್ಮಗಳ ಜೊತೆ ಆಟವಾಡುತ್ತಾನೆ. ಹಾಗೂ ಅಮೂಲ್ಯ ಮಾನವ ಜೀವನವನ್ನು, ಸ್ವಯಂ ವ್ಯರ್ಥ ಮಾಡಿಕೊಳ್ಳುತ್ತಾ, ಮುಗ್ಧ ಆತ್ಮಗಳ ಜೀವನವನ್ನೂ ನಾಶ ಮಾಡುತ್ತಾನೆ. ಇದರಿಂದ ಮಹಾಪಾಪಕ್ಕೆ ಭಾಗಿಯಾಗುತ್ತಾನೆ.

ಯಾವಾಗ ಪರೀಕ್ಷಿತ ರಾಜನನ್ನು ಸರ್ಪವು ಕಚ್ಚುವುದರಲ್ಲಿತ್ತೋ ಆಗ, ಪೂರ್ಣ ಗುರುವಿನ ಅವಶ್ಯಕತೆ ಬಿತ್ತು. ಏಕೆಂದರೆ, ಪೂರ್ಣ ಸಂತನಿಲ್ಲದೆ, ಜೀವನ ಕಲ್ಯಾಣ ಅಸಂಭವ. ಆ ವೇಳೆ ಭೂಮಿಯಲ್ಲಿನ ಎಲ್ಲ ಋಷಿಗಳು, ರಾಜಾ ಪರೀಕ್ಷಿತನಿಗೆ ದೀಕ್ಷೆ ಕೊಡಲು ಹಾಗೂ 7 ದಿನಗಳ ಕಾಲ. "ಭಾಗವತ ಕಥಾ ಸುಧಾಸಾಗರ"ವನ್ನು ಹೇಳಲು ಒಪ್ಪಲಿಲ್ಲ. ಏಕೆಂದರೆ, 7ನೇ ದಿನ ಗುಟ್ಟು–ರಟ್ಟಾಗಲಿತ್ತು. ಈ ಕಾರಣದಿಂದ, ಯಾರೂ ಮುಂದೆ ಬರಲಿಲ್ಲ. ಸ್ವಯಂ ಶ್ರೀಮದ್ ಭಾಗವತ ಸುಧಾಸಾಗರ" ಬರೆದ ಮಹರ್ಷಿ ವೇದವ್ಯಾಸರೂ ಕೂಡ ತಮ್ಮ ಅಸಮರ್ಥತೆಯನ್ನು ವ್ಯಕ್ತಪಡಿಸಿದರು.

ಏಕೆಂದರೆ ಅವರು ಋಷಿಗಳು, ಪರಮಾತ್ಮನಿಗೆ ಹೆದರುವವರಾಗಿದ್ದರು. ಆದ್ದರಿಂದ ರಾಜಾ ಪರೀಕ್ಷಿತನ ಜೀವದೊಂದಿಗೆ ಆಟವಾಡಲು ಉಚಿತವಲ್ಲವೆಂದು ತಿಳಿದರು.

ಮಹರ್ಷಿ ಸುಖದೇವರನ್ನು ರಾಜಾಪರೀಕ್ಷಿತನ ಕಲ್ಯಾಣಕ್ಕಾಗಿ ಸ್ವರ್ಗದಿಂದ ಕರೆಯಿಸಲಾಯಿತು. ಅವರು ರಾಜನಿಗೆ ದೀಕ್ಷೆ ನೀಡಿದರು ಹಾಗೂ 7 ದಿನಗಳವರೆಗೆ ಕಥೆ ಹೇಳಿ, ಸುಖದೇವರು ರಾಜ ಪರೀಕ್ಷಿತನನ್ನು ಉದ್ಧಾರ ಮಾಡಿದರು. ವರ್ತಮಾನದ ಗುರು–ಸಂತರು–ಮಹಂತರು ಮತ್ತು ಆಚಾರ್ಯರು ಸ್ವಯಂ ಪ್ರಭುವಿನ ಸಂವಿಧಾನ (ರೀತಿ–ನೀತಿ) ವನ್ನು ತಿಳಿದಿಲ್ಲ. ಆದ್ದರಿಂದ ಭಯಂಕರ ದೋಷಕ್ಕೆ ಪಾತ್ರರಾಗಿ ದೋಷಿಗಳಾಗುತ್ತಿದ್ದಾರೆ.

ಓರೋಂ ಪಂಥ ಬತಾವಹೀ, ಸ್ವಯಂ ನ ಜಾನೆ ರಾಹ್ ।
ಅನಧಿಕಾರೀ ಕಥಾ–ಪಾಠ ಕರೆ ವ ದೀಕ್ಷಾ ದೇವೆ, ಬಹುತ್ ಕರತ್ ಗುನಾಹ್ ॥

ವರ್ತಮಾನದಲ್ಲಿ ಕಥೆ ಹಾಗೂ ಗ್ರಂಥಗಳ ಪಾಠ ಮಾಡುವವರು ಹಾಗೂ ನಾಮೋಪದೇಶವನ್ನು ಕೊಡುವವರ ಸಂಖ್ಯೆ ಪ್ರವಾಹದಂತೆ ಬಂದಿದೆ. ಏಕೆಂದರೆ ಎಲ್ಲ ಪವಿತ್ರ ಧರ್ಮಗಳ ಪವಿತ್ರ ಆತ್ಮಗಳು, ತತ್ವಜ್ಞಾನದಿಂದ ಅಪರಿಚಿತವಾಗಿವೆ. ಈ ಕಾರಣದಿಂದಾಗಿ ನಕಲಿ ಗುರುಗಳು, ಸಂತರು ಹಾಗೂ ಮಹಂತರ ಹಾವಳಿಯಾಗತೊಡಗಿದೆ. ಯಾವಾಗ ಪವಿತ್ರ ಭಕ್ತ ಸಮಾಜವು ಆಧ್ಯಾತ್ಮಿಕ ತತ್ವಜ್ಞಾನದಿಂದ ಪರಿಚಿತವಾಗುವುದೋ, ಆಗ ಈ ನಕಲಿ ಸಂತರು, ಗುರುಗಳು ಹಾಗೂ ಆಚಾರ್ಯರುಗಳಿಗೆ ಅಡಗಿ ಕೊಳ್ಳಲು ಸ್ಥಾನವೂ ಸಿಗುವುದಿಲ್ಲ. ಪಲಾಯನ ಮಾಡಿ, ಹಿಂದೆ ಬೀಳುವವರಿಂದ ತಪ್ಪಿಸಿಕೊಳ್ಳ ಬೇಕಾಗುತ್ತದೆ.

## "ಪವಿತ್ರ ತೀರ್ಥ ಸ್ಥಾನ ಹಾಗೂ ಪವಿತ್ರ ಕ್ಷೇತ್ರಗಳ ಬಗ್ಗೆ ತಿಳುವಳಿಕೆ"

ಯಾರೋ ಸಾಧಕ ಋಷಿಯು ಯಾವುದೋ ಸ್ಥಾನ, ಇಲ್ಲವೇ ಜಲಾಶಯದ ಹತ್ತಿರ ಕುಳಿತು ಸಾಧನೆ ಮಾಡಿದರು ಅಥವಾ ತನ್ನ ಅಧ್ಯಾತ್ಮಿಕ ಶಕ್ತಿಯನ್ನು ಪ್ರದರ್ಶನ ಮಾಡಿದರು. ಅವರು ತನ್ನ ಭಕ್ತಿಗಳಿಕೆ ಮಾಡಿ, ಜೊತೆಯಲ್ಲಿ ತೆಗೆದುಕೊಂಡು ಹೋದರು, ಹಾಗೂ ತನ್ನ ಇಷ್ಟ ಲೋಕವನ್ನು ಪಡೆದರು. ಆ ಸಾಧನಾ ಸ್ಥಳವೇ ಮುಂದೆ "ತೀರ್ಥ" ಅಥವಾ "ಕ್ಷೇತ್ರ" ಎಂಬ ಹೆಸರನ್ನು ಪಡೆಯಿತು. ಈಗ ಆ ಸ್ಥಾನಗಳನ್ನು ನೋಡಲು ಯಾರಾದರು ಹೋದರೆ ಹೇಳುವರು. ಇಲ್ಲಿ ಯಾರೋ ಒಬ್ಬ ಸಾಧಕರು ಇದ್ದರು. ಅವರು ಬಹಳ ಜನರಿಗೆ ಒಳಿತು ಮಾಡಿದರು. ಈಗ ಅಲ್ಲಿ ಉಪದೇಶ ಕೊಡಲು ಯಾವ ಸಂತರೂ ಇಲ್ಲ. ಅವರಂತೂ ತನ್ನ ಭಕ್ತಿಗಳಿಕೆ ಮಾಡಿಕೊಂಡು ಹೊರಟು ಹೋಗಿರುವರು.

ವಿಚಾರ ಮಾಡಿರಿ :– ದಯವಿಟ್ಟು, ತೀರ್ಥ ಹಾಗೂ ಕ್ಷೇತ್ರಗಳನ್ನು ಒನಕೆ ಎಂದು ತಿಳಿಯಿರಿ. (ಎರಡೂವರೆ ಅಡಿಯ ಲೋಹದ ಗೋಲಾಕಾರ ಪಾತ್ರೆ, ಸುಮಾರು 9 ಇಂಚು ಸುತ್ತಳತೆಯ ಒರಳಿನಂತೆ ಇರುತ್ತದೆ. ಹಾಗೂ ಎರಡೂವರೆ ಅಡಿ ಉದ್ದದ ಹಾಗೂ 2 ಇಂಚು ಸುತ್ತಳತೆಯ ಗುಂಡಾದ ಲೋಹದ ಕೋಲಿನಂತೆ ಇರುತ್ತದೆ. ಅದು ಒನಕೆಯನ್ನು ಹೋಲುತ್ತದೆ. ಅದನ್ನು ಸಾಮಾನುಗಳನ್ನು, ಔಷಧಿ ವಸ್ತುಗಳನ್ನು ಕುಟ್ಟಲು ಬಳಸುತ್ತಾರೆ) ಒಬ್ಬನು ತಮ್ಮ ನೆರೆಮನೆಯಿಂದ, ಒನಕೆಯನ್ನು ತಂದನು. ಅದರಲ್ಲಿ ಹೋಮದ ವಸ್ತುಗಳನ್ನು (ಹವನದ್ರವ್ಯ) ಕುಟ್ಟಿದನು. ನಂತರ ಅದನ್ನು ತೊಳೆದು ಹಿಂದಿರುಗಿಸಿದ ಆ ಒನಕೆ ಇಟ್ಟಿದ್ದ ಸ್ಥಳದಿಂದ ಸುಗಂಧ ಬರ ತೊಡಗಿತು. ಮನೆಯವರು ಯೋಚಿಸಿದರು. ಈ ಸುಗಂಧ ಎಲ್ಲಿಂದ ಬರುತ್ತಿದೆ? ನಂತರ ಗೊತ್ತಾಯಿತು ಅದು ಒನಕೆತಯಿಂದ ಬರುತ್ತಿದೆ ಎಂದು, ಪಕ್ಕದ ಮನೆಯವರು ತೆಗೆದುಕೊಂಡು ಹೋಗಿದ್ದರು. ಅದರಿಂದ ಯಾವುದೋ ಸುಗಂಧ ವಸ್ತುವನ್ನು ಕುಟ್ಟಿದ್ದಾರೆ. ಎಂದು ಅರ್ಥವಾಯಿತು. ಕೆಲದಿನಗಳ ನಂತರ, ಸುಗಂಧ ಬರುವುದು ನಿಂತು ಹೋಯಿತು.

ಇದೇ ಪ್ರಕಾರ ತೀರ್ಥ ಮತ್ತು ಕ್ಷೇತ್ರಗಳನ್ನು ಒಂದು ಒನಕೆಯೆಂದು ತಿಳಿಯಿರಿ. ಹೇಗೆ ಸಾಮಾಗ್ರಿಯನ್ನು ಕುಟ್ಟಿದವನು, ತನ್ನ ಸರ್ವ ವಸ್ತುವನ್ನು ಒರೆಸಿ, ಜೋಪಾನವಾಗಿ ಇರಿಸಿಕೊಂಡು, ಒನಕೆಯನ್ನು ಮಾತ್ರ ಹಿಂದಕ್ಕೆ ಕೊಟ್ಟ ಹಾಗೆ ಈಗ ಯಾರಾದರೂ, ಆ ಒನಕೆಯನ್ನು ಮೂಸಿ ನೋಡಿದ ನಂತರ ಕೃತಾರ್ಥನಾದೆ ಎಂದು ಭಾವಿಸಿದರೆ, ಅದು ಮೂರ್ಖತನ, ಅದಕ್ಕೂ ಸಹ ಸಾಮಗ್ರಿಗಳನ್ನು ತರಬೇಕಾಗುವುದು. ಆಗ ಪೂರ್ಣ ಲಾಭವಾಗುವುದು. ಸರಿಯಾಗಿ ಇದೇ ಪ್ರಕಾರ, ಯಾವದಾದರೂ ತೀರ್ಥ ಹಾಗೂ ಕ್ಷೇತ್ರಗಳಲ್ಲಿ ಇರುವ ಪವಿತ್ರ ಆತ್ಮವಂತೂ, ರಾಮ ನಾಮದ ಸಾಮಗ್ರಿಯನ್ನು ಕುಟ್ಟಿ, ಗುಡಿಸಿ, ಒರೆಸಿ ತನ್ನ ಸರ್ವಸ್ವವನ್ನೂ ಜೊತೆಯಲ್ಲಿ ಕೊಂಡೊಯ್ದನು ನಂತರ, ತಿಳುವಳಿಕೆ ಇಲ್ಲದ, ಶ್ರದ್ಧಾಳುಗಳು, ಆ ಸ್ಥಾನಕ್ಕೆ ಹೋಗುವುದರಿಂದ ಮಾತ್ರವೇ ಕಲ್ಯಾಣ (ಶುಭ) ವೆಂದು ತಿಳಿದರೆ, ಅದು ಅವನಿಗೆ ಮಾರ್ಗದರ್ಶನ ಮಾಡಿದ ಗುರುಗಳು, ಶಾಸ್ತ್ರ ವಿಧಿ ರಹಿತವಾದ, ಮಾರ್ಗ ತೋರಿಸಿದ ಪರಿಣಾಮ ಇದು. ಆ ಮಹಾನ್ ಆತ್ಮ ಸಂತನ ರೀತಿ ಪ್ರಭು ಸಾಧನೆ ಮಾಡುವದರಿಂದಲೇ ಕಲ್ಯಾಣ ಸಂಭವವಿದೆ. ಅದಕ್ಕಾಗಿ ತತ್ವದರ್ಶಿ ಸಂತರನ್ನು ಹುಡುಕಿ, ಅವರಿಂದ ಉಪದೇಶ ಪಡೆದು, ಜೀವನ ಪರ್ಯಂತ ಭಕ್ತಿ ಮಾಡುತ್ತಾ, ಮೋಕ್ಷವನ್ನು ಪಡೆಯಬೇಕು. ಶಾಸ್ತ್ರವಿಧಿಗೆ ಅನುಸಾರವಾಗಿ ಸತ್ಯ ಸಾಧನೆ ಈ ದಾಸನ ಹತ್ತಿರ ಉಪಲಬ್ಧವಿದೆ. ದಯವಿಟ್ಟು ಶುಲ್ಕವಿಲ್ಲದೆ ಪಡೆಯಿರಿ.

## "ಶ್ರೀ ಅಮರನಾಥ ಕ್ಷೇತ್ರದ ಸ್ಥಾಪನೆ ಹೇಗೆ ಆಯಿತು?"

ಭಗವಾನ್ ಶಂಕರನು, ಪಾರ್ವತಿಗೆ ಏಕಾಂತ ಸ್ಥಾನದಲ್ಲಿ ಉಪದೇಶ ಕೊಡುತ್ತಿದ್ದ. ಆ ಕಾರಣದಿಂದಲೇ ತಾಯಿ ಪಾರ್ವತಿಯು ಎಷ್ಟು ಮುಕ್ತಳಾದಳೆಂದರೆ, ಎಲ್ಲಿಯವರೆಗೆ ಪ್ರಭು ಶಿವನ (ತಮೋಗುಣ) ಮೃತ್ಯುವಾಗುವುದಿಲ್ಲವೋ ಅಲ್ಲಿಯವರೆಗೆ, ಪಾರ್ವತಿಯ ಮೃತ್ಯವು ಆಗುವುದಿಲ್ಲ. 7 ಬ್ರಹ್ಮಾನ (ರಜೋಗುಣ) ಮೃತ್ಯುವಿನ ನಂತರ, ಭಗವಾನ್ ವಿಷ್ಣುವಿನ (ಸತೋಗುಣ) ಮೃತ್ಯುವಾಗುವುದು 7 ವಿಷ್ಣುವಿನ ಮೃತ್ಯುವಾದ ನಂತರ, ಶಿವನ ಮೃತ್ಯುವಾಗುವುದು ಆಗ ತಾಯಿ ಪಾರ್ವತಿಗೆ ಮೃತ್ಯುವಾಗುವುದು. ಪಾರ್ವತಿಗೆ ಎಷ್ಟು ಲಾಭವಾಯಿತೋ, ಅದು ನಾಮೋಪದೇಶದ ಅಧಿಕಾರಿಯಿಂದಲೇ ಉಪದೇಶ ಮಂತ್ರ ಪಡೆದ ಕಾರಣ ಆಯಿತು. ನಂತರ ಶ್ರದ್ಧಾಳುಗಳು ಆ ಸ್ಥಾನದ ಸ್ಮರಣೆಯನ್ನು ಶಾಶ್ವತವಾಗಿಡಲು, ಅದನ್ನು ಸುರಕ್ಷಿತಗೊಳಿಸಿದರು. ಹಾಗೂ ದರ್ಶಕರು ಹೋಗ ತೊಡಗಿದರು.

ಹಾಗೆ ಈ ದಾಸ (ಸಂತ ರಾಮ್‌ಪಾಲ್) ಊರೂರುಗಳಿಗೆ ಹೋಗಿ ಪ್ರವಚನ ಮಾಡುತ್ತಾನೆ, ಅಲ್ಲಿ ಖೀರು ಹಾಗೂ ಹಲ್ವಾವನ್ನೂ ಸಹ ಮಾಡುತ್ತಾರೆ. ಯಾವ ಭಕ್ತಾತ್ಮರು ಉಪದೇಶ ಪಡೆಯುತ್ತಾರೋ, ಅವರ ಕಲ್ಯಾಣವಾಗುತ್ತದೆ ಪ್ರವಚನ ಸಮಾಪ್ತವಾದ ನಂತರ, ಎಲ್ಲ ಟೆಂಟು ಮುಂತಾದ ಸಾಮಾಗ್ರಿಗಳನ್ನು ತೆಗೆದುಕೊಂಡು ಹೋದರು. ಬೇರೆ ಜಾಗದಲ್ಲಿ ಪ್ರವಚನ ಮಾಡಲು ಹೊರಟು ಹೋದರು. ಮೊದಲಿನ ಸ್ಥಾನದಲ್ಲಿ ಮಣ್ಣು ಅಥವಾ ಇಟ್ಟಿಗೆಯಿಂದ ಮಾಡಿದ ಭಟ್ಟಿ ಹಾಗೂ ಒಲೆ, ಬಾಕಿ ಕೆಲವನ್ನು ಬಿಟ್ಟು ಹೋಗಿದ್ದರು. ಯಾರೂ ಒಬ್ಬರು, ಅದೇ ಪಟ್ಟಣದ ವ್ಯಕ್ತಿಯೊಂದಿಗೆ ಹೇಳಿದ ಬನ್ನಿ, ನಿಮಗೆ ಸಂತ ರಾಮ್‌ಪಾಲ್ ದಾಸರು ಪ್ರವಚನ ಮಾಡಿದ ಸ್ಥಳ, ಖೀರು–ಹಲ್ವಾ ತಯಾರಿಸಿದ ಒಲೆ ಮೊದಲಾದುವುದಳನ್ನು ತೋರಿಸುವೆ, ಯಾವ ವ್ಯಕ್ತಿ ಆ ಸ್ಥಾನವನ್ನು ನೋಡಲು ಹೋದರೋ ಅವರಿಗೆ, ಪ್ರವಚನವಾಗಲಿ, ಖೀರವಾಗಲಿ, ಹಲ್ವಾವಾಗಲಿ ಸಿಗಲಿಲ್ಲ, ಸಂತರ ಪ್ರವಚನ ಕೇಳಿದ್ದರೆ ಕಲ್ಯಾಣ ಸಾಧ್ಯ ಅದಕ್ಕಾಗಿ, ಸಂತರನ್ನು ಹುಡುಕ ಬೇಕಾಗುವುದು. ಎಲ್ಲಿ ಸತ್ಸಂಗ ನಡೆಯುತ್ತಿದೆಯೋ, ಅಲ್ಲಿ ಎಲ್ಲ ಕಾರ್ಯಗಳು ಸಿದ್ಧವಾಗುತ್ತದೆ.

ಸರಿಯಾಗಿ ಇದೇ ರೀತಿ ತೀರ್ಥ ಹಾಗೂ ಕ್ಷೇತ್ರಗಳಿಗೆ ಹೋದರೆ, ಆ ನೆನಪಿನ ಸ್ಥಾನದಲ್ಲಿನ ವಸ್ತುಗಳನ್ನು ನೋಡಬಹುದು. ಹೇಗೆಂದರೆ ಭಟ್ಟಿ ಹಾಗೂ ಒಲೆ ನೋಡಿದಂತೆ ಇದನ್ನು ಪವಿತ್ರ ಗೀತೆಯಲ್ಲಿ ವರ್ಣಿಸಿಲ್ಲವಾದ ಕಾರಣ, ಇದರಿಂದ ಯಾವ ಲಾಭವೂ ಇಲ್ಲ. (ಪ್ರಮಾಣ ಪವಿತ್ರ ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳಲ್ಲಿ)

ತತ್ವಜ್ಞಾನ ಹೀನ ಸಂತ, ಮಹಂತ ಹಾಗೂ ಆಚಾರ್ಯರು, ಶ್ರದ್ಧಾಳು ಭಕ್ತರನ್ನು ಭ್ರಮೆಗೆ ಒಳ ಪಡಿಸಿ, ತೀರ್ಥ ಹಾಗೂ ಕ್ಷೇತ್ರ ದರ್ಶನಕ್ಕೆ (ಕಲ್ಯಾಣಕ್ಕೆ) ಕಳುಹಿಸುತ್ತಾರೆ. ಶ್ರೀ ಅಮರನಾಥನ ದರ್ಶನಕ್ಕೆ ಹೋಗಿದ್ದ ಭಕ್ತರು 3–4 ಬಾರಿ ಹಿಮದ ಬಿರುಗಾಳಿಯಿಂದ ಸಾವನಪ್ಪಿದ್ದಾರೆ. ಪ್ರತಿ ಸಾರಿ ಸಾಯುವವರ ಸಂಖ್ಯೆ ಸಾವಿರಾರು ಆಗುತ್ತಿದೆ. ವಿಚಾರಣೆಯ ವಿಷಯವೆಂದರೆ ಒಂದು ವೇಳೇ ಅಮರನಾಥನ ದರ್ಶನದಿಂದ ಲಾಭವಾಗುವುದೇ ಆಗಿದ್ದರೆ, ಭಗವಾನ್ ಶಿವನು ಆ ಶ್ರದ್ಧಾಳುಗಳನ್ನು ರಕ್ಷಿಸುತ್ತಿರಲಿಲ್ಲವೆ? ಅರ್ಥಾತ್ ಪ್ರಭು ಶಿವನೂ ಸಹ ಶಾಸ್ತ್ರ ವಿರುದ್ಧ ಸಾಧನೆಯಿಂದ ಅಪ್ರಸನ್ನನಾಗಿದ್ದಾನೆ.

## "ವೈಷ್ಣೋ ದೇವಿ ಮಂದಿರದ ಸ್ಥಾಪನೆ ಹೇಗಾಯಿತು?"

ಯಾವಾಗ ಸತಿ (ಉಮಾದೇವಿ) ತನ್ನ ತಂದೆ ರಾಜಾ ದಕ್ಷನ ಹವನಕುಂಡದಲ್ಲಿ ಹಾರಿ ಪ್ರಾಣ ಬಿಟ್ಟಳೋ, ಆಗ ಶಿವನು ಅವಳ ಮೃತ ಶರೀರವನ್ನು (ಅರೆಬೆಂದ) ಮೋಹವಶದಿಂದ, ಜೀವಂತ ಸತಿ ಎಂದೇ ತಿಳಿದು ಹತ್ತು ಸಹಸ್ರವರ್ಷಗಳ ವರೆಗೆ, ಹೆಗಲ ಮೇಲೆ ಹೊತ್ತು, ಹುಚ್ಚನಂತೆ, ಸುತ್ತ ತೊಡಗಿದ ಭಗವಾನ್ ವಿಷ್ಣುವು ತನ್ನ ಸುದರ್ಶನ ಚಕ್ರದಿಂದ ಆ ಶರೀರವನ್ನು ಛಿದ್ರಗೊಳಿಸಿದ ಎಲ್ಲಿ ಮುಂಡ (ಕುತ್ತಿಗೆಯಿಂದ ಕೆಳಗಿನ ಶರೀರ) ಬಿದ್ದಿತೋ, ಅದನ್ನು ಭೂಮಿಯಲ್ಲಿ ಹೂತರು, ಈ ಧಾರ್ಮಿಕ ಘಟನೆಯ ಸ್ಮರಣಾರ್ಥವಾಗಿ ಅದರ ಮೇಲೆ ಒಂದು ಮಂದಿರದಂತಹ ಸ್ಮಾರಕ ಕಟ್ಟಿದರು. ಮುಂಬರುವ ಸಮಯದಲ್ಲಿ ಪುರಾಣದಲ್ಲಿ ತಪ್ಪಾಗಿ ಬರೆದಿದೆ ಎಂದು ಯಾರೂ ಹೇಳದಿರಲೆಂದು, ಅಲ್ಲಿ ಒಂದು ಹೆಣ್ಣಿನ ಚಿತ್ರವನ್ನು ಇಡಲಾಯಿತು. ಅದನ್ನು 'ವೈಷ್ಣೋದೇವಿ' ಎಂದು ಕರೆಯಲಾಯಿತು. ಅದರ ರಕ್ಷಣೆಗಾಗಿ ಹಾಗೂ ಶ್ರದ್ಧಾಳು ದರ್ಶಕರಿಗೆ ಆ ಸ್ಥಾನದ ಕತೆ ತಿಳಿಸಲು, ಒಬ್ಬ ಪ್ರಾಮಾಣಿಕ ವ್ಯಕ್ತಿಯನ್ನು ನಿಯೋಜಿಸಲಾಯಿತು. ಅವನಿಗೆ ಬೇರೆ ಧಾರ್ಮಿಕ ವ್ಯಕ್ತಿಗಳು, ಸ್ವಲ್ಪ ಸಂಬಳವನ್ನು ಕೊಡುತ್ತಿದ್ದರು ನಂತರ, ಅವಳ ವಂಶಜರು ಅವಳ ಹೆಸರಿನಲ್ಲಿ ಅಲ್ಲಿ ದಾನ ಮಾಡತೊಡಗಿದರು. ಅವರು ಹೀಗೆ ಹೇಳತೊಡಗಿದರು. "ಒಬ್ಬ ವ್ಯಕ್ತಿಗೆ ವ್ಯಾಪಾರದಲ್ಲಿ ನಷ್ಟವಾಗಿತ್ತು. ಮಾತೆಗೆ 100 ರೂಪಾಯಿಯನ್ನು ಅರ್ಪಿಸಿದರು. ಸಂಕಲ್ಪಮಾಡಿ ಕೊಂಡರು. ಒಂದು ತೆಂಗಿನಕಾಯಿ ಅರ್ಪಿಸಿದರು. ಅವರು ಬಹಳ ಶ್ರೀಮಂತರಾದರು. ಮಕ್ಕಳಿಲ್ಲದ ದಂಪತಿಗಳು ತಾಯಿಗೆ 200ರೂ ಅರ್ಪಿಸಿ. ಒಂದು ಸೀರೆ ಉಡಿಸಿ, ಒಂದು ಚಿನ್ನದ ಹಾರ ಅರ್ಪಿಸಿದರು. ನಂತರ ಸಂಕಲ್ಪ ಮಾಡಿಕೊಂಡರು. ಅವರಿಗೆ ಪುತ್ರ ಸಂತಾನವಾಯಿತು.

ಈ ರೀತಿಯಾಗಿ ಮುಗ್ಧ ಆತ್ಮಗಳು, ಇಂತಹ ದಂತ ಕಥೆಗಳನ್ನು ಆಧಾರಮಾಡಿಕೊಂಡು, ಗೀತೆಯ ಹಾಗೂ ಪವಿತ್ರ ವೇದಗಳನ್ನು ಮರೆತವು. ಅದರಲ್ಲಿ ಈ ಎಲ್ಲಾ ಪೂಜಾವಿಧಿಗಳನ್ನು, ಶಾಸ್ತ್ರ ವಿರುದ್ಧವೆಂದು ಬರೆಯಲಾಗಿದೆ. ಈ ಕಾರಣದಿಂದ ಯಾವುದೇ ಸುಖವಾಗಲಿ, ಕಾರ್ಯಸಿದ್ಧಿಯಾಗಲೀ ಆಗುವುದಿಲ್ಲ. ಪರಮಗತಿ ಅರ್ಥಾತ್ ಮುಕ್ತಿಯೂ ದೊರೆಯುವುದಿಲ್ಲ. (ಪ್ರಮಾಣ ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳು) ಇದೇ ಪ್ರಕಾರ ಎಲ್ಲಿ ದೇವಿಯ (ಸತಿಯ) ಕಣ್ಣುಗಳು ಬಿದ್ದವೋ, ಅಲ್ಲಿ "ನೈನಾ ದೇವಿಯ ಮಂದಿರ" ಎಲ್ಲಿ ನಾಲಿಗೆ ಬಿದ್ದಿತೋ ಅಲ್ಲಿ "ಶ್ರೀ ಜ್ವಾಲಾಮಾತಾ ಮಂದಿರ" ಎಲ್ಲಿ ಮುಂಡದ ಭಾಗ ಬಿದ್ದಿತೋ ಅಲ್ಲಿ "ವೈಷ್ಣೋದೇವಿ ಮಂದಿರ" ಗಳ ಸ್ಥಾಪನೆಯಾಯಿತು.

## "ಪುರಿಯಲ್ಲಿ ಜಗನ್ನಾಥ ಮಂದಿರ ಅರ್ಥಾತ್ ಕ್ಷೇತ್ರ ಹೇಗೆ ಆಯಿತು?"

ಒರಿಸ್ಸಾ ಪ್ರಾಂತದಲ್ಲಿ ಇಂದ್ರದಮನ ಎಂಬ ಹೆಸರಿನ ರಾಜನಿದ್ದ. ಅವನು ಶ್ರೀ ಕೃಷ್ಣ ಪರಮಾತ್ಮನ ಪರಮ ಭಕ್ತನಾಗಿದ್ದ. ಒಂದು ರಾತ್ರಿ ಶ್ರೀ ಕೃಷ್ಣನು, ರಾಜನಿಗೆ ಸ್ವಪ್ನದಲ್ಲಿ ದರ್ಶನ ಕೊಟ್ಟು ಹೇಳಿದ "ಜಗನ್ನಾಥ ಎಂಬ ಹೆಸರಿನಲ್ಲಿ ನನಗೊಂದು ದೇವಾಲಯ ಕಟ್ಟಿಸು. ಆ ದೇವಾಲಯದಲ್ಲಿ ಮೂರ್ತಿ ಪೂಜೆಯನ್ನು ಮಾಡಬಾರದು ಎಂದು ಸಹ ತಿಳಿಸಿದ. ಕೇವಲ ಒಬ್ಬ ಸಂತನನ್ನು ನೇಮಿಸಿ, ಅವನು ಅಲ್ಲಿ ಗೀತೆಯ ಅನುಸಾರ ಜ್ಞಾನ ಪ್ರಚಾರ ಮಾಡಲಿ", ಸಮುದ್ರದಡದಲ್ಲಿನ ಒಂದು ಜಾಗವನ್ನು ದೇವಾಲಯ ಕಟ್ಟಲು ತೋರಿಸಿದ. ಬೆಳಿಗ್ಗೆ ಎದ್ದಾಗ, ಇಂದ್ರದಮನ ತನ್ನ ಪತ್ನಿಗೆ ಹೇಳಿದ ರಾತ್ರಿ ಕನಸಿನಲ್ಲಿ ಶ್ರೀ ಕೃಷ್ಣ ಪರಮಾತ್ಮ ಕಾಣಿಸಿಕೊಂಡ, ದೇವಾಲಯ ಕಟ್ಟಿಸಲು ತಿಳಿಸಿದ. ಕೇವಲ ಒಬ್ಬ ಸಂತನನ್ನು ನೇಮಿಸಿ, ಅವನು ಅಲ್ಲಿ ಗೀತೆಯ ಅನುಸಾರ ಜ್ಞಾನ ಪ್ರಚಾರ ಮಾಡಲಿ ಎಂದು, ಸಮುದ್ರ ದಡದಲ್ಲಿನ ಒಂದು ಜಾಗವನ್ನು, ದೇವಾಲಯ ಕಟ್ಟಲು ತೋರಿಸಿದ. ರಾಣಿಯು ಹೇಳಿದಳು "ಶುಭ ಕಾರ್ಯಕ್ಕೆ ತಡವೇಕೆ? ಎಲ್ಲ ಸಂಪತ್ತು ಅವನೇ ಕೊಟ್ಟಿರುವುದು. ಅವನಿಗೇ ಸಮರ್ಪಣೆ ಮಡುವುದಕ್ಕೆ ಏಕೆ ಯೋಚಿಸಬೇಕು?" ಯಾವ ಸ್ಥಳವನ್ನು ಸಮುದ್ರ ದಡದಲ್ಲಿ ಶ್ರೀ ಕೃಷ್ಣನು ಸ್ವಪ್ನದಲ್ಲಿ ತೋರಿಸಿದ್ದನೋ, ಅಲ್ಲಿಯೇ ರಾಜನು ಮಂದಿರವನ್ನು ಕಟ್ಟಿಸಿದ ದೇವಾಲಯ ಕಟ್ಟಿದ ಮೇಲೆ. ಸಮುದ್ರದಲ್ಲಿ ಬಿರುಗಾಳಿ ಎದ್ದಿತು. ದೇವಾಲಯವನ್ನು ಮುರಿದು ಹಾಕಿತು. ಅಲ್ಲಿ ಮಂದಿರವಿತ್ತೆಂಬ ಗುರುತೂ ಸಹ ಉಳಿದಿರಲಿಲ್ಲ. ಹೀಗೆ ರಾಜನು 5 ಬಾರಿ ಮಂದಿರವನ್ನು ಕಟ್ಟಿಸಿದ. 5 ಬಾರಿಯೂ ಸಮುದ್ರವು ಮಂದಿರವನ್ನು ನಾಶ ಮಾಡಿತು.

ರಾಜನು ನಿರಾಸೆಯಿಂದ ಮಂದಿರ ಕಟ್ಟದಿರಲು ತೀರ್ಮಾನಿಸಿದ. ಈ ಸಮುದ್ರಕ್ಕೆ ನನ್ನ ಮೇಲೆ ಅದಾವ ಜನ್ಮದ ಸೇಡು ತೀರಿಸಿಕೊಳ್ಳಬೇಕಿದೆಯೋ, ಎಂದು ಯೋಚಿಸಿದ ಖಜಾನೆ ಖಾಲಿಯಾಯಿತು. ಮಂದಿರ ಕಟ್ಟಲಿಲ್ಲ. ಕೆಲ ಸಮಯದ ನಂತರ, ಪರಮೇಶ್ವರ (ಕವಿರ್ದೇವ) ಜ್ಯೋತಿ ನಿರಂಜನನಿಗೆ (ಕಾಲನಿಗೆ) ಕೊಟ್ಟ ವಚನಕ್ಕೆ ಅನುಸಾರವಾಗಿ ಇಂದ್ರದಮನನ ಹತ್ತಿರ ಬಂದರು. "ರಾಜಾ ನೀನು ಮಂದಿರ ನಿರ್ಮಾಣ ಮಾಡಿಸು" ಎಂದರು. ಈಗ ಸಮುದ್ರನು ಮಂದಿರವನ್ನು ಹಾಳು ಮಾಡುವುದಿಲ್ಲ. ರಾಜಾ ಹೇಳಿದ "ಸಂತ ಮಹಾತ್ಮರೇ, ನನಗೆ ವಿಶ್ವಾಸವಾಗುತ್ತಿಲ್ಲ. ನಾನು ಶ್ರೀ ಕೃಷ್ಣ ಪರಮಾತ್ಮನ (ವಿಷ್ಣು) ಆದೇಶವಂತೆ ಮಂದಿರವನ್ನು ಕಟ್ಟಿಸುತ್ತಿರುವೆ ಶ್ರೀ ಕೃಷ್ಣನೇ ಸಮುದ್ರವನ್ನು ತಡೆಯುತ್ತಿಲ್ಲ. 5 ಬಾರಿ ಮಂದಿರವನ್ನು ಕಟ್ಟಿಸಿದೆ ದೇವರೇನಾದರೂ, ನನ್ನನ್ನು ಪರೀಕ್ಷಿಸುತ್ತಿರಬಹುದೆ? ಎಂದು ಯೋಚಿಸಿದೆ, ಆದರೆ ಈಗಂತೂ ನಾನು ಪರೀಕ್ಷೆಗೆ ಒಳಪಡುವ ಸ್ಥಿತಿಯಲ್ಲಿಲ್ಲ. ಏಕೆಂದರೆ ಖಜಾನೆಯೂ ಖಾಲಿಯಾಗಿದೆ. ಈ ಮಂದಿರ ಕಟ್ಟಿಸುವುದು ನನ್ನಿಂದ ಆಗದ ಮಾತು "ಇಂದ್ರದಮನ ಯಾವ ಪರಮೇಶ್ವರನಿಂದ ಅಖಿಲ ಬ್ರಹ್ಮಾಂಡಗಳ ರಚನೆ ಆಗಿದೆಯೋ, ಅವನೇ ಸಕಲ ಕಾರ್ಯಗಳಲ್ಲಿ ಸಮರ್ಥನು. ಬೇರೆ ದೇವರಲ್ಲ. ನನಗೆ ಆ ಪರಮೇಶ್ವರನ ವಚನ ಶಕ್ತಿ ಪ್ರಾಪ್ತವಾಗಿದೆ. ನಾನು ಸಮುದ್ರವನ್ನು ತಡೆಯಬಲ್ಲೆ". (ತನ್ನನ್ನು ತಾನು ರಹಸ್ಯವಾಗಿಟ್ಟು ಕೊಳ್ಳುತ್ತಾ ಪರಮಾತ್ಮ ಹೇಳಿದರು)

ಸಂತ ಮಹಾತ್ಮರೆ ಶ್ರೀ ಕೃಷ್ಣನಿಗಿಂತಲೂ ಪ್ರಬಲ ಶಕ್ತಿಯುಕ್ತ ಅನ್ಯ ದೇವರನ್ನು ನಾನು ಕಾಣೆನು. ಅವನೇ ಸಮುದ್ರವನ್ನು ತಡೆಯಲು ಸಾಧ್ಯವಿಲ್ಲವಾದ ಮೇಲೆ ನೀವು ಅಧ್ಯಾವ ಲೆಕ್ಕ? ನನಗೆ ನಂಬಿಕೆಯೂ ಬರುತ್ತಿಲ್ಲ. ನನ್ನ ಆರ್ಥಿಕ ಪರಿಸ್ಥಿತಿಯೂ ಸರಿಯಿಲ್ಲ. ಮಂದಿರ ಕಟ್ಟಿಸುವ ಸ್ಥಿತಿಯಲ್ಲಿಲ್ಲ "ರಾಜನೆ, ಒಂದು ವೇಳೆ ಮಂದಿರ ಕಟ್ಟಿಸಬೇಕೆಂದು ಮನ ಬಂದರೆ, ನಾನು ಇಂತಹ ಜಾಗದಲ್ಲಿರುವೆ (ಸ್ಥಳವನ್ನು ರಾಜನಿಗೆ ತಿಳಿಸಿ) ಅಲ್ಲಿಗೆ ಬಾ. ಈಗ ಸಮುದ್ರನು ಮಂದಿರವನ್ನು ಹಾಳು ಮಾಡುವುದಿಲ್ಲ."

ಇಷ್ಟು ಹೇಳಿ ಪ್ರಭುವು ಅಲ್ಲಿಂದ ಹೊರಟು ಬಂದು ಬಿಟ್ಟರು. ಅದೇ ದಿನ ರಾತ್ರಿ ಶ್ರೀ ಕೃಷ್ಣ ಪರಮಾತ್ಮನು ರಾಜನಿಗೆ ದರ್ಶನ ಕೊಟ್ಟು ಹೇಳಿದ ಇಂದ್ರದಮನ ಮತ್ತೊಮ್ಮೆ ಮಂದಿರವನ್ನು ಕಟ್ಟಿಸು. ನಿನ್ನ ಬಳಿ ಬಂದಿದ್ದ ಸಂತರನ್ನು ಸಂಪರ್ಕಿಸು. ಅವರ ಸಹಾಯವನ್ನು ಯಾಚಿಸು. ಅವರು ಸಾಧಾರಣ ಸಂತರಲ್ಲ. ಅವರ ಭಕ್ತಿ–ಶಕ್ತಿಗೆ ಕಡೆ ಮೊದಲಿಲ್ಲ.

ರಾಜಾ ಇಂದ್ರದಮನ ನಿದ್ರೆಯಿಂದ ಎಚ್ಚೆತ್ತನು, ಸ್ವಪ್ನದ ಸಂಪೂರ್ಣ ವೃತ್ತಾಂತವನ್ನು ತನ್ನ ರಾಣಿಗೆ ತಿಳಿಸಿದ. ಪ್ರಭುವೇ ಹೇಳುತ್ತಿರುವುದರಿಂದ, ನೀವು ತಡೆಯಬೇಡಿರಿ. ಪ್ರಭು ಮಂದಿರವನ್ನು ಪುನಃ ಕಟ್ಟಿಸಿರಿ. ನೀವು ಮಂದಿರವನ್ನು ಕಟ್ಟಿಸದಿದ್ದರೆ, ಪ್ರಭುವು ಪ್ರಸನ್ನವಾಗುವುದಿಲ್ಲ. ರಾಣಿಯ ಸದ್ಭಾವನಾಯುಕ್ತವಾದ ಮಾತುಗಳನ್ನು ಕೇಳಿ ರಾಜ ಹೇಳಿದ– "ಈಗಂತೂ ಖಜಾನೆ ಖಾಲಿ ಆಗಿದೆ. ನಾನಂತೂ ಧರ್ಮ ಸಂಕಟದಲ್ಲಿ ಸಿಲುಕಿಕೊಂಡಿರುವೆ." ರಾಣಿಯು ಹೇಳಿದಳು– ನನ್ನ ಹತ್ತಿರವಿರುವ ಎಲ್ಲ ಒಡವೆ (ಆಭೂಷಣ)ಗಳನ್ನು ತೆಗೆದುಕೊಳ್ಳಿರಿ. ಅದರಿಂದ ಸುಲಭವಾಗಿ ಮಂದಿರ ನಿರ್ಮಾಣ ಸಾಧ್ಯವಾಗುವುದು. ಎಂದು ಹೇಳಿ ಜೋಪಾನ ಮಾಡಿದ್ದ ಹಾಗೂ ತಾನು ಹಾಕಿಕೊಂಡಿದ್ದ ಎಲ್ಲ ಒಡವೆಗಳನ್ನು ರಾಜನ ಪಾದದ ಬಳಿ ಇರಿಸಿದಳು. ಪ್ರಭುವಿನ ಮಂದಿರ ಕಟ್ಟಿಸಿರಿ. ಪ್ರಭುವಿನ ಆಜ್ಞೆಯನ್ನು ಪಾಲನೆ ಮಾಡಿರಿ. ಎಂದಳು. ರಾಜನು, ಸಂತರು ತಿಳಿಸಿ ಹೇಳಿದ್ದ ಆ ಸ್ಥಾನಕ್ಕೆ ಹೋದನು. ಕಬೀರ್ ಪ್ರಭು ಅರ್ಥಾತ್ ಅಪರಿಚಿತ ಸಂತರನ್ನು ಹುಡುಕಿದನು. ಹಾಗೂ ಮಂದಿರವನ್ನು ಸಮುದ್ರ ಕೆಡವದಂತೆ ತಡೆಯಲು ಪ್ರಾರ್ಥಿಸಿದನು. ಪ್ರಭು ಕಬೀರ್ ಮಹಾತ್ಮರು (ಕವಿರ್ದೇವರು) ಹೇಳಿದರು ಯಾವ ಕಡೆಯಿಂದ ಸಮುದ್ರ ಮೇಲೆದ್ದು ಉಕ್ಕುತ್ತದೆ. ಅಲ್ಲಿ, ಸಮುದ್ರದ ಮೂಲೆಯಲ್ಲಿ, ಒಂದು ಚೌಕದ ಕಟ್ಟೆಯನ್ನು ಕಟ್ಟಿಸು, ನಾನು ಅಲ್ಲಿ ಕುಳಿತು ಪ್ರಭುವನ್ನು ಉಪಾಸನೆ ಮಾಡುವೆ ಹಾಗೂ ಸಮುದ್ರವನ್ನು ತಡೆಯುವೆ, ಆಗ ರಾಜನು ಒಂದು ದೊಡ್ಡ ಕಲ್ಲನ್ನು ಚೌಕಾಕಾರವಾಗಿ ಜಗಲಿಯ ಕಟ್ಟೆಯಂತೆ, ಮಾಡಿಸಿದ ಪರಮೇಶ್ವರ ಕಬೀರರು ಅದರ ಮೇಲೆ ಕುಳಿತರು. ಆರನೆಯ ಬಾರಿ ಮಂದಿರ ನಿರ್ಮಾಣ ಕಾರ್ಯ ಆರಂಭವಾಯಿತು. ಅದೇ ಸಮಯದಲ್ಲಿ "ನಾಥ ಪರಂಪರೆ"ಯ ಸಿದ್ಧ ಮಹಾತ್ಮರು ಅಲ್ಲಿಗೆ ಬಂದರು. ನಾಥ ಪರಂಪರೆಯ ಸಿದ್ಧರು ರಾಜನಿಗೆ ಹೇಳಿದರು "ರಾಜಾ ಬಹಳ ಒಳ್ಳೆಯ ಮಂದಿರವನ್ನು ಕಟ್ಟಿಸುತ್ತಿರುವೆ. ಇದರಲ್ಲಿ ಮೂರ್ತಿಯನ್ನೂ ಪ್ರತಿಷ್ಠಾಪಿಸಬೇಕು. ಮೂರ್ತಿಯೇ ಇಲ್ಲದ ಮಂದಿರವೆ ? ಇದು ಹೇಗೆ? ಇದು ನನ್ನ ಆದೇಶ" ರಾಜಾ ಇಂದ್ರದಮನನು ಕೈಮುಗಿದು ಹೇಳಿದ ನಾಥ ಮಹಾತ್ಮರೆ ಶ್ರೀ ಕೃಷ್ಣ ಪರಮಾತ್ಮನು ನನ್ನ ಸ್ವಪ್ನದಲ್ಲಿ ದರ್ಶನ ಕೊಟ್ಟು ಮಂದಿರವನ್ನು ಕಟ್ಟಿಸುವ ಆದೇಶ ನೀಡಿದ್ದು, ಅದರಲ್ಲಿ ಮೂರ್ತಿಯನ್ನು ಇಡಬಾರದೆಂದು ತಿಳಿಸಿದ್ದಾರೆ ಹಾಗೂ ಶಾಸ್ತ್ರ ವಿರುದ್ಧ ಪೂಜೆ ಮಾಡಬಾರದಾಗಿ ತಿಳಿಸಿದ್ದಾರೆ. "ರಾಜನ ಮಾತನ್ನು ಕೇಳಿ ನಾಥರು ಹೇಳಿದರು. ಸ್ವಪ್ನವೆಂದಾದರೂ ಸತ್ಯವಾಗುವುದೆ? ನನ್ನ ಆದೇಶವನ್ನು ಪಾಲನೆ ಮಾಡು ಶ್ರೀಗಂಧದ ಮರದಿಂದ ಮಾಡಿದ ಮೂರ್ತಿಯನ್ನು ಅವಶ್ಯವಾಗಿ ಸ್ಥಾಪಿಸಬೇಕು. ಈ ರೀತಿ ಹೇಳಿ ನಾಥರು, ನೀರನ್ನೂ ಕುಡಿಯದೆ ಎದ್ದು ಹೋದರು. ರಾಜನು ಭಯಗೊಂಡು ಶ್ರೀಗಂಧದ ಮರ ತರಿಸಿದನು. ಹಾಗೂ ಬಡಗಿಗೆ ಮೂರ್ತಿಯನ್ನು ಮಾಡುವ ಆದೇಶ ಕೊಟ್ಟನು.

ಶ್ರೀ ಕೃಷ್ಣನ ಒಂದು ಮೂರ್ತಿಯನ್ನು ಸ್ಥಾಪಿತ ಮಾಡುವ ಆದೇಶ ಕೊಟ್ಟನು. ಶ್ರೀ ಕೃಷ್ಣನ ಒಂದು ಮೂರ್ತಿಯನ್ನು ಸ್ಥಾಪಿತ ಮಾಡಲು ನಾಥರ ಆದೇಶವಾಗಿತ್ತು. ನಂತರ ಬೇರೆ ಗುರುಗಳು, ಸಂತರು ರಾಜನಿಗೆ ಸಲಹೆ ನೀಡಿದರು. "ಒಂಟಿಯಾಗಿ ಪ್ರಭು ಹೇಗೆ ಇರುವರು? ಶ್ರೀ ಬಲರಾಮನೊಂದಿಗೆ ಸದಾ ಇರುತ್ತಿದ್ದರು." ಮತ್ತೊಬ್ಬರು ಹೇಳಿದರು–ಸೋದರಿ ಸುಭದ್ರಾಳಂತೂ ಭಗವಾನ್ ಶ್ರೀ ಕೃಷ್ಣನಿಗೆ ಬಹಳ ಪ್ರಿಯಳು (ಮುದ್ದಿನ ತಂಗಿ) ಅವಳು ತನ್ನ ಅಣ್ಣನಿಲ್ಲದೆ ಇರಬಲ್ಲಳೆ? ಮೂರು ಮೂರ್ತಿಗಳನ್ನು ಮಾಡುವ ತೀರ್ಮಾನ ಕೈಗೊಳ್ಳಲಾಯಿತು. ಮೂರು ಜನ ಬಡಗಿಗಳನ್ನು



ಕಬೀರ್ ಪರಮೇಶ್ವರರು ಜಗನ್ನಾಥ ಮಂದಿರವನ್ನು ರಕ್ಷಿಸುವುದಕ್ಕಾಗಿ ಸಮುದ್ರವನ್ನು ನಿಲ್ಲಿಸಿದರು.

ನೇಮಿಸಲಾಯಿತು. ಮೂರ್ತಿಗಳು ಸಿದ್ಧವಾಗುತ್ತಿದ್ದಂತೆ ಚೂರು–ಚೂರಾಗ ತೊಡಗಿತು. ಹೀಗೆಯೇ ಮೂರು ಬಾರಿ ಮೂರ್ತಿಗಳು ಮರಿದು ಹೋದವು. "ನನ್ನ ಭಾಗ್ಯದಲ್ಲಿ ಈ ಪುಣ್ಯಕಾರ್ಯದ ಯಶಸ್ಸು ಬರೆದಿಲ್ಲವೆನಿಸುತ್ತದೆ". ಎಂದು ರಾಜ ಯೋಚಿಸಿದ ಮಂದಿರ ಕಟ್ಟಿಸಿದರೆ ಹಾಳಾಗುತ್ತದೆ, ಮೂರ್ತಿಗಳೂ ಮುರಿದು ಬೀಳುತ್ತವೆ. ನಾಥರು ಕೋಪದಿಂದ ಹೊರ ಹೋಗಿದ್ದಾರೆ. ಮೂರ್ತಿಗಳು ಮುರಿಯುತ್ತಿವೆ. ಎಂದು ಹೇಳಿದರೆ, ರಾಜಾ ನೆಪ ಹೇಳುತ್ತಿರುವನೆಂದು ಯೋಚಿಸಬಹುದು. ಇದೇ ಚಿಂತೆಯಲ್ಲಿ ರಾಜ ಆಹಾರ ನಿದ್ರೆಗಳಿಲ್ಲದೆ ಕೊರಗಿದ. ಬೆಳಿಗ್ಗೆ ರಾಜ ಸಭೆಗೆ ಹೋದ. ಅದೇ ಸಮಯದಲ್ಲಿ **80** ವರ್ಷದ ವೃದ್ಧ ವೇಷದಲ್ಲಿ ಕವಿರ್ದೇವ (ಕಬೀರ್ ಪ್ರಭು)ರು ದರಬಾರಿನಲ್ಲಿ ಬಂದು ನಿಂತರು. ಸೊಂಟದಲ್ಲಿ ಒಂದು ಚೀಲ ನೇತಾಡುತ್ತಿತ್ತು. ಅದರ ಹೊರಗೆ ಒಂದು ಗರಗಸ ಕಾಣುತಿತ್ತು. ಚೀಲದ ಒಳಗೆ ಉಳಿ–ಸುತ್ತಿಗೆ ಮೊದಲಾದ ಉಪಕರಣಗಳು ತುಂಬಿತ್ತು. ನೋಡಿದೊಡನೆ ಬಡಗಿ ಎಂದು ತನ್ನನ್ನು ತಾನೇ ದರ್ಶಿಸಿಕೊಂಡಂತೆ ಕಾಣುತ್ತಿತ್ತು. ಬಡಗಿ ವೇಷದ ಪ್ರಭು ರಾಜನನ್ನು ಕೇಳಿದರು "ನಾನು ಕೇಳಲ್ಪಟ್ಟೆ ಪ್ರಭುವಿನ ಮಂದಿರಕ್ಕೆ ಮೂರ್ತಿಗಳು ಪೂರ್ಣವಾಗಿ ಆಗುತ್ತಿಲ್ಲವೆಂದು. ನನಗೆ **80** ವರ್ಷಗಳು **60** ವರ್ಷಗಳ ಅನುಭವ ನನಗಿದೆ. ಚಂದನದ ಮರದಿಂದ ಎಲ್ಲರೂ ಮೂರ್ತಿಗಳನ್ನು ಮಾಡಲು ಸಾಧ್ಯವಿಲ್ಲ. ತಾವೇನಾದರು ಅಪ್ಪಣೆ ಕೊಟ್ಟರೆ ಸೇವೆಗೆ ಉಪಸ್ಥಿತನಿರುವೆ, ಬಡಗಿಗಳೇ ನೀವಂತೂ, ದೇವರೇ ನಿಮ್ಮ ರೂಪಿನಿಂದ ಬಂದಿರುವಂತಿರುವಿರಿ. ನಾನೂ ಹೀಗೇ ಯೋಚಿಸುತ್ತಿದ್ದೆ. ಯಾರಾದರೂ ಅನುಭವಸ್ಥ ಬಡಗಿ ದೊರೆತಿದ್ದರೆ ಒಳಿತಿತ್ತು ಎಂದು ಅಷ್ಟರಲ್ಲಿ ನೀವೇ ಬಂದಿರಿ. ನೀವು ಬೇಗನೆ ಮೂರ್ತಿಗಳನ್ನು ಮಾಡಿರಿ. ಬಡಗಿರೂಪದಲ್ಲಿ ಬಂದಿದ್ದ ಕವಿರ್ದೇವ (ಕಬೀರ್ ಪರಮಾತ್ಮ) ಹೇಳಿದರು "ನನಗೆ ಮೂರ್ತಿಗಳನ್ನು ಮಾಡಲು ಒಂದು ಪ್ರತ್ಯೇಕ ಕೊಠಡಿ ಬೇಕು. ನಾನು ಆ ಕೊಠಡಿಯ ಒಳಗೆ ಹೋಗಿ ಬಾಗಿಲು ಹಾಕಿಕೊಂಡು ಮೂರ್ತಿಗಳನ್ನು ಮಾಡುವೆ. ಕೆಲಸ ಮುಗಿದ ನಂತರ ಬಾಗಿಲು ತೆರೆಯುವೆ. ಮಧ್ಯದಲ್ಲಿ ಏನಾದರೂ ಬಾಗಿಲು ತೆರೆಯಲು ಯಾರಾದರೂ ಬಂದರೆ, ಎಷ್ಟು ಕೆಲಸ ಆಗಿದೆಯೋ, ಅಷ್ಟಕ್ಕೆ ನಿಲ್ಲಿಸುವೆ." ರಾಜನು ಹೇಳಿದ ನಿಮಗೆ ಹೇಗೆ ಸರಿ ಎನಿಸುವುದೋ, ಹಾಗೆಯೇ ಮಾಡಿರಿ.

ಮೂರ್ತಿಗಳನ್ನು ಮಾಡಲು ಆರಂಭಿಸಿ **12** ದಿನಗಳಾಗಿತ್ತು. ನಾಥ ಮಹಾತ್ಮರು ರಾಜನನ್ನು ಕೇಳಿದರು 'ರಾಜಾ, ಮೂರ್ತಿಗಳು ತಯಾರಾಯಿತೆ? ರಾಜನು ಕೈ ಮುಗಿದು ಹೇಳಿದ "ತಮ್ಮ ಆಜ್ಞೆಯನ್ನು, ಪೂರ್ಣವಾಗಿ ಪಾಲಿಸಿದ್ದೇನೆ ಮಹಾತ್ಮರೆ, ಆದರೆ ನನ್ನ ದೌರ್ಭಾಗ್ಯ, ಮೂರ್ತಿಗಳು ತಯಾರಾಗುತ್ತಿಲ್ಲ. ಅರ್ಧ ಮಾಡಿದೊಡನೆ, ಮುರಿದು ಹೋಗುತ್ತಿವೆ. ಆಳುಗಳಿಂದ, ಮುರಿದ ಮೂರ್ತಿಗಳ ಭಾಗಗಳನ್ನು ತರಿಸಿ (ನಾಥ ಮಹಾತ್ಮರಿಗೆ ವಿಶ್ವಾಸ ಬರಲು) ತೋರಿಸಿದ. ನಾಥ ಮಹಾತ್ಮರು ಹೇಳಿದರು "ಈಗ ಮೂರ್ತಿಗಳನ್ನು ಮಾಡಿಸಲೇ ಬೇಕು. ಈಗ ಮಾಡಿಸು, ನಾನು ನೋಡುತ್ತೇನೆ. ಹೇಗೆ ಮೂರ್ತಿಗಳು ಮುರಿಯುತ್ತಿವೆ ಎಂದು?" ನಾಥ ಮಹಾತ್ಮರೇ, ಪ್ರಯತ್ನ ಮಾಡಲಾಗುತ್ತಿದೆ ಪ್ರಭುವೇ ಕಳುಹಿಸಿರುವ **80** ವರ್ಷದ ಅನುಭವೀ ಬಡಗಿ, ಮುಚ್ಚಿದ ಕೊಠಡಿಯಲ್ಲಿ ಮೂರ್ತಿಗಳನ್ನು ಮಾಡುತ್ತಿದ್ದಾರೆ. ಮೂರ್ತಿಗಳನ್ನು ಮಾಡಿದ ನಂತರ ನಾನೇ ಬಾಗಿಲು ತೆರಯುವೆ, ಯಾರಾದರೂ ಮಧ್ಯೆ ಬಾಗಿಲು ತೆರೆದರೆ, ಮೂರ್ತಿಗಳ ಕೆಲಸ ಎಷ್ಟು ಆಗಿದೆಯೋ, ಅಷ್ಟಕ್ಕೆ ನಿಲ್ಲಿಸುವೆ ಎಂದು ಸಹ ಹೇಳಿದ್ದಾರೆ. ಇಂದಿಗೆ ಮೂರ್ತಿಗಳನ್ನು ಮಾಡಲು ಆರಂಭಿಸಿ, **12** ದಿನಗಳಾಯ್ತು, ಅವರು ನೀರು ಆಹಾರಗಳನ್ನೂ ಸ್ವೀಕರಿಸಿಲ್ಲ. ಕೊಠಡಿಯಿಂದ ಹೊರಗಡೆ ಸಹ ಬಂದಿಲ್ಲ." ಎಂದು ರಾಜ ಹೇಳಿದ. ನಾಥ ಮಹಾತ್ಮರು ಹೇಳಿದರು ಮೂರ್ತಿಗಳನ್ನು ನೋಡಬೇಕು. ಹೇಗೆ ಮಾಡುತ್ತಿರುವರೆಂದು, ಮಾಡಿದ ನಂತರ ನೋಡುವುದೇನು. ಸರಿಯಾಗಿ ಮಾಡಿರದಿದ್ದರೆ, ಸರಿಯಾಗಿ ಮಾಡಿಸೋಣ, ಎಂದು ಹೇಳುತ್ತ, ರಾಜನೊಂದಿಗೆ ಮೂರ್ತಿಗಳು ತಯಾರಾಗುತ್ತಿದ್ದ

ಕೊಠಡಿಯ ಬಳಿ ಬಂದರು. ಬಾಗಿಲು ತಟ್ಟಿ ಕೂಗಿದರು. "ಬಡಗಿ ಬಾಗಿಲು ತೆರೆ".

ಅನೇಕ ಬಾರಿ ಕೂಗಿದರು ಬಾಗಿಲು ತೆರೆಯಲಿಲ್ಲ. ಕಟ–ಕಟ ಸದ್ದು ಬರುತ್ತಿತ್ತು. ಈಗ ಅದೂ ನಿಂತು ಹೋಯಿತು. ನಾಥರು ಹೇಳಿದರು 80 ವರ್ಷದ ವೃದ್ಧರೆಂದು ಹೇಳುತ್ತಿರುವೆ. 12 ದಿನ ಆಹಾರ–ನೀರು ಏನನ್ನೂ ಸ್ವೀಕರಿಸಿಲ್ಲ. ಈಗ ಸದ್ದು ಸಹ ನಿಂತು ಹೋಯಿತು. ಏನಾದರೂ ಸತ್ತು ಹೋಗಿರಬಹುದೋ? ಬಾಗಿಲನ್ನು ಒದ್ದು, ತೆರೆದರು. ನೋಡಿದರೆ ಮೂರು ಮೂರ್ತಿಗಳು ಅಲ್ಲಿದ್ದವು. ಮೂರೂ ಮೂರ್ತಿಗಳ, ಕೈ ಕಾಲುಗಳ ಬೆರಳುಗಳನ್ನು ಮಾಡಿರಲಿಲ್ಲ. ಬಡಗಿ ಅದೃಶ್ಯವಾಗಿದ್ದ. ಮಂದಿರ ಕಟ್ಟಿ ಸಿದ್ಧವಾಯಿತು. ಬೇರೆ ದಾರಿ ಇರಲಿಲ್ಲ. ನಾಥರು ತಮ್ಮ ಹಠ ಬಿಡಲಿಲ್ಲ.

ರಾಜನಿಗೆ ಹೇಳಿದರು. ಈ ಮೂರ್ತಿಗಳನ್ನೇ ಸ್ಥಾಪನೆ ಮಾಡು. ಪ್ರಭುವಿಗೆ ಇದೇ ರೀತಿ ಸ್ವೀಕರಿಸಲು ಮನವಿರಬಹುದು. ನನಗನ್ನಿಸುತ್ತಿದೆ. ಸ್ವಯಂ ಶ್ರೀ ಕೃಷ್ಣನೇ ಮೂರ್ತಿಗಳನ್ನು ಮಾಡಿ ಹೋಗಿರುತ್ತಾನೆ ಎಂದು.

ಮುಖ್ಯ ಪುರೋಹಿತ ಮುಹೋರ್ತ ನೋಡಿ, ಮರುದಿನವೇ ಮೂರ್ತಿಗಳ ಸ್ಥಾಪನೆ ಮಾಡಿದರು. ಎಲ್ಲ ಪುರೋಹಿತರು ಹಾಗೂ ಮುಖ್ಯ ಪುರೋಹಿತರು ಮತ್ತು ರಾಜ, ಜೊತೆಯಲ್ಲಿ ಸೈನಿಕರು, ಶ್ರದ್ಧಾಳುಗಳು, ಮೂರ್ತಿಗಳಲ್ಲಿ ಪ್ರಾಣ ಪ್ರತಿಷ್ಠಾಪನೆ ಮಾಡಲು ಹೋದರು. ಪೂರ್ಣ ಪರಮೇಶ್ವರ (ಕವಿರ್ದೇವರು) ಒಬ್ಬ ಶೂದ್ರನ ರೂಪವನ್ನು ಧಾರಣೆ ಮಾಡಿ. ಮಂದಿರದ ಮುಖ್ಯದ್ವಾರದ ಮಧ್ಯದಲ್ಲಿ, ಮಂದಿರದ ಕಡೆಗೆ ಮುಖ ಮಾಡಿಕೊಂಡು ನಿಂತರು. ಹೇಗೆಂದರೆ ಅವರಿಗೆ ಜ್ಞಾನವೇ ಇಲ್ಲವೇನೋ, ಎಂಬಂತೆ ಹಿಂದಿನಿಂದ ಪ್ರಭುವಿನ ಪ್ರಾಣ ಪ್ರತಿಷ್ಠಾಪನೆ ಕಾರ್ಯಕ್ಕಾಗಿ ಸೇನೆಯು ಬರುತ್ತಿದೆ. ಸೇನೆಯ ಮುಂದೆ–ಮುಂದೆ ಮುಖ್ಯ ಪುರೋಹಿತರು ನಡೆದು ಬರುತ್ತಿದ್ದಾರೆ. ಆಗಲೂ, ಪರಮೇಶ್ವರ (ಕವಿರ್ದೇವ) ದ್ವಾರದ ಮಧ್ಯೆದಲ್ಲೇ ನಿಂತಿದ್ದರು. ಮುಖ್ಯ ಪುರೋಹಿತರು ಪರಮೇಶ್ವರನ ಸಮೀಪ ಬಂದರು. ಶೂದ್ರ ರೂಪದಲ್ಲಿದ್ದ ಪರಮೇಶ್ವರರನ್ನು ಕಂಡು ದೂರ ಹೋಗಿ ಬೀಳುವಂತೆ ಜಾಡಿಸಿ ಒದ್ದರು. ಬಿದ್ದಂತ ಪರಮೇಶ್ವರರು ಏಕಾಂತ ಸ್ಥಾನದಲ್ಲಿ ಶೂದ್ರರಂತೆ ಲೀಲೆ ಮಾಡುತ್ತಾ ಕುಳಿತರು. ರಾಜನ ಸಹಿತವಾಗಿ, ಎಲ್ಲ ಶ್ರದ್ಧಾಳುಕೂಡ, ಮಂದಿರದ ಒಳಗೆ ಹೋಗಿ ನೋಡಿದಾಗ, ಎಲ್ಲಾ ಮೂರ್ತಿಗಳೂ, ದ್ವಾರದಲ್ಲಿ ನಿಂತಿದ್ದ ಶೂದ್ರ ರೂಪ (ಕಬೀರ್ ಪರಮೇಶ್ವರ)ವನ್ನೇ ತಾಳಿದ್ದವು. ಈ ಕೌತುಕವನ್ನು ನೋಡಿದ, ಅಲ್ಲಿದ್ದ ಜನರು ಆಶ್ಚರ್ಯ ಚಕಿತರಾದರು. ಮುಖ್ಯ ಪುರೋಹಿತರು. ಹೇಳಿದರು. ಶೂದ್ರನು ಮುಖ್ಯದ್ವಾರದಲ್ಲಿ ನಿಂತಿದ್ದ ಕಾರಣ. ಪ್ರಭುವು ಕೋಪಗೊಂಡಿದ್ದಾರೆ. ಈ ಕಾರಣದಿಂದಲೇ ಎಲ್ಲ ಮೂರ್ತಿಗಳೂ ಕ್ಷುದ್ರ ರೂಪತಾಳೀವೆ. ದೊಡ್ಡ ಅನಿಷ್ಟವಾಗಿ ಹೋಗಿದೆ ಕೆಲವು ಸಮಯದ ನಂತರ, ಮೂರ್ತಿಗಳು ವಾಸ್ತವಿಕ ರೂಪವನ್ನು ತಾಳಿದವು ಗಂಗಾಜಲದಿಂದ ಬಹಳವಾಗಿ ಶುಚಿಗೊಳಿಸಿ ನಂತರ ಪ್ರಾಣಪ್ರತಿಷ್ಠೆಮಾಡಲಾಯಿತು. (ಕವಿರ್ದೇವರು ಹೇಳಿದರು : ಅಜ್ಞಾನದ ಹಾಗೂ ಅಧರ್ಮದ ಕೃತ್ಯಗಳನ್ನು ನೋಡಿರಿ. ಬಡಗಿಯು, ಭಗವಂತನ ಮೂರ್ತಿಗಳನ್ನು ಮಾಡುತ್ತಾನೆ. (ಮರದ ಮೂರ್ತಿ) ನಂತರ ಪೂಜಾರಿ ಅಥವಾ ಅನ್ಯ ಸಂತರು ಮೂರ್ತಿಯಲ್ಲಿನ ಪ್ರಭುವಿಗೆ ಪ್ರಾಣ ಪ್ರತಿಷ್ಠಾಪನೆ ಮಾಡುತ್ತಾರೆ. ಅಂದರೆ ಪ್ರಭುವಿಗೆ ಜೀವನದಾನ ಮಾಡುತ್ತಾನೆ. ನಂತರ ಮಣ್ಣಿನ ಅಥವಾ ಮರದ ಪ್ರಭುವು ಕಾರ್ಯ ಸಿದ್ಧಿ ಮಾಡುತ್ತಾನೆ. ಭಲೇ ಅಧರ್ಮಿಗಳೇ, ಪ್ರಭು ಪ್ರೇಮಿ ಭಕ್ತರನ್ನು ಮೂರ್ಖರನ್ನಾಗಿ ಮಾಡಿದಿರಿ.)

ಮೂರ್ತಿಯ ಪ್ರತಿಷ್ಟಾಪನೆಯಾದ ಕೆಲವು ದಿನಗಳ ನಂತರ 40 ಅಡಿ ಎತ್ತರದ ಸಮುದ್ರ ಚಂಡಮಾರುತ ಎದ್ದಿತು. ಹಾಗೂ ಬಹಳ ವೇಗದಿಂದ ಮಂದಿರದ ಕಡೆಗೆ ಹೋಯಿತು. ಎದುರಿಗೆ ಕಬೀರ್ ಪರಮೇಶ್ವರರು ಚೌಕಾಕಾರದ ಜಗುಲಿಯ ಮೇಲೆ ಕುಳಿತಿದ್ದರು. ಅವರು ತಮ್ಮ ಒಂದು

ಕೈಯನ್ನು ಆಶೀರ್ವಾದ ಮಾಡುತ್ತಿರುವರೋ, ಎಂಬಂತೆ ಎತ್ತಿದರು. ಆಗ ಸಮುದ್ರದ ಚಂಡಮಾರುತ ಬಂಡೆಯಂತೆ ಅಲ್ಲೇ ನಿಂತಿತು. ಮುಂದುವರಿಯಲು ಸಾಧ್ಯವಾಗಲಿಲ್ಲ. ವಿಪ್ರರೂಪ ಧಾರಣೆ ಮಾಡಿ ಸಮುದ್ರವು, ಕಬೀರ್ ಪರಮೇಶ್ವರರನ್ನು ಪ್ರಾರ್ಥಿಸಿತು. ಹೇ! ಭಗವಾನ್ ನನಗೆ ದಾರಿ ಬಿಡು. ನಾನು ಮಂದಿರವನ್ನು ಮುರಿಯಲು ಹೋಗವೆನು ಪ್ರಭು ಹೇಳಿದರು. ಇದು ಮಂದಿರ ಅಲ್ಲ. ಇದು ಆಶ್ರಮವಾಗಿ ಇದರಲ್ಲಿ ವಿದ್ವಾಂಸರು ಕುಳಿತು, ಭಗವದ್ಗೀತೆಯ ಜ್ಞಾನವನ್ನು ಭೋಧಿಸುವರು. ನೀವು ಇದನ್ನು ನಾಶಗೊಳಿಸುವುದು ಶೋಭೆಯನ್ನು ತರುವುದಿಲ್ಲ. ಸಮುದ್ರವು "ನಾನು ಇದನ್ನು ಅವಶ್ಯವಾಗಿ ಮುರಿಯುತ್ತೇನೆ" ಎಂದಿತು. ಪ್ರಭುವು ಹೋಗು ನಿನ್ನನ್ನು ಯಾರು ತಡೆಯುವರು? ಎಂದರು. ಪ್ರಭು, ನಾನು ವಿವಶನಾಗಿದ್ದೇನೆ. ತಮ್ಮ ಶಕ್ತಿ ಅಪಾರವಾದುದು. ನನಗೆ ದಾರಿ ಬಿಡಿರಿ". ಪರಮೇಶ್ವರ ಕಬೀರರು ಸಮುದ್ರವನ್ನು ಕೇಳಿದರು ನೀವು ಹೀಗೇಕೆ ಮಾಡುತ್ತಿರುವಿರಿ?" ಆಗ ವಿಪ್ರರೂಪದ ಸಮುದ್ರ ಹೇಳಿತು. "ಈ ಕೃಷ್ಣಪರಮಾತ್ಮನು, ತ್ರೇತಾಯುಗದಲ್ಲಿ, ರಾಮಚಂದ್ರನ ರೂಪದಲ್ಲಿ ಬಂದಿದ್ದ, ಆಗ ಇವನು ನನಗೆ, ಅಗ್ನಿ ಬಾಣವನ್ನು ತೋರಿಸಿ, ಕೆಟ್ಟರೀತಿಯಲ್ಲಿ ಮಾತನಾಡಿ, ಅವಮಾನಗೊಳಿಸಿ, ದಾರಿ ಬಿಡು, ಎಂದು ಕೇಳಿದ್ದನು ನಾನು ಆ ಸೇಡನ್ನು ತೀರಿಸಿಕೊಳ್ಳಲು ಹೋಗುತ್ತಿದ್ದೇನೆ."

ಪರಮೇಶ್ವರ ಕಬೀರರು ಹೇಳಿದರು ನೀವಂತೂ ಸೇಡನ್ನು ಮೊದಲೇ ತೀರಿಸಿಕೊಂಡಿರುವಿರಿ. ನೀವು ದ್ವಾರಿಕಾವನ್ನು ಮುಳುಗಿಸಿರುವಿರಿ. ಸಮುದ್ರವು ಹೇಳಿತು ಇನ್ನೂ ಪೂರ್ಣವಾಗಿ ಮುಳುಗಿಸಿಲ್ಲ. ಇನ್ನೂ ಅರ್ಧ ಹಾಗೇ ಇದೆ. ಆಗಲೂ ಒಬ್ಬ ಪರಮಬಲ ಶಕ್ತಿಯುಕ್ತ ಸಂತನು ಅಡ್ಡಿ ಬಂದನು. ಈ ಕಾರಣದಿಂದ ನಾನು ದ್ವಾರಿಕಾವನ್ನು ಪೂರ್ಣವಾಗಿ ಮುಳುಗಿಸಲು ಆಗದಾಯಿತು. ಈಗಲೂ ಪ್ರಯತ್ನಿಸುತ್ತಿರುವೆ ಆದರೆ ಆ ಕಡೆಗೆ ಹೋಗಲು ಅವಕಾಶವಾಗುತ್ತಿಲ್ಲ ಆ ಕಡೆಗೆ ಹೋಗದಂತೆ ನನಗೆ ತಡೆ ಹಾಕಿದ್ದಾರೆ.

ಆಗ ಪರಮೇಶ್ವರ ಕಬೀರರು (ಕವಿರ್ದೇವರು) ಹೇಳಿದರು. ಅಲ್ಲಿಗೆ ಆಗಲೂ ನಾನೇ ಹೋಗಿದ್ದೆ. ನಾನೇ ಆ ಅವಶೇಷವನ್ನು ರಕ್ಷಿಸಿದ್ದೆ. ಈಗ ಬೇಕಾದರೆ ಉಳಿದಿರುವ ದ್ವಾರಿಕೆಯ ಆ ಭಾಗವನ್ನು ನುಂಗಿ ಬಿಡು ಆದರೆ, ಶ್ರೀ ಕೃಷ್ಣನ ಅಂತಿಮ ಸಂಸ್ಕಾರವಾದ ಸ್ಮಾರಕವನ್ನು ಮಾತ್ರ ಬಿಟ್ಟು ಬಿಡು. (ಶ್ರೀ ಕೃಷ್ಣನ ಅಂತಿಮ ಸಂಸ್ಕಾರವಾದ ಸ್ಥಳದಲ್ಲಿ ಬಹಳ ದೊಡ್ಡ ಮಂದಿರವನ್ನು ಕಟ್ಟಿದ್ದಾರೆ. ಅಲ್ಲಿ ಪಂಚ ಭೂತಕ್ಕೆ ಸಂಬಂಧಿಸಿದ ಶರೀರಕ್ಕೆ ಅಂತಿಮ ಸಂಸ್ಕಾರವಾಗಿದೆ. ಹೀಗೆ ಮಾಡಿಲ್ಲದಿದ್ದರೆ ಮುಂದೆ ಶ್ರೀ ಕೃಷ್ಣನು ಮೃತ್ಯುವನ್ನೇ ಹೊಂದಲಿಲ್ಲ ಎಂಬ ಅನುಮಾನ ಬರುತ್ತಿತ್ತು) ಆಜ್ಞೆಯನ್ನು ಪಾಲನೆ ಮಾಡಿ. ಉಳಿದ ದ್ವಾರಿಕೆಯ ಭಾಗವನ್ನು ಸಮುದ್ರವು ಮುಳುಗಿಸಿತು. ಕಬೀರರು ಹೇಳಿದರು ಮುಂದೆಯೂ ಕೂಡ ಎಂದೂ ಈ ಜಗನ್ನಾಥ ಮಂದಿರವನ್ನು ಮುಳುಗಿಸಬಾರದು. ಈ ಮಂದಿರದಿಂದ ಬಹಳ ದೂರ ಹೋಗು. ಪ್ರಭುವಿನ ಆಜ್ಞೆಯನ್ನು ಪಾಲಿಸಿ, ಸಮುದ್ರವು ಒಂದೂವರೆ ಕಿಲೋ ಮೀಟರಿನಷ್ಟು ದೂರ ಸರಿಯಿತು. ಈ ರೀತಿ ಜಗನ್ನಾಥ ಮಂದಿರ ಅಂದರೆ ಕ್ಷೇತ್ರ ಸ್ಥಾಪಿತ ಗೊಂಡಿತು.

## "ಶ್ರೀ ಜಗನ್ನಾಥನ ಮಂದಿರದಲ್ಲಿ ಮೊದಲಿನಿಂದಲೂ ಅಸ್ಪೃಶ್ಯತೆ ಆಚರಣೆ ಇಲ್ಲ."

ಕೆಲ ದಿನಗಳ ನಂತರ, ಯಾವ ಪುರೋಹಿತನು ಶೂದ್ರ ರೂಪದಲ್ಲಿದ್ದ ಕಬೀರ್ ಪ್ರಭುವಿಗೆ ಕಾಲಿನಿಂದ ಒದ್ದು ನೂಕಿದ್ದನೋ, ಅವನಿಗೆ ಕುಷ್ಠ ರೋಗವಾಯಿತು. ಎಲ್ಲ ರೀತಿಯ ಔಷಧಿಗಳನ್ನು ಪಡೆದೂ, ಆರೋಗ್ಯವಾಗಲಿಲ್ಲ. ಕುಷ್ಠ ರೋಗದ ಕಷ್ಟವು ದಿನೇ–ದಿನೇ ಹೆಚ್ಚುತ್ತಾ ಹೋಯಿತು. ಎಲ್ಲ ರೀತಿಯ ಪೂಜೆಗಳನ್ನೂ ಮಾಡಿದರು. ಶ್ರೀ ಜಗನ್ನಾಥನ ಮುಂದೆ ಅಳುತ್ತಾ, ಸಂಕಟ ನಿವಾರಣೆಗಾಗಿ

ಪ್ರಾರ್ಥನೆ ಮಾಡಿದರು. ಸಹ ನಿಷ್ಫಲವಾಯಿತು. ಸ್ವಪ್ನದಲ್ಲಿ ಶ್ರೀ ಕೃಷ್ಣ ಪರಮಾತ್ಮನು ದರ್ಶನ ನೀಡಿ ಹೇಳಿದ ಪುರೋಹಿತ ನೀನು ಯಾವ ಸಂತನನ್ನು ಮಂದಿರದ ಮುಖ್ಯದ್ವಾರದಲ್ಲಿ ಕಾಲಿನಿಂದ ಒದ್ದಿದ್ದೆಯೋ, ಅವರ ಚರಣಗಳನ್ನು ತೊಳೆದು, ಆ ಚರಣಾಮೃತವನ್ನು ಪಾನ ಮಾಡು. ಆಗ ಅವರ ಆಶೀರ್ವಾದದಿಂದ, ನಿನ್ನ ಕುಷ್ಟರೋಗ ಗುಣವಾಗುವುದು. ಅವರು ನಿನ್ನನ್ನು ಹೃದಯದಿಂದ ಕ್ಷಮಿಸಿದರೆ ಮಾತ್ರ ಗುಣವಾಗಲು ಸಾಧ್ಯ. ಸಾಯುತ್ತಿರುವವ ಏನು ತಾನೇ ಮಾಡುವುದಿಲ್ಲ? ಮುಖ್ಯ ಪುರೋಹಿತನು ಬೆಳಿಗ್ಗೆ ಎದ್ದನು. ಅನೇಕ ಸಹ ಯೋಗಿ ಪುರೋಹಿತರನ್ನು ಜೊತೆಯಲ್ಲಿ ಕರೆದುಕೊಂಡು, ಎಲ್ಲಿ ಪ್ರಭುವು ಶೂದ್ರ ರೂಪದಲ್ಲಿದ್ದರೋ, ಅಲ್ಲಿಗೆ ಹೋದರು. ಪುರೋಹಿತನು ಹತ್ತಿರ ಹೋಗುತ್ತಿದ್ದಂತೆ, ಪರಮೇಶ್ವರನು ಅಲ್ಲಿಂದ ಎದ್ದು ಹೊರಟನು. "ಪುರೋಹಿತರೇ! ನಾನಂತೂ ಅಸ್ಪೃಶ್ಯ, ನನ್ನ ಹತ್ತಿರ ಬರಬೇಡ, ನೀವು ಅಪವಿತ್ರವಾಗಬಾರದು. ಪುರೋಹಿತ ಹತ್ತಿರಕ್ಕೆ ಹೋದ, ಪರಮೇಶ್ವರ ಮತ್ತೂ ಮುಂದೆ ಹೋದರು. ಆಗ ಪುರೋಹಿತ ಬಿದ್ದು-ಬಿದ್ದು ಅಳತೊಡಗಿದ. ಹಾಗೂ ಹೇಳಿದ ದೀನ ದಯಾಳು ನನ್ನ ದೋಷವನ್ನು ಕ್ಷಮಿಸಿ. ಆಗ ದಯಾಳು ಪ್ರಭುವು ನಿಂತರು ಪುರೋಹಿತನು. ಆದರದಿಂದ ಒಂದು ಶುಭ್ರ ವಸ್ತ್ರವನ್ನು ನೆಲದ ಮೇಲೆ ಹಾಸಿ, ಪ್ರಭುವನ್ನು ಕುಳಿತುಕೊಳ್ಳುವಂತೆ ಪ್ರಾರ್ಥಿಸಿದ. ಪ್ರಭು ಆ ವಸ್ತ್ರದ ಮೇಲೆ ಕುಳಿತರು ಆಗ ಆ ಪುರೋಹಿತನು ತಾನೇ ಸ್ವತಃ ಪಾದಗಳನ್ನು ತೊಳೆದನು. ಹಾಗೂ ಚರಣಾಮೃತವನ್ನು ಪುನಃ ಪಾತ್ರೆಗೆ ಹಾಕಿಕೊಂಡು. ಪ್ರಭು ಕಬೀರರು ಹೇಳಿದರು. 40 ದಿನಗಳವರೆಗೆ ಇದನ್ನು ಕುಡಿಯಬೇಕು. ಹಾಗೂ ಸ್ನಾನದ ನೀರಿನಲ್ಲಿ ಬೆರಸಿ ಸ್ನಾನಮಾಡಬೇಕು. ನಲವತ್ತನೆಯ ದಿನ ನಿನ್ನ ಕುಷ್ಟರೋಗವು ಸಮಾಪ್ತವಾಗುವುದು. ಹಾಗೂ ಮುಂದೆ ಕೂಡ ಶ್ರೀ ಜಗನ್ನಾಥ ಮಂದಿರದಲ್ಲಿ ಅಸ್ಪೃಶ್ಯತೆಯ ಆಚರಣೆ ಮಾಡಿದರೆ, ಅಂತಹವರಿಗೆ ಶಿಕ್ಷೆಯಾಗುವುದು. ಅಲ್ಲಿ ಇದ್ದ ಎಲ್ಲರೂ ಮಾತುಕೊಟ್ಟರು. "ಇಂದಿನಿಂದ ಮುಂದೆ ಎಂದೂ ಈ ಪವಿತ್ರ ಸ್ಥಾನದಲ್ಲಿ ಯಾವುದೇ ಅಸ್ಪೃಶ್ಯತೆ ಮಾಡಲಾಗುವುದಿಲ್ಲ.

ವಿಚಾರ ಮಾಡಿರಿ :- ಹಿಂದೂಸ್ಥಾನದ ಒಂದೇ ಒಂದು ಮಂದಿರದಲ್ಲಿ ಮೊದಲಿನಿಂದಲೂ ಅಸ್ಪೃಶ್ಯತೆಯ ಆಚರಣೆ ಇಲ್ಲವಾಗಿದೆ. ನಾನು ಸಹ ಪ್ರಾರಂಭದಲ್ಲಿ ಅನೇಕ ಸೇವಕರೊಂದಿಗೆ, ಆ ಸ್ಥಾನವನ್ನು ನೋಡಲು ಹೋಗಿದ್ದೆ. ಏಕೆಂದರೆ ಕೆಲವು ಸಾಕ್ಷಿಗಳು ದೊರೆತರೆ ನೋಡೋಣವೆಂದು ಎಲ್ಲಿ ಕಬೀರ್ ಪರಮೇಶ್ವರರು, ಮಂದಿರವನ್ನು ರಕ್ಷಿಸಲು ಸಮುದ್ರವನ್ನು ತಡೆದಿದ್ದರೋ, ಅಲ್ಲಿಯೇ ಈಗಲೂ ಚೌಕಾಕಾರದ ಕಲ್ಲಿನ ಜಗಲಿ ಇದೆ. ಅದರ ಮೇಲೆ ಸ್ಮಾರಕದ ರೂಪದಲ್ಲಿ ಒಂದು ಗೋಪುರವನ್ನು ಮಾಡಿದ್ದಾರೆ. ಅಲ್ಲಿ ಬಹಳ ಹಿಂದಿನ ಮಹಂತ (ರಕ್ಷಕರ) ಪರಂಪರೆಯ ಒಂದು ಆಶ್ರಮವೂ ಇದೆ. ಅಲ್ಲಿದ್ದ 70 ವರ್ಷದ ವೃದ್ಧ ಮಹಂತ ರಿಂದ, ಮೇಲೆ ಹೇಳಿರುವ ಮಂದಿರವನ್ನು ಸಮುದ್ರದಿಂದ ರಕ್ಷಿಸಿದ. ಬಗ್ಗೆ ಕೇಳಿದಾಗ, ಅವರೂ ಅದನ್ನೇ ಹೇಳಿದರು. ನನ್ನ ಪೂರ್ವಜರು ಅನೇಕ ಪೀಳಿಗೆಗಳಿಂದ, ಇಲ್ಲಿ ಮಹಂತರಾಗಿದ್ದಾರೆ. ಇಲ್ಲಿಯೇ ಶ್ರೀ ಧರ್ಮದಾಸ್ ಹಾಗೂ ಅವರ ಪತ್ನಿ ಭಕ್ತಿಮತಿ ಆಮನೀದೇವಿಯು ಶರೀರ ತ್ಯಾಗ ಮಾಡಿದ್ದಾರೆ. ಇಬ್ಬರ ಸಮಾಧಿಯನ್ನು ಜೊತೆ ಜೊತೆಯಲ್ಲೇ ಮಾಡಿರುವುದನ್ನು ತೋರಿಸಿದರು.

ನಂತರ ನಾವು ಜಗನ್ನಾಥನ ಮಂದಿರಕ್ಕೆ ಹೋದೆವು. ಅಲ್ಲಿ ಮೂರ್ತಿ ಪೂಜೆ ಇಂದಿಗೂ ನಡೆಯುವುದಿಲ್ಲ. ಆದರೆ ದರ್ಶನ ಭಾಗ್ಯ ಅವಶ್ಯವಾಗಿ ಸಿಗುತ್ತದೆ.

ಮೂರು ಮೂರ್ತಿಗಳು ಅಲ್ಲಿವೆ (1) ಶ್ರೀ ಕೃಷ್ಣ ಭಗವಾನ್ (2) ಶ್ರೀ ಬಲರಾಮ (3) ಸೋದರಿ ಸುಭದ್ರ ಈ ಮೂರ್ತಿಗಳು ಮಂದಿರದ ಒಳಗೆ ಸ್ಥಾಪಿತವಾಗಿವೆ. ಅವುಗಳ ಎರಡೂ ಕೈಗಳಲ್ಲಿ ಹಸ್ತವಿಲ್ಲ. ಎರಡೂ ಕೈಗಳು ಮೊಂಡಾಗಿವೆ. ಆ ಮೂರ್ತಿಗಳಿಗೆ ಪೂಜೆಯಾಗುವುದಿಲ್ಲ ಕೇವಲ ದರ್ಶನಕ್ಕಾಗಿ ಇಟ್ಟಿದ್ದಾರೆ. ಅಲ್ಲಿದ್ದ ಗೈಡ್ ಪುರೋಹಿತನನ್ನು ಕೇಳಿದಾಗ, ಅವನು ಈ

ಮಂದಿರವನ್ನು 5 ಬಾರಿ ಸಮುದ್ರ ನಾಶ ಮಾಡಿತ್ತು. ಪುನಃ ಮಾಡಲಾಯಿತು. ಸಮುದ್ರವು ಏಕೆ ನಾಶ ಮಾಡಿತು? ನಂತರ ಸಮುದ್ರವನ್ನು ಯಾರು ತಡೆದರು? ಪುರೋಹಿತ ಹೇಳಿದ ಇವೆಲ್ಲಾ ನನಗೆ ತಿಳಿದಿಲ್ಲ. ಈ ಎಲ್ಲ ಕೃಪೆ ಜಗನ್ನಾಥನದಾಗಿತ್ತು. ಅವನೇ ಸಮುದ್ರವನ್ನು ತಡೆದಿದ್ದ. ನಾನು ಕೇಳಿರುವೆ ಸಮುದ್ರವು 3 ಬಾರಿ ಮಂದಿರವನ್ನು ನಾಶ ಮಾಡಿತ್ತು ಎಂದು. ನಾನು ಪುನಃ ಪ್ರಶ್ನಿಸಿದೆ. ಮೊದಲನೆಯ ಬಾರಿಯೆ ಪ್ರಭು ಸಮುದ್ರವನ್ನು ಏಕೆ ತಡೆಯಲಿಲ್ಲ? ಪುರೋಹಿತನು ಉತ್ತರ ಕೊಟ್ಟ– ಇದು ಜಗನ್ನಾಥನ ಲೀಲೆ. ನಾನು ಪುನಃ ಕೇಳಿದೆ ಈ ಮಂದಿರಲ್ಲಿ ಅಸ್ಪೃಶ್ಯತೆಯ ಆಚರಣೆ ಇದೆಯೋ, ಇಲ್ಲವೋ? ಅವನು ಹೇಳಿದ ಯಾವಾಗಾ ಮಂದಿರ ಕಟ್ಟಿದರೋ, ಅಲ್ಲಿಂದ ಈವರೆಗೂ ಅಸ್ಪೃಶ್ಯತೆಯ ಆಚರಣೆ ಇಲ್ಲ. ಮಂದಿರದಲ್ಲಿ ಶೂದ್ರ ಮತ್ತು ಪುರೋಹಿತ ಒಂದೇ ತಟ್ಟೆ ಅಥವಾ ಎಲೆಯಲ್ಲಿ ಊಟ ಮಡುತ್ತಾರೆ. ಯಾರೂ ನಿಷೇಧಿಸುವುದಿಲ್ಲ. ನಾನು ಪ್ರಶ್ನೆ ಕೇಳಿದೆ ಬೇರೆ ಹಿಂದೂ ಮಂದಿರಗಳಲ್ಲಿ ಮೊದಲು ಅಸ್ಪೃಶ್ಯತಾ ಭಾವನೆ ಇತ್ತು. ಇದರಲ್ಲಿ ಏಕೆ ಇಲ್ಲ? ಪ್ರಭುವಂತೂ ಅವನೇ ಆಗಿರುವನು. ಪುರೋಹಿತ ಹೇಳಿದ ಜಗನ್ನಾಥನ ಲೀಲೆ ಎಂದು.

ಪುಣ್ಯಾತ್ಮರಾದ ನೀವು ವಿಚಾರ ಮಾಡಿರಿ : ಸತ್ಯವನ್ನು ಎಷ್ಟು ಅಡಗಿಸಿದ್ದಾರೆ ಎಂಬುದನ್ನು ಜಗನ್ನಾಥನ ಲೀಲೆ ಎಂದು ಹೇಳುತ್ತ ಪವಿತ್ರ ಸ್ಮಾರಕಗಳು ಗೌರವಾನ್ವಿತವಾಗಿವೆ. ಆದರೆ ಆತ್ಮಕಲ್ಯಾಣವು ಪವಿತ್ರ ಭಗವದ್ಗೀತೆ ಹಾಗೂ ವೇದಗಳಿಂದ ವರ್ಣಿತವಾದ ಹಾಗೂ ಪರಮೇಶ್ವರ ಕಬೀರರ ಮೂಲಕ ತಿಳಿಸಿದ ತತ್ವಜ್ಞಾನದ ಅನುಸಾರವಾಗಿ, ಭಕ್ತಿ ಸಾಧನೆ ಮಾಡಿದರೆ ಮಾತ್ರ ಸಂಭವ ಹೀಗಲ್ಲದೆ ಶಾಸ್ತ್ರವಿರುದ್ಧ ಆಚರಣೆಯಿಂದ, ಮಾನವ ಜೀವನ ವ್ಯರ್ಥವಾಗುವುದು. ಪ್ರಮಾಣ ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕದ ಪ್ರಕಾರ, ಜಗನ್ನಾಥನ ಮಂದಿರದಲ್ಲಿ ಪ್ರಭುವಿನ ಆದೇಶಾನುಸಾರವಾಗಿ, ಪವಿತ್ರಗೀತೆಯ ಜ್ಞಾನದ ಮಹಿಮೆಯನ್ನು ಗುಣಗಾನ ಮಾಡುವುದು ಶ್ರೇಯಸ್ಕರ, ಹಾಗೂ ಶ್ರೀಮದ್ ಭಗವದ್ಗೀತೆಯಲ್ಲಿ ಭಕ್ತಿಯ ವಿಧಿಯಿದೆ. ಅದೇ ಕೀರ್ತಿ ಸಾಧನೆ ಮಾಡುವುದರಿಂದ ಮಾತ್ರ, ಆತ್ಮಕಲ್ಯಾಣ ಸಾಧ್ಯವಾಗುವುದು. ಹಾಗಲ್ಲದೆ ಜಗನ್ನಾಥನ ದರ್ಶನ ಮಾತ್ರದಿಂದ ಹಾಗೂ ಖಿಚಡಿ (ನುಚ್ಚು ಅಕ್ಕಿ–ಹೆಸರು ಬೆಳೆಯಿಂದ ತಯಾರಿಸಲಾಗುತ್ತದೆ) ಪ್ರಸಾದ ತಿನ್ನುವುದರಿಂದ ಯಾವುದೇ ಲಾಭವಿಲ್ಲ. ಏಕೆಂದರೆ ಈ ಕ್ರಿಯೆಯು ಗೀತೆಯಲ್ಲಿ ವರ್ಣಿತವಾಗದಿರುವುದರಿಂದ ಶಾಸ್ತ್ರಕ್ಕೆ ವಿರುದ್ದವಾದುದು. ಇದನ್ನು ಗೀತೆಯ 16ನೆಯ ಅಧ್ಯಾಯದ 23–24ನೇ ಶ್ಲೋಕದಲ್ಲಿ ವರ್ಣಿಸಲಾಗಿದೆ.

## "ಸ್ವರ್ಗದ ವಿವರಣೆ"

ಉದಾಹರಣೆಗೆ, ಸ್ವರ್ಗವನ್ನು ಒಂದು ಹೋಟೆಲ್ ಎಂದು (ತಿಳಿ) ಭಾವಿಸು. ಹೇಗೆ, ಯಾರೋ ಹಣವಂತನು, ಬೇಸಿಗೆಯ ಕಾಲದಲ್ಲಿ ಶಿಮ್ಲಾ, ಕುಲ್ಲು ಮನಾಲೀ ಯಂತಹ ನಗರಗಳಲ್ಲಿನ ತಂಪಾದ ಸ್ಥಾನಗಳಿಗೆ ಹೋಗುತ್ತಾರೋ ಹಾಗೆ ಅವರು ಅಲ್ಲಿ ಯಾವುದೋ ಹೋಟೆಲಿನಲ್ಲಿ ಉಳಿಯುತ್ತಾರೆ. ಅಲ್ಲಿ ಕೊಠಡಿಯ ಬಾಡಿಗೆ ಹಾಗೂ ಊಟ–ತಿಂಡಿಯ ಖರ್ಚುಗಳನ್ನು ಕೊಡಲೇ ಬೇಕಾಗುತ್ತದೆ. 2–3 ತಿಂಗಳಲ್ಲಿ 20 ಅಥವಾ 30ಸಾವಿರ ರೂಪಾಯಿಗಳನ್ನು ಖರ್ಚು ಮಾಡಿ, ವಾಪಸ್ ತಮ್ಮ ಊರಿಗೆ ಬರಲೇ ಬೇಕಾಗುತ್ತದೆ. ಪುನಃ 10 ತಿಂಗಳು ಕಷ್ಟ ಪಟ್ಟು ಸಂಪಾದಿಸು ಪುನಃ 2 ತಿಂಗಳು ಸಂಪಾದಿಸಿದ ತಮ್ಮ ಹಣವನ್ನು ಖರ್ಚು ಮಾಡಿಕೊಂಡು ವಾಪಸ್ ಬಾ. ಯಾವುದಾದರೂ ವರ್ಷ ಸಂಪಾದನೆ ಚೆನ್ನಾಗಿ ಆಗದಿದ್ದರೆ, ಆ ಎರಡು ತಿಂಗಳ ಸುಖಕ್ಕಾಗಿ ಒದ್ದಾಡು.

ಸರಿಯಾಗಿ ಇದೇ ರೀತಿಯಲ್ಲಿ ಸ್ವರ್ಗವಿಹುದೆಂದು ತಿಳಿ. ಈ ಭೂಮಿಯ ಲೋಕದಲ್ಲಿ ಸಾಧನೆ ಮಾಡಿ, ಕೆಲ ಸಮಯ ಸ್ವರ್ಗ ರೂಪದ ಹೋಟೆಲ್‌ಗೆ ಹೋಗುತ್ತಾನೆ. ಪುನಃ ತನ್ನ ಪುಣ್ಯವೆಂಬ ಗಳಿಕೆಯನ್ನು ಖರ್ಚು ಮಾಡಿ ವಾಪಸ್ ನರಕ ಹಾಗೂ 84 ಲಕ್ಷ ಪ್ರಾಣಿಗಳ ಶರೀರದಲ್ಲಿನ ಕಷ್ಟವನ್ನು ಪಾಪ ಕರ್ಮಗಳ ಫಲವಾಗಿ ಅನುಭವಿಸಲೇ ಬೇಕಾಗುತ್ತದೆ.

ಎಲ್ಲಿಯವರೆಗೆ, ತತ್ವದರ್ಶಿ ಸಂತರು ಸಿಗುವುದಿಲ್ಲವೋ, ಅಲ್ಲಿಯವರೆಗೆ ಮೇಲೆ ಹೇಳಿದ ಹುಟ್ಟು–ಸಾವು ಹಾಗೂ ಸ್ವರ್ಗ–ನರಕ ಮತ್ತು 84 ಲಕ್ಷ ಯೋನಿಗಳಲ್ಲಿ ಕಷ್ಟವು ಇದ್ದೇ ಇರುತ್ತದೆ. ಏಕೆಂದರೆ ಕೇವಲ ಪೂರ್ಣ ಪರಮಾತ್ಮನ ಸತ್ಯನಾಮ ಹಾಗೂ ಸಾರನಾಮವೇ ಪಾಪಗಳನ್ನು ನಾಶ ಮಾಡುವ ಶಕ್ತಿಯುಳ್ಳದ್ದು. ಬೇರೆ ದೇವರ ಪೂಜೆಯಿಂದ ಪಾಪ ನಾಶವಾಗುವುದಿಲ್ಲ. ಎಲ್ಲ ಕರ್ಮಗಳಿಗೆ ಯಥಾವತ ಫಲವೇ ಸಿಗುತ್ತದೆ.

ಆದ್ದರಿಂದ ಗೀತೆಯ 8ನೇ ಅಧ್ಯಾಯದ 16ನೇ ಶ್ಲೋಕದಲ್ಲಿ ಹೇಳಿದೆ ಬ್ರಹ್ಮಲೋಕ (ಮಹಾಸ್ವರ್ಗ)ದ ವರೆಗಿನ, ಎಲ್ಲ ಲೋಕಗಳು ನಾಶವಾಗುವುದು. (ಅವಿನಾಶಿಯಲ್ಲ) ಯಾವಾಗ ಸ್ವರ್ಗ–ಮಹಾಸ್ವರ್ಗವೂ ಇರುವುದಿಲ್ಲವೋ, ಆಗ ಸಾಧಕನು ಎಲ್ಲಿ ಉಳಿಯಬೇಕಾಗುವುದು ದಯವಿಟ್ಟು ವಿಚಾರ ಮಾಡಿರಿ.

ಪ್ರಶ್ನೆ : ಗೀತೆಯನ್ನು ನಿತ್ಯ ಓದುವುದರಿಂದ ಯಾವುದೇ ಲಾಭವಿಲ್ಲವೆ? ದಾನ ಮಾಡುವುದು. ಉದಾ : ನಾಯಿಗೆ ರೊಟ್ಟಿ, ಹಸಿದವರಿಗೆ ಭೋಜನ, ಇರುವೆಗಳಿಗೆ ಹಿಟ್ಟು, ತೀರ್ಥಗಳಲ್ಲಿ ಹರಕೆ, ಮೊದಲಾದವುಗಳನ್ನು ಮಾಡುವುದು ಇವುಗಳು ಸಹ ವ್ಯರ್ಥವೆ?

ಉತ್ತರ : ಧಾರ್ಮಿಕ ಸದ್‌ಗ್ರಂಥಗಳನ್ನು ಓದುವುದು. ಓದಿಸುವುದರಿಂದ ಜ್ಞಾನ ಯಜ್ಞದ ಫಲ ದೊರೆಯುತ್ತದೆ. ಯಜ್ಞದ ಫಲವು ಕೆಲ ಸಮಯ ಸ್ವರ್ಗ ಅಥವಾ ಯಾವ ಫಲ ಪ್ರಾಪ್ತಿಯ ಉದ್ದೇಶದಿಂದ ಮಾಡಿದೆಯೋ, ಆ ಫಲ ದೊರೆಯುತ್ತದೆ. ಆದರೆ ಮೋಕ್ಷವಲ್ಲ. ನಿತ್ಯ ಸದ್‌ಗ್ರಂಥಗಳನ್ನು ಓದುವ ಮುಖ್ಯ ಕಾರಣ ಇದಾಗಿದೆ. ಆ ಸದ್‌ಗ್ರಂಥಗಳಲ್ಲಿ, ಯಾವ ಸಾಧನೆಯನ್ನು ಮಾಡಲು ನಿರ್ದೇಶಿಸಿದೆ, ಹಾಗೂ ಯಾವುದನ್ನು ಮಾಡಬಾರದೆಂದು, ನಿರ್ದೇಶಿಸಿದೆ. ಅದರ ನೆನಪು ಸ್ಥಿರವಾಗಿರಲೆಂದು, ಯಾವಾಗಲೂ ಏನೂ ತಪ್ಪಾಗಬಾರದೆಂದು, ಇದರಿಂದ ನಾವು ವಾಸ್ತವಿಕ (ಸಹಜ) ಉದ್ದೇಶವನ್ನು ತ್ಯಜಿಸಿ, ಅಜಾಗರೂಕತೆಯಿಂದ ಶಾಸ್ತ್ರ ವಿಧಿಯನ್ನು ತ್ಯಜಿಸಿ, ಮನಬಂದಂತೆ ಆಚರಣೆ (ಪೂಜೆ) ಮಾಡಲು ತೊಡಗಬಾರದೆಂದು, ಹಾಗೂ ಮನುಷ್ಯ ಜೀವನದ ಮುಖ್ಯ ಉದ್ದೇಶದ ನೆನಪು ಸ್ಥಿರವಾಗಿರಲೆಂದು, ಮನುಷ್ಯ ಜೀವನದ ಮೂಲ ಉದ್ದೇಶ ಆತ್ಮಕಲ್ಯಾಣವೇ ಆಗಿದೆ. ಅದು ಶಾಸ್ತ್ರಕ್ಕೆ ಅನುಕೂಲವಾದ ಸಾಧನೆಯಿಂದ ಮಾತ್ರವೇ ಸಂಭವವಿದೆ.

ಉದಾ : ಒಬ್ಬ ಜಮೀನ್ದಾರನಿಗೆ ವೃದ್ಧಾವಸ್ಥೆಯಲ್ಲಿ ಪುತ್ರ ಪ್ರಾಪ್ತಿಯಾಯ್ತು ಆ ರೈತ ಯೋಚಿಸಿದ, ಎಲ್ಲಿಯವರೆಗೆ ಈ ಮಗ ಯುವಕನಾಗುವನೋ, ನನ್ನ ಹೊಲ–ಗದ್ದೆ ತೋಟಗಳ ಕಾರ್ಯಗಳನ್ನು ನಿಭಾಯಿಸಲು ಯೋಗ್ಯನಾಗುವನೋ, ಅಲ್ಲಿಯವರೆಗೆ ನನಗೆ ಸಾವು ಬರದಿರಲಿ. ಎಂದು ಅದಕ್ಕಾಗಿ ರೈತನು ತನ್ನ ಅನುಭವಗಳನ್ನು ಬರೆದು ಇಟ್ಟ ಮಗನಿಗೆ ಹೇಳಿದ ಮಗನೆ ನೀನು ಯುವಕನಾದ ಮೇಲೆ, ನಿನ್ನ ಹೊಲ–ಗದ್ದೆ ತೋಟಗಳನ್ನು ನೊಡಿಕೊಳ್ಳಲು ಬೇಕಾಗುವ ತಿಳುವಳಿಕೆಗೆ ಈ ನನ್ನ ಪುಸ್ತಕದಲ್ಲಿನ ಅನುಭವಗಳನ್ನು ಪ್ರತಿದಿನ ಓದು ಹಾಗೂ ಕೃಷಿ ಕೆಲಸವನ್ನು ಮಾಡು, ತಂದೆಯ ಮರಣಾನಂತರ, ಮಗನು ತಂದೆಯು ಬರೆದಿರುವ ಪುಸ್ತಕವನ್ನು ಓದುತ್ತಿದ್ದ. ಆದರೆ ಅದರಲ್ಲಿ ಹೇಗೆ ಬರೆದಿತ್ತೋ, ಅದರಂತೆ ಮಾಡುತ್ತಿರಲಿಲ್ಲ. ಆ ರೈತನ ಮಗ ಶ್ರೀಮಂತನಾಗಲು ಸಾಧ್ಯವೇ? ಎಂದಿಗೂ ಇಲ್ಲ. ತಂದೆಯವರು ಪುಸ್ತಕದಲ್ಲಿ ಬರೆದಿರುವಂತೆಯೇ ಮಾಡಬೇಕು. ಸರಿಯಾಗಿ, ಇದೇ ರೀತಿಯೇ ಪವಿತ್ರ ಭಗವದ್ಗೀತೆಯ ಪಾಠವನ್ನು ಶ್ರದ್ಧಾಳುಗಳು ನಿತ್ಯವೂ ಮಾಡುತ್ತಿರುತ್ತಾರೆ. ಆದರೆ ಸಾಧನೆಯನ್ನು ಸದ್‌ಗ್ರಂಥಕ್ಕೆ ವಿರುದ್ದವಾಗಿ ಮಾಡುತ್ತಿರುವರು. ಆದ್ದರಿಂದ ಇದು ಗೀತೆಯ 16ನೇ ಅಧ್ಯಾಯದ 23–24ನೇ ಶ್ಲೋಕಗಳ ಅನುಸಾರ ವ್ಯರ್ಥ ಸಾಧನೆಯಾಗಿದೆ.

ಹೀಗೆ ಮೂರು ಗುಣಗಳು (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–

ಶಿವ) ಪೂಜೆಯನ್ನು ಗೀತೆಯ 7ನೇ ಅಧ್ಯಾಯದ 12 ರಿಂದ 15ನೇ ಶ್ಲೋಕಗಳಲ್ಲಿ ಹಾಗೂ 20 ರಿಂದ 23ನೇ ಶ್ಲೋಕಗಳಲ್ಲಿ ನಿಷೇಧಿಸಿದೆ. ಹಾಗೂ ಶ್ರಾದ್ಧ ಮಾಡುವುದು, ಪಿತೃಪೂಜೆ, ಪಿಂಡ ತುಂಬುವುದು, ಹೂ ಎತ್ತಿ ಗಂಗೆಗೆ (ಅಸ್ಥಿಯನ್ನು ಗಂಗೆಗೆ) ಬಿಡುವುದು, ಕರ್ಮಮಾಡುವುದು, 13ನೇ ದಿನ 17ನೇಯ ದಿನ, 6 ತಿಂಗಳು, ವಾರ್ಷಿಕ ಕ್ರಿಯೆಗಳನ್ನು ಗೀತೆಯ 9ನೇ ಅಧ್ಯಾಯದ 25ನೇ ಶ್ಲೋಕದಲ್ಲಿ ಮಾಡಬಾರದೆಂದು ತಿಳಿಸಿದೆ. ಹೇ ಅರ್ಜುನ ಯೋಗ (ಭಕ್ತಿ)ವು ಏನನ್ನೂ ತಿನ್ನದಿರುವ (ವ್ರತ ನಿಯಮದಿಂದ) ಕಾರಣದಿಂದ, ಅತಿಯಾಗಿ ತಿನ್ನುವ ಕಾರಣದಿಂದಲೂ ಸಿದ್ಧಿಸದು. ಅರ್ಥಾತ್ ವ್ರತ ಮಾಡುವುದನ್ನು ನಿಷೇಧಿಸಿದೆ. ಹಸಿದವರಿಗೆ ಊಟ ನೀಡುವುದು, ನಾಯಿಗಳಿಗೆ ಮತ್ತು ಇತರೆ ಜೀವ ಜಂತುಗಳಿಗೆ ಹಾಗೂ ಪಶುಗಳಿಗೆ ಆಹಾರ ಕೊಡುವುದು ಕೆಟ್ಟದಲ್ಲ, ಆದರೆ ಪೂರ್ಣ ಸಂತರ ಮೂಲಕ, ಅವರ ಆಜ್ಞೆಯ ಅನುಸಾರವಾಗಿ, ದಾನ ಹಾಗೂ ಯಜ್ಞ ಮೊದಲಾದುವುದಗಳನ್ನು ಮಾಡುವುದೇ ಪೂರ್ಣ ಲಾಭದಾಯಕವಾಗಿದೆ.

ಉದಾ : ಒಂದು ನಾಯಿ ಕಾರಿನ ಒಳಗೆ, ಒಡೆಯನ ಆಸನದಲ್ಲಿ ಕುಳಿತು ಯಾತ್ರೆ ಮಾಡುತ್ತದೆ. ನಾಯಿಯ ಚಾಲಕ (ಡ್ರೈವರ್) ಮನುಷ್ಯನಾಗಿರುವನು. ಆ ಪ್ರಾಣಿಗೆ, ಸಾಮಾನ್ಯ ಜನರಿಗಿಂತಲೂ ಹೆಚ್ಚಿನ ಸೌಲಭ್ಯಗಳು ದೊರೆಯುತ್ತದೆ. ಪ್ರತ್ಯೇಕ ಕೊಠಡಿ, ಫ್ಯಾನ್, ಹಾಗೂ ಬೆಲ್ಟ್ ಕಟ್ಟಿರುತ್ತಾರೆ. ಇನ್ನೂ ಮುಂತಾದ ಸೌಲಭ್ಯಗಳು. ಯಾವಾಗ ಆ ಮೂರ್ಖ ಪ್ರಾಣಿ, ಮನುಷ್ಯ ಶರೀರದಲ್ಲಿತ್ತೋ, ಮನಬಂದಂತಹ ಆಚರಣೆಯಿಂದ, ದಾನವನ್ನೂ ಮಾಡಿದೆ, ಆದರೆ ಅದು ಶಾಸ್ತ್ರವಿಧಿಗೆ ವಿರುದ್ಧವಾಗಿದ್ದ ಕಾರಣ, ಲಾಭದಾಯಕವಾಗಿಲ್ಲ. ಪ್ರಾಣಿಗಳು ಎಂತಹ ಕರ್ಮವನ್ನು ಮಾಡುತ್ತವೋ, ಅಂತಹ ಫಲವನ್ನು ಅವಶ್ಯವಾಗಿ ಪಡೆಯುತ್ತವೆ. ಎಂದು ಪ್ರಭು ಹೇಳಿದ್ದಾರೆ. ಎಲ್ಲಿಯವರೆಗೆ ತತ್ವದರ್ಶಿ ಸಂತರಿಂದ ಪೂರ್ಣ ಪರಮಾತ್ಮನನ್ನು ಪಡೆವ ಮಾರ್ಗದರ್ಶನ ಸಿಗುವುದಿಲ್ಲವೋ, ಅಲ್ಲಿಯವರೆಗೆ ಈ ವಿಧಾನ ಚಾಲ್ತಿಯಲ್ಲಿರುತ್ತದೆ.

ಪ್ರಾಣಿಗಳು ಎಂತಹ ಕರ್ಮವನ್ನು ಮಾಡುತ್ತವೋ, ಅಂತಹ ಫಲವನ್ನೇ ಪಡೆಯುತ್ತವೆ. ಈ ವಿಧಾನದಿಂದ ತೀರ್ಥಗಳಲ್ಲಿ ಹಾಗೂ ಕ್ಷೇತ್ರಗಳಲ್ಲಿ ಅಥವಾ ಅನ್ಯ ಸ್ಥಾನಗಳಲ್ಲಿ, ಹರಕೆ ಹುಂಡಿಗಳ ಮೂಲಕ, ಹಾಗೂ ನಾಯಿ ಮೊದಲಾದುವುಗಳಿಗೆ, ರೊಟ್ಟಿ ಹಾಕಿರುವ ಕರ್ಮದ ಆಧಾರದಿಂದ ಅವನು ನಾಯಿಯ ಯೋನಿಯಲ್ಲಿ ಹೋದನು. ಅಲ್ಲಿಯೂ ತಾನು ಮಾಡಿದ ಕರ್ಮದ ಫಲ ದೊರೆಯಿತು. ನಾಯಿಯ ಜೀವನದಲ್ಲಿ ತನ್ನ ಪೂರ್ವ ಜನ್ಮದ ಶುಭ ಕರ್ಮದ ಗಳಿಕೆಯು ಸಮಾಪ್ತಗೊಳಿಸಿ, ಕತ್ತೆಯ ಯೋನಿಗೆ ಹೋಗುವನು. ಆ ಕತ್ತೆಯ ಜೀವನದಲ್ಲಿ ಎಲ್ಲಾ ಸೌಲಭ್ಯಗಳನ್ನು ಕಿತ್ತು ಕೊಳ್ಳಲಾಗುವುದು. ಇಡೀ ದಿನ ಮಣ್ಣು, ಹಸಿ–ಬೆಂದ ಇಟ್ಟಿಗೆ ಹೊರುವುದು ಅದಾದ ನಂತರ, ಅನ್ಯ ಪ್ರಾಣಿಗಳ ಶರೀರದಲ್ಲಿ ಕಷ್ಟ ಪಡುವುದು ಹಾಗೂ ನರಕವನ್ನೂ ಅನುಭವಿಸ ಬೇಕಾಗುವುದು.

84 ಲಕ್ಷ ಯೋನಿಗಳಲ್ಲಿನ ಕಷ್ಟ ಅನುಭವಿಸಿ, ಪುನಃ ಮನುಷ್ಯ ಜನ್ಮ ಲಭಿಸುವುದು ಮತ್ತೇನು! ಭಕ್ತಿ ಮಾಡುವವನು ಅಥವಾ ಮಾಡದಿರುವನು ಹೇಗೆ ಕ್ಷೇತ್ರಗಳಿಗೆ ಹಾಗೂ ತೀರ್ಥಗಳಿಗೆ ಹೋಗುವವರ, ಕಾಲುಗಳ ಕೆಳಗೆ ಅಥವಾ ಯಾವ ವಾಹನದಲ್ಲಿ ಹೋಗುತ್ತಾರೋ, ಅವುಗಳ ಚಕ್ರದ ಕೆಳಗೆ ಎಷ್ಟು ಜೀವ–ಜಂತುಗಳು ಸಾಯುತ್ತವೆ ಅವುಗಳ ಪಾಪವನ್ನು ಸಹ ತೀರ್ಥ ಅಥವಾ ಕ್ಷೇತ್ರ ಯಾತ್ರಿಯು ಅನುಭವಿಸ ಬೇಕಾಗುತ್ತದೆ. ಎಲ್ಲಿಯವರೆಗೆ ಪೂರ್ಣ ಪರಮಾತ್ಮನ, ಸತ್ಯಸಾಧನೆಯನ್ನು ತಿಳಿಸುವ, ಪೂರ್ಣ ಸಂತನು ಸಿಗುವುದಿಲ್ಲವೋ, ಅಲ್ಲಿಯವರೆಗೆ, ಪಾಪವು ನಾಶವಾಗಲು ಸಾಧ್ಯವಿಲ್ಲ (ಕ್ಷಮೆ ಇಲ್ಲ) ಏಕೆಂದರೆ ಬ್ರಹ್ಮಾ, ವಿಷ್ಣು, ಮಹೇಶ, ಬ್ರಹ್ಮ (ಕ್ಷರ ಪುರುಷ) ಹಾಗೂ ಪರಬ್ರಹ್ಮ (ಅಕ್ಷರ ಪುರುಷ)ನ ಸಾಧನೆಯಿಂದ ಪಾಪ ನಾಶವು (ಕ್ಷಮೆ) ಆಗುವುದಿಲ್ಲ. ಪಾಪ ಮತ್ತು ಪುಣ್ಯ ಎರಡರ ಫಲವನ್ನೂ ಅನುಭವಿಸ ಬೇಕಾಗುತ್ತದೆ. ಒಂದು ವೇಳೆ, ಆ ಪ್ರಾಣಿ

**ಗೀತೆಯಲ್ಲಿನ ಜ್ಞಾನದ ಅನುಸಾರ, ಪೂರ್ಣ ಸಂತನಿಗೆ ಶರಣಾಗಿ, ಪೂರ್ಣ ಪರಮಾತ್ಮನ ಸಾಧನೆ ಮಾಡಿದರೆ ಸತ್ಯಲೋಕಕ್ಕೆ ಹೋಗುವನು, ಇಲ್ಲವೆ ಮತ್ತೊಮ್ಮೆ ಮನುಷ್ಯ ಶರೀರ ಪ್ರಾಪ್ತವಾಗವುದು ಪೂರ್ವ ಪುಣ್ಯದ ಆಧಾರದಲ್ಲಿ ಪುನಃ ಯಾರಾದರೂ ಸಂತರು ಸಿಗುತ್ತಾರೆ. ಆ ಪ್ರಾಣಿ ಪುನಃ ಶುಭ ಕರ್ಮಗಳನ್ನು ಮಾಡಿ ಪಾರಾಗುತ್ತದೆ. (ಜನನ–ಮರಣಗಳಿಂದ) ಆದ್ದರಿಂದ ಮೇಲೆ ಹೇಳಿದ ಮನಬಂದಂತೆ, ಆಚರಿಸುವ ಕ್ರಮವು ಲಾಭದಾಯಕವಲ್ಲ.**

**ಗೀತೆಯ 3ನೇ ಅಧ್ಯಾಯದ 35ನೇ ಶ್ಲೋಕ, ಹಾಗೂ 18ನೇ ಅಧ್ಯಾಯದ 47ನೇ ಶ್ಲೋಕಗಳಲ್ಲಿ ಹೇಳಿದೆ ಉತ್ತಮ ರೀತಿಯಲ್ಲಿ ಆಚರಣೆಯಲ್ಲಿರುವ ಅನ್ಯ ಧರ್ಮಕ್ಕಿಂತ, ಗುಣ ರಹಿತವಾಗಿರುವ ತನ್ನ ಧರ್ಮವೇ ಉತ್ತಮವಾಗಿದೆ. ತನ್ನ ಧರ್ಮದಲ್ಲಿ ಸಾಯುವುದು. ಕಲ್ಯಾಣ ಕಾರಕವಾಗಿದೆ. ಅನ್ಯರ ಧರ್ಮ ಭಯ ನೀಡುವಂತಹದಾಗಿರುತ್ತದೆ. ಇದರಿಂದ ಸಿದ್ಧವಾಯಿತು. ಯಾರು ಯಾವ ಪೂಜೆಯನ್ನು ಮಾಡುತ್ತಾರೋ, ಅದನ್ನು ಬಿಡಬಾರದು ತನ್ನ ಧರ್ಮದಲ್ಲಿ ಸಾಯುವುದು ಕಲ್ಯಾಣಕಾರಕವಾಗಿದೆ.**

**ಪ್ರಶ್ನೆ :– ಗೀತೆಯ 3ನೇ ಅಧ್ಯಾಯದ 35ನೇ ಶ್ಲೋಕ ಹಾಗೂ 18ನೇ ಅಧ್ಯಾಯದ 47ನೇ ಶ್ಲೋಕಗಳಲ್ಲಿನ ಅರ್ಥ ಇದಾಗಿದೆ. ಯಾರು ಹೇಗೆ ಪೂಜೆ ಮಾಡುವರೋ, ಮಾಡುತ್ತಿರಲಿ, ಅದನ್ನು ತ್ಯಜಿಸಬೇಡಿ ಎಂದಾದರೆ, ಪವಿತ್ರ ಶ್ರೀಮದ್‌ಭಗವದ್ಗೀತೆಯ ಅವಶ್ಯಕತೆ ಏನಿತ್ತು? ಒಂದು ಶ್ಲೋಕ ಸಾಕಾಗಿತ್ತು ಗೀತೆಯ ಈ ಶ್ಲೋಕಗಳ ಭಾವಾರ್ಥ ಸರಿಯಾಗಿದೆ. ಆದರೆ ಅನುವಾದಕಾರರು ವಿರುದ್ಧಾರ್ಥ ಮಾಡಿದ್ದಾರೆ. ದಯವಿಟ್ಟು ಓದಿರಿ ಕೆಳಗೆ ಬರೆದಿರುವ ಎರಡೂ ಶ್ಲೋಕಗಳ ವಾಸ್ತವಿಕ ಅರ್ಥ :**

**<u>ಗೀತೆಯ 3ನೇ ಅಧ್ಯಾಯದ 35 ನೇ ಶ್ಲೋಕ.</u>**

ಶ್ರೇಯಾನ್, ಸ್ವಧರ್ಮಃ ವಿಗುಣಃ ಪರಧರ್ಮಾತ್, ಸ್ವನಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮಃ, ಭಯಾವಹಃ ॥

**ಅನುವಾದ :–** (ವಿಗುಣಃ) ಗುಣರಹಿತ ಅರ್ಥಾತ್ ಶಾಸ್ತ್ರವಿಧಿ ತ್ಯಜಿಸಿ, (ಸ್ವನುಷ್ಠಿತಾತ್) ಸ್ವತಃ ಶಾಸ್ತ್ರ ವಿಧಿಗಳಿಗೆ ಅನುಸಾರವಾಗಿ ಆಚರಣೆಯಲ್ಲಿರುವ (ಪರಧರ್ಮಾತ್) ಬೇರೆಯವರ ಧಾರ್ಮಿಕ ಪೂಜೆಯಿಂದ (ಸ್ವಧರ್ಮಃ) ತಮ್ಮ ಶಾಸ್ತ್ರ ವಿಧಿಗೆ ಅನುಸಾರವಾದ ಪೂಜೆ ಅತಿ ಉತ್ತಮ (ಶ್ರೇಯಸ್) ಶಾಸ್ತ್ರಾನುಕೂಲ (ಸ್ವಧರ್ಮೆ) ತಮ್ಮದೇ ಪೂಜೆಯಲ್ಲಿ (ನಿಧಿನಮ್) ಮರಣವೂ (ಶ್ರೇಯಸ್) ಕಲ್ಯಾಣಕರವಾಗಿದೆ. ಮತ್ತು (ಪರಧರ್ಮ) ಅನ್ಯರ ಪೂಜೆ (ಭಯಾವಹಃ) ಭಯ ಕೊಡುವಂತಹುದು.

**<u>ಗೀತೆಯ 18ನೇ ಅಧ್ಯಾಯನ 47ನೇ ಶ್ಲೋಕ.</u>**

“ಶ್ರೇಯಾನ, ಸ್ವಧರ್ಮಃ, ವಿಗುಣಃ, ಪರಧರ್ಮಾತ್, ಸ್ವನುಷ್ಠಿತಾತ್
ಸ್ವಭಾವ ನಿಯತಃ ಕರ್ಮ, ಕುರ್ವನ್, ನ ಆಪ್ನೋತಿ ಕಿಲ್ಬಿಷಮ್ ॥

**ಅನುವಾದ :–** (ವಿಗುಣಃ) ಗುಣರಹಿತ (ಸ್ವನುಷ್ಠಿತಾತ್) ಸ್ವಯಂ ಮನಮಾನಾ ಅರ್ಥಾತ್ ಶಾಸ್ತ್ರವಿಧಿ ರಹಿತ ಉತ್ತಮವಾಗಿ ಆಚರಣೆ ಮಾಡಿರುವ, (ಪರಧರ್ಮಾತ್) ಬೇರೆಯವರ ಧಾರ್ಮಿಕ ಪೂಜೆಯಿಂದ (ಸ್ವಧರ್ಮಃ) ತನ್ನ ಧರ್ಮ ಅರ್ಥಾತ್ ಶಾಸ್ತ್ರವಿಧಿ ಅನುಸಾರ ಧಾರ್ಮಿಕ ಪೂಜೆ (ಶ್ರೇಯಾನ) ಶ್ರೇಷ್ಠವಾಗಿದೆ (ಸ್ವಭಾವನಿಯತಮ್) ಸ್ವತಃ ತನ್ನ ಸ್ವಭಾವಕ್ಕೆ ಅನುಸಾರವಾಗಿ ಮಾಡಿರುವ ಮನಬಂದಂತಹ, ಆಚರಣೆಯಿಂದ (ಕರ್ಮ) ಭಕ್ತಿ ಕರ್ಮ (ನ) (ಕುರ್ವನ್) ಮಾಡಬೇಡ. (ಕಿಲ್ಬಿಷಮ್) ಇದರಿಂದ ಪಾಪವೂ (ಆಪ್ನೋತಿ) ಪ್ರಾಪ್ತವಾಗುತ್ತದೆ.

ವಿಶೇಷವಾಗಿ ಇದರ ಪ್ರಮಾಣವು ಗೀತೆಯ 17ನೇ ಅಧ್ಯಾಯದ 1 ರಿಂದ 6ನೇ ಶ್ಲೋಕಗಳಲ್ಲಿ ಸ್ಪಷ್ಟವಾಗಿದೆ.

ಮೇಲಿನ ಶ್ಲೋಕಗಳು ಹೀಗೆ ಸ್ಪಷ್ಟಪಡಿಸುತ್ತಿವೆ ತನ್ನ ಶಾಸ್ತ್ರ ವಿಧಿಗಳಿಗೆ ಅನುಸಾರವಾಗಿ ಸಾಧನೆ ಮಾಡುವುದು ಶ್ರೇಷ್ಠವಾಗಿದೆ. ಬೇರೆ ಧರ್ಮದ ತಳಕು-ಬಳಕುಗಳು ಎಷ್ಟೇ ಸುಯೋಜಿತವಾಗಿದ್ದರೂ ಅದು ಹಾನಿಕಾರಕವಾಗಿದೆ.

ಯಾವ ರೀತಿ ತಾಯಿಯ ಭಕ್ತರು (ಮಾತಾ ಭಕ್ತರು) ಜಾಗರಣೆ ಮಾಡುತ್ತಾ, ತುಂಬಾ ಮಧುರವಾದ ಧ್ವನಿಯಲ್ಲಿ ಹಾಡುತ್ತಾ ತಾಯಿಯ ಸ್ತುತಿ ಮಾಡುವರು. ಅವರು ಕವಿತೆಗಳ ಮೂಲಕ ಮನಮುಟ್ಟುವಂತೆ, ವಾದ್ಯಗಳೊಂದಿಗೆ ಹಾಡುತ್ತಾರೆ. ಇದು ಅವರ ಸ್ವನಿರ್ಮಿತ ಶಾಸ್ತ್ರವಿಧಿ. ಇದರಿಂದ ಆಕರ್ಷಿತರಾದವರು, ತಮ್ಮ ಶಾಸ್ತ್ರದ ರೀತಿಯ ಆಚರಣೆಯನ್ನು ತ್ಯಜಿಸಬಾರದು. ಯಾರು ಸತ್ಯಸಾಧನೆಯಲ್ಲಿ ತೊಡಗಿರುವರೋ, ಅವರು ಮೊದಲಿನ ಶಾಸ್ತ್ರ ವಿರುದ್ಧ ಪೂಜೆಯನ್ನು ತ್ಯಜಿಸುತ್ತಾರೆ. ಉದಾ : ಪಿತೃಪೂಜೆ, ದೇವಾಲಯದ ಮೊದಲಾದುವುಗಳಿಗೆ ಹೋಗುವುದು. ಇತ್ಯಾದಿ. ಆಗ ಬೇರೆಯವರು ಅಂದರೆ ಶಾಸ್ತ್ರವಿಧಿ ವಿರುದ್ದ ಸಾಧನೆ ಮಾಡುವವರು ಹೇಳುತ್ತಾರೆ. "ನೀನು ಮೊದಲಿನ ಪೂಜಾ ವಿಧಿಯನ್ನು ತ್ಯಜಿಸಿದೆ. ನಿನ್ನ ಮೇಲೆ ಎಲ್ಲ ದೇವರು ಸಿಟ್ಟಾಗುವರು.

ಒಬ್ಬ ವ್ಯಕ್ತಿಯು ಹೀಗೆಯೇ ಮಾಡಿದ್ದ ಅವನ ಏಕಮಾತ್ರ ಪುತ್ರನು ಸತ್ತು ಹೋದ. ಈ ರೀತಿಯಾಗಿ ಬೇರೆಯವರ ಶಾಸ್ತ್ರವಿರುದ್ದ ಸಾಧನೆಯು ಭಯವನ್ನು ಹುಟ್ಟಿಸುತ್ತದೆ. ಆದರೆ ತಮ್ಮ ಶಾಸ್ತ್ರ ಅನುಕೂಲ ಸಾಧನೆಯನ್ನು ಕಡೆಯ ಉಸಿರಿನವರೆಗೂ ಮಾಡುತ್ತಿರುವುದೇ ಕಲ್ಯಾಣಕಾರಕವಾಗಿದೆ.

ಪ್ರಶ್ನೆ :– ನಾನು ಗೀತೆಯ 6ನೇ ಅಧ್ಯಾಯದ 10 ರಿಂದ 15ನೇ ಶ್ಲೋಕಗಳಲ್ಲಿ, ವರ್ಣಿತವಾಗಿರುವ ವಿಧಿಯ ಅನುಸಾರ ಒಂದು ಆಸನದ ಮೇಲೆ ಕುಳಿತುಕೊಂಡು, ತಲೆಯ ಆದಿಯಾಗಿ ಎಲ್ಲಾ ಅಂಗಗಳನ್ನು ಸಮವಾಗಿ ಇರಿಸಿಕೊಂಡು, ಧ್ಯಾನಮಾಡುತ್ತೇನೆ. ಏಕಾದಶಿಯ ವ್ರತವನ್ನೂ ಮಾಡುತ್ತೇನೆ, ಈ ರೀತಿಯಾಗಿ ಶಾಂತಿಯನ್ನು ಪಡೆಯುವೆನು.

ಉತ್ತರ :– ದಯವಿಟ್ಟು ತಾವು ಗೀತೆಯ 6ನೇ ಅಧ್ಯಾಯದ 16ನೇ ಶ್ಲೋಕವನ್ನು ಓದಿರಿ. ಅದರಲ್ಲಿ ಹೀಗೆ ಬರೆದಿದೆ. "ಹೇ ಅರ್ಜುನ ಈ ಯೋಗವು (ಸಾಧನೆ) ಹೆಚ್ಚು ತಿನ್ನುವರಿಗಲ್ಲ. ತಿನ್ನದೆಯೇ ಇರುವವರಿಗಾಗಿಯೂ ಅಲ್ಲ. (ವ್ರತ ಮಾಡಿ) ಇದು ಅವರಿಗೆ ಸಿದ್ಧಿಸುವುದಿಲ್ಲ. ಹೆಚ್ಚು ಜಾಗರಣೆ ಮಾಡುವವರಿಗಾಗಲೀ, ಹೆಚ್ಚು ನಿದ್ರೆ ಮಾಡುವವರಿಗಾಗಲಿ, ಸಿದ್ಧಿಸುವುದಿಲ್ಲ ಹಾಗೂ ಒಂದೇ ಸ್ಥಾನದಲ್ಲಿ ಕುಳಿತು ಸಾಧನೆಮಾಡುವವರಿಗೂ ಸಿದ್ಧಿಸುವುದಿಲ್ಲ. ಗೀತೆಯ 6ನೇ ಅಧ್ಯಾಯದ 10 ರಿಂದ 15ನೇ ಶ್ಲೋಕಗಳಲ್ಲಿ ವರ್ಣಿತವಾಗಿರುವ ವಿಧಿಯನ್ನು ಗೀತೆಯ 3ನೇ ಅಧ್ಯಾಯದ 5 ರಿಂದ 9ನೇ ಶ್ಲೋಕಗಳಲ್ಲಿ ಖಂಡಿಸಿದೆ.

ಯಾರು ಒಂದೇ ಸ್ಥಾನದಲ್ಲಿ ಕುಳಿತು, ಎಲ್ಲ ಕರ್ಮೇಂದ್ರಿಯಗಳನ್ನು ಹಠಪೂರ್ವಕವಾಗಿ ತಡೆದು ಚಿಂತನೆ ಮಾಡುತ್ತಾನೊ, ಅವನನ್ನು ದುಷ್ಟನೆಂದು ಕರೆಯುತ್ತಾರೆ. ಆದ್ದರಿಂದ ಕರ್ಮಯೋಗಿ (ಕಾರ್ಯ ಮಾಡು-ಮಾಡುತ್ತಲೆ ಸಾಧನೆ ಮಾಡುವ ಸಾಧಕ)ಯೇ ಶ್ರೇಷ್ಠನು ವಾಸ್ತವಿಕ ಭಕ್ತಿಯ ವಿಧಿಗಾಗಿ ಗೀತೆಯ ಜ್ಞಾನದಾತ ಪ್ರಭುವು (ಬ್ರಹ್ಮ) ಯಾರಾದರೂ ತತ್ವದರ್ಶಿಯನ್ನು ಹುಡುಕಲು ಹೇಳಿದ್ದಾನೆ. (ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕ) ಇದರಿಂದ ದೃಢವಾಯಿತು. ಗೀತೆಯ ಜ್ಞಾನದಾತನಿಂದ ತಿಳಿಸಲ್ಪಟ್ಟಿರುವ ಭಕ್ತಿಯ ವಿಧಿಯು ಪೂರ್ಣವಾಗಿಲ್ಲವೆಂದು ಆದ್ದರಿಂದ ಗೀತೆಯ 6ನೇ ಅಧ್ಯಾಯದ 10 ರಿಂದ 15ನೇ ಶ್ಲೋಕಗಳಲ್ಲಿ ಬ್ರಹ್ಮ (ಕ್ಷರ ಪುರುಷ-ಕಾಲ) ನಿಂದ ತನ್ನ ಸಾಧನೆಯ ವರ್ಣನೆ ಇದೆ. ಹಾಗೂ ತನ್ನ ಸಾಧನೆಯಿಂದ ದೊರೆಯುವ ಶಾಂತಿಯನ್ನು ಅತಿ

**ಕೆಳಸ್ತರ (ಅನುತ್ತಮ್) ಎಂದು ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹೇಳಿದೆ. ಮೇಲೆ ಹೇಳಿದ ಗೀತೆಯ 6ನೇ ಅಧ್ಯಾಯದ 10 ರಿಂದ 15ನೇ ಶ್ಲೋಕಗಳಲ್ಲಿ ಹೇಳಲಾಗಿದೆ. ಮನ ಮತ್ತು ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಳ್ಳುವ ಸಾಧಕರು ಒಂದು ವಿಶೇಷ ಆಸನವನ್ನು ಸಿದ್ಧಪಡಿಸಿಕೊಳ್ಳಿ ಅದು ಹೆಚ್ಚು ಎತ್ತರವಿರಬಾರದು. ಹೆಚ್ಚು ಕೆಳಗೂ ಇರಬಾರದು. ಆ ಆಸನದ ಮೇಲೆ ಕುಳಿತು ಕೊಂಡು ಮನಸ್ಸು ಮತ್ತು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು, ಮನಸ್ಸನ್ನು ಏಕಾಗ್ರಗೊಳಿಸಿ ಅಭ್ಯಾಸ ಮಾಡಿರಿ. ನೇರವಾಗಿ ಕುಳಿತು, ಬ್ರಹ್ಮಚರ್ಯ ಪಾಲನೆ ಮಾಡುತ್ತಾ ಮನಸ್ಸನ್ನು ತಡೆದು, ಅಭ್ಯಾಸದಲ್ಲಿ ಮುಂದುವರಿಯಲಿ. ಈ ರೀತಿಯಲ್ಲಿ ಸಾಧನೆಯಲ್ಲಿ ತೊಡಗಿಕೊಂಡಿರುವ ಸಾಧಕ ನನ್ನಲ್ಲಿರುವ (ನಿರ್ವಾಣ ಪರಮಾಮ್) ಅತ್ಯಂತ ನಿರ್ಜೀವ ಅರ್ಥಾತ್ ಖಂಡಿತ ಸತ್ತಿರುವ (ಹೆಸರಿಗೆ ಮಾತ್ರ) ಶಾಂತಿಯನ್ನು ಪಡೆಯುತ್ತಾನೆ. ಆದ್ದರಿಂದ ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ನನ್ನ ಸಾಧನೆಯಿಂದ ದೊರೆಯುವ ಗತಿಯನ್ನು (ಲಾಭ) ಅತ್ಯಂತ ಕೆಳಸ್ತರ (ಅನುತ್ತಮಾಮ್) ಎಂದು ಹೇಳಿದೆ ಇದೇ ಗೀತೆಯ 18ನೇ ಅಧ್ಯಾಯದ 62ನೇ ಶ್ಲೋಕ, 15ನೇ ಅಧ್ಯಾಯದ 4ನೇ ಶ್ಲೋಕದಲ್ಲಿ ಹೇಳಿದೆ ಹೇ ಅರ್ಜುನ! ನಿನಗೆ ಪರಮ ಶಾಂತಿ ಹಾಗೂ ಸತ್ಯಲೋಕವು ಪ್ರಾಪ್ತವಾಗುವುದು. ಪುನಃ ಜನ್ಮ ವಿರುವುದಿಲ್ಲ. ಪೂರ್ಣ ಮೋಕ್ಷ ಪ್ರಾಪ್ತವಾಗುತ್ತದೆ. ನಾನು (ಗೀತೆಯ ಜ್ಞಾನದಾತ ಪ್ರಭು) ಸಹ ಅದೇ ಆದಿ ನಾರಾಯಣ ಪುರುಷ ಪರಮೇಶ್ವರನ ಶರಣು ಹೋಗಿರುವೆ ಆದ್ದರಿಂದ ದೃಢ ನಿಶ್ಚಯ ಮಾಡಿ ಅವನ ಸಾಧನೆಯನ್ನು ಹಾಗೂ ಪೂಜೆಯನ್ನು ಮಾಡಬೇಕು.**

**ತನ್ನ ಸಾಧನೆಯ ಅನುಮಾನ ಸಹಿತದ ಜ್ಞಾನಾಧಾರದಲ್ಲಿ ತಿಳಿಸಿರುವ ಮಾರ್ಗವನ್ನು, ಗೀತೆಯ 6ನೇ ಅಧ್ಯಾಯದ 47ನೇ ಶ್ಲೋಕದಲ್ಲಿಯೂ ಸ್ವತಃ (ಯುಕ್ತತಮಃ ಮತಃ) ಅರ್ಥಾತ್ ಅಜ್ಞಾನ ಅಂಧಕಾರದ ವಿಚಾರವೆಂದು ಹೇಳಿದ್ದಾನೆ. ಬೇರೆ ಅನುವಾದ ಕರ್ತರು "ಮೆ ಯುಕ್ತತಮಃ ಮತಃ" ದ ಅರ್ಥವನ್ನು "ಪರಮಶ್ರೇಷ್ಠ ಮಾನ್ಯವಾಗಿದೆ" ಎಂದು ಮಾಡಿದ್ದಾರೆ. ಹೀಗೆ ಮಾಡಬೇಕಿತ್ತು ಇದು ನನ್ನ ಅನುಮಾನಯುಕ್ತ ಅಜ್ಞಾನ ಅಂಧಕಾರದ ಆಧಾರದ ಮೇಲೆ ಕೊಟ್ಟಂತಹ ಅಭಿಪ್ರಾಯವಾಗಿದೆ. ಏಕೆಂದರೆ ಯಥಾರ್ತ್ ಜ್ಞಾನದ ವಿಷಯದಲ್ಲಿ ಯಾರಾದರೂ ತತ್ವದರ್ಶಿ ಸಂತರಿಂದ ತಿಳಿಯಲು ಹೇಳಿದೆ. (ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕದಲ್ಲಿ) ವಾಸ್ತವಿಕ ಅನುವಾದ ಗೀತೆಯ 6ನೇ ಅಧ್ಯಾಯದ 47ನೇ ಶ್ಲೋಕದಲ್ಲಿವೆ.–**

**6ನೇ ಅಧ್ಯಾಯದ 47ನೇ ಶ್ಲೋಕ.**

ಯೋಗಿನಾಮ್, ಅಪಿ, ಸರ್ವೇಷಾಮ್, ಮದ್‌ಗತೇನ, ಅಂತರಾತ್ಮನಾ,
ಶ್ರದ್ಧಾವಾನ್, ಭಜತೆ, ಯಃ ಮಾಮ್, ಸಃ, ಮೆ ಯುಕ್ತತಮಃ, ಮತಃ ॥

**ಅನುವಾದ** :– ನನ್ನಿಂದ ಕೊಡಲಾಗಿರುವ ಭಕ್ತಿ ವಿಚಾರವು ಯಾವುದು ಅನುಮಾನದಿಂದ ಕೂಡಿದ, ಮೇಲೆ ಹೇಳಿರುವ ಶ್ಲೋಕ 10 ರಿಂದ 15ರಲ್ಲಿ, ವರ್ಣಿತವಾಗಿರುವ ಪೂಜಾವಿಧಿಯು, ಅದನ್ನು ನಾನು ಅನುಮಾನದಲ್ಲಿ ತಿಳಿಸಿರುವೆ, ಪೂರ್ಣ ಜ್ಞಾನವಿಲ್ಲ. ಏಕೆಂದರೆ (ಸರ್ವೇಷಾಮ್) ಸರ್ವ (ಯೋಗಿನಾಮ್) ಸಾಧಕರಲ್ಲಿ (ಯಃ) ಯಾರು (ಶ್ರದ್ಧಾವಾನ್) ಪೂರ್ಣ ಆಸ್ಥೆಯಿಂದ (ಅಂತರಾತ್ಮನಾ) ನಿಜವಾದ ಮಗ್ನತೆಯಿಂದ (ಮದ್‌ಗತೇನ) ನನ್ನಿಂದ ಕೊಡಲಾಗಿರುವ ಭಕ್ತಿಯ ಮತಕ್ಕೆ ಅನುಸಾರವಾಗಿ (ಮಾಮ್) ನನ್ನನ್ನು (ಭಜತೆ) ಭಜಿಸುತ್ತಾರೆ. (ಸಃ) ಅವನು (ಅಪಿ) ಸಹ (ಯುಕ್ತತಮಃ) ಅಜ್ಞಾನ ಅಂಧಕಾರದಿಂದ ಜನ್ಮ–ಮರಣ, ಸ್ವರ್ಗ–ನರಕಗಳ ಸಾಧನೆಯಲ್ಲಿ ಲೀನರಾಗಿದ್ದಾನೆ. ಇದು(ಮೆ) ನನ್ನ (ಮತಃ) ವಿಚಾರವಾಗಿದೆ.

**ಇದರ ಪ್ರಮಾಣವು ಪವಿತ್ರ ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ 5ನೇ ಅಧ್ಯಾಯದ**

29ನೇ ಶ್ಲೋಕದಲ್ಲಿ ಹಾಗೂ 6ನೇ ಅಧ್ಯಾಯದ 15ನೇ ಶ್ಲೋಕಗಳಲ್ಲಿ ಸ್ಪಷ್ಟವಾಗಿದೆ. ಆದ್ದರಿಂದ ಗೀತೆಯ 18ನೇ ಅಧ್ಯಾಯದ 62ನೇ ಶ್ಲೋಕದಲ್ಲಿ ಹೇಳಿದೆ ಹೇ ಭಾರತ! ನೀನು ಸರ್ವಭಾವದಿಂದ, ಆ ಪರಮಾತ್ಮನಲ್ಲಿ ಶರಣು ಹೋಗು ಅವನ ಕೃಪೆಯಿಂದಲೇ ನಿನಗೆ ಪರಮಶಾಂತಿಯನ್ನು ಹಾಗೂ ಸನಾತನ ಪರಮಧಾಮ, ಅರ್ಥಾತ್ ಸತ್ಯಲೋಕವನ್ನು ಪಡೆಯುವೆ. ಗೀತೆಯ 15ನೇ ಅಧ್ಯಾಯದ 4ನೇ ಶ್ಲೋಕದಲ್ಲಿ ಹೇಳಿದೆ : ಯಾವಾಗ ನಿನಗೆ, ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕದಲ್ಲಿ, ವರ್ಣಿತವಾಗಿರುವ ತತ್ವದರ್ಶಿ ಸಂತನು ಸಿಗುವನೋ, ಆಗ ಆ ಪರಮಪದ ಪರಮೇಶ್ವರನನ್ನು ಸರಿಯಾಗಿ ಹುಡುಕಬೇಕು. ಯಾವುದರಲ್ಲಿ ಹೋದಂತಹ ಸಾಧಕನು ಪುನಃ ವಾಪಸ್ಸು ಈ ಲೋಕಕ್ಕೆ ಬರುವುದಿಲ್ಲವೋ ಅರ್ಥಾತ್ ಜನ್ಮ-ಮೃತ್ಯುವಿನಿಂದ ಎಂದೆಂದಿಗೂ ಮುಕ್ತನಾಗುತ್ತಾನೋ, ಅಂತಹ ಪರಂಧಾಮವನ್ನು ಸೇರಬೇಕು. ಯಾವ ಪರಮಾತ್ಮನು ಸಂಸಾರ ರೂಪದ ವೃಕ್ಷವನ್ನು ರಚಿಸಿರುವನೋ, ನಾನೂ ಸಹ ಅದೇ ಆದಿ ಪುರುಷ ಪರಮೇಶ್ವರನಲ್ಲಿ ಶರಣು ಹೋಗಿದ್ದೇನೆ. ಅವನ ಭಕ್ತಿಯನ್ನೇ ಮಾಡಬೇಕು.

ಗೀತೆಯ 3ನೇ ಅಧ್ಯಾಯದ 5 ರಿಂದ 9ನೇ ಶ್ಲೋಕಗಳು, 6ನೇ ಅಧ್ಯಾಯದ 10 ರಿಂದ 15ನೇ ಶ್ಲೋಕಗಳಲ್ಲಿನ ಜ್ಞಾನವನ್ನು ತಪ್ಪೆಂದು ದೃಢಪಡಿಸಿದೆ. “ಪ್ರಭು, ಮನವನ್ನು ತಡೆಯುವುದು ಬಹಳ ಕಷ್ಟ” ಎಂದು ಅರ್ಜುನನು ಹೇಳಿದನು. ಭಗವಂತನು ಹೇಳಿದನು “ಅರ್ಜುನ ಮನವನ್ನು ತಡೆಯುವುದು. ಗಾಳಿಯನ್ನು ತಡೆಯುವುದಕ್ಕೆ ಸಮನಾಗಿದೆ ಪುನಃ ಇದನ್ನೂ ಹೇಳಿದೆ ನಿಸ್ಸಂದೇಹವಾಗಿ ಯಾವುದೇ ವ್ಯಕ್ತಿ ಯಾವುದೇ ಕ್ಷಣದಲ್ಲಿ, ಕರ್ಮ ಮಾಡದೆ ಇರಲಾರನು. ಮಹಾ ಮೂರ್ಖ ಮನುಷ್ಯನು ಸಮಸ್ತ ಕರ್ಮೇಂದ್ರಿಯಗಳನ್ನು ಮೇಲಿನಿಂದ ತಡೆದು, ಮನಸ್ಸಿನಲ್ಲಿ ಏನನ್ನಾದರೂ ಯೋಚಿಸುತ್ತಲೇ ಇರುವನು. ಆದ್ದರಿಂದ ಒಂದೇ ಸ್ಥಾನದಲ್ಲಿ ಹಠಯೋಗದಿಂದ ಕುಳಿತುಕೊಳ್ಳದೆ ಪ್ರಾಪಂಚಿಕ ಕೆಲಸಗಳನ್ನು ಮಾಡು- ಮಾಡುತ್ತಲೇ ಸಾಧನೆ ಮಾಡುವುದು (ಕರ್ಮಯೋಗ) ಶ್ರೇಷ್ಠವಾಗಿದೆ. ಕೆಲಸ ಮಾಡದೆ, ಒಂದೇ ಸ್ಥಾನದಲ್ಲಿ ಕುಳಿತು ಹಠಯೋಗದಿಂದ ಸಾಧನೆ (ಅಕರ್ಮಣಾ) ಮಾಡುವುದಕ್ಕಿಂತ, ಕೆಲಸ ಮಾಡು ಮಾಡುತ್ತಲೇ ಸಾಧನೆ ಮಾಡುವುದು ಶ್ರೇಷ್ಠ. ಒಂದೇ ಸ್ಥಾನದಲ್ಲಿ ಕುಳಿತು ಸಾಧನೆ ಮಾಡಿದರೆ, ನಿನ್ನ ಜೀವನ ನಿರ್ವಹಣೆ ಹೇಗೆ ಸಾಧ್ಯವಾಗುವುದು? ಒಂದು ಶಾಸ್ತ್ರ ವಿಧಿಯನ್ನು ತ್ಯಜಿಸಿ ಸಾಧನೆ (ಒಂದು ಆಸನಲದಲ್ಲಿ ಕುಳಿತು ಹಠಯೋಗದಿಂದ) ಮಾಡುವುದರಿಂದ, ಕರ್ಮ ಬಂಧನಕ್ಕೆ ಕಾರಣವಾಗುವುದು ಎರಡನೆಯದಾಗಿ ಕರ್ಮವನ್ನು ಮಾಡು-ಮಾಡುತ್ತಲೇ, ಸಾಧನೆ ಮಾಡುವುದೇ ಶ್ರೇಷ್ಠವಾಗಿದೆ. ಈ ಪ್ರಾಪಂಚಿಕ ಕಾರ್ಯಗಳನ್ನು ಮಾಡುತ್ತಲೇ ಸಾಧನೆ ಮಾಡು. ಗೀತೆಯ 8ನೇ ಅಧ್ಯಾಯದ 7ನೇ ಶ್ಲೋಕದಲ್ಲಿ ಹೀಗೆ ಹೇಳಿದೆ. ಯುದ್ಧವನ್ನೂ ಮಾಡು, ನನ್ನ ಸ್ಮರಣೆಯನ್ನೂ ಮಾಡು.

ಈ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹಾಗೂ ಅಧ್ಯಾಯ 18ರ 62ನೇ ಶ್ಲೋಕದಲ್ಲಿ ಹೇಳಿದೆ ನನ್ನ ಸಾಧನೆಯಿಂದ ದೊರೆಯುವ ಲಾಭ (ಗತಿ) ಅತಿ ಕೆಳಸ್ತರದ್ದಾಗಿದೆ (ಅನುತ್ತಮಾಮ್) ಆದ್ದರಿಂದ, ಪರಮಶಾಂತಿ (ಶಾಶ್ವತ ಸ್ಥಾನ) ಹಾಗೂ ಸತ್ಯಲೋಕ ಪ್ರಾಪ್ತಿಯಾಗುವ ಆ ಪರಮೇಶ್ವರನಲ್ಲಿ ಶರಣು ಹೋಗು. ಅವನ ಕೃಪೆಯಿಂದ ಇದು ಸಾಧ್ಯ ಆ ಪರಮೇಶ್ವರನ ಭಕ್ತಿಯ ವಿಧಾನ ಹಾಗೂ ಪೂರ್ಣ ಜ್ಞಾನ (ತತ್ವಜ್ಞಾನ) ಪಡೆಯಲು, ಯಾರಾದರೂ ತತ್ವದರ್ಶಿ ಸಂತರನ್ನು ಹುಡುಕು ಅವರನ್ನು ಕೇಳು. ನನಗೂ (ಗೀತೆ ಜ್ಞಾನದಾತಾ ಬ್ರಹ್ಮ / ಕ್ಷರ ಪುರುಷ) ಸಹ ತಿಳಿದಿಲ್ಲ.

ಪ್ರಶ್ನೆ :- ಗೀತೆಯ 15ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹೀಗೆ ಹೇಳಿದೆ ನಾನು ಲೋಕವೇದದಲ್ಲಿ ಪುರುಷೋತ್ತಮ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೇನೆ. ಇದರಿಂದ ದೃಢವಾಗುವ ವಿಚಾರವೆಂದರೆ ಗೀತೆ ಜ್ಞಾನಾದಾತ ಪ್ರಭುವೇ ಸರ್ವ ಶಕ್ತನಾಗಿರುವನು. ಹಾಗೂ ಗೀತೆಯ 12ನೇ

ಅಧ್ಯಾಯದಲ್ಲಿ ಗೀತೆ ಜ್ಞಾನದಾತನ ಪೂರ್ಣ ಮಹಿಮೆಯನ್ನು ತಿಳಿಸುತ್ತದೆ.

ಉತ್ತರ :– ಗೀತೆಯ ಜ್ಞಾನದಾತನು ತನ್ನ ಸಾಧನೆ ಮತ್ತು ಸಮರ್ಥತೆಯನ್ನು ಹೇಳುತ್ತಿದ್ದಾನೆ. ಜೊತೆ ಜೊತೆಯಲ್ಲೇ, ಆ ಪೂರ್ಣ ಪರಮಾತ್ಮನ ಮಹಿಮೆಯನ್ನೂ ಹೇಳುತ್ತಿದ್ದಾನೆ. ಹಾಗೂ ಆ ಪರಮೇಶ್ವರನ ಸಾಧನೆಗಾಗಿ, ತತ್ವದರ್ಶಿ ಸಂತನ ಕಡೆಗೆ ಸಂಕೇತಿಸುತ್ತಲೂ ಇದ್ದಾನೆ. ಗೀತೆಯ 12ನೇ ಅಧ್ಯಾಯವು ಪೂರ್ಣ ಬ್ರಹ್ಮ (ಕ್ಷರ ಪುರುಷ–ಕಾಲ) ನ ಮಹಿಮೆಯಿಂದ ಪರಿಪೂರ್ಣವಾಗಿದೆ. ಗೀತೆಯ 13ನೇ ಅಧ್ಯಾಯವು ಆ ಪೂರ್ಣ ಪರಮಾತ್ಮ ಅರ್ಥಾತ್ ಆದಿ ಪುರುಷ ಪರಮೇಶ್ವರನ ಮಹಿಮೆಯಿಂದ ಪರಿಪೂರ್ಣವಾಗಿದೆ. ಗೀತೆಯ ಅಧ್ಯಾಯ 15ರ 1 ರಿಂದ 4 ಹಾಗೂ 16–17ನೇ ಶ್ಲೋಕಗಳಲ್ಲಿ ಪೂರ್ಣ ಪರಮಾತ್ಮ ಹಾಗೂ ಪರಬ್ರಹ್ಮ, ಬ್ರಹ್ಮ ಮುಂತಾದವರ ನಿರ್ಣಾಯಕ ಜ್ಞಾನವಿದೆ.

ಗೀತೆಯ 15ನೇ ಅಧ್ಯಾಯದ 16ನೇ ಶ್ಲೋಕದಲ್ಲಿ ಹೇಳಿದೆ ಪೃಥ್ವೀ ತತ್ವದಿಂದ ನಿರ್ಮಿತವಾಗಿರುವ ಲೋಕ (ಬ್ರಹ್ಮನ 21 ಬ್ರಹ್ಮಾಂಡ ಹಾಗೂ ಪರಬ್ರಹ್ಮನ 7 ಶಂಖ ಬ್ರಹ್ಮಾಂಡ ಪೃಥ್ವೀ ತತ್ವದಿಂದ ಆಗಿರುವ ಕಾರಣ ಒಂದು ಲೋಕ ಎಂದೂ ಕರೆಯುತ್ತಾರೆ.) ದಲ್ಲಿ ಇಬ್ಬರು ಪ್ರಭುಗಳಿದ್ದಾರೆ. ಒಬ್ಬ "ಕ್ಷರ ಪುರುಷ" ಅರ್ಥಾತ್ ಬ್ರಹ್ಮ, ಮತ್ತೊಬ್ಬ ಅಕ್ಷರ ಪುರುಷ ಅರ್ಥಾತ್ ಪರಬ್ರಹ್ಮ ಈ ಇಬ್ಬರೂ ಪ್ರಭುಗಳ ಒಳಗೆ ಎಷ್ಟೆಲ್ಲಾ ಪ್ರಾಣಿಗಳಿವೆಯೋ, ಅವುಗಳ ಹಾಗೂ ಈ ಇಬ್ಬರು ಪ್ರಭುಗಳ ಶರೀರವು ನಾಶವಾಗುವಂತಹದಾಗಿದೆ. ಹಾಗೂ ಜೀವಾತ್ಮವನ್ನು ಅವಿನಾಶೀ ಎಂದು ಹೇಳಲಾಗಿದೆ.

ಗೀತೆಯ 15ನೇ ಅಧ್ಯಾಯದ 17ನೇ ಶ್ಲೋಕದಲ್ಲಿ ಹೇಳಿದೆ ವಾಸ್ತವದಲ್ಲಿ ಪುರುಷೋತ್ತಮ ಅರ್ಥಾತ್ ಸರ್ವಶಕ್ತ ಪರಮೇಶ್ವರನು ಮೇಲೆ ಹೇಳಿರುವ ಇಬ್ಬರಿಗಿಂತ ಭಿನ್ನವಾಗಿದ್ದಾನೆ. ಅವನೆ ಪರಮಾತ್ಮ ಎಂದು ಕರೆಯುತ್ತಾರೆ. ಅವನು ಮೂರು ಲೋಕಗಳಲ್ಲಿ ಪ್ರವೇಶ ಮಾಡಿ, ಎಲ್ಲರ ಧಾರಣೆ–ಪೋಷಣೆ ಮಾಡುತ್ತಾನೆ. ಅವನನ್ನು ವಾಸ್ತವದಲ್ಲಿ ಅವಿನಾಶಿ ಪರಮೇಶ್ವರ ಎಂದು ಕರೆಯುತ್ತಾರೆ. ಗೀತೆಯ 15ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಗೀತೆ ಜ್ಞಾನದಾತ (ಕ್ಷರ ಪುರುಷ–ಬ್ರಹ್ಮ) ತನ್ನ ಸ್ಥಿತಿಯನ್ನು ತಿಳಿಸುತ್ತಾ ಹೇಳುತ್ತಿದ್ದಾನೆ. ನನ್ನನ್ನು ಲೋಕವೇದ (ದಂತಕಥೆ) ದ ಆಧಾರದಿಂದ ಪುರುಷೋತ್ತಮ ಎಂದು ಕರೆಯುತ್ತಾರೆ. ಏಕೆಂದರೆ ನನ್ನ 21 ಬ್ರಹ್ಮಾಂಡಗಳಲ್ಲಿನ ಎಷ್ಟೆಲ್ಲಾ ಪ್ರಾಣಿಗಳು ನನ್ನ ಅಧೀನದಲ್ಲಿದೆ. ಅವು ಸ್ಥೂಲ ಶರೀರದಲ್ಲಿ ನಾಶವಾಗುವವು ಆಗಿವೆ. ಆದರೆ ಆತ್ಮ ರೂಪಿನಲ್ಲಿ ಅವಿನಾಶಿಯಾಗಿವೆ ನಾನು ಅವುಗಳಿಗಿಂತ ಉತ್ತಮವಾಗಿದ್ದೇನೆ. (ಶ್ರೇಷ್ಠ) ಆದ್ದರಿಂದ ನಾನು ಲೋಕವೇದದ ಆಧಾರದಲ್ಲಿ ಪುರುಷೋತ್ತಮನೆಂದೇ ಪ್ರಸಿದ್ಧವಾಗಿರುವೆ ವಾಸ್ತವದಲ್ಲಿ ಪುರುಷೋತ್ತಮನು ಬೇರೆಯೇ ಪರಮೇಶ್ವರನಾಗಿದ್ದಾನೆ. ಇದನ್ನು ಗೀತೆಯ 15ನೇ ಅಧ್ಯಾಯದ 17ನೇ ಶ್ಲೋಕದಲ್ಲಿ ಹೇಳಿದೆ.

ಪ್ರಶ್ನೆ :– ಗೀತೆಯ 10ನೇ ಅಧ್ಯಾಯ 2 ಹಾಗೂ 3ನೇ ಶ್ಲೋಕಗಳಲ್ಲಿ ಹೇಳಿದೆ ನನ್ನ ಉತ್ಪತ್ತಿಯನ್ನು ಯಾರೂ ತಿಳಿದಿಲ್ಲ. ನನ್ನನ್ನು ಯಾರು ಅನಾದಿ, ಅಜನ್ಮ, ತತ್ವದಿಂದ ತಿಳಿಯುತ್ತಾರೋ ಅವರು ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ. ಇದರಿಂದ ದೃಢವಾಗುತ್ತದೆ. ಬ್ರಹ್ಮನಿಗೆ ಜನ್ಮವಿಲ್ಲ ಹಾಗೂ ಎಲ್ಲ ಪಾಪಗಳನ್ನು ನಾಶಮಾಡುತ್ತಾನೆ.

ಉತ್ತರ :– ಗೀತೆಯ 10ನೇ ಅಧ್ಯಾಯದ 2ನೇ ಶ್ಲೋಕದಲ್ಲಿ ಪುನಃ ಓದಿರಿ. ಅದರಲ್ಲಿ ಹೀಗೆ ಹೇಳಿದೆ ನನ್ನ ಉತ್ಪತ್ತಿಯನ್ನು ದೇವತೆಗಳಾಗಲಿ, ಮಹರ್ಷಿಗಳಾಗಲಿ ತಿಳಿದಿಲ್ಲ. ಏಕೆಂದರೆ ಅವರೆಲ್ಲಾ ನನ್ನಿಂದ ಉತ್ಪನ್ನವಾಗಿರುವವರು.

ಈ ಶ್ಲೋಕದಿಂದ ಸ್ವಯಂ ಸಿದ್ಧವಾಗಿದೆ. ಗೀತೆ ಜ್ಞಾನದಾತ ಪ್ರಭುವಿನ ಉತ್ಪತ್ತಿ, ಅರ್ಥಾತ್

ಜನ್ಮವಂತೂ ಆಗಿದೆ. ಆದರೆ ಕಾಲ (ಬ್ರಹ್ಮ) ನಿಂದ ಉತ್ಪನ್ನವಾದ ದೇವತೆಗಳು ಹಾಗೂ ಋಷಿಗಳಿಗೆ ತಿಳಿದಿಲ್ಲ. ಹೇಗೆ ತಂದೆಯ ಜನ್ಮದ ವಿಚಾರವನ್ನು ಮಕ್ಕಳು ತಿಳಿದಿರುವುದಿಲ್ಲವೋ ಹಾಗೆ. ಆದರೆ ತಂದೆಯ ತಂದೆಯವರು ಅಂದರೆ ತಾತಾ (ಅಜ್ಜ) ತಿಳಿಸುತ್ತಾರೆ. ಪೂರ್ಣ ಪರಮಾತ್ಮನು ಸ್ವಯಂ ಕಾಲನ ಲೋಕದಲ್ಲಿ ಪ್ರಕಟನಾಗಿ, ಬ್ರಹ್ಮನ ಉತ್ಪತ್ತಿಯ ವಿಷಯವನ್ನು ತಿಳಿಸಿದ್ದಾನೆ. ದಯವಿಟ್ಟು ಇದೇ ಪುಸ್ತಕದ (ಜ್ಞಾನಗಂಗಾ)ಲ್ಲಿನ 'ಸೃಷ್ಠಿರಚನೆ' ಭಾಗವನ್ನು ಓದಿರಿ

ಗೀತೆಯ 10ನೇ ಅಧ್ಯಾಯದ 3ನೇ ಶ್ಲೋಕದ ಅನುವಾದವು ತಪ್ಪಾಗಿ ಮಾಡಿದ್ದಾರೆ. ಹೇಗೆಂದರೆ ಗೀತೆಯ 2ನೇ ಅಧ್ಯಾಯದ 12ನೇ ಶ್ಲೋಕ ಹಾಗೂ 4ನೇ ಅಧ್ಯಾಯದ 5ನೇ ಶ್ಲೋಕದಲ್ಲಿ, ತನ್ನನ್ನು ತಾನು ನಾಶ ಹೊಂದುವವನು. ಹಾಗೂ ಪದೆಪದೇ ಜನ್ಮ–ಮೃತ್ಯವನ್ನು ಹೊಂದಿದವನೆಂದು ಹೇಳಲಾಗಿದೆ. 2ನೇ ಅಧ್ಯಾಯದ 17ನೇ ಶ್ಲೋಕ, ಅಧ್ಯಾಯ 8ರ ಶ್ಲೋಕ 3, 8 ರಿಂದ 10 ಹಾಗೂ 20. ಅಧ್ಯಾಯದ 15ರಲ್ಲಿನ 4, 16–17ನೇ ಶ್ಲೋಕಗಳಲ್ಲಿ ಬೇರೆ ಅವಿನಾಶಿ ಅನಾದಿ ಪರಮಾತ್ಮನ ವಿಷಯವನ್ನು ಹೇಳಲಾಗಿದೆ.

ಆದ್ದರಿಂದ ಗೀತೆಯ 10ನೇ ಅಧ್ಯಾಯದ 3ನೇ ಶ್ಲೋಕದಲ್ಲಿ ಹೇಳಿದೆ– ಯಾರು ಮನುಷ್ಯರಲ್ಲಿ ವಿದ್ವಾನ್ ಅರ್ಥಾತ್ ತತ್ವದರ್ಶಿ ಸಂತ ನನ್ನನ್ನು ಹಾಗೂ ಆ, ಅನಾದಿಯ ವಾಸ್ತವದಲ್ಲಿ ಜನ್ಮರಹಿತ, ಎಲ್ಲ ಲೋಕಗಳ ಮಹೇಶ್ವರನನ್ನು ತತ್ವದಿಂದ ತಿಳಿಯುತ್ತಾನೆ. ಆ ತತ್ವದರ್ಶಿ ಸಂತನು ಸತ್ಯಜ್ಞಾನದ ಉಚ್ಚಾರಣೆ ಮಾಡುತ್ತಾನೆ. ಅವನಿಂದ ಸತ್ಯ ಸಾಧನೆಯನ್ನು ಮಾಡಿ, ಪಾಪಗಳಿಂದ ಮುಕ್ತರಾಗುತ್ತಾರೆ. ಇದರ ಪ್ರಮಾಣವು, ಗೀತೆಯ 4ನೇ ಅಧ್ಯಾಯದ 34ನೇ ಶ್ಲೋಕದಲ್ಲಿ ಸಹ ಇದೆ. ದಯವಿಟ್ಟು ಗೀತೆಯ 10ನೇ ಅಧ್ಯಾಯದ 3ನೇ ಶ್ಲೋಕದ ಯಥಾರ್ಥ ಅನುವಾದವನ್ನು ಓದಿರಿ

<u>ಗೀತೆಯ 10ನೇ ಅಧ್ಯಾಯದ 2ನೇ ಶ್ಲೋಕ.</u>

ನ್, ಮೆ, ವಿದುಃ ಸುರಗಣಾಃ, ಪ್ರಭವಮ್, ನ ಮಹರ್ಷಯಃ
ಅಹಮ್, ಆದಿಃ, ಹಿ, ದೇವಾನಾಮ್, ಮಹರ್ಷಿಣಾಮ್, ಚ, ಸರ್ವಶಃ ॥

**ಅನುವಾದ :–** (ಮೆ) ನನ್ನ (ಪ್ರಭವಮ್) ಉತ್ಪತ್ತಿಯನ್ನು (ನ) ಸುರಗಣಾಃ) ದೇವರುಗಳು ತಿಳಿದಿಲ್ಲ. ( ನ ಮಹರ್ಷಯಃ) ವಿದುಃ) ಮಹರ್ಷಿಗಳೂ ತಿಳಿದಿಲ್ಲ. (ಹಿ) ಏಕೆಂದರೆ (ಅಹಮ್) ನಾನೇ (ಸರ್ವಶಃ) ಎಲ್ಲ ಪ್ರಕಾರಗಳಿಂದ (ದೇವಾನಾಮ್) ದೇವರುಗಳ (ಚ) ಮತ್ತು (ಮಹರ್ಷಿಣಾಮ್) ಮಹರ್ಷಿಗಳ (ಆದಿಃ) ಆದಿ ಅರ್ಥಾತ್ ಉತ್ಪತ್ತಿಗೆ ಕಾರಣನಾಗಿದ್ದೇನೆ.

<u>ಗೀತೆಯ 10ನೇ ಅಧ್ಯಾಯದ 3ನೇ ಶ್ಲೋಕ.</u>

ಯಃ, ಮಾಮ್, ಅಜಮ್, ಅನಾದಿಮ, ಚ, ವೇತ್ತಿ, ಲೋಕ ಮಹೇಶ್ವರಮ್, ಅಸಮ್ಮೂಢಃ,
ಸಃ, ಮರ್ತ್ಸೇಷು, ಸರ್ವ ಪಾಪೈಃ, ಪ್ರಮುಚ್ಯತೆ॥

**ಅನುವಾದ :–** (ಯಃ) ಯಾವ ವಿದ್ವಾನ್ ವ್ಯಕ್ತಿಯು (ಮಾಮ್) ನನ್ನನ್ನು (ಚ) ಹಾಗೂ (ಅನಾದಿಮ್) ಸದಾ ಇರುವಂತವನೂ, ಅರ್ಥಾತ್ ಪುರಾತನ (ಅಜಮ್) ಜನ್ಮತಾಳದವನು (ಲೋಕ ಮಹೇಶ್ವರಮ್) ಸಕಲ ಲೋಕಗಳ ಮಹಾನ್ ಈಶ್ವರ ಅರ್ಥಾತ್ ಸರ್ವೋಚ್ಚ ಪರಮೇಶ್ವರನನ್ನು (ವೇತ್ತಿ) ತಿಳಿಯುತ್ತಾನೋ (ಸಃ) ಅವನು (ಮರ್ತ್ಸೇಷು) ಶಾಸ್ತ್ರಗಳನ್ನು ಸರಿಯಾಗಿ ತಿಳಿದವನೂ, ಅರ್ಥಾತ್ ವೇದಗಳ ಪ್ರಕಾರ ಜ್ಞಾನವನ್ನು ಹೊಂದಿರುವವನೂ (ಅಸಮ್ಮೂಢಃ) ಅರ್ಥಾತ್ ತತ್ವದರ್ಶಿಯಾದ ವಿದ್ವಾಂಸನೂ (ಸರ್ವಪಾಪೈಃ) ಸಂಪೂರ್ಣ ಪಾಪಗಳನ್ನು (ಪ್ರಮುಚ್ಯತೆ) ವಿಸ್ತಾರವಾಗಿ ವರ್ಣನೆಗಳೊಂದಿಗೆ ಹೇಳುತ್ತಾನೋ ಅವನೇ, ಸೃಷ್ಠಿ ಜ್ಞಾನದ ಹಾಗೂ ಕರ್ಮಗಳ ಸರಿಯಾದ ವರ್ಣನೆ ಮಾಡುತ್ತಾನೆ. ಅಂದರೆ ಅಜ್ಞಾನದಿಂದ

ಪೂರ್ಣ ರೂಪವಾಗಿ ಮುಕ್ತ ಮಾಡುತ್ತಾನೆ. ಈ ಕಾರಣದಿಂದ, ತತ್ವದರ್ಶಿ ಸಂತನ ಮೂಲಕ ತಿಳಿದ, ವಾಸ್ತವಿಕ ಸಾಧನೆಯ ಆಧಾರದ ಮೇಲೆ ಭಕ್ತಿ ಮಾಡುವವನ ಸರ್ವ ಪಾಪಗಳು ನಷ್ಟವಾಗುತ್ತವೆ.

## "ಭಗವದ್ಗೀತೆಯ ಜ್ಞಾನದಾತ ಕಾಲಬ್ರಹ್ಮನ ಉತ್ಪತ್ತಿಯ ಸಂಕೇತ"

ಗೀತೆಯ 10ನೇ ಅಧ್ಯಾಯದ 2ನೇ ಶ್ಲೋಕದಲ್ಲಿ ಹೇಳಿದೆ ಅರ್ಜುನ ನನ್ನ ಉತ್ಪತ್ತಿ (ಜನ್ಮ)ಯನ್ನು, ದೇವರುಗಳಾಗಲಿ, ಮಹರ್ಷಿಗಳಾಗಲಿ ತಿಳಿದಿಲ್ಲ. ಏಕೆಂದರೆ, ಇವರೆಲ್ಲ ನನ್ನಿಂದಲೇ ಜನ್ಮತಾಳಿದ್ದಾರೆ. ಇದರಿಂದ ಸ್ವ ಸಿದ್ಧವಾಯಿತು. ಬ್ರಹ್ಮನ (ಕಾಲ) ಉತ್ಪತ್ತಿಯಂತೂ ಆಗಿದೆ. ಆದರೆ ದೇವರುಗಳಿಗೆ ಹಾಗೂ ಋಷಿಗಳಿಗೆ ತಿಳಿದಿಲ್ಲ. ಹೇಗೆ ತಂದೆಯ ಉತ್ಪತ್ತಿಯ ಬಗ್ಗೆ ಮಕ್ಕಳಿಗೆ ತಿಳಿದಿರುವುದು ಸಾಧ್ಯವಿಲ್ಲವೋ ಆದರೆ ತಾತಾ (ಅಜ್ಜ) ತಿಳಿದಿರುತ್ತಾರೆ. ಇದೇ ಪ್ರಕಾರ 21 ಬ್ರಹ್ಮಾಂಡದಲ್ಲಿ ಎಲ್ಲ ದೇವ ಋಷಿ ಮೊದಲಾದವರು ಜ್ಯೋತಿ ನಿರಂಜನ ಬ್ರಹ್ಮ ಅರ್ಥಾತ್ ಕಾಲ ಹಾಗೂ ಪ್ರಕೃತಿ (ದುರ್ಗಾ)ಯ ಸಂಯೋಗದಿಂದ ಉತ್ಪನ್ನರಾಗಿದ್ದಾರೆ. ಇದರಿಂದಲೇ ಹೇಳುತ್ತಿದ್ದಾರೆ ನನ್ನ ಉತ್ಪತ್ತಿಯನ್ನು 21 ಬ್ರಹ್ಮಾಂಡಗಳಲ್ಲಿ ಯಾರು ತಿಳಿದಿಲ್ಲ. ಏಕೆಂದರೆ ಈ ಸರ್ವರ ಉತ್ಪತ್ತಿ ನನ್ನಿಂದಲೇ ಆಗಿದೆ. ಕೇವಲ ಪೂರ್ಣ ಬ್ರಹ್ಮ ಮಾತ್ರ ಕಾಲ (ಬ್ರಹ್ಮ) ನ ಉತ್ಪತ್ತಿಯ ಬಗ್ಗೆ ತಿಳಿಸಲು ಸಾಧ್ಯವಾಗುತ್ತದೆ. ಏಕೆಂದರೆ ಬ್ರಹ್ಮನ (ಕಾಲ) ಉತ್ಪತ್ತಿ ಪರಮ ಅಕ್ಷರ ಬ್ರಹ್ಮ (ಪೂರ್ಣ ಬ್ರಹ್ಮ)ನಿಂದ ಆಗಿದೆ. ಇದರ ಪ್ರತ್ಯಕ್ಷ ಪ್ರಮಾಣ ಗೀತೆಯ 3ನೇ ಅಧ್ಯಾಯದ 14, 15ನೇ ಶ್ಲೋಕದಲ್ಲಿದೆ. ಗೀತೆಯ 10ನೇ ಅಧ್ಯಾಯದ 3ನೇ ಶ್ಲೋಕದಲ್ಲಿ ತತ್ವದರ್ಶಿ ಅರ್ಥಾತ್ ವಿದ್ವಾನ್ ವ್ಯಕ್ತಿಯು, ನನ್ನನ್ನು ಹಾಗೂ ಎಂದೂ ಜನ್ಮವನ್ನು ತಾಳದ ಸರ್ವಲೋಕಗಳ ಮಹೇಶ್ವರ ಅರ್ಥಾತ್ ಅವಿನಾಶಿ ಪರಮಾತ್ಮನನ್ನು ತಿಳಿದಿದ್ದಾನೆ. ಅವನು ಮೂರು ವೇದಗಳನ್ನು (ಋಗ್ವೇದ, ಸಾಮವೇದ, ಹಾಗೂ ಯಜುರ್ವೇದ) ತಿಳಿದಿದ್ದಾನೆ. ಅವನೇ ತತ್ವದರ್ಶಿ ಸಂತನಾಗಿದ್ದಾನೆ. ಅವನಿಂದ ತಿಳಿಸಲಾಗುವ ಭಕ್ತಿ ಮಾರ್ಗದಿಂದ, ಸಾಧನೆ ಮಾಡಿದರೆ, ಎಲ್ಲ ಪಾಪಗಳು ನಷ್ಟವಾಗುತ್ತವೆ. ಗೀತೆಯ 15ನೇ ಅಧ್ಯಾಯದ 16, 17, 18ನೇ ಶ್ಲೋಕಗಳಲ್ಲಿ ಹೀಗೆ ವರ್ಣನೆ ಇದೆ ಪೂರ್ಣ ಪರಮಾತ್ಮ ಅವಿನಾಶಿಯು ಬೇರೆಯೇ ಇರುವನು. ಅವನು ಮೂರು ಲೋಕಗಳಲ್ಲಿ ಪ್ರವೇಶ ಮಾಡಿ, ಎಲ್ಲರ ಧಾರಣೆ–ಪೋಷಣೆ ಮಾಡುತ್ತಾನೆ. ನನ್ನನ್ನು (ಕಾಲ) ಈ ಕಾರಣದಿಂದ ಪುರುಷೋತ್ತಮ ಎನ್ನುತ್ತಾರೆ. ಏಕೆಂದರೆ ನಾನು 21 ಬ್ರಹ್ಮಾಂಡಗಳಲ್ಲಿನ, ನನ್ನ ಅಧೀನದ ಸ್ಥೂಲ ಶರೀರದಲ್ಲಿ, ನಾಶವಾಗುವ ಪ್ರಾಣಿಗಳ ಹಾಗೂ ಅವಿನಾಶಿ ಜೀವಾತ್ಮಗಳಿಗಿಂತ ಉತ್ತಮನಾಗಿರುವೆ ಆದ್ದರಿಂದ ನನ್ನನ್ನು ಲೋಕವೇದ ಅರ್ಥಾತ್ ದಂತ ಕಥೆಗಳ ಆಧಾರದಿಂದ "ಪುರುಷೋತ್ತಮ" ಎನ್ನುತ್ತಾರೆ. ಆದರೆ ವಾಸ್ತವದಲ್ಲಿ ನಾನು ಅವಿನಾಶಿ ಅಥವಾ ಪಾಲನ ಕರ್ತ ನಾಗಿಲ್ಲ. ಗೀತೆಯ 3ನೇ ಅಧ್ಯಾಯದ 14–15ನೇ ಶ್ಲೋಕಗಳಲ್ಲಿ ಹೇಳಿದೆ ಎಲ್ಲ ಜೀವಿಗಳು ಅನ್ನದಿಂದ ಉತ್ಪನ್ನವಾಗುತ್ತವೆ, ಅನ್ನ ವರ್ಷದಿಂದ ಆಗುತ್ತದೆ, ವರ್ಷ (ಮಳೆ) ಯಜ್ಞದಿಂದ ಆಗುತ್ತದೆ, ಯಜ್ಞವು ಶುಭ ಕರ್ಮಗಳಿಂದ, ಕರ್ಮಗಳು ಬ್ರಹ್ಮನಿಂದ ಉತ್ಪನ್ನವಾಗಿದೆ, ಬ್ರಹ್ಮ ಅವಿನಾಶಿ ಪರಮಾತ್ಮನಿಂದ ಉತ್ಪನ್ನವಾಗಿದ್ದಾನೆ. ಅದೇ ಅವಿನಾಶಿ ಸರ್ವವ್ಯಾಪಕ ಪರಮಾತ್ಮನೇ, ಯಜ್ಞಗಳಲ್ಲಿ ಪ್ರತಿಷ್ಠಿತನಾಗಿದ್ದಾನೆ. ಯಜ್ಞಗಳಲ್ಲಿ ಪೂಜ್ಯತೆ ಇದೆ. ಅವನೇ ಯಜ್ಞಗಳ ಫಲಗಳನ್ನು ಕೊಡುತ್ತಾನೆ. ವಾಸ್ತವದಲ್ಲಿ ಅಧಿಯಜ್ಞವು ಅವನೇ ಆಗಿರುವನು.

ಪುನಃ ಗೀತೆಯ 10ನೇ ಅಧ್ಯಾಯದ 2ನೇ ಶ್ಲೋಕದಲ್ಲಿ ಹೇಳಿದೆ ನನ್ನ ಉತ್ಪತ್ತಿಯನ್ನು (ಪ್ರಭವಮ್) ಯಾರೂ ತಿಳಿದಿಲ್ಲ.

ಇದರಿಂದ ಸಿದ್ಧವಾಗಿದೆ ಕಾಲ (ಬ್ರಹ್ಮ)ನೂ ಉತ್ಪನ್ನವಾಗಿರುವವನು. ಆದ್ದರಿಂದ ಇವನು

**ಕೆಲವು ಕಡೆ ಆಕಾರದಲ್ಲಿಯೂ ಇದ್ದಾನೆ. ಇಲ್ಲವಾಗಿದ್ದರೆ ಶ್ರೀಕೃಷ್ಣನು, ಅರ್ಜುನನ ಮುಂದೆಯೇ ನಿಂತಿದ್ದನು. ಅವನಂತೂ ಹೇಳಲೂ ಸಾಧ್ಯವಾಗುತ್ತಿರಲಿಲ್ಲ ನಾನು ಅಜಮ್ (ಅಜನ್ಮಾ) ನಾಗಿರುವೆ ಎಂದು. ಈ ಕಾಲ (ಅದೃಶ್ಯ ಬ್ರಹ್ಮ)ನೇ, ಶ್ರೀ ಕೃಷ್ಣನ ಶರೀರದಲ್ಲಿ ಜೀವಸ್ಥ (ಪ್ರೇತ ರೂಪಿನಲ್ಲಿ) ರೂಪದಿಂದ ಹೇಳಿ, ತನ್ನ ಪ್ರತಿಷ್ಠೆ (ಸ್ಥಿತಿ)ಯ, ಸರಿಯಾದ ತಿಳುವಳಿಕೆಯನ್ನು, ಗೀತೆ ರೂಪದಲ್ಲಿಕೊಟ್ಟು ಹೋದನು.**

**ಮೇಲಿನ ವಿವರಣೆಯಿಂದ, ಗೀತೆಯಲ್ಲಿ ಸಿದ್ಧವಾಗಿದೆ ಏನೆಂದರೆ ಬ್ರಹ್ಮನ ಉತ್ಪತ್ತಿಯು, ಪೂರ್ಣ ಬ್ರಹ್ಮನಿಂದ ಆಗಿದೆ. ಇದೇ ಪ್ರಮಾಣವು, ಅಥರ್ವಣವೇದದ 4ನೇ ಕಾಂಡದ 1ನೇ ಅನುವಾಕದ 3ನೇ ಮಂತ್ರದಲ್ಲಿ ಸಹ ಇದೆ. ದಯವಿಟ್ಟು ಕೆಳಗಿನ ಲೇಖನ ಓದಿರಿ.**

**ಕಾಂಡ–4 ಅನುವಾಕ 1, ಮಂತ್ರ 3 ರಲ್ಲಿ.**

ಪ್ರಯೋ ಜಜ್ಞೆ ವಿದ್ವಾನಸ್ಯ ಬಂಧುರ್ವಿಶ್ವಾ ದೇವಾನಾಂ ಜನಿಮಾ ವಿವಕ್ತಿ ।
ಬ್ರಹ್ಮ ಬ್ರಹ್ಮಣ ಉಜ್ಜಭಾರ ಮಧ್ಯಾನ್ನೀಚೈರುಚ್ಚೈಃ ಸ್ವಧಾ ಅಭಿ ಪ್ರ ತಸ್ಥೌ ॥ 3 ॥

**ಪ್ರ–ಯಃ–ಜಜ್ಞೆ–ವಿದ್ವಾನಸ್ಯ–ಬಂಧುಃ–ವಿಶ್ವಾ–ದೇವಾನಾಮ್–ಜನಿಮಾ ವಿವಕ್ತಿ–ಬ್ರಹ್ಮಃ–ಬ್ರಹ್ಮಣಃ–ಉಜ್ಜಭಾರ–ಮಧ್ಯಾತ್–ನಿಚೈಃ–ಉಚ್ಚೈಃ –ಸ್ವಧಾ–ಅಭಿಃ–ಪ್ರತಸ್ಥೌ**

ಅನುವಾದ :– (ಪ್ರ) ಸರ್ವ ಪ್ರಥಮ (ದೇವಾನಾಮ್) ದೇವರುಗಳು ಹಾಗೂ ಬ್ರಹ್ಮಾಂಡಗಳ (ಜಜ್ಞೆ) ಉತ್ಪತ್ತಿಯ ಜ್ಞಾನವು (ವಿದ್ವಾನಸ್ಯ) ಜಿಜ್ಞಾಸು ಭಕ್ತರ (ಯಃ) ಯಾರು (ಬಂಧುಃ) ವಾಸ್ತವಿಕ ಜೊತೆಗಾರ ಅರ್ಥಾತ್ ಪೂರ್ಣ ಪರಮಾತ್ಮನೇ ತನ್ನ ನಿಜ ಸೇವಕನನ್ನು (ಜನಿಮಾ) ಎಲ್ಲರ ಉತ್ಪತ್ತಿ ಕರ್ತ. ತನ್ನ ಮೂಲಕ ಸೃಷ್ಠಿಯಾಗಿರುವವರನ್ನು (ವಿವಕ್ತಿ) ತಾನೇ ಸರಿಯಾಗಿ ವಿಸ್ತಾರ ಪೂರ್ವಕವಾಗಿ ತಿಳಿಸುತ್ತಾನೆ. ಏನೆಂದರೆ (ಬ್ರಹ್ಮಣಃ) ಪೂರ್ಣ ಪರಮಾತ್ಮನು (ಮಧ್ಯಾತ್) ತನ್ನ ಮಧ್ಯದಿಂದ ಅರ್ಥಾತ್ ಶಬ್ದ ಶಕ್ತಿಯಿಂದ (ಬ್ರಹ್ಮಃ) ಬ್ರಹ್ಮ–"ಕ್ಷರ ಪುರುಷ" ಅರ್ಥಾತ್ ಕಾಲನನ್ನು (ಉಜ್ಜಭಾರ) ಉತ್ಪನ್ನ ಮಾಡಿ (ವಿಶ್ವಾ) ಸಂಪೂರ್ಣ ಪ್ರಪಂಚವನ್ನು ಅರ್ಥಾತ್ ಸರ್ವ ಲೋಕಗಳನ್ನು (ಉಚ್ಚೈಃ) ಮೇಲಿನ ಸತ್ಯಲೋಕ ಮೊದಲಾದ (ನಿಚೈಃ) ಕೆಳಗಿನ ಪರಬ್ರಹ್ಮ ಹಾಗೂ ಬ್ರಹ್ಮನ ಸರ್ವ ಬ್ರಹ್ಮಾಂಡ (ಸ್ವಧಾ) ಗಳನ್ನು, ತನ್ನ ಧಾರಣೆ ಮಾಡುವ (ಅಭಿಃ) ಆಕರ್ಷಣ ಶಕ್ತಿಯಿಂದ (ಪ್ರತಸ್ಥೌ) ಎರಡನ್ನೂ ಉತ್ತಮ ರೀತಿಯಲ್ಲಿ ಸ್ಥಿರಗೊಳಿಸಿದೆ.

**ಭಾವಾರ್ಥ :– ಪೂರ್ಣ ಪರಮಾತ್ಮನು, ತನ್ನಿಂದ ಸೃಷ್ಠಿ ರಚನೆಯಾಗಿರುವ ಜ್ಞಾನ ಹಾಗೂ ಎಲ್ಲ ಆತ್ಮಗಳ ಉತ್ಪತ್ತಿಯ ಜ್ಞಾನವನ್ನು, ತನ್ನ ನಿಜ ದಾಸನಿಗೆ ತಾನೆ ಸ್ವತಃ ಸರಿಯಾಗಿ ತಿಳಿಸಿದ್ದಾನೆ. ಏನೆಂದರೆ ಪೂರ್ಣ ಪರಮಾತ್ಮನು, ತನ್ನ ಮಧ್ಯ ಅರ್ಥಾತ್ ತನ್ನ ಶರೀರದಿಂದ, ತನ್ನ ಶಬ್ದ ಶಕ್ತಿಯ ಮೂಲಕ ಬ್ರಹ್ಮ (ಕ್ಷರ ಪುರುಷ–ಕಾಲ)ನ ಉತ್ಪತ್ತಿ ಮಾಡಿದನು.**

**ಹಾಗೂ ಸರ್ವ ಬ್ರಹ್ಮಾಂಡಗಳನ್ನು, ಮೇಲಿನ ಸತ್ಯಲೋಕ, ಅಲಖ್‌ಲೋಕ, ಅಗಮ್‌ಲೋಕ, ಅನಾಮಿಲೋಕ ಮೊದಲಾದ ಹಾಗೂ ಕೆಳಗಿನ ಪರಬ್ರಹ್ಮನ 7 ಶಂಖ ಬ್ರಹ್ಮಾಂಡಗಳನ್ನು ಹಾಗೂ ಬ್ರಹ್ಮನ 21 ಬ್ರಹ್ಮಾಂಡಗಳನ್ನು ತನ್ನ ಧಾರಣೆ ಮಾಡುವ ಆಕರ್ಷಣ ಶಕ್ತಿಯಿಂದ ನಿಲ್ಲಿಸಿರುತ್ತಾರೆ. ಹೇಗೆ ಪೂರ್ಣ ಪರಮಾತ್ಮ ಕಬೀರ್ ಪರಮೇಶ್ವರನು (ಕವಿರ್ದೇವ) ತನ್ನ ನಿಜ ಸೇವಕ ಅರ್ಥಾತ್ ಸಖಾ ಶ್ರೀ ಧರ್ಮದಾಸರು, ಶ್ರೀ ಗರೀಬ್‌ದಾಸರು ಮೊದಲಾದವರಿಗೆ ತನ್ನಿಂದ ರಚಿಸಲ್ಪಟ್ಟ ಸೃಷ್ಠಿಯ ಜ್ಞಾನವನ್ನು ತಾವೇ ತಿಳಿಸಿದರೋ ಹಾಗೆ ಮೇಲಿನ ವೇದ ಮಂತ್ರವೂ ಇದನ್ನೇ ಸಮರ್ಥನೆ ಮಾಡುತ್ತಿದೆ.**

**ಕಾಂಡ 4 ಅನುವಾಕ 1, ಮಂತ್ರ 7.**

ಯೋಥರ್ವಾಣಂ ಪಿತರಂ ದೇವ ಬಂಧುಂ ಬೃಹಸ್ಪತಿಂ ನಮಸಾವ–ಚ ಗಚ್ಛಾತ್ ।
ತ್ವಂ ವಿಶ್ವೇಷಾಂ ಜನಿತಾ ಯಥಾಸಃ ಕವಿರ್ದೇವೋ ನ ದಭಾಯತ್ ಸ್ವಧಾವಾನ್ ॥ 7 ॥

**ಯಃ–ಅಥರ್ವಾಣಂ–ಪಿತರಂ–ದೇವ ಬಂಧುಂ–ಬೃಹಸ್ಪತಿಂ–ನಮಸಾ–ಅವಚ–ಗಚ್ಛಾಟ್–ತ್ವಮ್–ವಿಶ್ವೇಷಾಮ್–ಜನಿತಾ–ಯಥಾ– ಸಃ–ಕವಿರ್ದೇವಃ–ನ ದಭಾಯತ್–ಸ್ವಧಾವಾನ್.**

**ಅನುವಾದ** :– (ಯಃ) ಯಾರು (ಅರ್ಥರ್ವಾಣಂ) ಅಚಲ ಅಥವಾ ಅವಿನಾಶಿ (ಪಿತರಂ) ಜಗತ್ತಿನ ತಂದೆ (ದೇವ ಬಂಧುಂ) ಭಕ್ತರ ವಾಸ್ತವಿಕ ಜೊತೆಗಾರ, ಆತ್ಮಧಾರ (ಬೃಹಸ್ಪತಿಮ್) ಜಗದ್ಗುರು (ಚ) ಹಾಗೂ (ನಮಸಾ) ವಿನಮ್ರಪೂಜಾರಿ ಅಥವಾ ವಿಧಿವತ್ ಸಾಧಕನು (ಅವ) ಸುರಕ್ಷೆಯೊಂದಿಗೆ (ಗಚ್ಛಾಟ್) ಸತ್ಯಲೋಕಕ್ಕೆ ಹೋಗಿರುವವನು (ವಿಶ್ವೇಷಾಮ್) ಸರ್ವ ಬ್ರಹ್ಮಾಂಡಗಳ (ಜನಿತಾ) ರಚನೆ ಮಾಡುವವನು. ಜಗದಂಬಾ ಅರ್ಥಾತ್ ತಾಯಿಯ ಗುಣಗಳನ್ನು ಹೊಂದಿರುವ (ನ ದಭಾಯತ್) ಕಾಲನಂತೆ ಮೋಸವನ್ನು ಮಾಡದೆ ಇರುವ (ಸ್ವಧಾವಾನ್) ಸ್ವಭಾವ ಅರ್ಥಾತ್ ಗುಣಗಳುಳ್ಳವನು (ಯಥಾ) ಹೇಗೆ ಇದೆಯೋ ಹಾಗೆ ಅಂದರೆ, ಇದ್ದಂತೆಯೇ (ಸಃ) ಅವರು (ತ್ವಮ್) ತಾವೋ (ಕವಿರ್ದೇವಃ ಕವಿರ್–ದೇವಃ) ಕವಿರ್ದೇವರಾಗಿದ್ದಾರೆ. ಭಾಷಾ ಭೇದದಿಂದ ಇವರನ್ನು ಕಬೀರ್ ಪರಮೇಶ್ವರ ಎಂದೂ ಕರೆಯುತ್ತಾರೆ.

ಭಾವಾರ್ಥ :– **ಈ ಮಂತ್ರದಿಂದ ಸ್ಪಷ್ಟವಾಗುವ ವಿಚಾರವೇನೆಂದರೆ, ಆ ಪರಮೇಶ್ವರನ ಹೆಸರು ಕವಿರ್ದೇವ ಅರ್ಥಾತ್ ಕಬೀರ್ ಪರಮೇಶ್ವರ ಎಂದಾಗಿದೆ. ಅವರೇ ಸಕಲ ರಚನೆಗಳನ್ನೂ ಮಾಡಿರುತ್ತಾರೆ.**

**ಯಾವ ಪರಮೇಶ್ವರನು ಅಚಲ ಅರ್ಥಾತ್ ವಾಸ್ತವದಲ್ಲಿ ಅವಿನಾಶಿ (ಗೀತೆಯ 15ನೇ ಅಧ್ಯಾಯದ 16–17ನೇ ಶ್ಲೋಕಗಳಲ್ಲಿ ಸಹ ಸಾಕ್ಷಿ ಇದೆ) ಜಗದ್ಗುರು ಆತ್ಮಾಧಾರ, ಯಾರು ಪೂರ್ಣ ಮುಕ್ತರಾಗಿ ಸತ್ಯಲೋಕಕ್ಕೆ ಹೋಗುತ್ತಾರೋ, ಅವರನ್ನು ಸತ್ಯಲೋಕಕ್ಕೆ ಕರೆದುಕೊಂಡು ಹೋಗುವವರು, ಸರ್ವ ಬ್ರಹ್ಮಾಂಡಗಳ ರಚನೆಕಾರರು, ಕಾಲ (ಬ್ರಹ್ಮ) ನಂತೆ ಮೋಸ ಮಾಡದವರು, ಅವರೇ ಹೇಗಿದೆಯೋ ಹಾಗೆ ಸ್ವತಃ ಕವಿರ್ದೇವ ಅರ್ಥಾತ್ ಕಬೀರ್ ಪ್ರಭುವೇ ಆಗಿರುವರು. ಇವರೇ ಪರಮೇಶ್ವರರು, ಸಕಲ ಬ್ರಹ್ಮಾಂಡಗಳನ್ನು ಹಾಗೂ ಪ್ರಾಣಿಗಳನ್ನು ತಮ್ಮ ಶಬ್ದ ಶಕ್ತಿಯಿಂದ ಉತ್ಪನ್ನ ಮಾಡುವ ಕಾರಣ (ಜನಿತಾ) ತಾಯಿ ಎಂದೂ ಸಹ ಕರೆಯಲಾಗುತ್ತದೆ. ಹಾಗೂ (ಪಿತರಮ್) ತಂದೆ ಎಂದೂ (ಬಂಧು) ಸೋದರನೂ ಸಹ ವಾಸ್ತವದಲ್ಲಿ ಇವರೇ ಆಗಿರುವರು. (ದೇವ) ದೇವರೂ ಸಹ ಇವರೇ ಆಗಿರುವರು. ಆದ್ದರಿಂದಲೇ ಇದೇ ಕವಿರ್ದೇವರ (ಕಬೀರ್ ಪರಮೇಶ್ವರರ) ಸ್ತುತಿಯನ್ನು ಮಾಡುತ್ತಾ ಇದ್ದೇನೆ. "ತ್ವಮೇವ ಮಾತಾ ಚ ಪಿತಾ ತ್ವಮೇವ, ತ್ವಮೇವ ಬಂಧು ಚ ಸಖಾ ತ್ವಮೇವ, ತ್ವಮೇವ ಸರ್ವ ಮಮ್ ದೇವ ದೇವ ॥" ಇದೇ ಪರಮೇಶ್ವರನ ಮಹಿಮೆಯು, ಪವಿತ್ರ ಋಗ್ವೇದದ 1ನೇ ಮಂಡಲದ 24ನೇ ಸೂಕ್ತಿಯಲ್ಲಿ, ವಿಸ್ತಾರವಾಗಿ ವಿವರಣೆ ಇದೆ. ಪ್ರಶ್ನೆ: ವೇದಗಳಲ್ಲಿ ಕವೀರ್, ಅರ್ಥಾತ್ ಕಬೀರ್ ನಾಮದ ವಿವರಣೆಯು ಹೇಗೆ ಬಂದಿತು? ವೇದಗಳು ಸೃಷ್ಠಿಯ ಆರಂಭದಲ್ಲಿ ಪ್ರಾಪ್ತಿಯಾಗಿದ್ದವು. ಕವಿರ್ದೇವ (ಕಬೀರ ಪರಮೇಶ್ವರ)ರು ಇಸವಿ 1398ರಲ್ಲಿ ಉತ್ಪನ್ನರಾದವರಲ್ಲವೆ?**

ಉತ್ತರ :– **ಪೂರ್ಣ ಪರಮಾತ್ಮನ ವಾಸ್ತವಿಕ ಹೆಸರು 'ಕವಿರ್ದೇವ' ಎಂಬುದು, ಹಾಗೂ ಉಪಮಾತ್ಮಕವಾದ ಹೆಸರುಗಳು ಸತ್ಯಪುರುಷ ಪರಮ ಅಕ್ಷರ ಬ್ರಹ್ಮ, ಪೂರ್ಣ ಬ್ರಹ್ಮ ಮೊದಲಾದವುಗಳಾಗಿವೆ. ಹೇಗೆ ದೇಶದ ಪ್ರಧಾನ ಮಂತ್ರಿಯ ಶಾರೀರಿಕ ಹೆಸರು ಬೇರೆಯಿದ್ದು,**

ಪ್ರಧಾನಮಂತ್ರಿ, ಪ್ರೈಮಿನಿಷ್ಟರ್ ಮುಂತಾದ ಪದವಿಯ ಹೆಸರುಗಳಿವೆಯೋ ಹಾಗೆ ಈ ಪೂರ್ಣ ಪರಮಾತ್ಮ ಕವಿರ್ದೇವರೇ ನಾಮಾಂತರದಿಂದ ನಾಲ್ಕೂ ಯುಗಗಳಲ್ಲೂ ಬಂದಿದ್ದಾರೆ, ಸೃಷ್ಟಿ ಹಾಗೂ ವೇದಗಳ ರಚನೆಗೂ ಪೂರ್ವದಲ್ಲಿ ಸಹ ಅನಾಮಿ (ಅನಾಮಯ) ಲೋಕದಲ್ಲಿ ಮಾನವ ಸದೃಶ್ಯ ಶರೀರದಿಂದ ವಿದ್ಯಮಾನರಾಗಿದ್ದರು. ಅದೇ ಕವಿರ್ದೇವರು ಪುನಃ ಸತ್ಯಲೋಕದ ರಚನೆಮಾಡಿ, ಸತ್ಯಲೋಕದಲ್ಲಿ ವಿರಾಜಮಾನರಾದರು. ಅದಾದ ನಂತರ ಪರಬ್ರಹ್ಮ ಹಾಗೂ ಬ್ರಹ್ಮನ ಸರ್ವ ಲೋಕಗಳನ್ನು ಹಾಗೂ ವೇದಗಳ ರಚನೆಯನ್ನು ಮಾಡಿದರು. ಆದ್ದರಿಂದಲೇ ವೇದಗಳಲ್ಲಿ ಕವಿರ್ದೇವರ ವಿವರಣೆ ಇದೆ.

## "ಮಂಡೋದರಿ ವಿಭೀಷಣರು ಕಬೀರ್ ಪರಮೇಶ್ವರರಲ್ಲಿ ಶರಣಾದದ್ದು"

ಪರಮೇಶ್ವರ ಮುನೀಂದ್ರರು ಅನಲ್ ಅರ್ಥಾತ್ 'ನಲ್' ಹಾಗೂ ಅನೀಲ್ ಅರ್ಥಾತ್ 'ನೀಲ್' ರನ್ನು ಶರಣು ಪಡೆದ ನಂತರ, ಶ್ರೀಲಂಕಾಕ್ಕೆ ಹೋದರು. ಅಲ್ಲಿ ಚಂದ್ರವಿಜಯ ಎಂಬ ಪರಮ ಭಕ್ತನು ವಾಸವಿದ್ದ ಅವನ ಪರಿವಾರದಲ್ಲಿ 16 ಪುಣ್ಯ ಸದಸ್ಯರಿದ್ದರು. ಅವರು ಭಾಟ ಜಾತಿಯಲ್ಲಿ ಹುಟ್ಟಿ ಪುಣ್ಯಕರ್ಮ ಮಾಡಿದ ಪ್ರಾಣಿಗಳಾಗಿದ್ದರು. ಪರಮೇಶ್ವರ ಮುನೀಂದ್ರರಿಂದ (ಕವಿರ್ದೇವ) ನಾಮೋಪದೇಶ ಪಡೆದು ಕೊಂಡಿದ್ದರು. ಪರಮೇಶ್ವರ ಮುನೀಂದ್ರರ ಉಪದೇಶ ಕೇಳಿ ನಾಮೋಪದೇಶವನ್ನು ಪಡೆದುಕೊಂಡಿದ್ದರು. ಪರಮ ಭಕ್ತನಾದ ಚಂದ್ರ ವಿಜಯನ ಪತ್ನಿ ಭಕ್ತಿಮತಿ ಕರ್ಮವತಿ, ಅವಳು ಲಂಕೆಯ ರಾಜ ರಾವಣನ ಮಡದಿ ಮಂಡೋದರಿಯ ಹತ್ತಿರ ಸೇವಕಿಯಾಗಿದ್ದಳು. ರಾಣಿ ಮಂಡೋದರಿಗೆ ಸಂತೋಷವುಂಟು ಮಾಡಲು, ವಿನೋದದ ಮಾತುಗಳನ್ನು ಆಡುತ್ತಿದ್ದಳು. ಇದರಿಂದ ರಾಣಿಯು ಅವಳ ಹಾಸ್ಯ ವಿನೋದದ ನಗೆ ಚಟಾಕಿಯ ಮಾತುಗಳನ್ನು ಕೇಳುತ್ತಾ ನಗುತ್ತಿದ್ದಳು. ಉತ್ತಮ ಮನರಂಜನೆಯಾಗುತ್ತಿತ್ತು. ಭಕ್ತ ಚಂದ್ರ ವಿಜಯನು, ರಾಜಾ ರಾವಣನ ದರಬಾರಿನಲ್ಲಿ ಸೇವಕನಾಗಿದ್ದ. ರಾಜನನ್ನು ಹಾಡಿ-ಹೊಗಳುತ್ತಾ ಅವನ ಹಿರಿಮೆಯಗಾನವನ್ನು ಹೇಳುತ್ತಾ ರಾಜನನ್ನು ಪ್ರಸನ್ನಗೊಳಿಸುತ್ತಿದ್ದನು.

ಭಕ್ತ ಚಂದ್ರವಿಜಯನ ಪತ್ನಿ ಭಕ್ತಿಮತಿ ಕರ್ಮವತಿಯು, ಪರಮೇಶ್ವರರಿಂದ ಉಪದೇಶವನ್ನು ಪಡೆದ ನಂತರ ಸದ್ಗುರು ಮುನೀಂದ್ರ ರವರಿಂದ ತಾನು ಕೇಳಿದ ಪ್ರಭುವಿನ ಚರ್ಚೆ, ಸೃಷ್ಟಿಯ ರಚನೆ, ಇವುಗಳನ್ನು ರಾಣಿ ಮಂಡೋದರಿಗೆ ಹೇಳತೊಡಗಿದಳು.

ಮಂಡೋದರಿ ರಾಣಿಗೆ, ಇದರಿಂದ ಅತೀವ ಆನಂದವಾಗತೊಡಗಿತು. ಗಂಟೆಗಟ್ಟಲೆ ಪ್ರಭುವಿನ ಸತ್ಯಕಥೆಯನ್ನು ಭಕ್ತಿಮತಿ ಕರ್ಮವತಿ ಹೇಳುತ್ತಿದ್ದಳು. ಮಂಡೋದರಿಯು ಕೇಳುತ್ತಾ ಆನಂದಭಾಷ್ಪವನ್ನು ಸುರಿಸುತ್ತಿದ್ದಳು. "ನೀನು ಈ ಜ್ಞಾನವನ್ನು ಯಾರಿಂದ ಪಡೆದೆ?" ಎಂದು ಒಂದು ದಿನ ರಾಣಿ ಮಂಡೋದರಿಯು ಕೇಳಿದಳು. ನೀನಂತೂ ಬೇಡದ ಹರಟೆಯನ್ನು ಹರಟುತ್ತಿದ್ದೆ. ನಿನ್ನಲ್ಲಿ ಇಷ್ಟೊಂದು ಬದಲಾವಣೆಯಾಗಿದೆ ಎಂದರೆ, ಇದು ಪರಮಾತ್ಮ ಸಮಾನರಾದ ಸಂತರಿಂದಲ್ಲದೆ, ಬೇರೆಯವರಿಂದ ಆಗಲು ಸಾಧ್ಯವಿಲ್ಲ.

ನಾನು ಒಬ್ಬ ಪರಮ ಸಂತರಿಂದ ಇತ್ತೀಚೆಗೆ ಉಪದೇಶ ಪಡೆದುಕೊಂಡಿರುವೆ ಎಂದು ಕರ್ಮವತಿಯು ತಿಳಿಸಿದಳು. ರಾಣಿ ಮಂಡೋದರಿಯು ಆ ಸಂತರ ದರ್ಶನ ಮಾಡಬೇಕೆಂಬ ಅಭಿಲಾಷೆಯನ್ನು ವ್ಯಕ್ತ ಪಡಿಸಿದಳು. "ನಿಮ್ಮ ಗುರು ಈ ಬಾರಿ ಬಂದರೆ ಅವರನ್ನು ನಮ್ಮ ಮನೆಗೆ ಕರೆದುಕೊಂಡು ಬಾ" ಎಂದಳು. ತನ್ನ ಒಡತಿಯ ಮಾತುಗಳನ್ನು ಕೇಳಿ ತಲೆಬಾಗಿ ವಿನಯ ಪೂರ್ವಕವಾಗಿ ಹೇಳಿದಳು, ಸಂತರನ್ನು ಆದೇಶ ಪೂರ್ವಕವಾಗಿ ಕರೆಯಬಾರದು. ಸ್ವಯಂ ಹೋಗಿ ದರ್ಶನ ಮಾಡಬೇಕು. ನಿಮ್ಮ ಆಜ್ಞೆಯಂತೆಯೇ ಈ ನೌಕರಳು ಮಾಡುವಳು. ನನ್ನದೊಂದು ಪ್ರಾರ್ಥನೆ ಇದೆ ಸಂತ ಮಾಡುವುದು ಶ್ರೇಯಸ್ಕರವಾಗಿರುತ್ತದೆ ಮತ್ತು ತಮ್ಮ ಆಜ್ಞೆ ಹೇಗೆದಿಯೋ

ಹಾಗೆಯೇ ಆಗುವುದು "ಈ ಬಾರಿ ನಿಮ್ಮ ಗುರುದೇವರು ಬಂದರೆ ತಿಳಿಸು, ನಾನೇ ಹೋಗಿ ದರ್ಶನ ಮಾಡುವೆ" ಎಂದು ಮಂಡೋದರಿ ಹೇಳಿದಳು. ಪರಮೇಶ್ವರರು ಪುನಃ ಲಂಕೆಗೆ ದಯಮಾಡಿಸಿದರು. ಮಂಡೋದರಿ ರಾಣಿಯು ಉಪದೇಶವನ್ನು ಪಡೆದಳು. ಕೆಲ ಸಮಯಗಳ ತರುವಾಯ ತನ್ನ ಮೈದುನ ಭಕ್ತ ವಿಭೀಷಣನಿಗೂ ಉಪದೇಶ ಕೊಡಿಸಿದಳು. ಭಕ್ತಿಮತಿ ಮಂಡೋದರಿಯು ಉಪದೇಶ ಪಡೆದು ಹಗಲು-ರಾತ್ರಿ ಪ್ರಭು ಸ್ಮರಣೆಯಲ್ಲಿ ಲೀನಳಾಗಿ ಇರತೊಡಗಿದಳು. ತನ್ನ ಪತಿ ರಾವಣನಿಗೂ ಸಹ, ಉಪದೇಶ ಪಡೆಯಲು, ಅನೇಕ ಬಾರಿ ಹೇಳಿದಳು. ಆದರೆ ರಾವಣ ಒಪ್ಪಲಿಲ್ಲ. "ನಾನು ಪರಮ ಶಕ್ತಿ ಮಹೇಶ್ವರ ಮೃತ್ಯುಂಜಯ ಶಿವನ ಭಕ್ತಿ ಮಾಡಿರುವೆ, ಇದಕ್ಕೆ ಸಮವಾದ ಯಾವುದೇ ಶಕ್ತಿ ಇಲ್ಲ. ನಿನಗೆ ಯಾರೋ ದಾರಿ ತಪ್ಪಿಸಿದ್ದಾರೆ." ಎಂದು ಹೇಳಿದ.

ಕೆಲವು ಸಮಯದ ಮುಂಚೆ ವನವಾಸದಲ್ಲಿದ್ದ ಶ್ರೀ ಸೀತೆಯನ್ನು ಅಪಹರಣ ಮಾಡಿ ರಾವಣನು ತನ್ನ (ನೌಲಖಾ ಬಾಗ್) ನವಲಕ್ಷಣದ ವನದಲ್ಲಿ ಬಂಧಿಸಿಟ್ಟಿದ್ದನು. ಭಕ್ತಿಮತಿ ಮಂಡೋದರಿಯು ಪದೇ ಪದೇ ಪ್ರಾರ್ಥನೆ ಮಾಡಿದರೂ ಸಹ, ಸೀತೆಯನ್ನು ವಾಪಸ್ ಬಿಟ್ಟು ಬರಲು ಒಪ್ಪಲಿಲ್ಲ. ಆಗ ಭಕ್ತಿಮತಿ ಮಂಡೋದರಿಯು ತನ್ನ ಗುರುದೇವ ಮುನೀಂದ್ರ ರವರೊಂದಿಗೆ ಹೇಳಿದಳು. "ಮಹಾರಾಜರೇ ನನ್ನ ಪತಿಯು ಯಾರ ಹೆಂಡತಿಯನ್ನೋ ಅಪಹರಣ ಮಾಡಿದ್ದಾರೆ. ನನಗೆ ಸಹಿಸಿಕೊಳ್ಳಲು ಆಗುತ್ತಿಲ್ಲ. ಅವರು ಯಾವುದೇ ಕಾರಣಕ್ಕೂ ಅವಳನ್ನು ವಾಪಸ್ ಕಳುಹಿಸಿ ಬರಲು ಒಪ್ಪುತ್ತಿಲ್ಲ. ತಾವು ದಯೆ ತೋರಿ ನನ್ನ ಪ್ರಭು ಈ ವರೆಗೆ ಜೀವನದಲ್ಲಿ ಇಂತಹ ದುಃಖವನ್ನು ನಾನು ಕಂಡಿರಲಿಲ್ಲ."

ಪರಮೇಶ್ವರರು ಹೇಳಿದರು "ಮಗಳೆ ಈ ಹೆಂಗಸು ಯಾವುದೇ ಸಾಮಾನ್ಯ ಸ್ತ್ರೀಯಾಗಿಲ್ಲ. ಶ್ರೀ ವಿಷ್ಣುವು ಶಾಪದ ಕಾರಣ ಭೂಮಿಯ ಮೇಲೆ ಅವತರಿಸಿದ್ದಾನೆ. ಅವನು ರಾಜಾ ದಶರಥನ ಪುತ್ರ ಶ್ರೀ ರಾಮಚಂದ್ರ ಅಯೋಧ್ಯೆಯ ನಿವಾಸಿಯಾಗಿದ್ದಾನೆ. ಇವನಿಗೆ 14 ವರ್ಷಗಳ ವನವಾಸವು ಪ್ರಾಪ್ತವಾಗಿದೆ. ಇವನ ಪತ್ನಿ ಲಕ್ಷ್ಮಿ ಸ್ವಯಂ ಸೀತಾರೂಪದಿಂದ ವನವಾಸದಲ್ಲಿದ್ದಳು. ಅವಳನ್ನು ರಾವಣನು ಒಬ್ಬ ಸಾಧುವಿನ ವೇಷವನ್ನು ಹಾಕಿಕೊಂಡು ಮೋಸದಿಂದ ಎತ್ತಿಕೊಂಡು ಬಂದಿರುವನು. ಇವಳು ಸ್ವಯಂ ಲಕ್ಷ್ಮೀ, ಇವಳೇ ಸೀತೆಯಾಗಿದ್ದಾಳೆ. ಇವಳನ್ನು ಶೀಘ್ರವಾಗಿ ವಾಪಸ್ ಕಳುಹಿಸಿ, ಕ್ಷಮೆಯನ್ನು ಯಾಚಿಸಿ, ತನ್ನ ಜೀವನದ ಭಿಕ್ಷೆಯನ್ನು ರಾವಣ ಬೇಡಿದರೆ, ಇದರಿಂದ ಇವನಿಗೆ ಶುಭವಾಗುವುದು.

ಭಕ್ತಿಮತಿ ಮಂಡೋದರಿಯು ಅನೇಕ ಬಾರಿ ಪ್ರಾರ್ಥನೆ ಮಾಡಿದರೂ, ರಾವಣ ಒಪ್ಪಲಿಲ್ಲ. "ಆ ಇಬ್ಬರು ಕಾಡಿನಲ್ಲಿ ಅಲೆಯುವ ನೊಣಗಳು, ನನಗೇನು ಕೇಡು ಮಾಡಲು ಸಾಧ್ಯ? ನನ್ನ ಹತ್ತಿರ ಲೆಕ್ಕವಿಲ್ಲದಷ್ಟು ಸೈನ್ಯವಿದೆ. ನನಗೆ ಒಂದು ಲಕ್ಷ ಪುತ್ರರು ಒಂದೂಕಾಲು ಲಕ್ಷ ಮೊಮ್ಮಕ್ಕಳಿದ್ದಾರೆ. ನನ್ನ ಮಗ ಮೇಘನಾಥನು, ಸ್ವರ್ಗದ ರಾಜ ಇಂದ್ರನನ್ನು ಸೋಲಿಸಿ ಅವಳ ಮಗಳನ್ನು ವಿವಾಹಮಾಡಿಕೊಂಡಿದ್ದಾನೆ. 33 ಕೋಟಿ ದೇವರುಗಳನ್ನು ನಾನು ಬಂಧಿಸಿ ಇಟ್ಟಿದ್ದೇನೆ. ನೀನು, ಆಧಾರವೇ ಇಲ್ಲದೆ ಅಲೆಯುತ್ತಿರುವ ಆ ಇಬ್ಬರು ವನವಾಸಿಗಳನ್ನು ದೇವರು ಎಂದು ತಿಳಿಸಿ ಹೆದರಿಸಲು ಬಯಸುತ್ತಿರುವೆ, ಈ ಹೆಂಗಸನ್ನು ವಾಪಸ್ ಕಳುಹಿಸುವುದಿಲ್ಲ ಎಂದು ರಾವಣನು ಹೇಳಿದನು.

ಮಂಡೋದರಿ ಮತ್ತು ವಿಭೀಷಣ ತಮ್ಮ ಪೂಜ್ಯ ಗುರುಗಳಿಂದ ಕೇಳಿದ ಭಕ್ತಿ ಮಾರ್ಗದ ಜ್ಞಾನವನ್ನು ರಾವಣನಿಗೆ ಬಹಳವಾಗಿ ತಿಳಿಸಿದರು. ರಾವಣನು ವಿಭೀಷಣನನ್ನು ಹೊಡೆದು ಹೀಗೆ ಹೇಳಿದ ನೀನು ಹೆಚ್ಚಾಗಿ ಶ್ರೀರಾಮಚಂದ್ರನ ಪಕ್ಷಪಾತ ಮಾಡುತ್ತಿರುವೆ ಅವನಲ್ಲಿಗೇ ಹೋಗು" ಎಂದು ಗದರಿದ.

ಒಂದು ದಿನ ಭಕ್ತಿಮತಿ ಮಂಡೋದರಿಯು ತನ್ನ ಪೂಜ್ಯ ಗುರುದೇವರಲ್ಲಿ ಪ್ರಾರ್ಥಿಸಿದಳು "ಹೇ ಗುರುದೇವ! ನನ್ನ ಸೌಭಾಗ್ಯ ಹಾಳಾಗುತ್ತಿದೆ, ಒಮ್ಮೆ ನೀವೂ ನನ್ನ ಪತಿಗೆ ತಿಳುವಳಿಕೆ ಹೇಳಿರಿ. ಒಂದು ವೇಳೆ ಅವರು ನಿಮ್ಮ ಮಾತುಗಳನ್ನೂ ಒಪ್ಪದಿದ್ದರೆ, ನಾನು ವಿಧವೆಯಾದರು ದುಃಖ ಆಗದು." ಭಕ್ತಿಮತಿ ಮಂಡೋದರಿಯ ಪ್ರಾರ್ಥನೆಯನ್ನು ಕೇಳಿ ಪರಮೇಶ್ವರರು ರಾಜಾ ರಾವಣನ ದರಬಾರಿನ ಹೊರಗಡೆ ನಿಂತು, ದ್ವಾರಪಾಲಕರನ್ನು ರಾವಣನನ್ನು ಬೇಟಿಮಾಡಲು ಅವಕಾಶ ಕೊಡಲು ಪ್ರಾರ್ಥಿಸಿದರು. "ಋಷಿ ಯವರೆ ಈಗ ನಮ್ಮ ರಾಜಾ ತಮ್ಮ ದರಬಾರಿನಲ್ಲಿದ್ದಾರೆ ಈ ಸಮಯದಲ್ಲಿ ಒಳಗಿನ ಸಂದೇಶ ಹೊರಗೆ ಬರಲು ಸಾಧ್ಯ ಆದರೆ ಹೊರಗಿನ ಸಂದೇಶ ಒಳಗೆ ಹೋಗಲು ಸಾಧ್ಯವಿಲ್ಲ ನಾವು ಅಸಹಾಯಕರು ಎಂದರು. ಆಗ ಪೂರ್ಣ ಪ್ರಭು, ಅಲ್ಲಿಂದ ಅದೃಶ್ಯನಾಗಿ ರಾವಣನ ದರಬಾರಿನಲ್ಲಿ ಕಾಣಿಸಿಕೊಂಡರು. ಋಷಿಯನ್ನು ಕಂಡು ರಾವಣನು "ಈ ಋಷಿಯನ್ನು ನನ್ನ ಆಜ್ಞೆ ಇಲ್ಲದೆ ಯಾರು ಒಳಗೆ ಕಳುಹಿಸಿದರು? ಎಂದು ರೇಗಾಡಿದ. ಅವರನ್ನು ನನ್ನ ಮುಂದೆ ಹಿಡಿದು ತಂದು ಕತ್ತರಿಸಿ ಹಾಕಿರಿ. ಆಗ ಪರಮೇಶ್ವರರು ಹೇಳಿದರು. ರಾವಣ ನಿನ್ನ ದ್ವಾರಪಾಲಕರು ನನ್ನನ್ನು ಸ್ಪಷ್ಟವಾಗಿ ಒಳಗೆ ಬರಲು ಒಪ್ಪಿಗೆ ನೀಡಲಿಲ್ಲ. ನಾನು ಹೇಗೆ ಒಳಗೆ ಬಂದಿರುವೆ ಎಂಬುದು ಅವರಿಗೆ ತಿಳಿದಿಲ್ಲ. ರಾವಣ ಕೇಳಿದ "ನೀನು ಹೇಗೆ ಒಳಗೆ ಬಂದೆ?" ಆಗ ಪೂರ್ಣ ಪ್ರಭುವು, ಮುನೀಂದ್ರರ ವೇಷದಲ್ಲಿ ಅದೃಶ್ಯರಾಗಿ ಪುನಃ ತೋರಿಕೊಂಡರು. ಹೀಗೆ ಒಳಗೆ ಬಂದೆ ಎಂದು ಹೇಳಿದರು. ರಾವಣನು ಕೇಳಿದ ಬಂದ ಕಾರಣವನ್ನು ತಿಳಿಸು. ಆಗ ಪ್ರಭುವು ಹೇಳಿದರು. ನೀನೊಬ್ಬ ಯೋಧನಾಗಿ ಒಬ್ಬಳು ಅಬಲೆಯನ್ನು ಅಪಹರಣ ಮಾಡಿ ತಂದಿರುವೆ. ಇದು ನಿನ್ನ ಗೌರವ ಹಾಗೂ ಶೂರತೆಗೆ ವಿರುದ್ದವಾಗಿದೆ. ಇವಳು ಯಾರೋ ಸಾಮಾನ್ಯ ಹೆಂಗಸಲ್ಲ. ಇವಳು ಸ್ವಯಂ ಲಕ್ಷ್ಮೀಯ ಅವತಾರವಾಗಿದ್ದಾಳೆ. ಯಾವ ಶ್ರೀ ರಾಮ ಚಂದ್ರನು, ಇವಳ ಪತಿಯಾಗಿರುವನೋ, ಅವನೇ ಸ್ವಯಂ ವಿಷ್ಣುವಾಗಿದ್ದಾನೆ. ಇವಳನ್ನು ವಾಪಸ್ ಕಳುಹಿಸಿ, ನಿನ್ನ ಜೀವನದ ಭಿಕ್ಷೆಬೇಡಿಕೋ. ಇದರಲ್ಲಿಯೇ ನಿನಗೆ ಶ್ರೇಯಸ್ಸಿದೆ. ಇಷ್ಟನ್ನು ಕೇಳಿದ ತಮೋಗುಣ ಉಪಾಸಕ (ಭಗವಾನ್ ಶಿವನ ಉಪಾಸಕ) ರಾವಣನು, ಕ್ರೋಧದಿಂದ ಬಿಚ್ಚುಗತ್ತಿಯನ್ನು ತೆಗೆದುಕೊಂಡು ಸಿಂಹಾಸನದಿಂದ ದಡ ದಡನೆ ನೆಗೆದು ಬುದ್ಧಿಹೀನ ರಾವಣನು ಋಷಿಯ ಮೇಲೆ ಮನಬಂದಂತೆ 70 ಬಾರಿ (ಪ್ರಹಾರ) ಹೊಡೆದ. ಪರಮೇಶ್ವರ ಮುನಿಂದ್ರರು, ಒಂದು ಪರಕೆಯ ಕಡ್ಡಿಯನ್ನು ಕೈಯಲ್ಲಿ ಹಿಡಿದಿದ್ದರು. ಅದನ್ನೇ ಗುರಾಣಿಯಂತೆ ಮುಂದೆ ಮಾಡಿದರು. ರಾವಣನ 70 ಹೊಡೆತಗಳು ಆ ನಾಜೂಕಾದ ಕಡ್ಡಿಯ ಮೇಲೆ ಬೀಳತೊಡಗಿತು. ಕಬ್ಬಿಣದ ಕಂಬಕ್ಕೆ ಹೊಡಿಯುತ್ತಿದ್ದರೋ ಎಂಬಂತೆ ಶಬ್ದವಾಗತೊಡಗಿತು. ಕಡ್ಡಿಯು ಕೊಂಚವೂ ಅಲ್ಲಾಡಲಿಲ್ಲ ರಾವಣನಿಗೆ ಬೆವರು ಬಂದಿತು. ಆದರೂ ಅವನ ಅಹಂಕಾರವು ಸೋಲನ್ನು ಒಪ್ಪಲಿಲ್ಲ. ರಾವಣನಿಗೆ ಅರ್ಥವಾಯಿತು ಇವನು ಸಾಮಾನ್ಯ ಋಷಿಯಲ್ಲವೆಂದು. "ನಾನು ನಿಮ್ಮ ಒಂದು ಮಾತನ್ನೂ ಕೇಳುವುದಿಲ್ಲ. ತಾವಿನ್ನು ಹೊರಡಬಹುದು ಎಂದನು ಪರಮೇಶ್ವರರು ಅದೃಶ್ಯವಾದರು ಹಾಗೂ ಮಂಡೋದರಿಗೆ ಸರ್ವ ವೃತ್ತಾಂತವನ್ನೂ ಹೇಳಿ ಹೊರಟರು. ರಾಣಿಯು ಹೇಳಿದಳು ಗುರುದೇವ ಈಗ ನನಗೆ ವಿಧವೆಯಾಗುವುದರಲ್ಲಿ ಯಾವುದೇ ಕಷ್ಟವಾಗದು.

ಶ್ರೀ ರಾಮಚಂದ್ರ ಮತ್ತು ರಾವಣರ ಯುದ್ಧವಾಯಿತು. ರಾವಣನ ವಧೆಯಾಯಿತು. ಯಾವ ಲಂಕೆಯ ರಾಜ್ಯವನ್ನು ರಾವಣನು ತಮೋಗುಣ ಭಗವಾನ್ ಶಿವನ ಕಠಿಣ ಸಾಧನೆ ಮಾಡಿ ಹತ್ತು ಬಾರಿ ತಲೆಯನ್ನು ಸಮರ್ಪಿಸಿ ಪುಣ್ಯ ಸಂಪಾದಿಸಿದ್ದ. ಆ ಕ್ಷಣಿಕ ಸುಖವೂ ಸಹ ರಾವಣನಿಂದ ಹೊರಟುಹೋಯಿತು ಹಾಗೂ ಅವನು ನರಕ ಭಾಗಿಯಾದನು. ಇದಕ್ಕೆ ವಿರುದ್ಧವಾಗಿ ಪೂರ್ಣ ಪರಮಾತ್ಮನ ಸತ್ಯನಾಮ ಸಾಧಕ ವಿಭೀಷಣನಿಗೆ ಯಾವುದೇ ಕಠಿಣ ಸಾಧನೆ ಮಾಡದೆ ಪೂರ್ಣ

ಪ್ರಭುವಿನ ಕೃಪೆಯಿಂದ ಲಂಕಾ ದೇಶದ ರಾಜ್ಯವೂ ಪ್ರಾಪ್ತವಾಯಿತು. ಸಾವಿರಾರು ವರ್ಷಗಳ ವರೆಗೆ ವಿಭೀಷಣನು ಲಂಕಾ ರಾಜ್ಯದ ಸುಖವನ್ನು ಅನುಭವಿಸಿದ ಹಾಗೂ ಪ್ರಭುವಿನ ಕೃಪೆಯಿಂದ ರಾಜ್ಯದಲ್ಲಿ ಪೂರ್ಣ ಶಾಂತಿ ನೆಲೆಸಿತ್ತು. ರಾಕ್ಷಸ ವೃತ್ತಿಯ ಎಲ್ಲರೂ ನಾಶವಾದರು. ಭಕ್ತಿಮತಿ ಮಂಡೋದರಿಯ ಭಕ್ತ ವಿಭೀಷಣ ಹಾಗೂ ಪರಮಭಕ್ತ ಚಂದ್ರವಿಜಯ ರವರ ಪರಿವಾರದ ಎಲ್ಲಾ 16 ಸದಸ್ಯರು ಹಾಗೂ ಅನ್ಯರು ಪೂರ್ಣ ಪರಮೇಶ್ವರನ ಉಪದೇಶವನ್ನು ಪಡೆದು ಜೀವನ ಪರ್ಯಂತ ಮರ್ಯಾದೆಯಿಂದ ಸದ್ಭಕ್ತಿ ಮಾಡಿದರು. ಆ ಎಲ್ಲ ಸಾಧಕರು ಈ ಭೂಮಿಯ ಮೇಲೆ ಸುಖವಾಗಿದ್ದರು ಹಾಗೂ ಅಂತ್ಯ ಸಮಯದಲ್ಲಿ ಪರಮೇಶ್ವರನ ವಿಮಾನದಲ್ಲಿ ಕುಳಿತುಕೊಂಡು ಸತ್ಯಲೋಕ (ಶಾಶ್ವತ ಸ್ಥಾನ)ಕ್ಕೆ ಹೋದರು.

ಪವಿತ್ರ ಗೀತೆಯ 7ನೇ ಅಧ್ಯಾಯದ 12 ರಿಂದ 15ನೇ ಶ್ಲೋಕಗಳಲ್ಲಿ ಹೇಳಿದೆ– ಮೂರು ಗುಣಗಳು (ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು, ತಮೋಗುಣ ಶಿವ) ಸಾಧನೆಯಿಂದ ಸಿಗುವ ಕ್ಷಣಿಕ ಸುಖದ ಮೂಲಕ ಯಾರ ಜ್ಞಾನವು ಕಳೆದು ಹೋಗಿದೆಯೋ, ಅವರು ರಾಕ್ಷಸ ಸ್ವಭಾವದವರು, ಮನುಷ್ಯರಲ್ಲಿ ನೀಚರು, ದುಷ್ಕರ್ಮ ಮಾಡುವ ಮೂರ್ಖರು ನನ್ನನ್ನು (ಕಾಲ–ಬ್ರಹ್ಮ) ಭಜಿಸುವುದಿಲ್ಲ.

ಪುನಃ ಗೀತೆಯ 7ನೇ ಅಧ್ಯಾಯದ 18ನೇ ಮಂತ್ರದಲ್ಲಿ ಗೀತೆಯನ್ನು ಬೋಧಿಸಿದ (ಕಾಲ– ಬ್ರಹ್ಮ) ಪ್ರಭು ಹೇಳುತ್ತಿದ್ದಾರೆ. ಉದಾರ ಆತ್ಮದವರು ನನ್ನನ್ನು ಕಬೀರ್ ಸಾಹೇಬರು ನಾಲ್ಕೂ ಯುಗಗಳಲ್ಲಿ ಬರುತ್ತಾರೆ.(ಬ್ರಹ್ಮನ) ಸಾಧನೆ ಮಾಡುತ್ತಾರೆ. ಏಕೆಂದರೆ ಅವರಿಗೆ ತತ್ವದರ್ಶಿ ಸಂತ ದೊರೆತಿರುವುದಿಲ್ಲ. ಆ ಉತ್ತಮ ಆತ್ಮಗಳು ನನ್ನ (ಅನುತ್ತಮಾಮ್) ಅತಿ ಅಶ್ರೇಷ್ಠ (ಗತಿಮ್) ಮುಕ್ತಿಯ ಸ್ಥಿತಿಯಲ್ಲಿ ಆಶ್ರಿತರಾಗಿರುವರು. ಅವರಿಗೂ ಪೂರ್ಣ ಮುಕ್ತಿ ಇಲ್ಲವಾಗಿದೆ. ಆದ್ದರಿಂದ ಪವಿತ್ರ ಗೀತೆಯ 18ನೇ ಅಧ್ಯಾಯದ 62ನೇ ಶ್ಲೋಕದಲ್ಲಿ ಹೇಳಿದೆ– ಹೇ ಅರ್ಜುನ ! ನೀನು ಸರ್ವಭಾವದಿಂದ ಆ ಪರಮೇಶ್ವರನಲ್ಲಿ (ಪೂರ್ಣ ಪರಮಾತ್ಮ ತತ್ ಬ್ರಹ್ಮ) ಶರಣು ಹೋಗು. ಅವನ ಕೃಪೆಯಿಂದಲೇ ನಿನಗೆ ಪರಮ ಶಾಂತಿ ಹಾಗೂ ಸತ್ಯಲೋಕ ಅರ್ಥಾತ್ ಸನಾತನ ಪರಮ ಧಾಮವು ಪ್ರಾಪ್ತಿಯಾಗುವುದು.

ಆದ್ದರಿಂದ ಪುಣ್ಯಾತ್ಮರಲ್ಲಿ ಪ್ರಾರ್ಥನೆ ಏನೆಂದರೆ ಈಗ ಈ ದಾಸನಿಗೂ ದಾಸನ (ಸಂತ ರಾಮ್‌ಪಾಲ್ ದಾಸನ) ಹತ್ತಿರ ಪೂರ್ಣ ಪರಮಾತ್ಮನ ಪ್ರಾಪ್ತಿಯ ವಾಸ್ತವಿಕ ವಿಧಿಯು ಲಭ್ಯವಿದೆ. ಉಚಿತವಾಗಿ ಉಪದೇಶ ಪಡೆದು ಲಾಭ ಪಡೆಯಿರಿ.

## “ದ್ವಾಪರ ಯುಗದಲ್ಲಿ ಇಂದ್ರಮತಿಯು ಶರಣು ಬಂದದ್ದು"

ದ್ವಾಪರ ಯುಗದಲ್ಲಿ ಚಂದ್ರವಿಜಯ ಎಂಬ ರಾಜನಿದ್ದ. ಅವನ ಪತ್ನಿ ಇಂದ್ರಮತಿ, ಬಹಳ ಧಾರ್ಮಿಕ ಪ್ರವೃತ್ತಿಯ ಸ್ತ್ರೀಯಾಗಿದ್ದಳು. ಸಂತ–ಮಹಾತ್ಮರನ್ನು ಬಹಳ ಗೌರವಿಸುತ್ತಿದ್ದಳು. ಅವಳಿಗೆ ಒಬ್ಬ ಗುರುವೂ ಇದ್ದರು. ಸಂತರಿಗೆ ಭೋಜನ ಮಾಡಿಸುವುದರಿಂದ ಬಹಳ ಲಾಭವಿದೆ ಸಾಧು ಸಂತರ ಸೇವೆ ಮಾಡು. ಏಕಾದಶಿಯ ವ್ರತ, ಜಪ ಮಾಡುವುದು ಒಳ್ಳೆಯದು ಎಂದು ಆ ಗುರುಗಳು ತಿಳಿಸಿದ್ದರು. ಅವಳಿಗೆ ಭಗವಂತನಲ್ಲಿ ದೃಢವಾದ ಭಕ್ತಿ ಇತ್ತು. ಸಂತರಿಗೆ ಭೋಜನ ಮಾಡಿಸಿದರೆ ಮುಂದೆಯೂ ರಾಣಿಯಾಗುವೆ, ನಿನಗೆ ಸ್ವರ್ಗ ಸಿಗುವುದೆಂದು ಗುರುಗಳು ಹೇಳಿದ್ದರು. ಆದ್ದರಿಂದ ರಾಣಿಯು ಪ್ರತಿದಿನ ಒಬ್ಬ ಸಂತರಿಗೆ, ತನ್ನ ಊಟಕ್ಕೆ ಮೊದಲು ಊಟ ಹಾಕುತ್ತಾ ಇದ್ದಳು. ಅನೇಕ ವರ್ಷಗಳವರೆಗೆ ಹೀಗೆ ನಡೆಯುತ್ತಾ ಇತ್ತು.

ಒಂದು ಸಮಯದಲ್ಲಿ ಹರಿದ್ವಾರದಲ್ಲಿ ಕುಂಭಮೇಳವಾಯಿತು. ಆಗ ತ್ರಿಮೂರ್ತಿಗಳ/ ತ್ರಿಗುಣಗಳ

(ಬ್ರಹ್ಮಾ,ವಿಷ್ಣು,ಶಿವ) ಉಪಾಸಕರಾದ ಎಲ್ಲಾ ಸಂತರು ಗಂಗಾ ಮೇಳ (ಕುಂಭಮೇಳ) ದಲ್ಲಿ ಭಾಗವಹಿಸಲು ಹೋಗಿದ್ದರು. ರಾಣಿಗೆ ಭೋಜನ ಮಾಡಿಸಲು ಯಾವ ಸಂತರೂ ಸಿಗಲಿಲ್ಲ.

ಹಾಗಾಗಿ ರಾಣಿ ಆ ದಿನ ನಿರಾಹಾರಳಾಗಿಯೇ ಇದ್ದಳು. ಇದೇ ರೀತಿ ಮೂರು ದಿನಗಳು ಕಳೆದವು. ಸಂತರು ಸಿಗಲೇ ಇಲ್ಲ. ಆಗ ರಾಣಿ ತನ್ನ ಸೇವಕಿಗೆ ಹೇಳಿದಳು. "ಹೋಗಿ ಯಾರಾದರೂ ಸಂತರನ್ನು ಕರೆದುಕೊಂಡು ಬಾ. ಇಲ್ಲವಾದರೆ ನಿನ್ನ ರಾಣಿ ಬದುಕಿ ಉಳಿಯುವುದಿಲ್ಲ" ಎಂದು, ದೀನದಯಾಳು ಕಬೀರ್ ಪರಮೇಶ್ವರರು ತನ್ನ ಹಿಂದಿನ ಭಕ್ತಳನ್ನು ರಕ್ಷಿಸಲು ಬಿಳಿಯ ಬಟ್ಟೆ ಧರಿಸಿ ಸಂತ ರೂಪದಲ್ಲಿ ಬರುತ್ತಿದ್ದರು. ಸೇವಕಳು ಮಹಡಿಯ ಮೇಲಿನಿಂದ ಈ ಸಂತರನ್ನು ಕಂಡವಳೇ ಕೆಳಗೆ ಬಂದು ತನ್ನ ರಾಣಿಯ ಸಲುವಾಗಿ ಅರಮನೆಗೆ ಸ್ವಾಗತಿಸಿದಳು.

ಕರುಣಾಮಯ ರು ಕೇಳಿದರು. ರಾಣಿ ಏಕೆ ನನ್ನನ್ನು ಸ್ಮರಿಸಿದಳು. ನನಗೂ ರಾಣಿಗೂ ಏನು ಸಂಬಂಧ, ಸೇವಕಿಯು ರಾಣಿಯ ವ್ರತದ ಬಗ್ಗೆ ತಿಳಿಸಿದಳು" ನಾನು ಇಲ್ಲೇ ನಿಂತಿರುವೆ.

ನಿನ್ನ ರಾಣಿಗೆ ಅವಶ್ಯಕತೆ ಇದ್ದರೆ ಇಲ್ಲಿಗೆ ಬರಲು ತಿಳಿಸು, ನೀನು ಸೇವಕಿ ಅವಳು ರಾಣಿ. ನಾನು ನಿನ್ನ ಮಾತಿನಂತೆ ಬಂದರೆ ಅವಳು ಕೇಳಬಹುದು– ನಿಮ್ಮನ್ನು ಕರೆದವರು ಯಾರು? ಎಂದು. ಇಲ್ಲ ಅವಳ ರಾಜ ಏನನ್ನಾದರೂ ಹೇಳಬಹುದು. ಸಾಧುಗಳಿಗೆ ಅನಾದರವಾಗಬಹುದು. ಅದು ಮಹಾಪಾಪ. ಆಗ ಸೇವಕಿಯು ಅರಮನೆಗೆ ವಾಪಸ್ ಹೋಗಿ ರಾಣಿಗೆ ಎಲ್ಲಾ ಸಂಗತಿ ತಿಳಿಸದಳು. ನನ್ನ ಕೈ ಹಿಡಿದುಕೊಂಡು ಆ ಸಂತರಲ್ಲಿಗೆ ನನ್ನನ್ನು ಕರೆದುಕೊಂಡು ಹೋಗು ಎಂದು ಸೇವಕಿಗೆ ಹೇಳಿದಳು. ಸೇವಕಿಯೊಡನೆ, ರಾಣಿ ಸಂತನಲ್ಲಿಗ ಬಂದು ದಂಡವತ ನಮಸ್ಕಾರ ಮಾಡಿ ಪ್ರಾರ್ಥಿಸಿದಳು. ಹೇ ಪರಮೇಶ್ವರ! ನನ್ನ ಹೆಗಲ ಮೇಲೆ ತಮ್ಮನ್ನು ಕೂರಿಸಿಕೊಂಡು ಹೋಗುವ ಬಯಕೆ ನನಗಿದೆ. ಆಗ ಕರುಣಾಮಯರು ಹೇಳಿದರು. –ಮಗಳೇ ನಾನು ನೋಡ ಬಯಸಿದ್ದು ಇದನ್ನೇ, ನಿನ್ನಲ್ಲಿ ಶ್ರದ್ಧೆ ಇದೆಯೋ? ಅಥವಾ ಹಾಗೇ ಹಸಿವಿನಿಂದ ಸಾಯಲು ಸಿದ್ಧಳಿರುವೆಯೋ? ಎಂದು. ರಾಣಿ ತನ್ನ ಕೈಯಿಂದಲೇ ಭೋಜನ ತಯಾರಿಸಿದಳು. ಕರುಣಾಮಯರು ಹೇಳಿದರು ನಾನು ಊಟ ಮಾಡುವುದಿಲ್ಲ. ಈ ನನ್ನ ಶರೀರ ಊಟ ಮಾಡುವುದಕ್ಕಿಲ್ಲ. ಹಾಗಾದರೆ ನಾನೂ ಊಟಮಾಡುವುದಿಲ್ಲ ವೆಂದಳು ರಾಣಿ ಆಗಲಿ, ಸರಿ ಮಗಳೆ ಊಟ ತೆಗೆದುಕೊಂಡು ಬಾ ನಾನು ಊಟ ಮಾಡುವೆ ಸಮರ್ಥರೆಂದರೆ ಇವರೇ, ಯಾರು ಏನು ಬಯಸುವರೋ, ಅದನ್ನೇ ಮಾಡುವವರು. ಊಟವಾದ ಮೇಲೆ ಕರುಣಾಸಾಗರ ರವರು ರಾಣಿಯನ್ನು ಕೇಳಿದರು. ನಿನಗೆ ಈ ವ್ರತವನ್ನು ಮಾಡಲು ಯಾರು ಹೇಳಿದರು? ನನ್ನ ಗುರುದೇವರು ತಿಳಿಸಿದ್ದಾರೆ ಎಂದಳು ರಾಣಿ. ನಿನ್ನ ಗುರುವು ನಿನಗೆ ಏನು ಆದೇಶ ಮಾಡಿರುವರು. ಇಂದ್ರಮತಿ ಹೇಳಿದಳು– ಬ್ರಹ್ಮಾ–ವಿಷ್ಣು–ಮಹೇಶ್ವರನ ಪೂಜೆ, ಏಕಾದಶಿಯ ವ್ರತ, ತೀರ್ಥಯಾತ್ರೆ, ದೇವಿ ಪೂಜೆ, ಶ್ರಾದ್ಧ ಮಾಡುವುದು, ದೇವಾಲಯಕ್ಕೆ ಹೋಗುವುದು. ಸಂತರ ಸೇವೆ ಮಾಡುವುದು.

ಕರುಣಾಮಯ ರು ಹೇಳಿದರು. ಯಾವ ಆದೇಶವನ್ನು ನಿನ್ನ ಗುರುಗಳು ಹೇಳಿರುವರೋ ಅದನ್ನು ಪಾಲಿಸಿದರೆ, ಜನ್ಮ–ಮೃತ್ಯು, ಸ್ವರ್ಗ–ನರಕದ ಚಕ್ರಗಳಲ್ಲಿರುವೆ. **84** ಲಕ್ಷ ಯೋನಿಗಳಲ್ಲಿ ಹುಟ್ಟಿ ಬರಬೇಕು. ಕಷ್ಟ ತಪ್ಪದು. ಮುಕ್ತಿ ಸಿಗುವುದಿಲ್ಲ. ರಾಣಿ ಹೇಳಿದಳು–ಮಹಾರಾಜ್ ರೇ ಎಷ್ಟು ಸಂತರಿರುವರೋ, ತಮ್ಮ–ತಮ್ಮ ಪ್ರಭುತ್ವವನ್ನು ತಾವೇ ಮಾಡಿಕೊಳ್ಳುತ್ತಾರೆ. ನನ್ನ ಗುರುದೇವರ ಬಗ್ಗೆ ಏನನ್ನೂ ಹೇಳಬೇಡಿ. ನನಗೆ ಮುಕ್ತಿ ಸಿಕ್ಕಲಿ, ಸಿಕ್ಕದಿರಲಿ ಚಿಂತೆ ಇಲ್ಲ.

ಈ ಮುಗ್ಧ ಜೀವಕ್ಕೆ ಹೇಗೆ ತಿಳಿಸುವುದು ಎಂದು ಕರುಣಾಮಯರು ಯೋಚಿಸಿದರು. ಇವರು ಏನನ್ನು ಹಿಡಿದಿರುವರೋ ಬಿಡುವುದಿಲ್ಲ. ಬೇಕಾದರೆ ಸಾಯಲೂ ಸಹ ಸಿದ್ಧ. ಮಗಳೇ

ನಿನ್ನ ಇಚ್ಛೆ ನಾನು ಯಾರನ್ನೂ ನಿಂದಿಸುತ್ತಿಲ್ಲ. ನಾನೇನಾದರೂ ನಿನ್ನ ಗುರುಗಳಿಗೆ ಬೈದನೇ! ಅಥವಾ ಕೆಟ್ಟದಾಗಿ ಹೇಳಿದೆನೇ! ನಾನು ಭಕ್ತಿ ಮಾರ್ಗವನ್ನು ಹೇಳುತ್ತಿರುವೆ. ಈ ಭಕ್ತಿ (ನೀನು ಮಾಡುತ್ತಿರುವುದು) ಶಾಸ್ತ್ರ ವಿರುದ್ಧವಾಗಿದೆ. ನೀನು ಈ ಸಂಸಾರದಿಂದ ಪಾರಾಗಲಾರೆ. ಮುಂದೆ ಬರಲಿರುವ ಕರ್ಮ ದಂಡದ ಶಿಕ್ಷೆಯನ್ನು ನಿನ್ನ ಈ ಭಕ್ತಿ ಸಾಧನೆ, ಕಡಿಮೆ ಮಾಡದು. ಹಾಗೂ ಕೇಳು ಇಂದಿನಿಂದ ಮೂರನೆಯ ದಿನ ನಿನ್ನ ಮೃತ್ಯುವಾಗುವುದು. ನಿನ್ನ ಗುರುವಾಗಲಿ, ನಿನ್ನ ನಕಲಿ ಸಾಧನೆಯಾಗಲಿ, ನಿನ್ನನ್ನು ಉಳಿಸಲು ಆಗುವುದಿಲ್ಲ. (ಸಾವಿನ ವಿಷಯ ಜೀವಕ್ಕೆ ಹೆದರಿಕೆ ತರುತ್ತದೆ) ಈ ಸಂತರು ಸುಳ್ಳು ಹೇಳುವುದಿಲ್ಲ ಎಂದು ರಾಣಿ ಯೋಚಿಸಿದಳು. ನಾಡಿದ್ದು ನಾನು ಸಾಯಬಹುದು. ಈ ಭಯದಿಂದ ಕರುಣಾಮಯರನ್ನು ಕೇಳಿದಳು– ಸ್ವಾಮಿ ನನ್ನ ಪ್ರಾಣವನ್ನು ಉಳಿಸಲು ಸಾಧ್ಯವೇ! ಕರುಣಾಮಯ (ಕಬೀರ್ ಪರಮೇಶ್ವರ)ರು ಹೇಳಿದರು, ನೀನು ಉಳಿಯಬಹುದು. ಒಂದು ವೇಳೆ ನನ್ನಿಂದ ಉಪದೇಶ (ದೀಕ್ಷೆ) ಮಂತ್ರ ಪಡೆದರೆ, ನನ್ನ ಶಿಷ್ಯಳಾದರೆ ಹಿಂದಿನ ಪೂಜೆಗಳನ್ನು ತ್ಯಜಿಸಿದರೆ, ನಿನ್ನ ಪ್ರಾಣ ಉಳಿಯುತ್ತದೆ. ಆದರೆ ಗುರುಗಳನ್ನು ಬದಲಾಯಿಸಬಾರದೆಂದು ನಾನು ಕೇಳಿರುವೆ. ಇದರಿಂದ ಪಾಪ ಬರುವುದಂತೆ. ಅಂದಳು ರಾಣಿ. ಇಲ್ಲ ಮಗಳೇ ಇದು ನಿನ್ನ ಭ್ರಮೆ. ಒಬ್ಬ ವೈದ್ಯರಲ್ಲಿ ರೋಗ ಗುಣವಾಗದಿದ್ದರೆ. ಮತ್ತೊಬ್ಬರ ಬಳಿಗೆ ಹೋಗಿ ಔಷಧ ಪಡೆಯುವುದಿಲ್ಲವೇ! ಒಬ್ಬ ಐದನೆಯ ತರಗತಿಯ ಅಧ್ಯಾಪಕ, ಮತ್ತೊಬ್ಬ ಉನ್ನತ ತರಗತಿಗಳ ಅಧ್ಯಾಪಕ ಇಬ್ಬರು ಇರುತ್ತಾರೆ. ಮಗಳೇ ಮುಂದಿನ ತರಗತಿಗೆ ಹೋಗಬೇಕು. ಮುಂದಿನ ತರಗತಿಯ ಅಧ್ಯಾಪಕರಲ್ಲಿ ಕಲಿಯಬೇಕು. ನೀನು ಐದನೆ ತರಗತಿಯಲ್ಲೇ ಉಳಿಯಲು ಸಾಧ್ಯವೇ! ಇದನ್ನು ಬಿಡಬೇಕಾಗುವುದು. ನೀನೀಗ ಮುಂದಿನ ತರಗತಿಗೆ ಹೋಗಬೇಕು. ನಾನು ಆ ತರಗತಿಯ ಅಧ್ಯಾಪಕ ಓದಿಸಲು ಬಂದಿರುವೆ. ಹೀಗೆ ಹೇಳುವುದನ್ನು ಕೇಳಿದರೂ ಅವಳು ಒಪ್ಪುವವಳಾಗಿರಲಿಲ್ಲ. ಆದರೆ ಮೃತ್ಯುವು ಕಣ್ಣು ಮುಂದೆ ಕಾಣಿಸಿತು. ಈ ಸಂತನ ಮಾತನ್ನು ಕೇಳದಿದ್ದರೆ, ಕಾರ್ಯ ಕೆಡುತ್ತದೆ. ಎಂದು ಒಪ್ಪಿಕೊಂಡಳು. ಕರುಣಾಮಯರು ನಾಮದೀಕ್ಷೆ (ಉಪದೇಶ) ಕೊಟ್ಟರು. ಅವರು ಹೇಳಿದರು : "ಇಂದಿನಿಂದ ಮೂರನೆಯದಿನ ನನ್ನ ರೂಪದಲ್ಲಿ ಕಾಲನು ಬರುವನು, ನೀನು ಅವನನ್ನು ಸತ್ಕರಿಸದೆ, ನಾನು ನಿನಗೆ ಕೊಟ್ಟಿರುವ ನಾಮೋಪದೇಶದ ಜಪವನ್ನು 2 ನಿಮಿಷಗಳವರೆಗೆ ಮಾಡು. ಎರಡು ನಿಮಿಷಗಳಾದ ಮೇಲೆ ಅವನನ್ನು ನೋಡು. ಅವನು ಕಾಲನಿದ್ದರೆ ಅವನ ಸ್ವರೂಪದಲ್ಲಿ ಕಾಣಿಸುವನು. ಒಂದು ವೇಳೆ ಗುರುದೇವರು ಬಂದರೆ ಬೇಗನೆ ಅವರ ಚರಣಗಳಿಗೆ ನಮಸ್ಕರಿಸಬೇಕು'. ಇದಿಷ್ಟು ನನ್ನ ಈ ಬಾರಿಯ ಆದೇಶವಾಗಿದೆ. ರಾಣಿಯು ಹಾಗಿಯೇ ಮಾಡುವುದಾಗಿ ಒಪ್ಪಿದಳು.

ಈಗ ರಾಣಿಗೆ ಚಿಂತೆ ಶುರುವಾಯಿತು. ಶ್ರದ್ಧೆಯಿಂದ ಜಪ ಮಾಡತೊಡಗಿದಳು. ಮೂರನೆ ದಿವಸ ಕರುಣಾಮಯರ (ಕಬೀರ್ ಪರಮೇಶ್ವರರ) ರೂಪದಲ್ಲಿ ಕಾಲನು ಬಂದನು. "ಇಂದ್ರಮತಿ– ಇಂದ್ರಮತಿ" ಎಂದು ಕೂಗಿ ಕರೆದ. ಈಗ ಅವಳಿಗೆ ಭಯವಿತ್ತು. ನಾಮಸ್ಮರಣೆ ಮಾಡಿದಳು. ಕಾಲನ ಕಡೆಗೆ ನೋಡಲಿಲ್ಲ. ಎರಡು ನಿಮಿಷಗಳ ನಂತರ ನೋಡಿದಳು, ಕಾಲನ ಸ್ವರೂಪವು ಬದಲಾಯಿತು. ಅವನಿಗೆ (ಕಾಲನಿಗೆ) ಅರ್ಥವಾಯಿತು. ಇವಳ ಬಳಿ ಯಾವುದೋ ಶಕ್ತಿಯುತ ಮಂತ್ರವಿದೆ ಎಂದು. "ನಿನ್ನನ್ನು ಆಮೇಲೆ ಪುನಃ ನೋಡುವೆ" ಎಂದು ಹೇಳಿ ಹೊರಟು ಹೋದ. ಈಗಂತೂ ಬಚಾವಾದಳು. ರಾಣಿ ಅತಿಯಾದ ಸಂತೋಷದಿಂದ ಉಬ್ಬಿಹೋದಳು. ಅವಳು ತನ್ನ ಬಂಧುಗಳಲ್ಲಿ ಹೇಳಿಕೊಂಡಳು. "ನನಗೆ ಮೃತ್ಯುವಾಗಲಿತ್ತು ಆದರೆ ನನ್ನ ಗುರುಗಳು ಅದರಿಂದ ಪಾರು ಮಾಡಿದರು" ಎಂದು . ರಾಜನ ಬಳಿಯೂ ಇದನ್ನೇ ಹೇಳಿದಳು ರಾಜ ಹೇಳಿದ "ನೀನು ಇಂತಹ ನಾಟಕ ಮಾಡುತ್ತಲೇ ಇರುವೆ" ಕಾಲ ಬಂದಿದ್ದರೆ ಬಿಟ್ಟು ಹೋಗುತ್ತಿದ್ದನೆ? ಈ ಸಂತ ಹೀಗೆ ಏನೋ ಹರಟುತ್ತಾನೆ ಎಂದು" ರಾಜನ ಮಾತಿಗೆ ರಾಣಿ ಒಪ್ಪಿಗೆ ಹೇಗೆ ಕೊಟ್ಟಾಳು? ಅವಳು

ಖುಷಿ–ಖುಷಿಯಾಗಿ ತನ್ನ ಕೊಠಡಿಯಲ್ಲಿ ಹೋಗಿ ಮಲಗಿದಳು. ಕೆಲ ಸಮಯದ ನಂತರ ಕಾಲನು ಸರ್ಪದ ರೂಪಿನಿಂದ ಬಂದನು. ಅದು ರಾಣಿಯನ್ನು ಕಚ್ಚಿತು. ಸರ್ಪ ಕಚ್ಚಿದ ಕೂಡಲೆ ರಾಣಿಯು ಜೋರಾಗಿ ಕೂಗಾಡಿದಳು. ಕೂಗನ್ನು ಕೇಳಿ ನೌಕರರು ಓಡೋಡಿ ಬಂದರು. ಆಗ ಸರ್ಪವು ನೀರು ಹೋಗಲು ಮಾಡಿರುವ ಸಣ್ಣ ರಂಧ್ರದಲ್ಲಿ ಹೊರಟು ಹೋಯಿತು. ತನ್ನ ಗುರುದೇವರನ್ನು ಕರೆಯುತ್ತಾ ರಾಣಿಯು ಮೂರ್ಛೆ ಹೋದಳು. ಆಗ ಕರುಣಾಮಯ ಕಬೀರ್ ಪರಮೇಶ್ವರರು ಅಲ್ಲಿ ಪ್ರಕಟವಾದರು. ಜನರಿಗೆ ತೋರಿಸಿಕೊಳ್ಳಲು ಮಂತ್ರವನ್ನು ಹೇಳಿದರು. (ಅವರು ಯಾವುದೇ ಮಂತ್ರ–ತಂತ್ರದ ಅವಶ್ಯಕತೆ ಇಲ್ಲದೆ, ಬದುಕಿಸಲು ಸಾಮರ್ಥ್ಯವುಳ್ಳವರಾಗಿದ್ದರು) ಇಂದ್ರಮತಿಯನ್ನು ಬದುಕಿಸಿದರು. ರಾಣಿಯು ಧನ್ಯವಾದಗಳನ್ನು ಹೇಳಿದಳು. "ಮುಕ್ತಿದಾತ ನೀವು ಇರದಿದ್ದರೆ ನನ್ನ ಸಾವು ಆಗುತ್ತಿತ್ತು" ಎಂದಳು. ಕಬೀರ್ ಪರಮೇಶ್ವರ ಹೇಳಿದರು. "ನಾನು ಕಾಲನನ್ನು ನಿನ್ನ ಮನೆಯೊಳಗೆ ನುಸುಳಲು ಬಿಡುತ್ತಿರಲಿಲ್ಲ. ನಿನ್ನ ಮೇಲೆ (ಸರ್ಪದ ಕಚ್ಚುವಿಕೆ) ಆಕ್ರಮಣವಾಗಲು ಬಿಡುತ್ತಿರಲಿಲ್ಲ. ಆದರೆ ನಿನಗೆ ವಿಶ್ವಾಸ ಬರುತ್ತಿರಲಿಲ್ಲ. ನೀನಾಗ ಯೋಚಿಸುತ್ತಿದ್ದೆ ನನಗೆ ಯಾವುದೇ ಆಪತ್ತು ಬರುವಂತಿರಲಿಲ್ಲ. ಗುರುಗಳು ಸುಮ್ಮನೆ ಏನೋ ಇಲ್ಲದ್ದನ್ನು ಹೇಳಿ ನಾಮೋಪದೇಶವನ್ನು ಕೊಟ್ಟರು." ಆದ್ದರಿಂದ ನಿನಗೆ ಸ್ವಲ್ಪ ತೊಂದರೆ ನೀಡಿದೆ. ಹೀಗಿಲ್ಲವಾದರೆ ನೀನು ನಂಬುತ್ತಿರಲಿಲ್ಲ.

ಧರ್ಮದಾಸ್ ಯಹಾಂ ಘನಾ ಅಂದೇರಾ । ಬಿನ ಪರಿಚಯ ಜೀವ ಜಮ್ ಕಾ ಚೆರಾ ॥

ಕಬೀರ್ ಪರಮೇಶ್ವರರು ಹೇಳಿದರು ಈಗ ನಾನು ಯಾವಾಗ ಇಚ್ಛಿಸುವೆನೋ, ಆವಾಗ ನಿನ್ನ ಮೃತ್ಯು ಆಗುವುದು. ಗರೀಬ್ ದಾಸರು ಹೇಳುತ್ತಾರೆ :–

ಗರೀಬ್, ಕಾಲ ಡರ್ೈ ಕರತಾರ ಸೆ, ಜಯ ಜಯ ಜಯ ಜಗದೀಶ್ ।<br>
ಜೌರಾ ಜೌರೀ ಝಾಡತಿ, ಪಗ್ ರಜ್ ಡಾರೆ ಶೀಶ್ ॥

ಈ ಕಾಲನು ಕಬೀರ್ ಭಗವಾನನಿಗೆ ಹೆದರುತ್ತಾನೆ. ಹಾಗೂ ಈ ಸಾವು ಕಬೀರ್ ಪರಮೇಶ್ವರರ ಚಪ್ಪಲಿಯ ಧೂಳು ಹೊಡೆಯುತ್ತದೆ. ಅರ್ಥಾತ್ ನೌಕರನಿಗೆ ಸಮ ನಂತರ ಆ ಧೂಳನ್ನು ತನ್ನ ತಲೆಯಲ್ಲಿ ಧರಿಸಿ, ನಾನು ನಿಮ್ಮ ಭಕ್ತನ ಬಳಿಗೆ ಹೋಗುವುದಿಲ್ಲ ಎಂದು ಹೇಳುತ್ತದೆ.

ಗರೀಬ್, ಕಾಲ ಜೋ ಪೀಸ್ೈ ಪೀಸನಾ, ಜೌರಾ ಹೈ ಪನಿಹಾರ್ ।<br>
ಯೆ ದೊ ಅಸಲ್ ಮಜೂರ್ ಹೈ, ಮೇರೇ ಸಾಹೇಬ್ ಕೆ ದರಬಾರ್ ॥

ಈ ಕಾಲನು ಇಲ್ಲಿನ 21 ಬ್ರಹ್ಮಾಂಡಗಳ ಭಗವಂತ (ಬ್ರಹ್ಮ) ನಾಗಿದ್ದಾನೆ. ಇವನು ಬ್ರಹ್ಮಾ–ವಿಷ್ಣು–ಮಹೇಶ್ವರರ ತಂದೆಯಾಗಿದ್ದಾನೆ. ಇವನು ನಮ್ಮ ಕಬೀರ್ ಪರಮೇಶ್ವರರ ನೌಕರನಾಗಿದ್ದಾನೆ. (ಹಿಟ್ಟು ಬೀಸುತ್ತಾನೆ) ಈ ಮೃತ್ಯು ಕಬೀರ್ ಪರಮೇಶ್ವರರಲ್ಲಿ ನೀರು ತುಂಬಿಸುವವಳು. ಅಂದರೆ ಒಬ್ಬಳು ವಿಶೇಷವಾದ ನೌಕರಳು. ಈ ಇಬ್ಬರು ಕಬೀರ್ ಪರಮೇಶ್ವರರ ದರಬಾರಿನಲ್ಲಿ ನೌಕರರಾಗಿದ್ದಾರೆ. ಕೆಲವು ದಿನಗಳ ನಂತರ ಕಬೀರ್ ಪರಮೇಶ್ವರರು (ಕರುಣಾಮಯಿ) ಪುನಃ ಬಂದರು. ಇಂದ್ರಮತಿಗೆ 'ಸತ್ಯನಾಮ' (ಎರಡನೆ ಮಂತ್ರ) ಉಪದೇಶ ಮಾಡಿದರು.

ಇನ್ನೂ ಕೆಲವು ಸಮಯದ ನಂತರ, ಇಂದ್ರಮತಿಯ ಶ್ರದ್ಧೆಯನ್ನು ನೋಡಿ ಅವಳಿಗೆ ಸಾರನಾಮವನ್ನು ಉಪದೇಶಿಸಿದರು. ಕಬೀರ್ ಪರಮೇಶ್ವರರು ಆಗಾಗ ಇಂದ್ರಮತಿಗೆ ದರ್ಶನ ಕೊಡಲು ಬರುತ್ತಿದ್ದರು. ಆಗ ಇಂದ್ರಮತಿಯು ತನ್ನ ಪತಿಗೆ ತಿಳಿಸಿ ಹೇಳಿ. ಅವರೂ ತಮ್ಮನ್ನು ಒಪ್ಪಿ ಅನುಸರಿಸಲಿ, ರಾಜ ಚಂದ್ರವಿಜಯನಿಗೆ ಕಬೀರರು ಹೇಳಿದರು. "ರಾಜಾ ಇದು ಎರಡು ದಿನ ರಾಜ್ಯ–ವೈಭವ ಪುನಃ 84 ಲಕ್ಷ ಯೋನಿಗಳಲ್ಲಿ ಹುಟ್ಟಿ ಬರಬೇಕು" ಚಂದ್ರ ವಿಜಯನು ಹೇಳಿದನು.

ಭಗವಾನ್ ನಾನಂತೂ ನಾಮೋಪದೇಶವನ್ನು ಪಡೆಯುವುದಿಲ್ಲ. ಆದರೆ ನಿಮ್ಮ ಶಿಷ್ಯಳನ್ನು ತಡೆಯುವುದಿಲ್ಲ. ಅವಳು ಇಷ್ಟ ಪಟ್ಟರೆ ಖಜಾನೆಯನ್ನೇ ದಾನ ಮಾಡಲಿ, ಸತ್ಸಂಗವನ್ನು ಮಾಡಲಿ ನಾನು ಅಡ್ಡಿಪಡಿಸುವುದಿಲ್ಲ. ಕಬೀರ್ ಪರಮೇಶ್ವರರು ಕೇಳಿದರು. (ಕರುಣಾಮಯ) ನೀವು ನಾಮೋಪದೇಶವನ್ನು ಏಕೆ ತೆಗೆದುಕೊಳ್ಳುವುದಿಲ್ಲ? ರಾಜ ಹೇಳಿದ "ನಾನು ದೊಡ್ಡ–ದೊಡ್ಡ ರಾಜರ ಸಭಾ–ಸಮಾರೋಹಗಳಿಗೆ ಹೋಗಬೇಕಾಗುವುದು. ಕಬೀರರು ಕೇಳಿದರು :– ಸಭೆಗೆ ಹೋಗಲು ನಾಮವು ಏನು ಮಾಡುತ್ತದೆ! ಸಭೆಗೆ ಹೋಗು. ಅಲ್ಲಿ ದ್ರಾಕ್ಷಿ–ಬಾದಾಮಿ–ಗೋಡಂಬಿ ತಿನ್ನು, ಹಾಲು ಕುಡಿ ಶರಬತ್ ಕುಡಿಯಿರಿ, ಆದರೆ ಸಾರಾಯಿ (ಮದ್ಯಪಾನ) ಕುಡಿಯ ಬೇಡ, ಅದು ಮಹಾಪಾಪ, ಆದರೆ ರಾಜ ಒಪ್ಪಲಿಲ್ಲ.

ರಾಣಿಯ ಪ್ರಾರ್ಥನೆ ಕೇಳಿ ಕರುಣಾಮಯ (ಕಬೀರ್)ರು ಪುನಃ ತಿಳಿ ಹೇಳಿದರು ನಾಮೋಪದೇಶವಿರದೆ ಈ ಜೀವನ ಹೀಗೆಯೇ ವ್ಯರ್ಥವಾಗಿ ಹೋಗುವುದು. ನೀವು ನಾಮೋಪದೇಶ ಪಡೆಯಿರಿ. ಎಷ್ಟು ಹೇಳಿದರೂ ರಾಜ ಒಪ್ಪಲಿಲ್ಲ ಆಗ ರಾಣಿಗೆ ಕರುಣಾಮಯರು ಹೇಳಿದರು. ಮಗಳೇ ಈ ಎರಡು ದಿನದ ಸುಖವನ್ನು ಕಂಡು ಇವರ ಬುದ್ಧಿ ಭ್ರಷ್ಟವಾಗಿದೆ. ನೀನು ಪ್ರಭುವಿನಲ್ಲಿ ಭಕ್ತಿ ಇಡು, ನೀನು ನಿನ್ನ ಆತ್ಮ ಕಲ್ಯಾಣ ಮಾಡಿಕೋ, ಇಲ್ಲಿ ಯಾರೂ ಯಾರಿಗೂ ಪತಿ ಅಲ್ಲ. ಯಾರು ಯಾರಿಗೂ ಪತ್ನಿ ಅಲ್ಲ. ಪೂರ್ವ ಜನ್ಮದ ಸಂಸ್ಕಾರದಂತೆ ಎರಡು ದಿನದ ಸಂಬಂಧವಷ್ಟೆ, ನೀನು ನಿನ್ನ ಕರ್ಮವನ್ನು ಮಾಡುತ್ತಿರು ಈಗ ಇಂದ್ರಮತಿ **80** ವರ್ಷಗಳ ಮುದುಕಿಯಾಗಿದ್ದಾಳೆ. ಅವಳು **40** ವರ್ಷದವಳಿರುವಾಗಲೆ ಸಾಯಬೇಕಿತ್ತು. ಯಾವಾಗ ಶರೀರ ನಿತ್ರಾಣದಿಂದ ಕಂಪಿಸತೊಡಗಿತೋ ಆಗ ಕರುಣಾಮಯ ಪರಮೇಶ್ವರರು ಕೇಳಿದರು. ಮಗಳೆ ಇಂದ್ರಮತಿ ನೀನೇನು ಬಯಸುವೆ? ಸತ್ಯಲೋಕಕ್ಕೆ ಹೋಗಲು ಬಯಸುವೆಯೋ? ಆಗ ಇಂದ್ರಮತಿ ಹೇಳಿದರು ನಾನು ತಯಾರಾಗಿದ್ದೇನೆ. ಪ್ರಭು ಖಂಡಿತ ತಯಾರಾಗಿದ್ದೇನೆ. ನಿನ್ನ ಮೊಮ್ಮಗ ಮೊಮ್ಮಗಳಲ್ಲಿ ಏನಾದರೂ ಮಮತೆ ಇದೆಯೇ? ಎಂದರು ಕರುಣಾಮಯರು. ಖಂಡಿತಾ ಇಲ್ಲವೆಂದಳು ರಾಣಿ. ತಾವು ಅಂತಹ ನಿರ್ಮಲವಾದ ಜ್ಞಾನವನ್ನು ನೀಡಿರುವಿರಿ. ಈ ಕೊಳಕಿನ ಲೋಕವನ್ನು ಏಕೆ ಬಯಸಲಿ? ಕಬೀರ್ ಪರಮೇಶ್ವರರು ಹೇಳಿದರು 'ನಡಿ ಮಗಳೆ, ತಕ್ಷಣ ರಾಣಿ ಪ್ರಾಣ ತ್ಯಜಿಸಿದಳು. ಪರಮೇಶ್ವರರು ಮುಕ್ತವಾದ ಇಂದ್ರಮತಿಯ ಆತ್ಮವನ್ನು ಮೇಲಕ್ಕೆ ಕರೆದುಕೊಂಡು ಹೋದರು. ಇದೇ (ಬ್ರಹ್ಮಾಂಡದಲ್ಲಿ) ಒಂದು ಮಾನಸ ಸರೋವರವಿದೆ. ಆ ಮಾನಸ ಸರೋವರದಲ್ಲಿ ಆತ್ಮಕ್ಕೆ ಸ್ನಾನ ಮಾಡಿಸಬೇಕಾಗುತ್ತದೆ. ಈ ಮುಕ್ತಾತ್ಮಳನ್ನು ಆ ಮಾನಸ ಸರೋವರದಲ್ಲಿ ಕೆಲ ಸಮಯದವರೆಗೆ ಇರಿಸಿದರು. ಈ ಆತ್ಮಕ್ಕೆ ತಮ್ಮ ಕಬೀರ್ ಸ್ವರೂಪವನ್ನು ಪ್ರಕಟಗೊಳಿಸಿದರು. (ದರ್ಶನ ಮಾಡಿಸಿದರು) ನಿನಗೇನಾದರೂ ಇಚ್ಛೆ ಇದ್ದರೆ (ಈ ಸಂಸಾರದಲ್ಲಿ) ಪುನಃ ನೀನು ಜನ್ಮ ತಾಳಬೇಕಾಗುತ್ತದೆ. ಇಚ್ಛೆ ಇದೆಯಾ? ಎಂದು ಕೇಳಿದರು.

ಒಂದು ವೇಳೆ ಮನದಲ್ಲಿ ಈ ಸಂಸಾರದ ಬಯಕೆ ಇದ್ದರೆ, ಸತ್ಯಲೋಕಕ್ಕೆ ಹೋಗಲು ಸಾಧ್ಯವಿಲ್ಲ. ಇಂದ್ರಮತಿಯು ಹೇಳಿದಳು. ಸ್ವಾಮಿ ತಾವು ಅಂತರ್ಯಾಮಿ, ನನಗೆ ಯಾವುದೇ ಇಚ್ಛೇ ಇಲ್ಲ. ನಿಮ್ಮ ಚರಣಗಳ ಇಚ್ಛೆ ಇದೆ. ಆದರೆ ನನ್ನ ಮನದಲ್ಲಿ ಒಂದು ಸಂಶಯವಿದೆ. ಯಾರು ನನ್ನ ಪತಿಯಾಗಿದ್ದರೋ, ಅವರು ನನಗೆ ಯಾವುದೇ ಧಾರ್ಮಿಕ ಕರ್ಮ ಮಾಡಲು ಅಡ್ಡಿಪಡಿಸಲಿಲ್ಲ. ಈಗಿನ ಕಾಲದ ಪತಿಯರು ಬಹಳ ಅಡ್ಡಿಪಡಿಸುತ್ತಾರೆ. ಆದರೆ ಇವರು ಹಾಗೆ ಮಾಡಲಿಲ್ಲ. ಆದ್ದರಿಂದ ನನಗೆ ನಿಮ್ಮ ಚರಣಗಳಲ್ಲಿ ಇಚ್ಛೆಯಾಯಿತು. ಅಡ್ಡಿ ಮಾಡಿದ್ದರೆ ತಮ್ಮ ಚರಣ ಭಾಗ್ಯ ನನಗೆ ದೊರೆಯುತ್ತಿರಲಿಲ್ಲ. ನನ್ನ ಕಲ್ಯಾಣವೂ ಆಗುತ್ತಿರಲಿಲ್ಲ. ಅವರ ಈ ಶುಭ ಕರ್ಮಕ್ಕೆ ಏನಾದರೂ ಲಾಭ ಸಿಗುವುದಾದರೆ, ಅದು ಅವರಿಗೂ ದೊರೆಯಲಿ. ದಾತಾ ಕಬೀರ್ ಪರಮೇಶ್ವರರು ನೋಡಿದರು.

ಈ ಮುಗ್ಧಳು ಇನ್ನೂ ಇವನ ಹಿಂದೆ ಸಿಲುಕಿದ್ದಾಳೆ ಎಂದು ಯೋಚಿಸಿ ಹೇಳಿದರು. ನೀನು ಇನ್ನೂ 2–3 ವರ್ಷಗಳು ಇಲ್ಲಿಯೇ ಇರು.

ಎರಡು ವರ್ಷಗಳು ಕಳೆಯಿತು. ರಾಜನಿಗೆ ಮರಣ ಕಾಲ ಬಂತು. ಏಕೆಂದರೆ ಅವನು ನಾಮೋಪದೇಶವನ್ನು ಪಡೆದಿರಲಿಲ್ಲ. ಯಮನ ದೂತರು ಬಂದರು. ರಾಜಾ ಅಂಗಳದಲ್ಲಿ ತಲೆ ತಿರುಗಿ ಬಿದ್ದ. ಯಮಧೂತರು ಅವನ ಕುತ್ತಿಗೆ ಹಿಸುಕಿದರು. ರಾಜನು ಬಟ್ಟೆಯಲ್ಲಿ ಮಲ–ಮೂತ್ರಗಳನ್ನು ಮಾಡಿಕೊಂಡ. ಕರುಣಾಮಯರು ರಾಣಿಗೆ ತೋರಿಸಿದರು. "ನೋಡು ನಿನ್ನ ರಾಜನನ್ನು" ರಾಣಿ ಬೇಡಿದಳು. ಅವರ ಧರ್ಮಕಾರ್ಯ ಸಹಯೋಗಕ್ಕೆ ಫಲ ಸಿಗುವುದಾದರೆ ದಯಮಾಡಿ ಕೊಡಿಸಿರಿ. ರಾಣಿಗೆ ಇನ್ನೂ ಸ್ವಲ್ಪ ಮಮತೆ ಉಳಿದಿತ್ತು. ಕಬೀರರು ಯೋಚಿಸಿದರು. ಇವಳು ಪುನಃ ಕಾಲನ ಜಾಲಕ್ಕೆ ಸಿಲುಕುವಳು ಎಂದು ಕೊಂಡು ಮಾನಸ ಸರೋವರದಿಂದ ಸೀದಾ ರಾಜನಿದ್ದಲ್ಲಿಗೆ ಬಂದರು. ಇವರನ್ನು ಕಂಡ ಯಮಧೂತರು, ಹೆಣದ ಮೇಲಿನ ಹದ್ದುಗಳು ಹಾರಿದಂತೆ ಹಾರಿ ಹೋದರು. ಚಂದ್ರ ವಿಜಯನಿಗೆ ಪ್ರಜ್ಞೆ ಬಂತು. ಎದುರಿಗೆ ಕರುಣಾಮಯರು ನಿಂತಿದ್ದರು. ಕೇವಲ ಚಂದ್ರವಿಜಯನ ಕಣ್ಣಿಗೆ ಮಾತ್ರ ಕಾಣಿಸಿಕೊಂಡರು. ಬೇರಾರಿಗೂ ಕಾಣಲಿಲ್ಲ. ರಾಜನು ಚರಣಗಳಿಗೆ ಬಿದ್ದು ಕ್ಷಮೆ ಯಾಚಿಸಿದ. ನನ್ನನ್ನು ಉಳಿಸಿರಿ ಎಂದು ಪ್ರಾರ್ಥಿಸಿದ.

ಏಕೆಂದರೆ ಅವನಿಗೆ ಅವನ ಜೀವ ಹೋಗುವುದೆಂದು ತಿಳಿದಿತ್ತು. (ಜೀವಿಗೆ ಜೀವ ಹೋಗುವಾಗ ಅರಿವು ಉಂಟಾಗುತ್ತದೆ) ರಾಜಾ ಅಂದೂ ಇದನ್ನೇ ಹೇಳಿದ್ದೆ. ಈಗಲೂ ಹೇಳುತ್ತಿರುವೆ. ನೀನು ನಾಮೋಪದೇಶವನ್ನು ಪಡೆಯಬೇಕಾಗುವುದು. ರಾಜ ಹೇಳಿದ. ನಾನೀಗ ನಾಮೋಪದೇಶ ಪಡೆಯುವೇನು. ಅಂದಾಗ ನಾನು ನಿನಗೆ ಇನ್ನೂ ಎರಡು ವರ್ಷಗಳ ಆಯಸ್ಸನ್ನು ಕೊಟ್ಟಿರುವೆ ಎಂದರು. ಈ ದಿನಗಳಲ್ಲಿ ನಿನ್ನ ಉಸಿರು–ಉಸಿರಿನಲ್ಲೂ ನಾಮ ಜಪವಿರಬೇಕು. ಇಲ್ಲವಾದರೆ ಕರ್ಮದಂಡವಾಗುತ್ತದೆ.

ಕಬೀರ್, ಜೀವನ್ ತೋ ಥೋಡಾ ಭಲಾ, ಜೈ ಸತ್ ಸುಮಿರಣ ಹೊ ।
ಲಾಖ್ ವರ್ಷ್ ಕಾ ಜೀವನಾ, ಲೇಖೇ ಧರೆ ನಾ ಕೊ॥

ಎರಡು ವರ್ಷಗಳಲ್ಲಿನ ನಾಮಸ್ಮರಣೆಯ ಫಲ–ಹಿಂದಿನ ಸುಕರ್ಮಕ್ಕೆ ಸಹಯೋಗ ಕೊಟ್ಟ ಫಲ ಇದರಿಂದಾಗಿ ಚಂದ್ರ ವಿಜಯನನ್ನೂ ಈ ಸಂಸಾರದಿಂದ ಪಾರು ಮಾಡಿದರು. ಕಬೀರ್ ದೇವರಿಗೆ ಜಯವೆನ್ನಿರಿ. "ಕಬೀರ್ ದೇವ್ ಕಿ ಜೈ" ಮುಕ್ತಿದಾತನಿಗೆ ಜೈ (ಬಂದೀಛೋಡ ಕೀ ಜೈ).

ಪರಮೇಶ್ವರ ನಿಜವಾದ (ದೃಢ) ಶ್ರದ್ಧಾಳುಗಳ ಆಯಸ್ಸನ್ನು ವೃದ್ಧಿಸುತ್ತಾರೆ. ಅವರ ಪರಿವಾರದವರನ್ನೂ ರಕ್ಷಿಸುತ್ತಾರೆ. ಎಂಬುದು ಮೇಲಿನ ಉದಾಹರಣೆಯಿಂದ ದೃಢವಾಯಿತು. ಈ ಪ್ರಮಾಣವು ಬಹಳ ಹಿಂದಿನದು. ಕಬೀರ್ ಪರಮೇಶ್ವರರ ಶಕ್ತಿಯಿಂದ, ಸದ್ಗುರು ರಾಮ್‌ಪಾಲ್ ಮಹಾರಾಜ ರವರು ವರ್ತಮಾನ ಕಾಲದಲ್ಲಿ ಸಾಧಾರಣ ವ್ಯಕ್ತಿ ನಂಬಲು ಆಗದಂತಹ ಕಷ್ಟಗಳ ನಿವಾರಣೆ, ಆಯಸ್ಸು ವೃದ್ಧಿ ಯಾಗಿರುವ, ಇನ್ನು ಅನೇಕ ಸಾಕಷ್ಟು ಪ್ರಮಾಣಗಳು ಓದಲು ಈ ಪುಸ್ತಕದಲ್ಲಿ ಸಿಗುತ್ತದೆ. "ಅಲೆಮಾರಿಗಳಿಗೆ ಮಾರ್ಗ ಸಿಗುವ ವಿಷಯ" ಎಂಬ ಲೇಖನದಲ್ಲಿ ನೋಡಬಹುದು.

## "ಪವಿತ್ರ ಪುರಾಣಗಳ ರಹಸ್ಯ"

ದಯವಿಟ್ಟು ಪುರಾಣಗಳನ್ನು ತಿಳಿಯಲು ಗಮನವಿಡಿರಿ ಶ್ರೀ ಬ್ರಹ್ಮಾಪುರಾಣ, ಶ್ರೀ ವಿಷ್ಣು ಪುರಾಣ ಹಾಗೂ ಶ್ರೀ ಶಿವ ಪುರಾಣ, ಬ್ರಹ್ಮನ ಲೀಲೆಯಿಂದ ಪ್ರಾರಂಭವಾಗುತ್ತದೆ. ಇದನ್ನು

ಪ್ರಥಮ ಅವ್ಯಕ್ತ ಗೀತೆಯ 7ನೇ ಅಧ್ಯಾಯದ 25ನೇ ಶ್ಲೋಕದಲ್ಲಿ ಹೇಳಿದೆ. ಗೀತೆಯ 11ನೇ ಅಧ್ಯಾಯದ 32ನೇ ಶ್ಲೋಕದಲ್ಲಿ ಹೇಳಿದೆ –"ನಾನು ಕಾಲನಾಗಿದ್ದೇನೆ". ಇವನನ್ನೇ ಕ್ಷರ ಪುರುಷ ಹಾಗೂ ಜ್ಯೋತಿ ನಿರಂಜನ ಎಂದು ಸಹ ಕರೆಯುತ್ತಾರೆ. ಇವನನ್ನೇ ಸದಾಶಿವ, ಕಾಲರೂಪಿ ಬ್ರಹ್ಮನೆಂದು ಸಹ ಹೇಳಲಾಗುತ್ತದೆ. ಇದೇ ಬ್ರಹ್ಮಾಂಡದಲ್ಲಿ ಒಂದು ಬ್ರಹ್ಮಲೋಕದ ರಚನೆ ಮಾಡಿ, ಅದರ ಮೇಲಿನ ಭಾಗದಲ್ಲಿರುತ್ತಾನೆ.

ಇದೇ ಮಹಾವಿಷ್ಣುವನ್ನು, ಮಹಾಬ್ರಹ್ಮಾ ಹಾಗೂ ಮಹಾಶಿವ ಎಂದೂ ಕರೆಯುತ್ತಾರೆ. ಆ ಕ್ಷೇತ್ರವನ್ನು ಕಾಶಿ ಎಂದೂ ಸಹ ಹೇಳುತ್ತಾರೆ ಅದರಲ್ಲಿ ರಜೋಗುಣ ಪ್ರಧಾನ. ಸತೋಗುಣ ಪ್ರಧಾನ, ತಮೋಗುಣ ಪ್ರಧಾನ ಎಂದು ಮೂರು ಸ್ಥಾನಗಳನ್ನು ಮಾಡಿಕೊಂಡು, ತನ್ನ ಪತ್ನಿ ದುರ್ಗಾ (ಮಹಾಲಕ್ಷ್ಮೀ) ಳನ್ನು ಜೊತೆಯಲ್ಲಿ ಇಟ್ಟು ಕೊಂಡು, ಮೂರು ಪುತ್ರರಾದ ರಜೋಗುಣ ಶ್ರೀ ಬ್ರಹ್ಮಾ, ಸತೋಗುಣ ಶ್ರೀ ವಿಷ್ಣು, ತಮೋಗುಣ ಶ್ರೀ ಶಿವ ಇವರನ್ನು ಉತ್ಪತ್ತಿ ಮಾಡಿ ಅಚೇತನ ಗೊಳಿಸುವನು. ಅಚೇತ ಸ್ಥಿತಿಯಲ್ಲಿಯೇ ಅವರನ್ನು ಕಾಪಾಡುತ್ತಲಿರುತ್ತಾನೆ. ಯುವಕನಾದ ಮೇಲೆ, ಶ್ರೀ ಬ್ರಹ್ಮಾ ನನ್ನು ಕಮಲದ ಹೂವಿನ ಮೇಲೆ, ಶ್ರೀ ವಿಷ್ಣು ವನ್ನು ಶೇಷನಾಗನ ಮೇಲೆ ಶ್ರೀ ಶಿವ ನನ್ನು ಕೈಲಾಸ ಪರ್ವತದ ಮೇಲೆ ಚೇತನಗೊಳಿಸುತ್ತಾನೆ. ಈ ಮೂವರಿಗೂ ಸ್ವಯಂ ಜ್ಞಾನವಿಲ್ಲ. ತಮ್ಮನ್ನು ಉತ್ಪತ್ತಿ ಮಾಡಿದವರು ಯಾರು ಎಂದು ತಿಳಿದಿಲ್ಲ. ಇದೇ ಕಾಲ ರೂಪಿ ಬ್ರಹ್ಮನು, ವಿಷ್ಣು ರೂಪಧಾರಣೆ ಮಾಡಿ, ತನ್ನ ನಾಭಿಯಿಂದ ಕಮಲವನ್ನು ಉತ್ಪತ್ತಿ ಮಾಡಿ, ಅದರ ಮೇಲೆ ಶ್ರೀ ಬ್ರಹ್ಮಾ ನನ್ನು ಇರಿಸಿ ಚೇತನಗೊಳಿಸುತ್ತಾನೆ. ಇವನೇ ಬೇಕೆನಿಸಿದಾಗ, ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಶ್ರೀ ಶಿವರೂಪವನ್ನು ಧಾರಣೆ ಮಾಡಿ ದೃಷ್ಟಿಗೋಚರವಾಗುತ್ತಾನೆ. ಈ ಕಾಲನು ತನ್ನ ವಾಸ್ತವಿಕ ರೂಪದಲ್ಲಿ ಎಂದೂ ಪ್ರಕಟವಾಗುವುದಿಲ್ಲ. ಈ ಕಾಲನು ಶ್ರೀಮದ್ ಭಗವದ್ಗೀತೆ ಬೋಧನೆಯ ಸಮಯದಲ್ಲಿ ಕಾಣಿಸಕೊಂಡಿದ್ದ. ಗೀತೆಯ 10 ಮತ್ತು 11ನೇ ಅಧ್ಯಾಯದಲ್ಲಿ ಸಾಕ್ಷಿ ಇದೆ. ಶ್ರೀ ಮದ್ ಭಗವದ್ಗೀತೆಯ 11ನೇ ಅಧ್ಯಾಯದ 47–48ನೇ ಶ್ಲೋಕಗಳಲ್ಲಿ ಹೇಳಿದೆ ಹೇ ಅರ್ಜುನ ! ಇದು ನನ್ನ ವಾಸ್ತವಿಕ ಕಾಲ ರೂಪ. ನೀನಲ್ಲದೆ ಈ ಹಿಂದೆ ಯಾರೂ ನೋಡಿಲ್ಲ. ಮುಂದೆಯೂ ನೋಡುವುದು ಸಾಧ್ಯವಿಲ್ಲ. ಈ ರೂಪವನ್ನು ನಾನು ನಿನ್ನ ಮೇಲೆ ಅನುಗ್ರಹಿಸಿ ತೋರಿಸುತ್ತಿದ್ದೇನೆ. ಇದು ಬ್ರಹ್ಮನಾದ ನನ್ನ ಸಾವಿರ ಭುಜಗಳ ಹಾಗೂ ನೇತ್ರ ಮೊದಲಾದ ಕಾಲರೂಪ. ವೇದಗಳಲ್ಲಿ ವರ್ಣಿಸಿರುವ ವಿಧಾನದಂತೆ ಯಜ್ಞ 'ಓಂ' ನಾಮ ಜಪ. ಮೊದಲಾದವುಗಳಿಂದ ಎಂದಿಗೂ ನೋಡಲು ಸಾಧ್ಯವಿಲ್ಲ. ಭಾವಾರ್ಥವೇನೆಂದರೆ, ವೇದಗಳಲ್ಲಿ ವರ್ಣಿಸಿರುವ ವಿಧಗಳಿಂದ ಪ್ರಭುವು ದೊರೆಯುವುದಿಲ್ಲ. ಆದ್ದರಿಂದ ಋಷಿ ಹಾಗೂ ಮಹರ್ಷಿಗಳು, ವೇದಗಳಲ್ಲಿನ 'ಓಂ' ನಾಮವನ್ನು ಪ್ರಭು ಪ್ರಾಪ್ತಿಯ ನಾಮವೆಂದು ತಿಳಿದು, 'ಓಂ' ನಾಮ ಜಪ ಹಾಗೂ ಯಜ್ಞಗಳನ್ನು ಮಾಡಿ, ಘೋರ ಸಾಧನೆಗಳನ್ನು ಮಾಡಿದರು. ಆದರೆ 'ಬ್ರಹ್ಮ'ನ ದರ್ಶನವಾಗಲಿಲ್ಲ. ಯಾರೂ ಕೆಲವರು ಕಮಲಗಳ ಪ್ರಕಾಶ ನೋಡಿದರು. ಯಾರೋ ಕೆಲವರು ಶರೀರದಲ್ಲಿ ಜ್ಯೋತಿಯನ್ನು ನೋಡಿದರು. ಹಾಗೂ ಧ್ವನಿ ಕೇಳಿದರು. ಇದು ಕಾಲನ (ಬ್ರಹ್ಮ) ಮೋಸವಾಗಿದೆ. ಯಾರು–ಯಾರೋ ಸಾವಿರ ಕಮಲಗಳಿಂದ ಸಾವಿರ ಜ್ಯೋತಿಗಳು ಹೊರಟಿರುವುದನ್ನು ಕಂಡು ಪ್ರಭು ಪ್ರಾಪ್ತಿಯಾಯಿತು. ಎಂದೇ ತಿಳಿದರು. ಇದು ಹೇಗೆಂದರೆ, ಯಾವುದಾದರೂ ಸ್ಥಾನದಲ್ಲಿ ಒಂದೇ ಬಣ್ಣದ ಸಾವಿರ ಬಲ್ಬ್‌ಗಳು ಒಂದು ಮತ್ತೊಂದರ ಜೊತೆ ಸೇರಿ, ವೃತ್ತಾಕಾರದಲ್ಲಿ ಜೋಡಿಸಿದ್ದಾರೋ ಎಂಬಂತೆ ದೂರದಿಂದ ನೋಡುವವರಿಗೆ, ಒಂದು ಪ್ರಕಾಶದ ಸಮೂಹವೇ ಕಾಣಿಸಿಕೊಳ್ಳುತ್ತದೆ. ಅತಿ ಹತ್ತಿರ ಬಂದಾಗ ಇದು ಬಲ್ಬ್‌ಗಳ (ಗುಚ್ಛಗಳು) ಪ್ರಕಾಶವೆಂದು ತಿಳಿಯುತ್ತದೆ.

ಇದೇ ರೀತಿ ಕೆಲ ಸಾಧಕರು ಹಠ ಯೋಗವನ್ನು ಮಾಡಿ ಶರೀರದಲ್ಲಿ ಅಂತರಮುಖವಾಗಿ,

ಕೆಲವು ಅತಿಶಯಗಳನ್ನು ನೋಡಿ, ಪ್ರಭುವಿನ, ಪ್ರಾಪ್ತಿ ಎಂದು ತಿಳಿಯುತ್ತಾರೆ. ಅದೇ ಕಾಲನ ಜಾಲವನ್ನು ಆನಂದವೆಂದು ತಿಳಿದು, ತಮ್ಮ ಬಹು ಮೂಲ್ಯವಾದ ಜೀವನವನ್ನು ನಷ್ಟ ಮಾಡಿಕೊಳ್ಳುತ್ತಾರೆ. ವೇದಗಳಲ್ಲಿ ಸ್ಪಷ್ಟವಾಗಿ ಬರೆದಿವೆ, ಏನೆಂದರೆ ಪರಮೇಶ್ವರನು ಸಶರೀರನಾಗಿದ್ದಾನೆ. ಯಜುರ್ವೇದದ 1ನೇ ಅಧ್ಯಾಯದ 15ನೇ ಮಂತ್ರ ಹಾಗೂ 5ನೇ ಅಧ್ಯಾಯದ 1ನೇ ಮಂತ್ರದಲ್ಲಿ ಪ್ರಮಾಣವಿದೆ.

ಅಗ್ನೇ ತನೂರ ಅಸೀ ವಿಷ್ಣುವೇ ತ್ವಾ ಸೋಮಸ್ಯ ತನೂರ ಅಸಿ ।

ಇದರ ಶಬ್ದಾರ್ಥ ಹೀಗಿದೆ :– ಪರಮೇಶ್ವರನು ಸಶರೀರನಾಗಿದ್ದಾನೆ. ಆ ಸರ್ವರನ್ನು ಪಾಲಿಸುವ ಅಮರ ಪುರುಷ (ಸತ್ಯಪುರುಷ) ನಿಗೆ ಶರೀರವಿದೆ. ಅರ್ಥಾತ್ ಪರಮೇಶ್ವರನು ಆಕಾರದಲ್ಲಿರುವನು. ಇದರಿಂದಲೇ ಋಷಿಗಳು ಪ್ರಭು ದರ್ಶನಕ್ಕಾಗಿ ಘೋರವಾದ ಸಾಧನೆಗಳನ್ನು ಮಾಡಿದರು. ಆದರೆ ವೇದಗಳಲ್ಲಿ ವರ್ಣಿಸುವ ವಿಧಿಯಿಂದ ಪ್ರಭು ಪ್ರಾಪ್ತಿ ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಈವರೆಗೆ ಎಲ್ಲ ಸಾಧಕರು ಋಷಿಗಳು ಮೊದಲಾದವರು, ತಮ್ಮ ಅನುಭವದ ಪುಸ್ತಕವನ್ನು ರಚಿಸಿದರು. ಅದು ವೇದ ಜ್ಞಾನಕ್ಕೆ ವಿರುದ್ಧವಾಗಿದೆ. ಈಗ ಎಲ್ಲ ಭಕ್ತ ಸಮಾಜ, ಪವಿತ್ರ ವೇದಗಳ ಸ್ಥಾನದಲ್ಲಿ, ಬೇರೆ ಮಹರ್ಷಿಗಳು ಹಾಗೂ ಸಂತರ ಅನುಭವದಿಂದ ತಯಾರಾದ ಪುಸ್ತಕದ ಜ್ಞಾನದ ಮೇಲೆ, ಆಧಾರಿತವಾಗಿದ್ದಾರೆ.

ಪವಿತ್ರವೇದಗಳ ಹಾಗೂ ಶ್ರೀಮದ್ ಭಗವದ್ಗೀತೆಯ ಜ್ಞಾನದಾತ ಬ್ರಹ್ಮ ಹೇಳುತ್ತಿದ್ದಾನೆ. ಏನೆಂದರೆ ಮೂರೂ ಗುಣಗಳು (ರಜೋಗುಣ–ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ–ಶಿವ) ಇಷ್ಟರೂಪದಲ್ಲಿ ಪೂಜೆಗೆ ಯೋಗ್ಯವಿಲ್ಲ. ಏಕೆಂದರೆ ಇವರು ಸಹ ನಾಶವಾಗುತ್ತಾರೆ. ಹಾಗೂ ಕರ್ಮದ ಫಲಗಳನ್ನು ಹೇಗಿದೆಯೋ ಹಾಗೆ ಕೊಡುತ್ತಾರೆ. ಪಾಪವನ್ನು ಕ್ಷಮಿಸುವುದಿಲ್ಲ (ನಾಶ). ಇವರುಗಳನ್ನು ಪೂಜಿಸುವ ಭಕ್ತರಿಗೆ, ಪ್ರಾರಂಭದಲ್ಲಿ ಬರೆದಿರುವ ಕಷ್ಟವನ್ನು ಅನುಭವಿಸಲೇ ಬೇಕಾಗುತ್ತದೆ. ಈ ಮೂರು ಪ್ರಭುಗಳ ಸಾಧನೆಯಿಂದ, ಕ್ಷಣಿಕ ಸಾಂಸಾರಿಕ ಸುಖವಂತೂ ಪ್ರಾಪ್ತವಾಗುತ್ತದೆ. ಆದರೆ ಪೂರ್ಣ ಮೋಕ್ಷ ದೊರೆಯುವುದಿಲ್ಲ. ಹಾಗೂ ಈ ಮೂರು ಪ್ರಭುಗಳ ಸಾಧನೆಯಿಂದ ಸಿಗುವ ಕ್ಷಣಿಕ ಲಾಭದ ಮೇಲೆ ಯಾರ ಶ್ರದ್ಧೆ ಇದೆಯೋ, ಅವರು ರಾಕ್ಷಸ ಸ್ವಭಾವವನ್ನು ಧಾರಣೆ ಮಾಡಿದವರಾಗಿ, ಮನುಷ್ಯರಲ್ಲಿ ನೀಚರಾಗಿ, ದುಷ್ಕರ್ಮ ಮಾಡುವವರಾಗಿ, ಮೂರ್ಖರೂ ಆಗಿ ನನ್ನನ್ನೂ (ಕಾಲ–ಬ್ರಹ್ಮ) ಭಜಿಸುವುದಿಲ್ಲ. (ಪ್ರಮಾಣ ಶ್ರೀ ಮದ್ ಭಗವದ್ಗೀತೆಯ 7ನೇ ಅಧ್ಯಾಯದ 12 ರಿಂದ 15ನೇ ಶ್ಲೋಕಗಳಲ್ಲಿ ಇದೆ) ಏಕೆಂದರೆ ಬ್ರಹ್ಮ ಸಾಧಕರು, ಹೆಚ್ಚಿನ ಸಮಯದವರೆಗೆ ಬ್ರಹ್ಮಲೋಕದಲ್ಲಿ ಮಹಾ ಸ್ವರ್ಗದಲ್ಲಿ, ತಮ್ಮ ನಾಮ ಹಾಗೂ ಪುಣ್ಯದ ಗಳಿಕೆಯ ಆಧಾರದಲ್ಲಿ ಇರುತ್ತಾರೆ. ಆದ್ದರಿಂದ ಕಾಲ ಹೇಳುತ್ತಿದ್ದಾನೆ. ಮೂರೂ ಪ್ರಭುಗಳಿಗಿಂತ ಹೆಚ್ಚು ಸೌಲಭ್ಯವನ್ನು ನಾನು ಕೊಡ ಬಲ್ಲೆ ಎಂದು. ಆದರೆ ಈ ಬ್ರಹ್ಮ ಲೋಕ ಹಾಗೂ ಕಾಲ (ಬ್ರಹ್ಮ) ಸಹ ನಾಶವಾಗುತ್ತಾನೆ. ಗೀತೆಯ 8ನೇ ಅಧ್ಯಾಯದ 16ನೇ ಶ್ಲೋಕದಲ್ಲಿ ಹೇಳಿದೆ. ಬ್ರಹ್ಮ ಲೋಕದವರೆಗೆ ಎಲ್ಲ ಲೋಕಗಳೂ ನಾಶವಾಗುವಂತಹವಾಗಿವೆ ಹಾಗೂ ಗೀತೆಯ 2ನೇ ಅಧ್ಯಾಯದ 12ನೇ ಶ್ಲೋಕದಲ್ಲಿ ಹಾಗೂ 4ನೇ ಅಧ್ಯಾಯದ 5ನೇ ಶ್ಲೋಕದಲ್ಲಿ, ಸ್ವಯಂ ಗೀತೆ ಜ್ಞಾನದಾತ ಬ್ರಹ್ಮ ಹೇಳುತ್ತಿದ್ದಾನೆ. ಏನೆಂದರೆ ನನಗೂ (ಬ್ರಹ್ಮ) ಜನ್ಮ–ಮೃತ್ಯಗಳಾಗುತ್ತವೆ. ಅರ್ಥಾತ್ ನಾಶವಾಗುತ್ತೇನೆ. ಆದ್ದರಿಂದ ಪವಿತ್ರ ಗೀತೆಯ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹೇಳಿದೆ ಏನೆಂದರೆ, ಯಾರು ನಾಲ್ಕನೆಯ ರೀತಿಯಲ್ಲಿ ನನ್ನ (ಬ್ರಹ್ಮನ) ಸಾಧಕರು ಜ್ಞಾನಿಯಾಗಿರುವರೋ, ಅವರು ವೇದಗಳ ಜ್ಞಾನದ ಆಧಾರದಲ್ಲಿ "ಕೇವಲ ಒಬ್ಬ ಪೂರ್ಣ ಪರಮಾತ್ಮನೇ ಇಷ್ಟ ರೂಪದಲ್ಲಿ ಪೂಜ್ಯವೆಂದು" ತಿಳಿದುಕೊಳ್ಳುತ್ತಾರೆ. ಹಾಗೂ ಅವನೇ ಪಾಪ ನಾಶಕ, ಪೂರ್ಣ ಮೋಕ್ಷದಾಯಕನಾಗಿದ್ದಾನೆ.

ಹಾಗೂ ಮಾನವ ಶರೀರವು ಪ್ರಭೂ ಪ್ರಾಪ್ತಿಗಾಗಿಯೇ ದೊರೆತಿರುವುದು ಎಂದೂ ತಿಳಿದುಕೊಳ್ಳುತ್ತಾರೆ. 'ಓಂ' ಇದೇ ಆ ಒಂದು ಮಂತ್ರ ಪ್ರಭು ಪ್ರಾಪ್ತಿಯ ಮಂತ್ರ ಎಂದು ಅವರು ವೇದಗಳನ್ನು ಸ್ವತಃ ಓದಿ ನಿಷ್ಕರ್ಷೆ ಮಾಡಿರುತ್ತಾರೆ. ಈ 'ಓಂ' ಮಂತ್ರವನ್ನು ಸಾವಿರಾರು ವರ್ಷಗಳವರೆಗೆ ಜಪಿಸುತ್ತಾ ಸಾಧನೆ ಮಾಡಿ. ತಮ್ಮ ಶರೀರ ಬಿಟ್ಟಿದ್ದಾರೆ. ಆದರೆ ಪ್ರಭು ದರ್ಶನವಾಗಿಲ್ಲ. ಬೇರೆ ಫಲಪ್ರಾಪ್ತಿಗಳು ಲಭಿಸಿವೆ. ಕೆಲವು ಸಿದ್ಧಿಗಳು ಲಭಿಸಿವೆ ಹಾಗೂ ಸ್ವರ್ಗ–ಮಹಾಸ್ವರ್ಗ ಮೊದಲಾದ ಉನ್ನತ ಪದವಿಗಳು ಪ್ರಾಪ್ತವಾಗಿವೆ. ಪುನಃ ಭಜನೆ ಹಾಗೂ ಪುಣ್ಯದ ಗಳಿಕೆ ಮುಗಿದ ನಂತರ, ಪುನಃ ಜನನ–ಮರಣ ಹಾಗೂ **84** ಲಕ್ಷ ಯೋನಿಗಳಲ್ಲಿ ಶರೀರ ಧಾರಣೆ ಮಾಡಿ. ಘೋರ ಕಷ್ಟ ಹಾಗೂ ನರಕದಲ್ಲಿ, ಪಾಪ ಕರ್ಮದ ಫಲದ ಭೋಗವು ದೊರೆಯುತ್ತಾ ಇರುವುದಾಗಿದೆ.

ಪವಿತ್ರ ಯಜುರ್ವೇದದ **40**ನೇ ಅಧ್ಯಾಯದ **10**ನೇ ಮಂತ್ರ ಹಾಗೂ **4**ನೇ ಅಧ್ಯಾಯದ **34**ನೇ ಮಂತ್ರಗಳಲ್ಲಿ ಮೇಲಿನ ಎರಡೂ ಶಾಸ್ತ್ರಗಳ ಜ್ಞಾನದಾತ ಬ್ರಹ್ಮನು ಹೇಳುತ್ತಿದ್ದಾನೆ "ಆ ಪೂರ್ಣ ಪರಮಾತ್ಮನ ವಿಷಯದಲ್ಲಿ ನಾನು (ಕಾಲ ರೂಪಿ ಬ್ರಹ್ಮ) ಏನೂ ತಿಳಿದಿಲ್ಲ. ಆ ಪೂರ್ಣ ಪರಮೇಶ್ವರನ ವಿಷಯದಲ್ಲಿ ಪೂರ್ಣ ತಿಳುವಳಿಕೆಯನ್ನು, ಅರ್ಥಾತ್ ತತ್ವಜ್ಞಾನವನ್ನು ಅಂದರೆ ಪರಮೇಶ್ವರವನ್ನು ಪಡೆಯುವ ವಿಧಿಯನ್ನು, ಪೂರ್ಣ ಮೋಕ್ಷ ಮಾರ್ಗದ ಅರಿವನ್ನು ತಿಳಿಯಲು ತತ್ವದರ್ಶಿ ಸಂತನನ್ನು ಹುಡುಕು, ನಂತರ ಅವರು ಹೇಳಿದಂತೆ ಸಾಧನೆ ಮಾಡು. ಅದಾದ ನಂತರ ಆ ಪರಮಪದ ಪರಮೇಶ್ವರನನ್ನು ಹುಡುಕಬೇಕು. ಅಲ್ಲಿಗೆ ಹೋದಂತಹ ಸಾಧಕ ಪುನಃ ಹಿಂತಿರುಗಿ ಈ ಪ್ರಪಂಚಕ್ಕೆ ಬರುವುದಿಲ್ಲ. ಅಂದರೆ ಪೂರ್ಣ ಮೋಕ್ಷ ಪ್ರಾಪ್ತಿ ಪಡೆದು, ಶಾಶ್ವತವಾಗಿ ಜನ್ಮ–ಮೃತ್ಯು, **84** ಲಕ್ಷ ಯೋನಿಗಳ ಕಷ್ಟ, ಹಾಗೂ ನರಕದ ನೋವಿನಿಂದ, ಕಷ್ಟದಿಂದ ಮುಕ್ತನಾಗುತ್ತಾನೆ. ಅಂದರೆ ಪೂರ್ಣ ಶಾಂತಿಯನ್ನು ಪಡೆದು (ಶಾಶ್ವತ ಸ್ಥಾನಮ್) ಅವಿನಾಶಿ ಲೋಕ ಅರ್ಥಾತ್ ಸತ್ಯಲೋಕವನ್ನು ಪಡೆಯುತ್ತಾನೆ. (ಪ್ರಮಾಣ ಗೀತೆಯ **15**ನೇ ಅಧ್ಯಾಯದ **1** ರಿಂದ **4**ನೇ ಶ್ಲೋಕಗಳು ಗೀತೆಯ **18**ನೇ ಅಧ್ಯಾಯದ **62**ನೇ ಶ್ಲೋಕ ಹಾಗೂ ಋಗ್ವೇದದ **1**ನೇ ಮಂಡಲ, **24**ನೇ ಸೂಕ್ತಿಯ, ಮಂತ್ರ **1–2**)

ತತ್ವದರ್ಶಿ ಸಂತರು ಸಿಗದಿರುವ ಕಾರಣ ಎಲ್ಲ ಋಷಿಗಳು ವೇದದ ಪ್ರಕಾರವಾಗಿ ಅದನ್ನು ಅನುಸರಿಸಿ, ಸಾಧನೆ ಮಾಡಿಯೂ ಮಹಾ ಕಷ್ಟದಲ್ಲಿಯೇ ಇರುವರು. ಆದ್ದರಿಂದ ಗೀತೆಯ **7**ನೇ ಅಧ್ಯಾಯದ **18**ನೇ ಶ್ಲೋಕದಲ್ಲಿ ಹೇಳಿದೆ ಏನೆಂದರೆ ಯಾವ ಜ್ಞಾನಿ ಆತ್ಮಗಳು ಇವೆಯೋ, ಅವು ಉದಾರವಾದವುಗಳು. ಏಕೆಂದರೆ ಪ್ರಭುವನ್ನು ಪಡೆಯಲೆಂದು, ತನು–ಮನ–ಧನಗಳಿಂದ ವೇದಗಳ ಅನುಸಾರ ಸಾಧನೆ ಮಾಡುತ್ತವೆ ಆದರೆ ಅವೂ ಕೂಡ ನನ್ನ (ಕಾಲ) ಬ್ರಹ್ಮನ (ಅನುತ್ತಮಾಮ್) ಅತಿ ಕೆಳಸ್ತರದ ಗತಿ ಅರ್ಥಾತ್ ಸಾಧನೆಯಿಂದ ದೊರೆವ ಲಾಭದಲ್ಲೇ ಆಶ್ರಿತವಾಗಿವೆ. ಇದರಿಂದ ಇವರಿಗೆ ಪೂರ್ಣ ಮೋಕ್ಷವಾಗಲು ಸಾಧ್ಯವಿಲ್ಲ. ಜನ್ಮ–ಮೃತ್ಯು ಹಾಗೂ ನಾನಾ ಪ್ರಾಣಿಗಳ ಶರೀರದಲ್ಲಿ ಹಾಗೂ ನರಕದಲ್ಲಿ ಕರ್ಮದ ಆಧಾರದಿಂದ ಕಷ್ಟವೂ ಸಮಾಪ್ತಿಯಾಗಲು ಸಾಧ್ಯವಿಲ್ಲ.

ಜ್ಯೋತಿ ನಿರಂಜನ (ಕಾಲ ರೂಪಿ ಬ್ರಹ್ಮ)ನು ಶಪಥ ಮಾಡಿದ್ದಾನೆ ಏನೆಂದರೆ ಯಾವಾಗಲೂ ಯಾರಿಗೂ ಯಾವುದೇ ಸಾಧನೆಗೂ, ನನ್ನ ವಾಸ್ತವಿಕ ಕಾಲರೂಪದಿಂದ ದರ್ಶನ ಕೊಡುವುದಿಲ್ಲ. ಈ ಕಾಲ ಬ್ರಹ್ಮನೇ, ತನ್ನ ಪುತ್ರರ (ಬ್ರಹ್ಮಾ–ವಿಷ್ಣು–ಶಿವ) ರೂಪಿನಲ್ಲಿ ಕಾಣಿಸಿಕೊಂಡು ನಾನಾ ಚರಿತ್ರೆಯನ್ನು ಮಾಡುತ್ತಾನೆ. ಈ ಕಾರಣದಿಂದ ಬೇರೆ ಜನರು ಯೋಚಿಸುತ್ತಾರೆ.

ಈ ಲೀಲೆಯನ್ನು ವಿಷ್ಣುವು ಮಾಡಿದ್ದಾನೆ. ಕೆಲವರು ಹೇಳುತ್ತಾರೆ, ಈ ಲೀಲೆಯನ್ನು ಬ್ರಹ್ಮಾನು ಮಾಡಿದ್ದಾನೆ. ಕೆಲವರು ಹೇಳುತ್ತಾರೆ, ಈ ಲೀಲೆಯನ್ನು ಶಿವನು ಮಾಡಿದ್ದಾನೆ ಎಂದು. ಹೀಗೆಯೇ

ಸಾಮಾನ್ಯ ವ್ಯಕ್ತಿ ಹೇಳುತ್ತಾನೆ ಶ್ರೀ ಬ್ರಹ್ಮಾ ರವರ ಉತ್ಪತ್ತಿ ವಿಷ್ಣುವಿನ ನಾಭಿಯ ಕಮಲದಿಂದಾಯಿತು. ಆ ಸಮಯದಲ್ಲಿ ಶ್ರೀ ವಿಷ್ಣುವಿನ ರೂಪದಲ್ಲಿ ಕಾಲನು, ತನ್ನ ನಾಭಿಯಿಂದ ಕಮಲವನ್ನು ಪ್ರಕಟಗೊಳಿಸಿದ್ದನು.

ಬ್ರಹ್ಮಾಪುರಾಣ (ಸೃಷ್ಠಿಯ ವರ್ಣನೆ ಹೆಸರಿನ ಅಧ್ಯಾಯ)ದಲ್ಲಿ ಶ್ರೀ ಲೋಮಹರ್ಷಣ ಋಷಿಯು (ಇವರನ್ನು ಸೂತ ರವರು ಎಂದೂ ಕರೆಯುತ್ತಾರೆ) ತನ್ನ ಗುರುದೇವರಾದ ವ್ಯಾಸ, ಋಷಿಗಳಿಂದ ಕೇಳಿದ ಜ್ಞಾನವನ್ನು ಹೇಳಿದ್ದಾರೆ. ಶ್ರೀ ವ್ಯಾಸ ರವರು ಶ್ರೀ ನಾರದ ಅವರಿಂದ ಕೇಳಿದ ಹಾಗೂ ಶ್ರೀ ನಾರದರು, ತನ್ನ ತಂದೆ ಶ್ರೀ ಬ್ರಹ್ಮಾ ಅವರಿಂದ ತಿಳುವಳಿಕೆಯನ್ನು ಪಡೆದಿದ್ದರು. ಶ್ರೀ ಬ್ರಹ್ಮಾ ರವರಿಗೆ ಸ್ವತಃ ತಾವು ಎಲ್ಲಿಂದ ಉತ್ಪನ್ನರಾದವರೆಂದು ಜ್ಞಾನವಿಲ್ಲ. (ಶ್ರೀದೇವಿ ಪುರಾಣ, ಮೂರನೆಯ ಸ್ಕಂದ) ಇದರ ಭಾವಾರ್ಥ ಪುರಾಣಗಳಲ್ಲಿನ ಜ್ಞಾನ ತಪ್ಪು ಎಂದು ಅಲ್ಲ. ಯಾವ ಜ್ಞಾನವು ಶ್ರೀ ಬ್ರಹ್ಮಾನು ಚೇತನರಾದ ನಂತರ ಹೇಳಲಾಗಿದೆಯೋ, ಅದು ಆ ಸ್ತರದವರೆಗೆ ಸರಿಯಾಗಿದೆ. ಆದರೆ ಅವರು ಚೇತನಗೊಳ್ಳುವ ಮೊದಲಿನ ಜ್ಞಾನ ದಂತ ಕಥೆ (ಲೋಕವೇದ) ಯಾಗಿದೆ. ಪೂರ್ಣ ಪರಮೇಶ್ವರನು ಪ್ರಥಮ ಸತ್ಯಯುಗದಲ್ಲಿ 'ಸತ್‌ಸುಕೃತ್' ಎಂಬ ಹೆಸರಿನಿಂದ ಪ್ರಕಟವಾಗಿ, ತತ್ವದರ್ಶಿ ಸಂತನ ರೂಪದಲ್ಲಿ ತತ್ವಜ್ಞಾನ ಮತ್ತು ವಾಸ್ತವಿಕ ಸೃಷ್ಠಿ ರಚನೆಯ ಜ್ಞಾನವನ್ನು, ಶ್ರೀ ಬ್ರಹ್ಮಾ ಹಾಗೂ ಶ್ರೀ ಮನು ಮೊದಲಾದವರಿಗೆ ನೀಡಿದ್ದರು. ಇವರುಗಳು ಕೇಳಿದರೂ ಕೇಳಿದಂತೆ ಇದ್ದರು. ಅದಾದ ನಂತರ, ಯಾವಾಗ ಶ್ರೀ ಬ್ರಹ್ಮಾನೊಂದಿಗೆ, ಇವರ ವಂಶಜರೇ ಕೇಳತೊಡಗಿದಾಗ, ಆ ಕೇಳಿದ-ಕೇಳದಂತಿದ್ದ ಜ್ಞಾನದ ಆಧಾರದಿಂದ ಕೆಲವನ್ನು ಸೇರಿಸಿ ಪೂರ್ವದ ಜ್ಞಾನವನ್ನು ಹೇಳಿದ್ದಾರೆ. ಈ ಕಾರಣದಿಂದ ಯಾವುದೇ ಪುರಾಣವು, ನಿರ್ಣಾಯಕ ಜ್ಞಾನದಿಂದ ಇರುವುದಿಲ್ಲ. ಯಾವುದೋ ಪುರಾಣದ ಆಧಾರದಲ್ಲಿ, ವಿಷ್ಣುವಿನ ಉತ್ಪತ್ತಿಯು ಬ್ರಹ್ಮಾನಿಂದಾಯಿತು ಎಂದು ಬರೆದಿದೆ. ಯಾವುದೋ ಪುರಾಣದಲ್ಲಿ ಬ್ರಹ್ಮಾನ ಉತ್ಪತ್ತಿ ಶ್ರೀ ವಿಷ್ಣು ವಿನಿಂದಾಯಿತು ಮುಂತಾಗಿ ಬರೆದಿದೆ. ಇದೇ ಕಾರಣದಿಂದ ಎಲ್ಲ ಋಷಿಗಳು ಹಾಗೂ ಶ್ರೀ ಬ್ರಹ್ಮಾ, ಶ್ರೀ ವಿಷ್ಣು ಹಾಗೂ ಶ್ರೀ ಶಿವ ಇವರು ಸಹ ಸಂಶಯದಲ್ಲೇ ಇದ್ದಾರೆ.

## "ಶ್ರೀ ಬ್ರಹ್ಮಾ ಹಾಗೂ ಶ್ರೀ ವಿಷುವಿನ ನಡುವೆ ಯುದ್ಧ"

ಶ್ರೀ ಶಿವಪುರಾಣ (ವಿದ್ವೇಶ್ವರ ಸಂಹಿತೆಯ 6ನೇ ಅಧ್ಯಾಯ, ಅನುವಾದಕರು "ದೀನ ದಯಾಲ ಶರ್ಮಾ" ಪ್ರಕಾಶಕರು, ರಾಮಾಯಣ ಪ್ರೆಸ್ ಮುಂಬಯಿ, ಪುಟ 67 ಹಾಗೂ ಸಂಪಾದಕ ಪಂಡಿತ ರಾಮಲಗ್ನ ಪಾಂಡೇಯ 'ವಿಶಾರದ' ಪ್ರಕಾಶಕ ಸಾವಿತ್ರ ಠಾಕೂರ, ಪ್ರಕಾಶನ, ರಥಯಾತ್ರಾ ವಾರಣಾಸೀ, ಬ್ರಾಂಚ್- ನಾಟೀ ಇಮಲೀ ವಾರಣಾಸಿಯ ವಿದ್ವೇಶ್ವರ ಸಂಹಿತಾ 6ನೇ ಅಧ್ಯಾಯ ಪುಟ 54 ಹಾಗೂ ಟೀಕಾಕಾರರು ಡಾ॥ ಬ್ರಹ್ಮಾನಂದ ತ್ರಿಪಾಠೀ ಸಾಹಿತ್ಯ ಆಯುರ್ವೇದ ಜ್ಯೋತಿಷ್ಯ ಆಚಾರ್ಯ ಎಂ. ಎ. ಪಿ. ಎಚ್. ಡಿ. ಡಿ. ಎಸ್. ಸಿ. ಏ ಪ್ರಕಾಶಕ : ಚೌಖಂಬಾ ಸಂಸ್ಕೃತ ಪ್ರತಿಷ್ಠಾನ್, 38 ಯೂ. ಏ, ಜವಾಹರ ನಗರ, ಬಂಗಲೋ ರೋಡ್, ದೆಹಲಿ, ಸಂಸ್ಕೃತ ಸಹಿತ ಶಿವಪುರಾಣದ ವಿದ್ವೇಶ್ವರ ಸಂಹಿತಾ 6ನೇ ಅಧ್ಯಾಯ ಪುಟ 45ರಲ್ಲಿ)

ಶ್ರೀ ಬ್ರಹ್ಮಾನು ಶ್ರೀ ವಿಷ್ಣುವಿನ ಹತ್ತಿರ ಬಂದನು ಆ ಸಮಯದಲ್ಲಿ ಶ್ರೀ ವಿಷ್ಣುವು ಲಕ್ಷ್ಮೀ ಸಹಿತ ಶೇಷ ಶಯ್ಯೆಯ ಮೇಲೆ ಮಲಗಿದ್ದರು. ಜೊತೆಯಲ್ಲಿ ಅನುಚರರೂ ಕುಳಿತಿದ್ದರು. ಶ್ರೀ ಬ್ರಹ್ಮಾನು, ವಿಷ್ಣುವಿನೊಂದಿಗೆ ಹೇಳಿದನು. ಮಗನೆ ಎದ್ದು ನೋಡು, ನಿನ್ನ ತಂದೆ ಬಂದಿರುವೆ. ನಾನು ನಿನ್ನ ಪ್ರಭುವಾಗಿರುವೆನು. ಇದಾದ ಮೇಲೆ ವಿಷ್ಣುವು ಹೇಳಿದನು ಬಾ ಕುಳಿತುಕೋ ನಾನು ನಿನ್ನ

ತಂದೆಯಾಗಿರುವೆ, ನಿನ್ನ ಮುಖವು ವಕ್ರವೇಕೆ ಆಯಿತು?. ಬ್ರಹ್ಮಾನು ಹೇಳಿದನು, ಹೇ ಪುತ್ರ ! ಈಗ ನಿನಗೆ ಅಭಿಮಾನವಾಗಿದೆ, ನಾನು ನಿನ್ನ ಸಂರಕ್ಷಕನಷ್ಟೇ ಅಲ್ಲ, ಆದರೆ ಸಮಸ್ತ ಜಗತ್ತಿನ ತಂದೆಯಾಗಿರುವೆ. ಶ್ರೀ ವಿಷ್ಣುವು ಹೇಳಿದರು ಯಲವೋ ಕಳ್ಳ ! ನಿನ್ನ ದೊಡ್ಡತನ ಏನು ತೋರಿಸುವೆ? ಎಲ್ಲ ಜಗತ್ತು ನನ್ನಲ್ಲಿ ನಿವಾಸವಾಗಿದೆ, ನೀನು ನನ್ನ ನಾಭಿ ಕಮಲದಿಂದ ಉತ್ಪನ್ನನಾದವನು, ಹಾಗಿದ್ದೂ ನನ್ನ ಬಳಿಯೇ ಇಂತಹ ಮಾತನಾಡುತ್ತಿರುವೆ. ಇಷ್ಟು ಹೇಳಿ ಇಬ್ಬರೂ ಪ್ರಭುಗಳು ಅಸ್ತ್ರದಿಂದ ಯುದ್ಧ ಮಾಡತೊಡಗಿದರು. ಒಬ್ಬರು ಮತ್ತೊಬ್ಬರ ವಕ್ಷಸ್ಥಳಕ್ಕೆ ಹೊಡೆದರು. ಇದನ್ನು ನೋಡಿದ ಸದಾಶಿವ (ಕಾಲರೂಪಿ ಬ್ರಹ್ಮ)ನು ಒಂದು ತೇಜೋಮಯವಾದ ಲಿಂಗವನ್ನು ಅವರಿಬ್ಬರ ನಡುವೆ ನಿಲ್ಲಿಸಿದ. ಆಗ ಅವರ ಯುದ್ಧ ಸಮಾಪ್ತವಾಯಿತು.

(ಈ ಮೇಲಿನ ವಿವರಣೆಯನ್ನು, ಗೀತಾಪ್ರೆಸ್ ಗೊರಖಪುರದ, ಶಿವ ಪುರಾಣದಿಂದ ತೆಗೆದುಕೊಂಡಿದೆ. ಆದರೆ ಮೂಲ ಸಂಸ್ಕೃತ ಸಂಹಿತೆ ಯಾವುದು ಅದು ಮೇಲೆ ಬರೆದಿದೆ. ಹಾಗೂ ಬೇರೆ ಇಬ್ಬರು ಸಂಪಾದಕರು ಹಾಗೂ ಪ್ರಕಾಶಕರ ಶಿವಪುರಾಣದಲ್ಲಿ ಸರಿಯಾಗಿದೆ.)

ವಿಚಾರ ಮಾಡಿರಿ :– ಶ್ರೀ ಶಿವ ಪುರಾಣ, ಶ್ರೀ ವಿಷ್ಣು ಪುರಾಣ, ಹಾಗೂ ಶ್ರೀ ದೇವಿ ಮಹಾಪುರಾಣಗಳಲ್ಲಿ ಮೂರೂ ಪ್ರಭುಗಳ ಹಾಗೂ ಸದಾಶಿವ (ಕಾಲರೂಪಿ ಬ್ರಹ್ಮ) ಹಾಗೂ ದೇವಿ (ಶಿವಾ–ಪ್ರಕೃತಿ) ಯರ ಜೀವನ ಲೀಲೆಗಳು ಇವೆ. ಇವುಗಳ ಆಧಾರದಿಂದ ಎಲ್ಲ ಋಷಿ ಜನರು ಹಾಗೂ ಗುರು ಜನರು, ಜ್ಞಾನವನ್ನು ಹೇಳುತ್ತಾರೆ. ಒಂದು ವೇಳೆ ಯಾರಾದರೂ ಪವಿತ್ರ ಪುರಾಣಗಳಿಂದ ಬೇರೆ ಜ್ಞಾನವನ್ನು ಹೇಳುತ್ತಾರೆ. ಆದರೆ ಅದು ಪತ್ಯಕ್ರಮದ ವಿರುದ್ಧ ಜ್ಞಾನವಾಗಿರುವುದರಿಂದ ವ್ಯರ್ಥವಾಗಿದೆ.

ಮೇಲಿನ ಯುದ್ಧದ ವಿವರಣೆಯು, ಪವಿತ್ರ ಶಿವಪುರಾಣದಿಂದ ತೆಗೆದುಕೊಂಡಿದೆ. ಇದರಲ್ಲಿ ಎರಡೂ ಪ್ರಭುಗಳು 5 ವರ್ಷದ ಮಕ್ಕಳಂತೆ ಜಗಳವಾಡುತ್ತಿದ್ದಾರೆ. ಅವರು ಹೇಳುತ್ತಿರುತ್ತಾರೆ ನೀನು ನನ್ನ ಮಗ, ಎರಡನೆಯವನು ಹೇಳುತ್ತಾನೆ ನೀನು ನನ್ನ ಮಗ, ನಾನು ನಿನ್ನ ತಂದೆ ಎಂದು. ಒಬ್ಬರು ಮತ್ತೊಬ್ಬರ ಕುತ್ತಿಗೆ ಪಟ್ಟಿ ಹಿಡಿದು ಮುಷ್ಠಿಯಿಂದ ಗುದ್ದಿ, ಕಾಲಿನಿಂದ ಒದ್ದು ಜಗಳ ಮಾಡುತ್ತಾರೆ. ಇದೇ ಚರಿತ್ರೆ ಮೂರು ಲೋಕಗಳ ಒಡೆಯರದ್ದಾಗಿದೆ.

ಮೇಲಿನ ಮೂರೂ ಪುರಾಣಗಳ (ಶ್ರೀ ಬ್ರಹ್ಮಾ ಪುರಾಣ, ಶ್ರೀ ವಿಷ್ಣು ಪುರಾಣ, ಶ್ರೀ ಶಿವ ಪುರಾಣ) ಪ್ರಾರಂಭವಂತೂ ಕಾಲ ರೂಪಿ ಬ್ರಹ್ಮ ಅರ್ಥಾತ್ ಜ್ಯೋತಿನಿರಂಜನ ನಿಂದಲೇ ಆಗುತ್ತದೆ. ಬ್ರಹ್ಮಲೋಕದಲ್ಲಿ ಮಹಾಬ್ರಹ್ಮಾ, ಮಹಾವಿಷ್ಣು ಹಾಗೂ ಮಹಾಶಿವ, ರೂಪಧಾರಣೆ ಮಾಡುತ್ತಾನೆ. ಹಾಗೂ ಅವರ ಲೀಲೆಗಳನ್ನು ಮೇಲೆ ಹೇಳಿರುವ ರೂಪದಲ್ಲಿ ಮಾಡುತ್ತಾನೆ. ತನ್ನ ವಾಸ್ತವಿಕ ಕಾಲ ರೂಪವನ್ನು ಮುಚ್ಚಿಟ್ಟು ಕೊಂಡಿರುತ್ತಾನೆ. ಹಾಗೂ ನಂತರದಲ್ಲಿ ವಿವರಣೆ ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು ಹಾಗೂ ತಮೋಗುಣ ಶಿವ ಇವರ ಲೀಲೆಗಳಿವೆ. ಮೇಲೆ ಹೇಳಿರುವ ಜ್ಞಾನದ ಆಧಾರದಿಂದ ಪವಿತ್ರ ಪುರಾಣಗಳನ್ನು ತಿಳಿಯುವುದು ಬಹಳ ಸುಲಭವಾಗುವುದು.

## "ಶ್ರೀ ವಿಷ್ಣು ಪುರಾಣ"

(ಅನುವಾದಕರು : ಶ್ರೀ ಮುನಿಲಾಲ ಗುಪ್ತ, ಪ್ರಕಾಶಕರು : ಗೋವಿಂದ ಭವನ ಕಾರ್ಯಾಲಯ, ಗೀತಾ ಪ್ರೆಸ್ ಗೊರಖಪುರ)

ಶ್ರೀ ವಿಷ್ಣು ಪುರಾಣದ ಜ್ಞಾನವನ್ನು ಶ್ರೀ ಪರಾಶರ ಋಷಿಗಳು, ತಮ್ಮ ಶಿಷ್ಯ ಶ್ರೀ ಮೈತ್ರೇಯ ಋಷಿ ಯವರಿಗೆ ಹೇಳಿರುವರು. ಶ್ರೀ ಪರಾಶರ ಋಷಿಗಳು ವಿವಾಹವಾದ ಕೂಡಲೇ ಗೃಹತ್ಯಾಗ

ಮಾಡಿ ಕಾಡಿನಲ್ಲಿ ತಪಸ್ಸು ಮಾಡುವ ದೃಢ ಸಂಕಲ್ಪ ಮಾಡಿದರು. "ಈಗಿನ್ನೂ ಮದುವೆಯಾಗಿದೆ ತಾವು ಈಗಲೇ ಮನೆ ಬಿಟ್ಟು ಹೋಗುತ್ತಿದ್ದೀರಲ್ಲ" ಎಂದು ಅವರ ಧರ್ಮ ಪತ್ನಿ ಕೇಳಿದಳು. ಮಕ್ಕಳು ಆದ ಮೇಲೆ ಸಾಧನೆಗೆ ಹೋಗುವುದು ಒಳ್ಳೆಯದು. ಆಗ ಪಾರಾಶರರು ಹೇಳಿದರು ಸಾಧನೆಯ ನಂತರ ಮಕ್ಕಳಾದರೆ, ಉತ್ತಮ ಸಂಸ್ಕಾರಯುಕ್ತ ಮಕ್ಕಳಾಗುವರು. "ನಾನು ಕೆಲ ಸಮಯದ ನಂತರ ನಿನಗಾಗಿ ನನ್ನ ವೀರ್ಯವನ್ನು ಯಾವುದಾದರೂ ಪಕ್ಷಿಯ ಮೂಲಕ ಕಳುಹಿಸುವೆನು ನೀನು ಅದನ್ನು ಸ್ವೀಕಾರ ಮಾಡು. ಹೀಗೆ ಹೇಳಿ ಮನೆ ಬಿಟ್ಟು ವಾನಪ್ರಸ್ಥರಾದರು. ಒಂದು ವರ್ಷದ ಸಾಧನೆಯ ನಂತರ, ತನ್ನ ವೀರ್ಯವನ್ನು ತೆಗೆದು, ಒಂದು ಮರದ ಎಲೆಯಲ್ಲಿ ಬಂಧಿಸಿ, ತನ್ನ ಮಂತ್ರ ಶಕ್ತಿಯಿಂದ ಶುಕ್ರಾಣು ರಕ್ಷೆಮಾಡಿ, ಒಂದು ಕಾಗೆಯೊಂದಿಗೆ ಹೇಳಿದರು ಈ ಎಲೆಯನ್ನು ನನ್ನ ಪತ್ನಿಗೆ ಕೊಟ್ಟು ಬಾ, ಕಾಗೆಯು ಅದನ್ನು ತೆಗೆದುಕೊಂಡು ನದಿಯ ಮೇಲೆ ಹಾರುತ್ತಾ ಹೋಗುತ್ತಿತ್ತು ಅದರ ಕೊಕ್ಕಿನಿಂದ ಆ ಎಲೆಯು ನದಿಯೊಳಗೆ ಬಿದ್ದಿತು. ಅದನ್ನು ಒಂದು ಮೀನು ತಿಂದು ಬಿಟ್ಟಿತು. ಕೆಲವು ತಿಂಗಳುಗಳ ನಂತರ ಆ ಮೀನನ್ನು ಅಂಬಿಗನು ಹಿಡಿದು ಕತ್ತರಿಸಿದನು. ಅದರಿಂದ ಒಬ್ಬಳು ಹುಡುಗಿ ಹೊರಬಂದಳು. ಅಂಬಿಗನು ಹುಡುಗಿಗೆ 'ಸತ್ಯವತಿ' ಎಂದು ಹೆಸರು ಇಟ್ಟನು. ಅದೇ ಹುಡುಗಿ (ಮೀನಿನ ಹೊಟ್ಟೆಯಿಂದ ಉತ್ಪನ್ನವಾದ ಕಾರಣ) 'ಮಛೋದರಿ' ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಿದ್ದಳು. ನಾವಿಕನು ಸತ್ಯವತಿಯನ್ನು ತನ್ನ ಮಗಳಂತೆ ಸಲಹಿದನು.

ಕಾಗೆಯು ಹಿಂದಕ್ಕೆ ಹೋಗಿ ಪರಾಶರರಿಗೆ ಎಲ್ಲ ಸಮಾಚಾರಗಳನ್ನು ತಿಳಿಸಿತು. ಪರಾಶರರು **16** ವರ್ಷದ ನಂತರ ಸಾಧನೆ ಮುಗಿಸಿ ಹಿಂದಿರುಗುತ್ತಿದ್ದಾಗ, ನದಿಯನ್ನು ದಾಟಲು ಅಂಬಿಗನನ್ನು ಕರೆದು ಹೇಳಿದರು ನನ್ನನ್ನು ಶೀಘ್ರವಾಗಿ ನದಿದಾಟಿಸು, ನನ್ನ ಹೆಂಡತಿಯು ನನ್ನ ನಿರೀಕ್ಷೆ ಮಾಡುತ್ತಿರುವಳು. ಆ ಸಮಯದಲ್ಲಿ ಅಂಬಿಗನು ಊಟ ಮಾಡುತ್ತಿದ್ದನು. ಮತ್ತು ಪರಾಶರರ ವೀರ್ಯದಿಂದ ಮೀನಿನಲ್ಲಿ ಉತ್ಪನ್ನವಾದ **14** ವರ್ಷದ ಯುವತಿ, ತಂದೆಗೆ ಊಟ ಬಡಿಸಲು ಅಲ್ಲೇ ನಿಂತಿದ್ದಳು. ಅಂಬಿಗನಿಗೆ ತಿಳಿದಿತ್ತು. ಸಾಧನೆ ಮುಗಿಸಿ ಬರುವ ಋಷಿಯು, ಸಿದ್ಧಿಯುಕ್ತನಾಗಿರುತ್ತಾನೆ ಹಾಗು ಆಜ್ಞೆಯನ್ನು ಬೇಗನೆ ಪಾಲನೆ ಮಾಡದಿದ್ದರೆ, ಶಾಪವನ್ನು ಕೊಡುತ್ತಾನೆ ಎಂದು. ಅಂಬಿಗನು ಹೇಳಿದನು ಋಷಿವರ್ಯರೆ, ನಾನು ಊಟ ಮಾಡುತ್ತಿದ್ದೇನೆ. ಅರ್ಧ ಊಟ ಬಿಟ್ಟು ಬರುವುದು, ಅನ್ನದೇವನಿಗೆ ಅಪಮಾನ ಮಾಡಿದಂತೆ, ನನಗೆ ಪಾಪ ಬರುವುದು. ಆದರೆ ಶ್ರೀ ಪರಾಶರರು ಅವನ ಒಂದು ಮಾತನ್ನೂ ಕೇಳಲಿಲ್ಲ. ಋಷಿಗಳು ಹೆಚ್ಚು ಆತುರದಿಂದಿರುವುದರಿಂದ, ಅಂಬಿಗನು ತನ್ನ ಯುವ ಪುತ್ರಿಯೊಂದಿಗೆ, ಋಷಿಗಳನ್ನು ನದಿ ದಾಟಿಸಲು ಹೇಳಿದ. ತಂದೆಯವರ ಆದೇಶ ಪಡೆದು. ಮಗಳು ದೋಣಿಯಲ್ಲಿ ಋಷಿ ಪರಾಶರರನ್ನು ಕರೆದುಕೊಂಡು ಹೊರಟಳು. ನದಿಯ ಮಧ್ಯೆ ಹೋದನಂತರ ಋಷಿ ಪರಾಶರರು. ತಮ್ಮ ವೀರ್ಯದಿಂದಲೇ ಮೀನಿನ ಹೊಟ್ಟೆಯಲ್ಲಿ ಉತ್ಪನ್ನವಾದ ಅಂದರೆ ತನ್ನ ಮಗಳೊಂದಿಗೆ ದುಷ್ಕರ್ಮ ಮಾಡಲು ಇಚ್ಛಿಸಿದರು. ಹುಡುಗಿಯೂ ಸಹ ತನ್ನ ಸಾಕು ತಂದೆಯಾದ ಅಂಬಿಗನಿಂದ, ಋಷಿಗಳು ಕೋಪದಿಂದ ನೀಡಿದ ಶಾಪದಿಂದ ಉಂಟಾದ ದುಃಖೀ ವ್ಯಕ್ತಿಗಳ ಕಥೆಗಳನ್ನು ಕೇಳಿದ್ದಳು. ಶಾಪದ ಹೆದರಿಕೆಯಿಂದ ನಡುಗುತ್ತಾ ಕನ್ಯೆಯು ಋಷಿಯೊಂದಿಗೆ ಹೇಳಿದಳು. "ತಾವು ಬ್ರಾಹ್ಮಣರು, ನಾನು ಶೂದ್ರರ ಮಗಳು, ಋಷಿ ಪರಾಶರರು ಹೇಳಿದರು. ಏನೂ ಚಿಂತೆಯಿಲ್ಲ. ಹುಡುಗಿಯು ತನ್ನ ಶೀಲವನ್ನು ರಕ್ಷಿಸಿಕೊಳ್ಳಲು ಮತ್ತೊಂದು ನೆಪ ಹೂಡಿದಳು. ಋಷಿವರ್ಯರೇ ನನ್ನ ಶರೀರದಿಂದ ಮೀನಿನ ದುರ್ವಾಸನೆ ಬರುತ್ತಿದೆ. ಋಷಿ ಪರಾಶರರು ತಮ್ಮ ಸಿದ್ಧಿಯ ಮೂಲಕ ದುರ್ವಾಸನೆಯನ್ನು ನಿವಾರಿಸಿದರು. ಪುನಃ ಹುಡುಗಿ ಹೇಳಿದಳು_ ಎರಡೂ ದಡಗಳಲ್ಲಿ ಜನರು ನೋಡುತ್ತಿದ್ದಾರೆ. ಋಷಿ ಪರಾಶರರು

ಗಂಗಾಜಲವನ್ನು ಕೈಗೆ ತೆಗೆದುಕೊಂಡು ಆಕಾಶ ದತ್ತ ಎರಚಿದರು ಮತ್ತು ತನ್ನ ಸಿದ್ಧಿ ಶಕ್ತಿಯಿಂದ ಮಾಯಾ ತೆರೆ ಉತ್ಪನ್ನ ಮಾಡಿದರು. ತನ್ನ ಮನೋರಥವನ್ನು ಪೂರ್ಣ ಗೊಳಿಸಿದರು. ಹುಡುಗಿಯು ತನ್ನ ಸಾಕು ತಂದೆಗೆ, ತನ್ನ ಸಾಕು ತಾಯಿಯ ಮೂಲಕ ಎಲ್ಲ ಘಟನೆಯನ್ನು ವಿವರಿಸಿದಳು ಹಾಗೂ ತಿಳಿಸಿದಳು. ಋಷಿಯು ತನ್ನ ಹೆಸರನ್ನು ಪರಾಶರ ಎಂದೂ ವಸಿಷ್ಠರ ಮೊಮ್ಮಗನೆಂದೂ ತಿಳಿಸಿದರು. ಸಮಯ ಕಳೆದ ನಂತರ ಆ ಕುಮಾರಿಯ ಗರ್ಭದಿಂದ ವ್ಯಾಸ ಋಷಿಗಳು ಉತ್ಪನ್ನವಾದರು.

ಅದೇ ಶ್ರೀ ಪರಾಶರರ ಮೂಲಕ ಶ್ರೀ ವಿಷ್ಣು ಪುರಾಣವು ರಚನೆಯಾಗಿದೆ. ಶ್ರೀ ಪರಾಶರರು ತಿಳಿಸಿದರು ಹೇ ಮೈತ್ರೇಯ ! ಯಾವ ಜ್ಞಾನವನ್ನು ನಾನು ನಿನಗೆ ಹೇಳಲು ಹೊರಟಿರುವೆನೋ, ಇದೇ ಪ್ರಸಂಗವನ್ನು ದಕ್ಷಾದಿ ಮುನಿಗಳು, ನರ್ಮದಾ ದಡದ ಮೇಲೆ ರಾಜಾ ಪುರುಕುತ್ಸನಿಗೆ ಹೇಳಿದ್ದರು. ಶ್ರೀ ಪರಾಶರರು ಶ್ರೀ ವಿಷ್ಣು ಪುರಾಣದ ಪ್ರಥಮ ಅಧ್ಯಾಯದ 31ನೇ ಶ್ಲೋಕ ಪುಟ ಸಂಖ್ಯೆ 3ರಲ್ಲಿ ಹೇಳಿದ್ದಾರೆ. ಈ ಜಗತ್ತು ವಿಷ್ಣುವಿನಿಂದ ಉತ್ಪನ್ನವಾಗಿದೆ. ಅವನಲ್ಲೇ ಸ್ಥಿತವಾಗಿದೆ. ಅವನೇ ಇದರ ಸ್ಥಿತಿ ಮತ್ತು ಲಯದ ಕರ್ತನಾಗಿದ್ದಾನೆ. ಅಧ್ಯಾಯ 2ರ 15–16ನೇ ಶ್ಲೋಕಗಳಲ್ಲಿ ಪುಟ 4 ರಲ್ಲಿ ಹೇಳಿದ್ದಾರೆ ಹೇ ದ್ವಿಜ! ಪರಬ್ರಹ್ಮನ ಪ್ರಥಮ ರೂಪ ಪುರುಷ ಅರ್ಥಾತ್ ಭಗವಂತನಂತೆ ಇದೆ. ಆದರೆ ವ್ಯಕ್ತ (ಮಹಾವಿಷ್ಣು ರೂಪದಲ್ಲಿ ಪ್ರಕಟವಾಗುವುದು) ಹಾಗೂ ಅವ್ಯಕ್ತ (ಅದೃಶ್ಯ ವಾಸ್ತವಿಕ ಕಾಲನ ರೂಪದಲ್ಲಿ 21ನೇ ಬ್ರಹ್ಮಾಂಡದಲ್ಲಿ ಇರುವುದು) ಇವು ಅವನ ಬೇರೆ ರೂಪಗಳಾಗಿವೆ ಹಾಗೂ 'ಕಾಲ' ಅವನ ಪರಮ ರೂಪವಾಗಿದೆ. ಭಗವಂತ ವಿಷ್ಣುವು, ಕಾಲನ ರೂಪದಲ್ಲಿ ಹಾಗೂ ವ್ಯಕ್ತ ಮತ್ತು ಅವ್ಯಕ್ತ ರೂಪದಿಂದ ಇರುತ್ತಾನೆ. ಇದು ಅವನ ಬಾಲಲೀಲೆಯಾಗಿದೆ.

2ನೇ ಅಧ್ಯಾಯದ 27ನೇ ಶ್ಲೋಕದಲ್ಲಿ ಪುಟ 5ರಲ್ಲಿ ಹೇಳಿದ್ದಾರೆ. ಹೇ ಮೈತ್ರೇಯ! ಪ್ರಳಯ ಕಾಲದಲ್ಲಿ ಪ್ರಧಾನ ಅರ್ಥಾತ್ ಪ್ರಕೃತಿಯ ಸೌಮ್ಯ ಅವಸ್ಥೆಯಲ್ಲಿ ಸ್ಥಿತವಾದ ಮೇಲೆ, ಅರ್ಥಾತ್ ಪುರುಷನು ಪ್ರಕೃತಿಯಿಂದ ಬೇರೆಯಾಗಿ ಸ್ಥಿತನಾದ ಮೇಲೆ, ವಿಷ್ಣು ಭಗವಂತನ 'ಕಾಲ' ರೂಪವು ಪ್ರವೃತ್ತವಾಗುತ್ತದೆ.

ವಿಷ್ಣು ಪುರಾಣದ 2ನೇ ಅಧ್ಯಾಯದಲ್ಲಿನ 28ರಿಂದ 30ನೇ ಶ್ಲೋಕಗಳಲ್ಲಿ ಪುಟ ಸಂಖ್ಯೆ 5 ತದನಂತರ (ಸೃಷ್ಠಿ ಆರಂಭವಾದ ಮೇಲೆ) ಆ ಪರಬ್ರಹ್ಮ ಪರಮಾತ್ಮನು, ವಿಶ್ವರೂಪಿ, ಸರ್ವ ವ್ಯಾಪೀ, ಸರ್ವಭೂತೇಶ್ವರ, ಸರ್ವಾತ್ಮಾ ಪರಮೇಶ್ವರನು, ತನ್ನ ಇಚ್ಛೆಯಿಂದ ವಿಕಾರಿ ಪ್ರಧಾನನಾಗಿ ಅವಿಕಾರಿ ಪುರುಷನಲ್ಲಿ ಪ್ರವೇಶ ಮಾಡಿ,

ಅವನನ್ನು ವ್ಯಾಕುಲಗೊಳಿಸಿದ. 28 ಮತ್ತು 29ರ ಶ್ಲೋಕದಲ್ಲಿದೆ ಯಾವ ರೀತಿ, ಕ್ರಿಯಾಶೀಲವಾಗಿಲ್ಲದಿದ್ದರೂ ಗಂಧವು ತಾನಿರುವ ಸನ್ನಿಧಿ ಅಥವಾ ಸ್ಥಾನದಿಂದಲೇ ಪುರುಷನನ್ನು ಪ್ರೇರಿತ ಗೊಳಿಸುತ್ತದೆ.

ವಿಶೇಷ :– 28 ರಿಂದ 30ರವರೆಗಿನ ಶ್ಲೋಕಗಳಲ್ಲಿ ಸ್ಪಷ್ಟ ಪಡಿಸಿದ್ದಾರೆ. ಏನೆಂದರೆ ಪ್ರಕೃತಿ (ದುರ್ಗಾ) ಹಾಗೂ ಪುರುಷ (ಕಾಲಪ್ರಭು) ಗಿಂತ ಬೇರೆ ಯಾರೋ ಪರಮೇಶ್ವರನಿದ್ದಾನೆ. ಅವನು ಈ ಇಬ್ಬರನ್ನೂ ಪುನಃ ಸೃಷ್ಠಿಯ ರಚನೆ ಮಾಡಲು ಪ್ರೇರೇಪಿಸುತ್ತಾನೆ.

2ನೇ ಅಧ್ಯಾಯದ 8ನೇ ಪುಟದಲ್ಲಿ 66ನೇ ಶ್ಲೋಕದಲ್ಲಿ ಬರೆದಿದೆ. ಆ ಪ್ರಭುವೇ ವಿಷ್ಣು ಸೃಷ್ಟಾ (ಬ್ರಹ್ಮಾ) ನಾಗಿ, ತನ್ನದೇ ಸೃಷ್ಠಿ ಮಾಡುತ್ತಾನೆ. 70ನೇ ಶ್ಲೋಕದಲ್ಲಿ ಬರೆದಿದೆ. ಭಗವಂತ ವಿಷ್ಣುವೇ ಬ್ರಹ್ಮಾ, ಮೊದಲಾದ ಅವಸ್ಥೆಗಳ ಮೂಲಕ ರಚನೆ ಮಾಡುವವನಾಗಿದ್ದಾನೆ. ಅವನೇ ರಚಿಸುತ್ತಾನೆ ಮತ್ತು ಸ್ವತಃ ಸಂಹಾರ ಮಾಡುತ್ತಾನೆ. ಅರ್ಥಾತ್ ಸಾಯಿಸುತ್ತಾನೆ. 4ನೇ ಅಧ್ಯಾಯದ 4ನೇ ಶ್ಲೋಕದಲ್ಲಿ, ಪುಟ 11ರಲ್ಲಿ ಬರೆದಿದೆ. ಬೇರೆ ಯಾರೋ ಪರಮೇಶ್ವರನಿದ್ದಾನೆ. ಅವನು

ಬ್ರಹ್ಮಾ, ಶಿವ ಮೊದಲಾದ ಈಶ್ವರರಿಗೆಲ್ಲಾ ಈಶ್ವರನಾಗಿರುವನು. 4ನೇ ಅಧ್ಯಾಯದ 14, 15, 17, 22 ಶ್ಲೋಕಗಳಲ್ಲಿ ಪುಟ 11, 12ರಲ್ಲಿ ಬರೆದಿದೆ ಭೂಮಿ ಹೇಳುತ್ತಾಳೆ ಹೇ ಕಾಲ ಸ್ವರೂಪ ! ನಿನಗೆ ನಮಸ್ಕಾರ ಹೇ ಪ್ರಭೋ! ನೀವೇ ಜಗತ್ತಿನ ಸೃಷ್ಠಿ ಮೊದಲಾದವುಗಳಿಗೆ ಬ್ರಹ್ಮಾ, ವಿಷ್ಣು, ಮತ್ತು ರುದ್ರನ ರೂಪದಾರಣೆ ಮಾಡುವವರಾಗಿದ್ದೀರಿ. ನಿಮ್ಮ ಯಾವ ರೂಪವು, ಅವತಾರ ರೂಪದಲ್ಲಿ ಪ್ರಕಟವಾಗುತ್ತದೋ, ಅದನ್ನೇ ದೇವರುಗಳು ಪೂಜಿಸುತ್ತಾರೆ. ನೀವೇ 'ಓಂ' ಕಾರರಾಗಿರುವಿರಿ. 4ನೆ ಅಧ್ಯಾಯದ 50ನೇ ಶ್ಲೋಕ ಪುಟ 14ರಲ್ಲಿ ಬರೆದಿದೆ ಪುನಃ ಆ ಭಗವಂತ ಹರಿಯು ರಜೋಗುಣಯುಕ್ತನಾಗಿ, ಚತುರ್ಮುಖಧಾರಿ, ಬ್ರಹ್ಮಾರೂಪವನ್ನು ಧಾರಣೆ ಮಾಡಿ ಸೃಷ್ಠಿಯ ರಚನೆ ಮಾಡಿದ.

ಮೇಲೆ ಹೇಳಿರುವ ವಿವರಣೆಯಿಂದ ಸಿದ್ಧವಾಗುತ್ತದೆ ಋಷಿ ಪರಾಶರರು. ಕೇಳಿ–ಕೇಳಿದ ಜ್ಞಾನದಿಂದ ಅರ್ಥಾತ್ ಲೋಕವೇದದ (ದಂತಕಥೆ) ಆಧಾರದ ಮೇಲೆ ಶ್ರೀ ವಿಷ್ಣು ಪುರಾಣವನ್ನು ರಚಿಸಿರುತ್ತಾರೆ. ಏಕೆಂದರೆ, ವಾಸ್ತವಿಕ ಜ್ಞಾನವನ್ನು ಪೂರ್ಣ ಪರಮಾತ್ಮನು ಪ್ರಥಮ ಸತ್ಯಯುಗದಲ್ಲಿ, ಸ್ವಯಂ ಪ್ರಕಟವಾಗಿ ಶ್ರೀ ಬ್ರಹ್ಮಾ ರವರಿಗೆ ನೀಡಿದ್ದರು. ಶ್ರೀ ಬ್ರಹ್ಮಾನು ಸ್ವಲ್ಪ ಜ್ಞಾನ ಹಾಗೂ ಕೆಲವು ಸ್ವ ನಿರ್ಮಿತ ಕಾಲ್ಪನಿಕ ಜ್ಞಾನವನ್ನು ತನ್ನ ವಂಶಜರಿಗೆ ತಿಳಿಸಿದನು. ಒಬ್ಬರು ಮತ್ತೊಬ್ಬರಿಗೆ ಹೇಳುತ್ತಾ ಕೇಳುತ್ತಾ ದಂತ ಕಥೆಯು ಶ್ರೀ ಪರಾಶರರಿಗೆ ಪ್ರಾಪ್ತವಾಯಿತು. ಶ್ರೀ ಪರಾಶರರು, ವಿಷ್ಣುವನ್ನು 'ಕಾಲ' ಎಂದೂ ಹೇಳಿದ್ದಾರೆ. ಹಾಗೂ 'ಪರಬ್ರಹ್ಮ' ಎಂದೂ ಹೇಳಿದ್ದಾರೆ. ಮೇಲಿನ ವಿವರಣೆಯಿಂದ ಇದೂ ಸಹ ಸಿದ್ಧವಾಯಿತು.

ವಿಷ್ಣು ಅರ್ಥಾತ್ ಬ್ರಹ್ಮ ಸ್ವರೂಪ ಕಾಲನು ತನ್ನ ಉತ್ಪತ್ತಿಯ ಬ್ರಹ್ಮಾ, ವಿಷ್ಣು, ಹಾಗೂ ಶಿವ ರೂಪದಿಂದ ಸೃಷ್ಠಿ ಮಾಡುತ್ತಾನೆ. ಬ್ರಹ್ಮ (ಕಾಲ)ನೇ ಬ್ರಹ್ಮಲೋಕದಲ್ಲಿ ಮೂರು ರೂಪಗಳಿಂದ ಪ್ರಕಟವಾಗಿ ಲೀಲೆ ಮಾಡುತ್ತಾ ಮೋಸ ಮಾಡುತ್ತಾನೆ. ಅಲ್ಲಿ ಸ್ವಯಂ ಸಾಯುತ್ತಾನೆ. (ವಿಶೇಷ ತಿಳುವಳಿಕೆಗಾಗಿ ದಯವಿಟ್ಟು "ಪ್ರಲಯ ಕೀ ಜಾನ ಕಾರಿ" ಪುಸ್ತಕ ಓದಿರಿ. "ಗಹರೀ ನಜರ್ ಗೀತಾ" ಪುಸ್ತಕದಲ್ಲಿ ಗೀತೆಯ 8ನೇ ಅಧ್ಯಾಯದ 17ನೇ ಶ್ಲೋಕದ ವ್ಯಾಖ್ಯಾನ ಓದಿರಿ.) ಅದೇ ಬ್ರಹ್ಮಲೋಕದಲ್ಲಿ ಮೂರು ಸ್ಥಾನಗಳನ್ನು ಮಾಡಿದ್ದಾನೆ. ಒಂದು ರಜೋಗುಣ ಪ್ರಧಾನ ಅದರಲ್ಲಿ ಇದೇ ಕಾಲರೂಪಿ ಬ್ರಹ್ಮ ತನ್ನ 'ಬ್ರಹ್ಮಾ' ರೂಪವನ್ನು ಧಾರಣೆ ಮಾಡಿರುತ್ತಾನೆ. ಹಾಗೂ ತನ್ನ ಪತ್ನಿ ದುರ್ಗಾಳನ್ನು ಜೊತೆಯಲ್ಲಿ ಇಟ್ಟುಕೊಂಡು ಒಬ್ಬ ರಜೋಗುಣ ಪ್ರಧಾನನಾದ ಪುತ್ರನನ್ನು ಉತ್ಪನ್ನ ಮಾಡುತ್ತಾನೆ. ಅವನ ಹೆಸರನ್ನು 'ಬ್ರಹ್ಮಾ' ಎಂದು ಇಡುತ್ತಾನೆ. ಅವನಿಂದಲೇ ಒಂದು ಬ್ರಹ್ಮಾಂಡದಲ್ಲಿ ಉತ್ಪತ್ತಿ ಮಾಡಿಸುತ್ತಾನೆ.

ಇದೇ ರೀತಿ ಅದೇ ಬ್ರಹ್ಮಲೋಕದಲ್ಲಿ ಒಂದು ಸತೋಗುಣ ಪ್ರಧಾನ ಮಾಡಿ. ಸ್ವಯಂ ವಿಷ್ಣುರೂಪ ಧಾರಣೆ ಮಾಡಿರುತ್ತಾನೆ. ಹಾಗೂ ತನ್ನ ಪತ್ನಿ ದುರ್ಗಾಳನ್ನು (ಪ್ರಕೃತಿ) ಪತ್ನಿ ರೂಪದಲ್ಲಿಟ್ಟುಕೊಂಡು ಒಬ್ಬ ಸತೋಗುಣಯುಕ್ತ ಪುತ್ರನನ್ನು ಉತ್ಪನ್ನ ಮಾಡುತ್ತಾನೆ. ಅವನ ಹೆಸರನ್ನು 'ವಿಷ್ಣು' ಎಂದು ಇಡುತ್ತಾನೆ. ಆ ಪುತ್ರನಿಂದ ಒಂದು ಬ್ರಹ್ಮಾಂಡದಲ್ಲಿ ಮೂರು ಲೋಕಗಳನ್ನು (ಪೃಥ್ವೀ, ಪಾತಾಳ, ಸ್ವರ್ಗ) ಸ್ಥಾಪನೆ ಮಾಡುವ ಕಾರ್ಯವನ್ನು ಮಾಡಿಸುತ್ತಾನೆ. (ಪ್ರಮಾಣ ಶಿವ ಪುರಾಣ, ಗೀತಾಪ್ರೆಸ್, ಗೊರಖಪುರದಿಂದ ಪ್ರಕಾಶಿತ, ಸಂಪಾದಕರು : ಹನುಮಾನ್ ಪ್ರಸಾದ ಪೋದ್ದಾರ್, ಚಿಮನಲಾಲ್ ಗೋಸ್ವಾಮಿ, ಕನ್ನಡ ಅನುವಾದಕರು : ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್, ರುದ್ರ ಸಂಹಿತಾ ಅಧ್ಯಾಯ 6, 7ರ ಪುಟ ಸಂಖ್ಯೆ 82–83 (ಹಿಂದಿಯಲ್ಲಿ ಪುಟ ಸಂಖ್ಯೆ 102–103)ರಲ್ಲಿ.

ಬ್ರಹ್ಮಲೋಕದಲ್ಲೂ ಒಂದು ಮೂರನೆಯ ಸ್ಥಾನವನ್ನು ರಚಿಸಿಕೊಂಡು, ಅದರಲ್ಲಿ ಸ್ವಯಂ

ಶಿವರೂಪವನ್ನು ಧಾರಣೆ ಮಾಡಿರುತ್ತಾನೆ. ಹಾಗೂ ತನ್ನ ಪತ್ನಿ ದುರ್ಗಾ (ಪ್ರಕೃತಿ)ಳನ್ನು ಜೊತೆಯಲ್ಲಿಟ್ಟುಕೊಂಡು, ಪತಿ–ಪತ್ನಿಯ ವ್ಯವಹಾರದಿಂದ ಅದೇ ರೀತಿ ಮೂರನೆಯ, ತಮೋಗುಣಯುಕ್ತ ಪುತ್ರನನ್ನು ಉತ್ಪನ್ನ ಮಾಡುತ್ತಾರೆ. ಅವನ ಹೆಸರನ್ನು ಶಂಕರ (ಶಿವ) ಎಂದಿಡುತ್ತಾರೆ. ಈ ಪುತ್ರನಿಂದ ಮೂರು ಲೋಕಗಳ ಪ್ರಾಣಿಗಳ ಸಂಹಾರ ಮಾಡಿಸುತ್ತಾರೆ.

ವಿಷ್ಣು ಪುರಾಣದ 4ನೇ ಅಧ್ಯಾಯದಲ್ಲಿ, ಈ ಜ್ಞಾನವು, ಆ ಕಾಲ ರೂಪದ ಬ್ರಹ್ಮ ಅರ್ಥಾತ್ ಜ್ಯೋತಿ ನಿರಂಜನದಾಗಿದೆ. 5ನೇ ಅಧ್ಯಾಯದಲ್ಲಿ, ಮುಂದಿನ ಹೊಂದಿಕೊಂಡುಹೋಗುವ ಜ್ಞಾನವು, ಕಾಲನ ಪುತ್ರ ಸತೋಗುಣ ವಿಷ್ಣುವಿನ ಲೀಲೆಯದಾಗಿದೆ. ಹಾಗೂ ಅವನದ್ದೇ ಅವತಾರ ಶ್ರೀ ರಾಮ, ಶ್ರೀ ಕೃಷ್ಣ ಮೊದಲಾದವರ ಜ್ಞಾನವಾಗಿದೆ.

ವಿಶೇಷವಾಗಿ ವಿಚಾರ ಮಾಡಬೇಕಾದ ಮಾತು ಇದಾಗಿದೆ. ಶ್ರೀ ವಿಷ್ಣು ಪುರಾಣವನ್ನು ಹೇಳಿದವರು ಶ್ರೀ ಪರಾಶರ ಋಷಿಗಳು ಇದೇ ಜ್ಞಾನವು ದಕ್ಷಾದಿ ಋಷಿಗಳಿಂದ ಪುರುಕುತ್ಸನು ಕೇಳಿದನು. ಪುರುಕುತ್ಸನಿಂದ, ಸಾರಸ್ವತನು ಕೇಳಿದನು. ಹಾಗೂ ಸಾರಸ್ವತನಿಂದ ಶ್ರೀ ಪರಾಶರ ಋಷಿಗಳು ಕೇಳಿದರು. ಅದೇ ಜ್ಞಾನವು ವಿಷ್ಣು ಪುರಾಣದಲ್ಲಿ ಲಿಪಿಬದ್ಧ ಮಾಡಲಾಗಿದೆ. ಈಗ ಅದೇ ನಮ್ಮ ಕರ ಕಮಲಗಳಲ್ಲಿರುವುದು. ಇದರಲ್ಲಿ ಕೇವಲ ಒಂದು ಬಹ್ಮಾಂಡದ ಜ್ಞಾನವೂ ಪೂರ್ಣವಿರದೆ ಅರ್ಧವಾಗಿದೆ.

ಶ್ರೀದೇವಿ ಪುರಾಣ, ಶ್ರೀ ಶಿವ ಪುರಾಣ, ಮೊದಲಾದ ಪುರಾಣಗಳ ಜ್ಞಾನವೂ ಸಹ ಬ್ರಹ್ಮಾನಿಂದ ಕೊಡಲ್ಪಟ್ಟಿದೆ. ಶ್ರೀ ಪರಾಶರರ ಜ್ಞಾನವು, ಬ್ರಹ್ಮಾನ ಜ್ಞಾನಕ್ಕೆ ಸಮಾನವಾಗಲು ಸಾಧ್ಯವಿಲ್ಲ. ಆದ್ದರಿಂದ ಶ್ರೀ ವಿಷ್ಣು ಪುರಾಣವನ್ನು ತಿಳಿಯಲು, ಶಿವ ಪುರಾಣದ ಸಹಯೋಗವನ್ನು ನೀಡಲಾಗುವುದು. ಏಕೆಂದರೆ ಈ ಜ್ಞಾನವು, ದಕ್ಷಾದಿ ಋಷಿಗಳ ತಂದೆ ಬ್ರಹ್ಮಾನು ನೀಡಿರುವುದಾಗಿದೆ. ಶ್ರೀ ದೇವಿ ಪುರಾಣ ಹಾಗೂ ಶ್ರೀ ಶಿವ ಪುರಾಣವನ್ನು ತಿಳಿಯಲು, ಶ್ರೀ ಮದ್ ಭಗವದ್ಗೀತೆ ಹಾಗೂ ನಾಲ್ಕೂ ವೇದಗಳ ಸಹಯೋಗವನ್ನು ನೀಡಲಾಗುವುದು. ಏಕೆಂದರೆ ಈ ಜ್ಞಾನವು ಸ್ವಯಂ ಭಗವಂತ ಕಾಲರೂಪಿ ಬ್ರಹ್ಮನ ಮೂಲಕ ನೀಡಲ್ಪಟ್ಟಿದೆ. ಈ ಬ್ರಹ್ಮನು, ಬ್ರಹ್ಮಾ, ವಿಷ್ಣು, ಹಾಗೂ ಶಿವನ ಉತ್ಪತ್ತಿ ಮಾಡಿದವನು ಅರ್ಥಾತ್ ತಂದೆಯಾಗಿದ್ದಾನೆ. ಪವಿತ್ರ ವೇದಗಳ ಹಾಗೂ ಪವಿತ್ರ ಶೀಮದ್ ಭಗವದ್ಗೀತೆಯ ಜ್ಞಾನವನ್ನು ತಿಳಿಯಲು ಸ್ವಸಮವೇದ ಅರ್ಥಾತ್ ಸೂಕ್ಷ್ಮವೇದದ ಸಹಯೋಗ ಪಡೆಯಬೇಕಾಗುವುದು, ಅದು ಕಾಲರೂಪಿ ಬ್ರಹ್ಮನ ಉತ್ಪತ್ತಿ ಮಾಡಿದ ಅರ್ಥಾತ್ ತಂದೆ ಪರಮ ಅಕ್ಷರ ಬ್ರಹ್ಮ (ಕವಿರ್ದೇವ)ನು ಕೊಟ್ಟಿರುವುದಾಗಿದೆ. ಅವನೇ (ಕವಿರ್ಗೀಭಿಃ) ಕವಿವಾಣಿ ಮೂಲಕ ಸ್ವಯಂ ಸತ್ಯಪುರುಷನು ಪ್ರಕಟವಾಗಿ ಹೇಳಿದ್ದಾನೆ. (ಋಗ್ವೇದ 9ನೇ ಮಂಡಲದ, 96ನೇ ಸೂಕ್ತಿಯ ಮಂತ್ರ 16ರಿಂದ 20ರವರೆಗೆ ಪ್ರಮಾಣವಿದೆ.)

## "ಶ್ರೀ ಬ್ರಹ್ಮಾ ಪುರಾಣ"

ಈ ಪುರಾಣವನ್ನು ಹೇಳಿರುವವರು. ಶ್ರೀ ಲೋಮಹರ್ಷಣ ಋಷಿಗಳು. ಇವರನ್ನು 'ಸೂತರು' ಎನ್ನುತ್ತಾರೆ ಇವರು ಶ್ರೀ ವ್ಯಾಸ ಋಷಿಯ ಶಿಷ್ಯರು. 'ಈ ಜ್ಞಾನವನ್ನು ಮೊದಲು ಶ್ರೀ ಬ್ರಹ್ಮಾನು ದಕ್ಷಾದಿ ಶ್ರೇಷ್ಠ ಮುನಿಗಳಿಗೆ ಹೇಳಿದ್ದಾರೆ ಅದನ್ನೇ ನಾನು ಹೇಳುತ್ತೇನೆ. ಈ ಪುರಾಣದ "ಸೃಷ್ಟಿಯ ವರ್ಣನೆ" ಹೆಸರಿನ ಅಧ್ಯಾಯದಲ್ಲಿ ಹೇಳಿದೆ ಶ್ರೀ ವಿಷ್ಣುವು ಸರ್ವ ವಿಶ್ವದ ಆಧಾರವಾಗಿದ್ದಾನೆ. ಅವನು ಬ್ರಹ್ಮಾ ಹಾಗೂ ಶಿವ ರೂಪದಿಂದ, ಜಗತ್ತಿನ ಉತ್ಪತ್ತಿ ಪಾಲನೆ ಹಾಗೂ ಸಂಹಾರ ಮಾಡುತ್ತಾನೆ. ಆ ಭಗವಂತ ವಿಷ್ಣುವಿಗೆ ನನ್ನ ನಮಸ್ಕಾರಗಳು. ಅವನು ನಿತ್ಯ. ಸತ್ಯ ಸ್ವರೂಪ ಹಾಗೂ ಕಾರಣಭೂತ,

ಅವ್ಯಕ್ತ ಪ್ರಕೃತಿಯಾಗಿದ್ದಾನೆ. ಅವನನ್ನೇ ಪ್ರಧಾನವೆನ್ನುತ್ತಾರೆ. ಅವನಿಂದಲೇ ಪುರುಷನು ಈ ವಿಶ್ವದ ನಿರ್ಮಾಣ ಮಾಡಿದ್ದಾನೆ. ಅಮಿತ ತೇಜಸ್ವೀ ಬ್ರಹ್ಮಾ ಅವರನ್ನು ಪುರುಷರೆಂದು ತಿಳಿ. ಅವರು ಸಮಸ್ತ ಪ್ರಾಣಿಗಳನ್ನು ಸೃಷ್ಠಿ ಮಾಡುವವರು ಹಾಗೂ ಭಗವಂತ ನಾರಾಯಣನ ಆಶ್ರಿತನಾಗಿದ್ದಾರೆ.

ಸ್ವಯಂಭೂ ಭಗವಾನ್ ನಾರಾಯಣನು ಜಲವನ್ನು ಸೃಷ್ಠಿಸಿದ. ನಾರಾಯಣನಿಂದ ಉತ್ಪನ್ನವಾದ ಕಾರಣ ಜಲವನ್ನು 'ನಾರ' ಎಂದೂ ಕರೆಯತೊಡಗಿದರು. ಭಗವಂತನು ಸರ್ವ ಪ್ರಥಮವಾಗಿ ನೀರಿನ ಮೇಲೆ ವಿಶ್ರಾಂತಿ ಪಡೆದನು. ಆದ್ದರಿಂದ ಭಗವಂತನನ್ನು 'ನಾರಾಯಣ' ಎಂದು ಕರೆಯುತ್ತಾರೆ.

ಭಗವಂತನು ಜಲದಲ್ಲಿ ತನ್ನ ಶಕ್ತಿಯನ್ನು ಬಿಟ್ಟನು. ಅದರಿಂದ ಒಂದು ಚಿನ್ನದ ಮೊಟ್ಟೆ ಕಾಣಿಸಿಕೊಂಡಿತು. ಅದರಲ್ಲೇ ಸ್ವಯಂಭೂ ಬ್ರಹ್ಮಾನ ಉತ್ಪತ್ತಿಯಾಯಿತು ಎಂದು ಹೇಳಲ್ಪಡುತ್ತದೆ. ಒಂದು ವರ್ಷದವರೆಗೆ ಮೊಟ್ಟೆಯಲ್ಲೇ ನಿವಾಸಮಾಡಿ, ಶ್ರೀ ಬ್ರಹ್ಮಾನು ಅದನ್ನು ಎರಡು ಚೂರುಗಳನ್ನಾಗಿ ಮಾಡಿದರು. ಒಂದರಿಂದ 'ಧ್ಯೂಲೋಕ' ಮಾಡಿದರು ಮತ್ತೊಂದರಿಂದ 'ಭೂಲೋಕ' ಮಾಡಿದರು. ಅದಾದನಂತರ ಬ್ರಹ್ಮಾನು ತನ್ನ ರೋಷದಿಂದ ರುದ್ರನನ್ನು ಪ್ರಕಟಿಸಿದರು. ಮೇಲೆ ಹೇಳಿರುವ ಜ್ಞಾನವು ಋಷಿ ಲೋಮಹರ್ಷಣ (ಸೂತರು)ರು ಹೇಳಿರುವುದಾಗಿದೆ. ಇದು ಕೇಳಿ ಹೇಳಿರುವುದು (ದಂತ ಕಥೆ) ಇದು ಪೂರ್ಣವಾಗಿಲ್ಲ ಏಕೆಂದರೆ, ಹೇಳುವವನು ಹೇಳಿದಂತೆಯೇ ಕೇಳಿರುವುದಾಗಿದೆ. ಆದ್ದರಿಂದ ಪೂರ್ಣ ತಿಳುವಳಿಕೆಗಾಗಿ ಶ್ರೀದೇವಿ ಮಹಾಪುರಾಣ. ಶ್ರೀ ಶಿವ ಪುರಾಣ. ಶ್ರೀಮದ್ ಭಗವದ್ಗೀತೆ, ನಾಲ್ಕೂ ವೇದಗಳು ಹಾಗೂ ಪೂರ್ಣ ಪರಮಾತ್ಮನ ಮೂಲಕ ತತ್ವಜ್ಞಾನ ಅದುವೇ ಸ್ವಸಮವೇದ ಅರ್ಥಾತ್ ಕವೀರ್ವಾಣಿ (ಕಬೀರ್ ವಾಣಿ) ಯನ್ನು ತಿಳಿಯಬೇಕು. ಅದಕ್ಕಾಗಿ ದಯವಿಟ್ಟು ಓದಿರಿ "ಗಹರೀ ನಜರ್ ಗೀತಾ ಮೇ" ಪರಮೇಶ್ವರ್ ಕಾ ಸಾರ ಸಂದೇಶ್" ಪ್ರಭುವಿನ ಪರಿಭಾಷೆ ಇದೆ. ಆ ಪುಸ್ತಕ "ಯತಾರ್ಥ ಜ್ಞಾನ ಪ್ರಕಾಶ" ವಾಗಿದೆ. (ವಾಸ್ತವಿಕ ಜ್ಞಾನವನ್ನು ಕವಿರ್ದೇವರು ಸ್ವಯಂ ಕಲಿಯುಗದಲ್ಲಿ ಪ್ರಕಟವಾಗಿ (ಕಬೀರ್ ಪರಮೇಶ್ವರ) ತಮ್ಮ ದಾಸರಾದ ಶ್ರೀ ಧರ್ಮದಾಸ್ (ಬಾಂಧವಗಡದವರು) ರವರಿಗೆ ಪುನಃ ಸರಿಯಾಗಿ ತಿಳಿಸಿದರು. ಅದು ಇದೇ ಪುಸ್ತಕದಲ್ಲಿ "ಸೃಷ್ಠಿ ರಚನೆ" ಭಾಗದಲ್ಲಿ ವರ್ಣಿತವಾಗಿದೆ. ದಯವಿಟ್ಟು ಓದಿರಿ.)

ಶ್ರೀ ಪರಾಶರರು ಕಾಲ ಬ್ರಹ್ಮನನ್ನು ಪರಬ್ರಹ್ಮ ಎಂದೂ ಹೇಳಿದ್ದಾರೆ. ಹಾಗೂ ಬ್ರಹ್ಮನೆಂದೂ, ವಿಷ್ಣುವೆಂದೂ ಹೇಳಿದ್ದಾರೆ. ಇವನನ್ನೇ ಅನಾದಿ ಅರ್ಥಾತ್ ಅಮರ ಎಂದೂ ಹೇಳಿದ್ದಾರೆ. ಈ ಬ್ರಹ್ಮ ಅರ್ಥಾತ್ ಕಾಲನಿಗೆ ಜನ್ಮ-ಮೃತ್ಯುವಿಲ್ಲ. ಇದರಿಂದ ಋಷಿಗಳ ಬಾಲ ಬುದ್ಧಿ ಸ್ಪಷ್ಟವಾಯಿತು.

ವಿಚಾರ ಮಾಡಿ :- ವಿಷ್ಣು ಪುರಾಣದ ಜ್ಞಾನವು ಒಬ್ಬ ಋಷಿಯಿಂದ ಕೇಳಿದ್ದು. ಅವರು ಲೋಕವೇದವನ್ನು (ಹೇಳಿ-ಕೇಳಿದ ಜ್ಞಾನ ಅರ್ಥಾತ್ ದಂತಕಥೆ) ಕೇಳಿದ ಆಧಾರದ ಮೇಲೆ ಹೇಳಿದ್ದಾರೆ. ಹಾಗೂ ಬ್ರಹ್ಮಾ ಪುರಾಣದ ಜ್ಞಾನವು ಶ್ರೀ ಲೋಮಹರ್ಷಣ ಋಷಿಯು ದಕ್ಷಾದಿ ಋಷಿಗಳಿಂದ ಕೇಳಿದ್ದಾಗಿದೆ. ಅದನ್ನೇ ಬರೆದಿದ್ದಾರೆ. ಆದ್ದರಿಂದ ಮೇಲಿನ ಎರಡೂ (ವಿಷ್ಣು ಪುರಾಣ ಮತ್ತು ಬ್ರಹ್ಮಾ ಪುರಾಣ) ಪುರಾಣಗಳನ್ನು ತಿಳಿಯಲು, ಶ್ರೀ ದೇವಿ ಪುರಾಣ ಹಾಗೂ ಶ್ರೀ ಶಿವ ಪುರಾಣದ ಸಹಯೋಗ ಪಡೆಯಲಾಗುವುದು ಅದನ್ನು ಸ್ವಯಂ ಶ್ರೀ ಬ್ರಹ್ಮಾ, ತನ್ನ ಪುತ್ರ ಶ್ರೀ ನಾರದರಿಗೆ ಹೇಳಿದರು. ಅದನ್ನು ಶ್ರೀ ವ್ಯಾಸರು ಗ್ರಹಿಸಿದರು. ಹಾಗೂ ಬರೆದರು. ಬೇರೆ ಪುರಾಣಗಳ ಜ್ಞಾನವು ಶ್ರೀ ಬ್ರಹ್ಮಾ ರವರ ಜ್ಞಾನಕ್ಕೆ ಸಮಾನವಾಗಲು ಸಾಧ್ಯವಿಲ್ಲ. ಏಕೆಂದರೆ ಈ ಜ್ಞಾನವು ದಕ್ಷಾದಿ ಋಷಿಗಳ ತಂದೆ ಶ್ರೀ ಬ್ರಹ್ಮಾ ರವರಿಂದ ಕೊಡಲ್ಪಟ್ಟಿರುವುದು.

ಶ್ರೀ ದೇವಿ ಪುರಾಣ ಹಾಗೂ ಶ್ರೀ ಶಿವಪುರಾಣವನ್ನು ತಿಳಿಯಲು, ಶ್ರೀಮದ್ ಭಗವದ್ಗೀತೆ ಹಾಗೂ ನಾಲ್ಕೂ ವೇದಗಳ ಸಹಯೋಗ ಪಡೆಯಲಾಗುವುದು. ಏಕೆಂದರೆ ಈ ಜ್ಞಾನವು ಕಾಲರೂಪಿ

ಬ್ರಹ್ಮನಿಂದ ಕೊಡಲ್ಪಟ್ಟಿದೆ. ಇವನು ಬ್ರಹ್ಮಾ, ವಿಷ್ಣು ಹಾಗೂ ಶಿವನ ಉತ್ಪನ್ನ ಕರ್ತಾ ಅಂದರೆ ತಂದೆಯಾಗಿರುವನು ಪವಿತ್ರ ವೇದಗಳನ್ನು ಹಾಗೂ ಶ್ರೀಮದ್ ಭಗವದ್ಗೀತೆಯನ್ನು ತಿಳಿದುಕೊಳ್ಳಲು, ಸ್ವಸಮವೇದ ಅರ್ಥಾತ್ ಸೂಕ್ಷ್ಮ ವೇದದ ಸಹಯೋಗ ಪಡೆಯಬೇಕಾಗುವುದು. ಅದನ್ನು ಕಾಲ ರೂಪಿ ಬ್ರಹ್ಮನ ಉತ್ಪತ್ತಿ ಮಾಡಿದ ಅರ್ಥಾತ್ ತಂದೆ ಪರಮ ಅಕ್ಷರ ಬ್ರಹ್ಮ (ಕವಿರ್ದೇವ) ನಿಂದ ಕೊಡಲ್ಪಟ್ಟಿದೆ. ಅದನ್ನು (ಕವಿರ್ಗೀಭಿಃ) ಕವಿರ್ ವಾಣಿಯ ಮೂಲಕ ಸ್ವಯಂ ಸತ್ಯಪುರಷನೇ ಪ್ರಕಟಗೊಂಡು ಹೇಳಿದ್ದನು. (ಋಗ್ವೇದದ 9ನೇ ಮಂಡಲದ, 96ನೇ ಸೂಕ್ತಿಯ, 16ರಿಂದ 20ನೇ ಮಂತ್ರದವರೆಗೆ ಪ್ರಮಾಣವಿದೆ.) ಹಾಗೂ ಶ್ರೀಮದ್ ಭಗವದ್ಗೀತೆಯಲ್ಲಿ ಭಗವಾನ್ 'ಕಾಲ' ಅರ್ಥಾತ್ ಬ್ರಹ್ಮನು, ತನ್ನ ಸ್ಥಿತಿಯನ್ನು ಸ್ವಯಂ ತಿಳಿಸಿರುವನು. ಅದು ಸತ್ಯವಾಗಿದೆ. ಗೀತೆಯ 15ನೇ ಅಧ್ಯಾಯದ 18ನೇ ಶ್ಲೋಕದಲ್ಲಿ ಹೇಳಿದೆ– ನಾನು (ಕಾಲ ರೂಪಿ ಬ್ರಹ್ಮ) ನನ್ನ 21 ಬ್ರಹ್ಮಾಂಡಗಳಲ್ಲಿ, ಎಷ್ಟೆಲ್ಲಾ ಪ್ರಾಣಿಗಳಿವೆಯೋ, ಅವುಗಳಿಗಿಂತ ಶ್ರೇಷ್ಠನಾಗಿದ್ದೇನೆ. ಅವುಗಳ ಸ್ಥೂಲ ಶರೀರ ನಾಶವಾಗುವಂತಹದು. ಅವು ಆತ್ಮ ರೂಪಿನಲ್ಲಿ ಅವಿನಾಶಿ ಯಾಗಿವೆ. ಆದ್ದರಿಂದ ಲೋಕವೇದದ (ಹೇಳಿ–ಕೇಳಿದ ಜ್ಞಾನ) ಆಧಾರದಲ್ಲಿ ನನ್ನನ್ನು ಪುರುಷೋತ್ತಮ ಎಂದು ಒಪ್ಪುತ್ತಾರೆ. ವಾಸ್ತವದಲ್ಲಿ ಪುರುಷೋತ್ತಮನು, ನನಗಿಂತ (ಕ್ಷರ ಪುರುಷ ಅರ್ಥಾತ್ ಕಾಲ) ಹಾಗೂ ಅಕ್ಷರ ಪುರುಷ (ಪರಬ್ರಹ್ಮ) ನಿಗಿಂತಲೂ ಬೇರೆಯೇ ಇದ್ದಾನೆ. ಅವನನ್ನು ವಾಸ್ತವದಲ್ಲಿ ಪರಮಾತ್ಮ ಅರ್ಥಾತ್ ಭಗವಾನ್ ಎಂದು ಕರೆಯುತ್ತಾರೆ. ಅವನು ಮೂರು ಲೋಕಗಳಲ್ಲಿ ಪ್ರವೇಶಮಾಡಿ. ಎಲ್ಲರ ಧಾರಣೆ–ಪೋಷಣೆ ಮಾಡುತ್ತಾನೆ. ಅವನೇ ವಾಸ್ತವದಲ್ಲಿ ಅವಿನಾಶಿ ಪರಮೇಶ್ವರನಾಗಿದ್ದಾನೆ. (ಗೀತೆಯ 15ನೇ ಅಧ್ಯಾಯದ ಶ್ಲೋಕ16–17) ಗೀತೆಜ್ಞಾನದಾತ ಬ್ರಹ್ಮ ಸ್ವಯಂ ಹೇಳುತ್ತಿದ್ದಾನೆ. ಹೇ ಅರ್ಜುನ! ನಿನ್ನ ಹಾಗೂ ನನ್ನ ಜನ್ಮಗಳು ಬಹಳ ಆಗಿ ಹೋಗಿವೆ ನಿನಗೆ ತಿಳಿದಿಲ್ಲ. ನನಗೆ ತಿಳಿದಿದೆ. ಶ್ರೀಮದ್ ಭಗವದ್ಗೀತೆಯ 4ನೇ ಅಧ್ಯಾಯದ 5ನೇ ಶ್ಲೋಕ, 2ನೇ ಅಧ್ಯಾಯದ 12ನೇ ಶ್ಲೋಕಗಳಲ್ಲಿ ಪ್ರಮಾಣವಿದೆ. ಹಾಗೂ 7ನೇ ಅಧ್ಯಾಯದ 18ನೇ ಶ್ಲೋಕದಲ್ಲಿ, ತನ್ನ ಸಾಧನೆಯನ್ನೇ (ಅನುತ್ತಮಾಮ್) ಅತಿ ಅಶ್ರೇಷ್ಠ ಎಂದು ಹೇಳಿದ್ದಾನೆ. ಆದ್ದರಿಂದ 18ನೇ ಅಧ್ಯಾಯದ 62ನೇ ಶ್ಲೋಕದಲ್ಲಿ ಹೇಳಿದ್ದಾನೆ. ಹೇ ಅರ್ಜುನ! ಸರ್ವ ಭಾವದಿಂದ ಆ ಪರಮೇಶ್ವರನಲ್ಲಿ ಶರಣು ಹೋಗು. ಅವನ ಕೃಪೆಯಿಂದಲೇ ನಿನಗೆ ಪರಮ ಶಾಂತಿಯು ಲಭ್ಯವಾಗುವುದು ಹಾಗೂ ಎಂದಿಗೂ ನಷ್ಟವಾಗದ ಲೋಕ ಅರ್ಥಾತ್ ಸತ್ಯಲೋಕವನ್ನು ಪಡೆಯುವೆ. 15ನೇ ಅಧ್ಯಾಯದ 4ನೇ ಶ್ಲೋಕದಲ್ಲಿ ಹೇಳಿದೆ, ಯಾವಾಗ ನಿನಗೆ ತತ್ವದರ್ಶಿ ದೊರೆಯುತ್ತಾನೋ, (ಇದು ಗೀತೆಯ 4ನೇ ಅಧ್ಯಾಯದ 34ನೇ ಹಾಗೂ 15ನೇ ಅಧ್ಯಾಯದ 1ನೇ ಶ್ಲೋಕದಲ್ಲಿ ವರ್ಣಿತವಾಗಿದೆ) ಅದಾದ ನಂತರ, ಆ ಪರಮಪದ ಪರಮೇಶ್ವರನನ್ನು ಹುಡುಕಬೇಕು. ಅಲ್ಲಿಗೆ ಹೋದ ಸಾಧಕನು ಪುನಃ ಹಿಂದಕ್ಕೆ ಈ ಸಂಸಾರಕ್ಕೆ ಬರುವುದಿಲ್ಲ. ಅರ್ಥಾತ್ ಪೂರ್ಣ ಮೋಕ್ಷವನ್ನು ಹೊಂದುತ್ತಾನೆ. ಯಾವ ಪರಮೇಶ್ವರನಿಂದ ಈ ಎಲ್ಲಾ ಪ್ರಪಂಚಗಳು ಉಂಟಾದವೋ, ಅವನೇ ಎಲ್ಲರ ಧಾರಣೆ–ಪೋಷಣೆ ಮಾಡುವವನಾಗಿದ್ದಾನೆ. ನಾನು (ಗೀತೆ ಜ್ಞಾನದಾತ ಬ್ರಹ್ಮರೂಪಿಕಾಲ) ಸಹ ಆ ಆದಿ ಪುರುಷ ಪರಮೇಶ್ವರನಲ್ಲಿ ಶರಣು ಹೋಗುವೆ, ಪೂರ್ಣ ವಿಶ್ವಾಸದೊಂದಿಗೆ ಅವನ ಭಕ್ತಿ, ಸಾಧನೆ ಮಾಡಬೇಕು. ಅಂದರೆ ಪೂಜೆ ಮಾಡಬೇಕು.

## "ಶ್ರೀ ದೇವಿ ಪುರಾಣದಿಂದ ಜ್ಞಾನ ಗ್ರಹಣ ಮಾಡಿರಿ"

### 'ಶ್ರೀ ದೇವಿ ಮಹಾ ಪುರಾಣದಿಂದ ಅಂಶಿಕ ಲೇಖ ಮತ್ತು ಸಾರ ವಿಚಾರ'

(ಸಂಕ್ಷಿಪ್ತ ಶ್ರೀಮದ್ ದೇವಿ ಭಾಗವತ, ಸಚಿತ್ರ, ದಪ್ಪ ಅಕ್ಷರದ ಮುದ್ರಣ, ಕೇವಲ ಹಿಂದಿ, ಸಂಪಾದಕ, ಹನುಮಾನಪ್ರಸಾದ ಪೋದ್ದಾರ್, ಚಿಮ್ಮನಲಾಲ್ ಗೋಸ್ವಾಮೀ, ಕನ್ನಡ ಅನುವಾದಕರು

ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್, ಪ್ರಕಾಶಕ ಗೋವಿಂದ ಭವನ ಕಾರ್ಯಾಲಯ, ಗೀತಾಪ್ರೆಸ್ ಗೊರಖಪುರ)

॥ ಶ್ರೀ ಜಗದಂಬಿಕಾಯ್ಯೆ ನಮಃ ॥

ಶ್ರೀ ದೇವಿ ಮದ್ ಭಾಗವತ್ (ಮೂರನೇಯ ಸ್ಕಂದ)

ರಾಜಾ ಪರೀಕ್ಷಿತನು, ಶ್ರೀ ವ್ಯಾಸರಿಂದ ಬ್ರಹ್ಮಾಂಡದ ರಚನೆಯ ವಿಷಯವಾಗಿ ಕೇಳಿದ. ಶ್ರೀ ವ್ಯಾಸರು ಹೇಳಿದರು ರಾಜನೇ ನಾನು ಇದೇ ಪ್ರಶ್ನೆಯನ್ನು ಋಷಿವರ ನಾರದರನ್ನು ಕೇಳಿದೆನು. ಆ ವರ್ಣನೆಯನ್ನು ನಿನಗೆ ತಿಳಿಸುತ್ತೆನೆ. ನಾನು (ಶ್ರೀ ವ್ಯಾಸರು) ಶ್ರೀ ನಾರದರನ್ನು ಕೇಳಿದೆ ಒಂದು ಬ್ರಹ್ಮಾಂಡವನ್ನು ರಚಿಸಿದವರು ಯಾರು?

ಯಾರೋ ಕೆಲವರು ಶ್ರೀ ಶಂಕರ ಭಗವಾನನೇ ಇದನ್ನು ರಚಿಸಿದ ಎಂದು ಒಪ್ಪುತ್ತಾರೆ. ಕೆಲವರು ವಿಷ್ಣುವೆಂದು ಮತ್ತೆ ಕೆಲವರು ಶ್ರೀ ಬ್ರಹ್ಮಾನೆಂದೂ ಹೇಳುತ್ತಾರೆ ಬಹಳ ಆಚಾರ್ಯರು ಭವಾನಿಯನ್ನು, ಸಕಲ ಮನೋರಥವನ್ನು ಪೂರ್ಣ ಮಾಡುವವಳೆಂದು ತಿಳಿಸುತ್ತಾರೆ. ಅವಳೇ ಆದಿ ಮಾಯೆ ಮಹಾಶಕ್ತಿಯಾಗಿದ್ದಾಳೆ. ಹಾಗೂ ಪರಮ ಪುರುಷನ ಜೊತೆ ಇದ್ದುಕೊಂಡು ಕಾರ್ಯ ಸಂಪನ್ನ ಮಾಡುವ ಪ್ರಕೃತಿಯಾಗಿದ್ದಾಳೆ. ಬ್ರಹ್ಮನ ಜೊತೆ ಅವಳಿಗೆ ಅಬೇಧ ಸಂಬಂಧವಿದೆ. ಪುಟ ಸಂಖ್ಯೆ **98** ರಲ್ಲಿ (ಹಿಂದಿಯಲ್ಲಿ ಪುಟ ಸಂಖ್ಯೆ. **114**)

ನಾರದರು ಹೇಳಿದರು ವ್ಯಾಸರೇ ಪ್ರಾಚೀನ ಸಮಯದ ಮಾತು ಇದು. ಇದೇ ಸಂದೇಹವು ನನ್ನ ಹೃದಯದಲ್ಲೂ ಉತ್ಪನ್ನವಾಗಿತ್ತು. ಆಗ ನಾನು ನಮ್ಮ ತಂದೆ ಅಮೀತ ತೇಜಸ್ವಿಯಾದ ಶ್ರೀ ಬ್ರಹ್ಮಾರ ಬಳಿ ಹೋದೆ. ಈಗ ನೀನು ನನ್ನನ್ನು ಯಾವ ವಿಷಯದ ಬಗ್ಗೆ ಪ್ರಶ್ನೆ ಮಾಡುತ್ತಿರುವೆಯೋ, ಅದೇ ವಿಷಯದ ಬಗ್ಗೆ ನಾನು ಕೇಳಿದೆ. ತಂದೆಯವರೆ ಈ ಸಂಪೂರ್ಣ ಬ್ರಹ್ಮಾಂಡವು ಎಲ್ಲಿಂದ ಉತ್ಪನ್ನವಾಗಿದೆ? ಎಂದು ಕೇಳಿದೆ. ದಯವಿಟ್ಟು ಸತ್ಯವನ್ನು ಹೇಳಿರಿ. ಇದನ್ನು ತಾವು ಮಾಡಿರುವಿರೋ? ಅಥವಾ ವಿಷ್ಣುವೋ, ಶಂಕರನೋ?

ಶ್ರೀ ಬ್ರಹ್ಮಾ ಹೇಳಿದರು : ಪುಟ ಸಂಖ್ಯೆ **99–106** (ಹಿಂದಿಯಲ್ಲಿ ಪುಟ ಸಂಖ್ಯೆ. **115** ರಿಂದ **120** ಹಾಗೂ **123, 125, 128, 129**)ರಲ್ಲಿ.

ಮಗನೇ! ನಾನು ಈ ಪ್ರಶ್ನೆಗೆ ಏನು ಉತ್ತರ ಕೊಡಲಿ? ಈ ಪ್ರಶ್ನೆಯು ಬಹಳ ಕಠಿಣವಾಗಿದೆ. ಪೂರ್ವ ಕಾಲದಲ್ಲಿ ಎಲ್ಲೆಲ್ಲೂ ನೀರೇ–ನೀರಿತ್ತು ಆಗ ಕಮಲದಿಂದ ನನ್ನ ಉತ್ಪತ್ತಿಯಾಯಿತು. ನಾನು ಕಮಲದ ದಳಗಳ ಮೇಲೆ ಕುಳಿತು ವಿಚಾರಮಾಡತೊಡಗಿದೆ. ಆ ಅಗಾಧ ಜಲದಲ್ಲಿ ನಾನು ಹೇಗೆ ಉತ್ಪನ್ನನಾದೆ? ಯಾರು ನನ್ನ ರಕ್ಷಕರು?

ಕಮಲದ ದಂಟನ್ನು ಹಿಡಿದು ನೀರಿನಲ್ಲಿ ಇಳಿದೆ. ಅಲ್ಲಿ ಶೇಷಶಯನಾದ ಭಗವಾನ್ ವಿಷ್ಣುವಿನ ದರ್ಶನವಾಯಿತು. ಅವನು ಯೋಗ ನಿದ್ರೆಯಲ್ಲಿ ವಶೀಭೂತರಾಗಿ ಗಾಢವಾಗಿ ನಿದ್ರಿಸುತ್ತಿದ್ದನು. ಇಷ್ಟರಲ್ಲಿ ಭಗವತಿ ಯೋಗನಿದ್ರಾ ನೆನಪಿಗೆ ಬಂದಳು. ನಾನು ಅವಳನ್ನು ಸ್ತುತಿಸಿದೆ. ಆಗ ಆ ಕಲ್ಯಾಣಮಯಿ ಭಗವತಿಯು, ಶ್ರೀ ವಿಷ್ಣುವಿನ ವಿಗ್ರಹದಿಂದ ಹೊರ ಹೊರಟು, ಅಚಿಂತ್ಯರೂಪ ಧಾರಣೆ ಮಾಡಿ, ಆಕಾಶದಲ್ಲಿ ವಿರಾಜಮಾನಳಾದಳು. ದಿವ್ಯ ಆಭೂಷಣಗಳು ಅವಳ ಕಾಂತಿಯನ್ನು ಹೆಚ್ಚಿಸಿತ್ತು. ಯಾವಾಗ ಯೋಗನಿದ್ರೆಯು ಭಗವಾನ್ ವಿಷ್ಣುವಿನ ಶರೀರದಿಂದ ಬೇರೆಯಾಗಿ ಆಕಾಶದಲ್ಲಿ ವಿರಾಜಮಾನಳಾದಳೋ, ಆಗ ಕೂಡಲೇ ಶ್ರೀಹರಿಯು ಎದ್ದು ಕುಳಿತ. ಆಗ ಅಲ್ಲಿ ನಾನು ಮತ್ತು ಭಗವಾನ್ ವಿಷ್ಣು ಇಬ್ಬರೇ ಇದ್ದೆವು. ಅಲ್ಲಿಯೇ ರುದ್ರನೂ ಪ್ರಕಟವಾದನು. ಮೂವರೊಡನೆ ದೇವಿ ಹೇಳಿದಳು. ಬ್ರಹ್ಮಾ, ವಿಷ್ಣು, ಮಹೇಶ್ವರರೇ ನೀವು ನಿಮ್ಮ ನಿಮ್ಮ ಕಾರ್ಯಗಳಲ್ಲಿ ಎಚ್ಚರಿಕೆಯಿಂದ

ತೊಡಗಿ ಕೊಳ್ಳಿರಿ. ಸೃಷ್ಠಿ–ಸ್ಥಿತಿ–ಸಂಹಾರ ಇವು ನಿಮ್ಮ ಕಾರ್ಯಗಳು. ಇಷ್ಟರಲ್ಲಿ ಒಂದು ಸುಂದರ ವಿಮಾನವು ಆಕಾಶದಿಂದ ಇಳಿದು ಬಂತು. ಆಗ ಆ ದೇವಿಯು ನಮಗೆ ಆದೇಶ ಮಾಡಿದಳು. ದೇವರುಗಳೇ, ನಿರ್ಭಯರಾಗಿ ಇಚ್ಛಾಪೂರ್ವಕವಾಗಿ ಈ ವಿಮಾನದಲ್ಲಿ ಪ್ರವೇಶ ಮಾಡಿರಿ. ಬ್ರಹ್ಮಾ–ವಿಷ್ಣು–ರುದ್ರರೇ ಈ ದಿನ ನಾನು ನಿಮಗೆ ಒಂದು ಅದ್ಭುತ ದೃಶ್ಯ ತೋರಿಸುವೆನು ನಾವು ಮೂವರೂ ವಿಮಾನದಲ್ಲಿ ಕುಳಿತದ್ದನ್ನು ಕಂಡು ದೇವಿಯು, ತನ್ನ ಸಾಮರ್ಥ್ಯದಿಂದ ವಿಮಾನವನ್ನು ಆಕಾಶದಲ್ಲಿ ಹಾರಿಸಿದಳು.

ಇಷ್ಟರಲ್ಲಿ ನಮ್ಮ ವಿಮಾನವು ವೇಗವಾಗಿ ಹೊರಟಿತು. ಅದು ದಿವ್ಯಧಾಮವಾದ ಬ್ರಹ್ಮಲೋಕಕ್ಕೆ ಹೋಗಿ ತಲುಪಿತು. ಅಲ್ಲಿ ಒಬ್ಬ ಬೇರೆಯೇ ಬ್ರಹ್ಮಾ ವಿರಾಜಮಾನರಿದ್ದರು. ಅವರನ್ನು ಕಂಡು ಭಗವಾನ್ ಶಂಕರ ಮತ್ತು ವಿಷ್ಣುವಿಗೆ ಬಹಳ ಆಶ್ಚರ್ಯವಾಯಿತು. ಭಗವಾನ್ ಶಂಕರ ಮತ್ತು ವಿಷ್ಣುವು ನನ್ನೊಂದಿಗೆ ಕೇಳಿದರು ನಾಲ್ಕು ಮುಖಗಳುಳ್ಳ ಈ ಅವಿನಾಶಿ ಬಹ್ಮಾ ಯಾರು? ನಾನು ಉತ್ತರ ನೀಡಿದೆ ನನಗೇನೂ ತಿಳಿದಿಲ್ಲ ಎಂದು. ಸೃಷ್ಠಿಯ ಅಧಿಪತಿಯಾದ ಇವರು ಯಾರು? ಭಗವಾನ್! ನಾನು ಯಾರು, ನಮ್ಮ ಉದ್ದೇಶವೇನು? ಈ ಗೊಂದಲದಲ್ಲಿ ಸಿಲುಕಿಕೊಂಡೆವು. ಮನವು ಚಂಚಲವಾಯಿತು.

ಇಷ್ಟರಲ್ಲಿ ಆ ವಿಮಾನವು ಮನೋವೇಗದಲ್ಲಿ, ತಕ್ಷಣ ಅಲ್ಲಿಂದ ಹೊರಟು ಕೈಲಾಸದ ಸುಂದರ ಶಿಖರವನ್ನು ಹೋಗಿ ತಲುಪಿತು. ಅಲ್ಲಿಗೆ ವಿಮಾನವು ತಲುಪಿದೊಡನೆಯೇ ಒಂದು ಭವ್ಯ ಭವನದಿಂದ ತ್ರಿನೇತ್ರಧಾರಿ ಭಗವಾನ್ ಶಂಕರನು ಹೊರಬಂದನು. ಅವನು ನಂದಿಯ (ವೃಷಭ) ಮೇಲೆ ಕುಳಿತಿದ್ದನು.

ಕ್ಷಣಮಾತ್ರದಲ್ಲೇ ಆ ವಿಮಾನವು ಆ ಶಿಖರದಿಂದ ವಾಯುವೇಗದಲ್ಲಿ ಹಾರಿತು. ಹಾಗೂ ವೈಕುಂಠ ಲೋಕವನ್ನು ತಲುಪಿತು. ಅಲ್ಲಿ ಭಗವತಿ ಲಕ್ಷ್ಮಿಯ ವೈಭವಯುತ ಅರಮನೆ ಇತ್ತು. ಮಗು ನಾರದ! ನಾನು ಅಲ್ಲಿ ಕಂಡ ಸಂಪತ್ತನ್ನು ವರ್ಣಿಸಲು ಅಸಂಭವವಾಗಿದೆ. ಆ ಉತ್ತಮ ಪಟ್ಟಣವನ್ನು ಕಂಡ ವಿಷ್ಣುವಿನ ಮನಸ್ಸು ಆಶ್ಚರ್ಯವೆಂಬ ಸಮುದ್ರದಲ್ಲಿ ಮುಳುಗತೊಡಗಿತು. ಅಲ್ಲಿ ಕಮಲಲೋಚನ ಶ್ರೀ ಹರಿಯು ವಿರಾಜಮಾನನಾಗಿದ್ದನು. ನಾಲ್ಕು ಭುಜಗಳಿದ್ದವು.

ಇಷ್ಟರಲ್ಲೇ ವಾಯುವೇಗದಲ್ಲಿ ಆ ವಿಮಾನವು ಅಲ್ಲಿಂದ ಹೊರಟಿತು. ಮುಂದೆ ಅಮೃತ ಸಮಾನವಾದ ಸಿಹಿ ನೀರಿನ ಸಮುದ್ರ ಸಿಕ್ಕಿತು. ಅಲ್ಲಿಯೇ ಒಂದು ಮನೋಹರ ದ್ವೀಪವಿತ್ತು. ಆ ದ್ವೀಪದಲ್ಲೇ ಒಂದು ಮಂಗಳಮಯವಾದ, ಮನೋಹರವಾದ ಮಂಚವು ಇತ್ತು. ಆ ಉತ್ತಮ ಮಂಚದ ಮೇಲೆ. ಒಬ್ಬಳು ಸುಂದರ ಸ್ತ್ರೀ ಕುಳಿತಿದ್ದಳು ನಾವು ನಮ್ಮೊಳಗೇ ಹೇಳಿಕೊಂಡೆವು. ಈ ಸುಂದರಿ ಯಾರು, ಇವಳ ಹೆಸರೇನು ? ಎಂದು. ನಾವು ಇವಳ ವಿಷಯದಲ್ಲಿ ಖಂಡಿತವಾಗಿ ಏನೂ ತಿಳಿದವರಲ್ಲ.

ನಾರದ! ಈ ರೀತಿ ಸಂದೇಹವುಳ್ಳವರಾಗಿ, ನಾವು ಅಲ್ಲಿಯೇ ನಿಂತೆವು. ಆಗ ಭಗವಾನ್ ವಿಷ್ಣುವು, ಆ ಸುಂದರಳಾದ ಭಗವತಿಯನ್ನು ಕಂಡು, ವಿವೇಕಪೂರ್ವಕವಾಗಿ ನಿಶ್ಚಯ ಮಾಡಿಕೊಂಡ, ಏನೆಂದರೆ, ಇವಳೇ ಭಗವತಿ ಜಗದಾಂಬಿಕೆ ಎಂದು. ಆಗ ಅವನು ಹೇಳಿದನು ಈ ಭಗವತಿಯೇ ನಮ್ಮೆಲ್ಲರ ಆದಿ ಕಾರಣಳು. ಮಹಾವಿದ್ಯಾ, ಮಹಾಮಾಯಾ ಎಂಬುದು ಇವಳ ಹೆಸರುಗಳು, ಇವಳೇ ಪೂರ್ಣ ಪ್ರಕೃತಿ. ಇವಳನ್ನೇ ವಿಶ್ವೇಶ್ವರೀ, ವೇದಗರ್ಭಾ, ಮತ್ತು ಶಿವೆ ಎಂದು ಕರೆಯುತ್ತಾರೆ.

ಪ್ರಳಯ ಸಮುದ್ರದಲ್ಲಿ ನನಗೆ ದರ್ಶನ ಕೊಟ್ಟವಳು ಇವಳೇ, ಆ ಸಮಯದಲ್ಲಿ ನಾನು ಬಾಲಕ ರೂಪದಲ್ಲಿದ್ದೆ. ನನ್ನನ್ನು ತೊಟ್ಟಿಲಲ್ಲಿ ಇಟ್ಟು ತೂಗುತ್ತಿದ್ದಳು. ಆಲದ ಮರದ ಎಲೆಯ ಮೇಲೆ, ಒಂದು ಒಳ್ಳೆಯ ಹಾಸಿಗೆ ಹಾಸಲ್ಪಟ್ಟಿತ್ತು. ಅದರ ಮೇಲೆ ಮಲಗಿ ನಾನು ನನ್ನ ಕಾಲಿನ ಹೆಬ್ಬೆರಳನ್ನು ನನ್ನ ಕಮಲದಂತಹ ಬಾಯಿಯಲ್ಲಿಟ್ಟು ಚೀಪುತ್ತಿದ್ದೆ ಮತ್ತು ಆಡುತ್ತಿದ್ದೆ.

ಈ ದೇವಿಯು ಹಾಡುತ್ತಾ ನನ್ನನ್ನು ತೂಗುತ್ತಿದ್ದಳು. ಅವಳೇ ಈ ದೇವಿ. ಇದರಲ್ಲಿ ಯಾವ ಸಂಶಯದ ಮಾತಿಲ್ಲ. ಇವಳನ್ನು ನೋಡಿ ನನಗೆ ಮೊದಲಿನ ಮಾತುಗಳು ನೆನಪಿಗೆ ಬಂದಿತು. ಇವಳೇ ನಮ್ಮೆಲ್ಲರ ಜನನಿ.

ಶ್ರೀ ವಿಷ್ಣುವು ಸಮಯಾನುಸಾರವಾಗಿ, ಆ ಭಗವತಿ ಭುವನೇಶ್ವರಿಯ ಸ್ತುತಿ ಮಾಡಲು ಆರಂಭಿಸಿದನು. ಭಗವಾನ್ ವಿಷ್ಣು ಹೇಳಿದನು "ಪ್ರಕೃತಿ ದೇವಿಗೆ ನಮಸ್ಕಾರಗಳು. ಭಗವತಿ ವಿಧಾತ್ರಿಗೆ ನಿರಂತರ ನಮಸ್ಕಾರಗಳು. ನೀನು ಶುದ್ಧ ಸ್ವರೂಪಳು. ಈ ಸಕಲ ವಿಶ್ವವು ನಿನ್ನಿಂದ ಉತ್ಪನ್ನವಾಗುತ್ತಿದೆ. ನಾನು ಬ್ರಹ್ಮಾ ಮತ್ತು ಶಂಕರ ನಿನ್ನ ದಯೆಯಿಂದಲೇ ಇರುವೆವು. ನಮಗೆ ಹುಟ್ಟು ಸಾವುಗಳಿವೆ. ಕೇವಲ ನೀನು ನಿತ್ಯಳು ಜಗತ್ತಿನ ಜನನಿ, ಪ್ರಕೃತಿ ಮತ್ತು ಸನಾತನಿ ದೇವಿ.

ಭಗವಾನ್ ಶಂಕರ ಹೇಳಿದನು– ದೇವಿ! ಭಗವಾನ್ ವಿಷ್ಣುವು ನಿನ್ನಿಂದ ಉತ್ಪತ್ತಿಯಾದ ಮೇಲೆ, ನಂತರ ಉತ್ಪನ್ನನಾದ ಬ್ರಹ್ಮಾ ಸಹ ನಿನ್ನ ಮಗನೇ ಆಗಿದ್ದಾನೆ. ನಾನು ತಮೋಗುಣದ ಲೀಲೆ ಮಾಡುವ ಶಂಕರನು. ನಿನ್ನ ಮಗನಲ್ಲವೆ? ಅರ್ಥಾತ್ ನನ್ನನ್ನು ಉತ್ಪನ್ನ ಮಾಡಿದವಳೂ ನೀನೇ ಆಗಿರುವೆ. ಈ ವಿಶ್ವದ ಸೃಷ್ಠಿ–ಸ್ಥಿತಿ ಮತ್ತು ಲಯಗಳಲ್ಲಿ ನಿನ್ನ ಗುಣಗಳು ಸೇರಿವೆ. ಆ ಮೂರು ಗುಣಗಳಿಂದ ಉತ್ಪನ್ನರಾದ ನಾವು ಬ್ರಹ್ಮಾ–ವಿಷ್ಣು ಹಾಗೂ ಶಂಕರನು ನಿಯಮಾನುಸಾರವಾಗಿ ಕಾರ್ಯಗಳಲ್ಲಿ ತತ್ಪರರಾಗಿದ್ದೇವೆ. ನಾನು ಬ್ರಹ್ಮಾ ಮತ್ತು ಶಿವ ವಿಮಾನದ ಮೇಲೆ ಏರಿ ಹೋಗುತ್ತಿದ್ದೆವು. ನಮಗೆ ದಾರಿಯಲ್ಲಿ ಹೊಸ–ಹೊಸ ಲೋಕಗಳು ಕಂಡು ಬಂದವು. ಭವಾನಿ! ಸರಿಯಾಗಿ ಹೇಳಿರಿ, ಇವುಗಳನ್ನೆಲ್ಲಾ ಯಾರು ಮಾಡಿದರು?

ಈ ಪ್ರಮಾಣವನ್ನು ನೋಡಿರಿ. ಶ್ರೀ ಮದ್ ದೇವಿಭಾಗವತ ಮಹಾಪುರಾಣ ಸಭಾಷಟೀಕಮ್, ಸಮಹಾತ್ಯಮ್, ಖೇಮರಾಜ ಶ್ರೀ ಕೃಷ್ಣದಾಸ್ ಪ್ರಕಾಶ. ಮುಂಬಯಿ, ಇದರಲ್ಲಿ ಸಂಸ್ಕೃತ ಸಹಿತ ಹಿಂದಿಯ ಅನುವಾದ ಮಾಡಿದೆ.

**ಮೂರನೇ ಸ್ಕಂದದ 4ನೇ ಅಧ್ಯಾಯ, ಪುಟ 10, ಶ್ಲೋಕ 42.**

ಬ್ರಹ್ಮಾ : ಅಹಮ್ ಈಶ್ವರಃ ಫಿಲ್ ತೆ ಪ್ರಭಾವಾತ್ಸರ್ವೇ ವಯಂ ಜನಿ ಯುತಾ ನ ಯದಾ ತೂ ನಿತ್ಯಾಃ ಕೆ ಅನ್ಯೇ ಸುರಾಃ ಶತಮುಖ ಪ್ರಮುಖಾಃ ಚ ನಿತ್ಯಾ ನಿತ್ಯಾ ತ್ವಮೇವ ಜನನೀ ಪ್ರಕೃತಿಃ ಪುರಾಣಾ । (42)

**ಅನುವಾದ : ಹೇ ಮಾತಾ ! ಬ್ರಹ್ಮಾ, ನಾನು ಹಾಗೂ ಶಿವ ನಿನ್ನದೇ ಪ್ರಭಾವದಿಂದ ಜನ್ಮತಾಳಿದವರಾಗಿದ್ದೇವೆ. ನಿತ್ಯರಲ್ಲ ಅರ್ಥಾತ್ ಅವಿನಾಶಿ ಅಲ್ಲ. ಪುನಃ ಬೇರೆ ಇಂದ್ರಾದಿ ದೇವರುಗಳು ಯಾವ ರೀತಿಯಲ್ಲಿ ನಿತ್ಯರಾಗಲು ಸಾಧ್ಯ! ನೀನು ಅವಿನಾಶಿ ಆಗಿರುವೆ ಪ್ರಕೃತಿ ಹಾಗೂ ಸನಾತನಿ ದೇವಿಯಾಗಿರುವೆ (42)**

**ಪುಟ 11–12 : ಅಧ್ಯಾಯ 5, ಶ್ಲೋಕ 8.**

ಯದಿ ದಯಾರ್ದ್ರಮನಾ ನ ಸದಾಂಬಿಕೆ ಕಥಮಹಂ ವಿಹಿತಃ ಚ ತಮೋಗುಣಃ
ಕಮಲಜಶ್ಚ ರಜೋಗುಣ ಸಂಭವಃ ಸುವಿಹಿತಃ ಕಿಮು ಸತ್ವ ಗುಣೋ ಹರಿಃ (8)

**ಅನುವಾದ :– ಭಗವಾನ್ ಶಂಕರ ಕೇಳಿದ ಹೇ ಮಾತಾ ! ನೀನು ನಮ್ಮ ಮೇಲೆ ದಯಾ ಯುಕ್ತಳಾಗಿದ್ದರೆ, ನನ್ನನ್ನು ತಮೋಗುಣಯನ್ನಾಗಿ ಏಕೆ ಮಾಡಿದೆ? ಕಮಲದಲ್ಲಿ ಉತ್ಪನ್ನನಾದ ಬ್ರಹ್ಮಾನನ್ನು ರಜೋಗುಣಿಯನ್ನಾಗಿ ಏತಕ್ಕಾಗಿ ಮಾಡಿದೆ? ವಿಷ್ಣುವನ್ನು ಸತೋಗುಣಿಯನ್ನಾಗಿ ಏಕೆ ಮಾಡಿದೆ? ಅರ್ಥಾತ್ ಜೀವಿಗಳನ್ನು**

**ಜನ್ಮ–ಮೃತ್ಯು ರೂಪಿ ದುಷ್ಕರ್ಮದಲ್ಲಿ ಏಕೆ ತೊಡಗಿಸಿದೆ? ಶ್ಲೋಕ 12 :**

ರಮಯಸೆ ಸ್ವಪತಿಂ ಪುರುಷಮ ಸದಾ ತವ ಗತಿಂ ನ ಹಿ ವಿಹ ವಿದಮ್ ಶಿವೆ (12)

ಅನುವಾದ :– ತನ್ನ ಪತಿ ಪುರುಷ ಅರ್ಥಾತ್ ಕಾಲ ಭಗವಾನನ ಜೊತೆ ಸದಾ ಭೋಗ ವಿಲಾಸ ಮಾಡುತ್ತಿರುವೆ. ನಿನ್ನಗತಿಯನ್ನು ಯಾರೂ ತಿಳಿದಿಲ್ಲ.

ಬ್ರಹ್ಮಾ ಹೇಳುತ್ತಾರೆ :– ನಾನೂ ಸಹ ಮಹಾಮಾಯಾ ಜಗದಂಬೆಯ ಚರಣಗಳಿಗೆ ನಮಸ್ಕರಿಸಿದೆ. ಮತ್ತು ನಾನು ಅವರನ್ನು ಕೇಳಿದೆ. ಮಾತಾ ! ವೇದ ಹೇಳುತ್ತದೆ. "ಏಕಮೇವಾದ್ವಿತೀಯಂ ಬ್ರಹ್ಮ" ಅಂದ ಮೇಲೆ ಆ, ಆತ್ಮ ಸ್ವರೂಪ ನೀನೇಯೋ? ಅಥವಾ ಅವರು ಬೇರೆಯೇ ಪುರುಷನೋ?

ದೇವಿಯು ಹೇಳಿದಳು :– ನಾನು ಮತ್ತು ಬ್ರಹ್ಮ ಒಬ್ಬರೇ ಆಗಿರುವೆವು. ನನ್ನಲ್ಲಿ ಹಾಗೂ ಈ ಬ್ರಹ್ಮನಲ್ಲಿ ಯಾವಾಗಲೂ ಸ್ವಲ್ಪವೂ ಬೇಧವಿರುವುದಿಲ್ಲ. ಗೌರೀ, ಬ್ರಾಹ್ಮೀ, ರೌದ್ರೀ, ವಾರಾಹೀ, ವೈಷ್ಣವೀ, ಶಿವೇ, ವಾರುಣೀ, ಕೌಮಾರೀ, ನಾರಸಿಂಹೀ ಮತ್ತು ವಾಸವೀ ಎಲ್ಲವೂ ನನ್ನ ರೂಪವೇ ಆಗಿದೆ. ಬ್ರಹ್ಮಾ ! ಈ ಶಕ್ತಿಯನ್ನು ನೀನು ನಿನ್ನ ಸ್ತ್ರೀಯನ್ನಾಗಿ ಮಾಡಿಕೊ. 'ಮಹಾಸರಸ್ವತೀ' ಹೆಸರಿನಿಂದ ವಿಖ್ಯಾತ ಈ ಸುಂದರಿ ಈಗ ಸದಾ ನಿನ್ನ 'ಸ್ತ್ರೀ'ಯಾಗಿ ಇರುವಳು. ಭಗವತಿ ಜಗದಂಬಾಳು, ವಿಷ್ಣುವೊಂದಿಗೆ ಹೇಳಿದಳು ವಿಷ್ಣೂ! ಮನವನ್ನು ಮುಗ್ಧಗೊಳಿಸುವ ಈ ಮಹಾಲಕ್ಷ್ಮಿಯನ್ನು ಕರೆದುಕೊಂಡು ಹೋಗು. ಇವಳು ಯಾವಾಗಲೂ ನಿನ್ನ ವೃಕ್ಷಸ್ಥಳದಲ್ಲಿ ವಿರಾಜಮಾನಳಾಗಿರುವಳು.

ದೇವಿಯು ಹೇಳಿದಳು ಶಂಕರಾ! ಮನವನ್ನು ಮುಗ್ಧಗೊಳಿಸುವ ಈ 'ಮಹಾಕಾಳೀ' ಗೌರೀ ಹೆಸರಿನಿಂದ ವಿಖ್ಯಾತಳಾಗಿದ್ದಾಳೆ. ನೀನು ಇವಳನ್ನು ಪತ್ನಿರೂಪದಲ್ಲಿ ಸ್ವೀಕರಿಸು.

ಈಗ ನನ್ನ ಕಾರ್ಯವನ್ನು ಸಿದ್ಧಿಗೊಳಿಸಲು ವಿಮಾನದಲ್ಲಿ ಕುಳಿತು ನೀವೆಲ್ಲಾ ಶೀಘ್ರವಾಗಿ ಹೊರಡಿರಿ ಯಾವುದಾದರೂ ಕಠಿಣ ಕಾರ್ಯವು ಎದುರಾದರೆ, ಆಗ ನನ್ನನ್ನು ಸ್ಮರಿಸಿರಿ. ನಾನು ನಿಮ್ಮ ಮುಂದೆ ಬರುವೆನು ದೇವರುಗಳೆ! ನನ್ನ ಹಾಗೂ ಸನಾತನ ಪರಮಾತ್ಮನ ಧ್ಯಾನವನ್ನು ಸದಾ ಮಾಡುತ್ತಿರಿ. ನಮ್ಮಿಬ್ಬರ ಸ್ಮರಣೆ ಮಾಡಿದರೆ, ನಿಮ್ಮ ಕಾರ್ಯವು ಸಿದ್ಧವಾಗುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಬ್ರಹ್ಮಾ ಹೇಳುತ್ತಾರೆ :– ಈ ಪ್ರಕಾರವಾಗಿ ಭಗವತಿ ಜಗದಾಂಬೆಯು ಹೇಳಿ, ನಮ್ಮನ್ನು ಬೀಳ್ಕೊಟ್ಟಳು. ಅವಳು ಶುದ್ಧ ಆಚಾರವಂತ ಶಕ್ತಿಗಳಲ್ಲಿ, ಮಹಾಲಕ್ಷ್ಮೀಯನ್ನು ವಿಷ್ಣುವಿಗೆ, ಮಹಾಕಾಳಿಯನ್ನು ಶಂಕರನಿಗೆ, ಹಾಗೂ ಮಹಾಸರಸ್ವತಿಯನ್ನು ನನಗೂ ಪತ್ನಿಯನ್ನಾಗಿ ಮಾಡಿಕೊಳ್ಳಲು ಆದೇಶ ನೀಡಿದಳು. ನಾವು ಆ ಸ್ಥಾನದಿಂದ ಹೊರಟೆವು.

ಸಾರ ವಿಚಾರ :– ಒಂದು ಬ್ರಹ್ಮಾಂಡದ ವಾಸ್ತವಿಕ ಸ್ಥಿತಿಯಿಂದ, ಮಹರ್ಷಿ ವ್ಯಾಸರು. ಮಹರ್ಷಿ ನಾರದರು, ಶ್ರೀ ಬ್ರಹ್ಮಾ, ಶ್ರೀ ವಿಷ್ಣು ಹಾಗೂ ಶ್ರೀ ಶಂಕರರು ತಿಳಿಯದವರಾಗಿದ್ದಾರೆ. ಇದೂ ಸಹ ಸ್ಪಷ್ಟವಾಗಿದೆ ದುರ್ಗಾಳನ್ನ ಪ್ರಕೃತಿ ಎಂದೂ ಕರೆಯುತ್ತಾರೆ. ಹಾಗೂ ದುರ್ಗಾ ಹಾಗೂ ಬ್ರಹ್ಮ (ಜ್ಯೋತಿ ನಿರಂಜನ ಕಾಲ) ರಲ್ಲಿ ಪತಿ–ಪತ್ನಿ ಸಂಬಂಧ ಇದೆ. ಆದ್ದರಿಂದಲೇ ಬರೆದಿರುವುದು ಬ್ರಹ್ಮನೊಂದಿಗೆ ಪ್ರಕೃತಿಗೆ ಅಬೇಧ ಸಂಬಂಧವಿದೆ ಎಂದು ಪತ್ನಿಯನ್ನು ಅದರಿಂದಲೇ ಅರ್ಧಾಂಗಿ ಎಂದು ಸಹ ಹೇಳುತ್ತಾರೆ. ನಾನು ಎಲ್ಲಿಂದ ಉತ್ಪನ್ನನಾದೆ ಎಂಬುದು ಸ್ವಯಂ ಬ್ರಹ್ಮಾನಿಗೆ ಗೊತ್ತಿಲ್ಲ. ಸಾವಿರ ವರ್ಷಗಳವರೆಗೆ ಜಲದಲ್ಲಿ ಭೂಮಿಯನ್ನು ಹುಡುಕಿದರು. ಆದರೆ ಸಿಗಲಿಲ್ಲ. ಆಗ ಆಕಾಶ ವಾಣಿಯ ಆಧಾರದ ಮೇಲೆ ಸಾವಿರ ವರ್ಷ ತಪಸ್ಸು ಮಾಡಿದರು. ಕಮಲದ ದಂಟನ್ನು ಹಿಡಿದು ಕೆಳಗೆ ಇಳಿದಾಗ. ಅಲ್ಲಿ ಶೇಷನಾಗನ ಮೇಲೆ ಶ್ರೀ ವಿಷ್ಣುವು ಅಚೇತನನಾಗಿದ್ದ ವಿಷ್ಣುವಿನ ಶರೀರದಿಂದ ದೇವಿಯೊಬ್ಬಳು ಹೊರಬಂದಳು. (ಪ್ರೇತನಿಯಂತೆ) ಅವಳು ಸುಂದರ ಆಭೂಷಣಗಳನ್ನು ಧರಿಸಿ ಆಕಾಶದಲ್ಲಿ ವಿರಾಜಮಾನಳಾದಳು. ಆಗ ಶ್ರೀ ವಿಷ್ಣುವಿಗೆ ಪ್ರಜ್ಞೆಬಂದಿತು. ಇಷ್ಟರಲ್ಲಿ ಶಂಕರ ಅಲ್ಲಿಗೆ

ಬಂದರು.

ಮೇಲೆ ಹೇಳಿರುವ ವಿವರಣೆಯಿಂದ ಸಿದ್ಧವಾಗಿದೆ ಮೂವರು ಭಗವಂತರನ್ನೂ ಅಚೇತನಗೊಳಿಸಿ ಇಟ್ಟಿದ್ದರು. ನಂತರ ಚೇತನಗೊಳಿಸಿದರು. ಆಕಾಶದಿಂದ ವಿಮಾನ ಬಂದಿತು. ದೇವಿಯು ಮೂವರನ್ನೂ (ಬ್ರಹ್ಮಾ-ವಿಷ್ಣು-ಶಂಕರ) ವಿಮಾನದಲ್ಲಿ ಕೂರಲು ಆದೇಶಿಸಿದಳು. ವಿಮಾನವನ್ನು ಆಕಾಶದಲ್ಲಿ ಹಾರಿಸಿದರು. ಮೇಲೆ ಒಬ್ಬ ಬ್ರಹ್ಮಾ, ಒಬ್ಬ ಶಿವ ಹಾಗೂ ಒಬ್ಬ ವಿಷ್ಣು ಬೇರೆಯೇ ಇದ್ದರು. ಅವರೆಲ್ಲಾ ಬ್ರಹ್ಮಲೋಕದಲ್ಲಿದ್ದರು.

ವಿಚಾರ ಮಾಡಿ :- ಬ್ರಹ್ಮಲೋಕದಲ್ಲಿ, ಎರಡನೆಯ ಬ್ರಹ್ಮಾ, ವಿಷ್ಣು ಹಾಗೂ ಶಿವ ಕಾಣಿಸಿಕೊಂಡಿದ್ದರು. ಇದು ಜ್ಯೋತಿ ನಿರಂಜನ (ಬ್ರಹ್ಮ)ನ ಚಮತ್ಕಾರವಾಗಿದೆ. ಅವರೇ ಬೇರೆ ಮೂರು ರೂಪಗಳನ್ನು ಧಾರಣೆ ಮಾಡಿ, ಬ್ರಹ್ಮಲೋಕದಲ್ಲಿ ಮೂರು ಗುಪ್ತ ಸ್ಥಾನಗಳನ್ನು ಮಾಡಿ, (ಒಂದು ರಜೋಗುಣ, ಪ್ರಧಾನ ಕ್ಷೇತ್ರ, ಒಂದು ಸತೋಗುಣ ಪ್ರಧಾನ ಕ್ಷೇತ್ರ, ಒಂದು ತಮೋಗುಣ ಪ್ರಧಾನ ಕ್ಷೇತ್ರ) ಇರುತ್ತದೆ. ಹಾಗೂ ಪ್ರಕೃತಿಯನ್ನು (ದುರ್ಗಾ/ ಅಷ್ಟಂಗೀ) ತನ್ನ ಪತ್ನಿಯ ರೂಪದಲ್ಲಿ ಇರಿಸಿಕೊಂಡಿದ್ದಾರೆ. ಯಾವಾಗ ಈ ಇಬ್ಬರು ರಜೋಗುಣ ಪ್ರಧಾನ ಕ್ಷೇತ್ರದಲ್ಲಿರುತ್ತಾರೋ, ಆಗ ಇವರು ಮಹಾಬ್ರಹ್ಮಾ ಹಾಗೂ ದುರ್ಗಾ ಮಹಾಸಾವಿತ್ರಿ ಎಂದು ಕರೆಯುವರು. ಈ ಈರ್ವರ ಸಂಯೋಗಿದಿಂದ ಪುತ್ರರು ಈ ರಜೋಗುಣ ಕ್ಷೇತ್ರದಲ್ಲಿ ಉತ್ಪನ್ನರಾಗುತ್ತಾರೆ. ಅವರು ರಜೋಗುಣ ಪ್ರಧಾನದವರಾಗಿರುತ್ತಾರೆ. ಅವರ ಹೆಸರನ್ನು ಬ್ರಹ್ಮಾ ಇಡುತ್ತಾನೆ. ಹಾಗೂ ಯುವಕರಾಗುವವರೆಗೆ ಅಚೇತನಗೊಳಿಸಿ, ಕಾಪಾಡುತ್ತಿರುತ್ತಾರೆ. ನಂತರ ಕಮಲದ ಹೂವಿನ ಮೇಲೆ ಇಟ್ಟು ಸಚೇತನಗೊಳಿಸುತ್ತಾರೆ. ಯಾವಾಗ ಈ ಇಬ್ಬರೂ ಮಹಾವಿಷ್ಣು ಹಾಗೂ ಮಹಾಲಕ್ಷ್ಮೀ ರೂಪಿನಲ್ಲಿ (ಕಾಲಬ್ರಹ್ಮ ಹಾಗೂ ದುರ್ಗಾ ಸತೋಗುಣ ಪ್ರಧಾನ ಕ್ಷೇತ್ರದಲ್ಲಿರುತ್ತಾರೋ, ಆಗ ಈ ಈರ್ವರ ಸಂಯೋಗದಿಂದ ಯಾವ ಪುತ್ರರು ಉತ್ಪನ್ನವಾಗುತ್ತಾರೋ, ಅವರು ಸತೋಗುಣ ಪ್ರಧಾನರಾಗಿರುತ್ತಾರೆ. ಅವರ ಹೆಸರನ್ನು ವಿಷ್ಣು ಇಡುತ್ತಾನೆ. ಕೆಲ ದಿನಗಳ ನಂತರ ಬಾಲಕರನ್ನು ಅಚೇತನಗೊಳಿಸಿ, ಯುವಕರಾಗುವವರೆಗೆ ರಕ್ಷಿಸುತ್ತಾ ಇರುತ್ತಾರೆ. ನಂತರ ಶೇಷನಾಗನ ಹಾಸಿಗೆಯಲ್ಲಿ ಮಲಗಿಸುತ್ತಾರೆ. ನಂತರ ಸಚೇತನಗೊಳಿಸುತ್ತಾರೆ.

ಇದೇ ರೀತಿ ಈ ಇಬ್ಬರೂ ಯಾವಾಗ ತಮೋಗುಣ ಕ್ಷೇತ್ರದಲ್ಲಿರುತ್ತಾರೋ, ಶಿವೆ ಅರ್ಥಾತ್ ದುರ್ಗಾ ಹಾಗೂ ಮಹಾಶಿವ ಅರ್ಥಾತ್ ಸದಾಶಿವನ ಸಂಯೋಗದಿಂದ, ಯಾವ ಮಕ್ಕಳು ಈ ಕ್ಷೇತ್ರದಲ್ಲಿ ಉತ್ಪನ್ನರಾಗುತ್ತಾರೋ, ಅವರು ತಮೋಗುಣ ಪ್ರಧಾನರಾಗಿರುತ್ತಾರೆ. ಇವರಿಗೆ ಶಿವನ ಹೆಸರನ್ನು ಇಡುತ್ತಾನೆ. ನಂತರ ಯುವಕರಾದ ಮೇಲೆ ಸಚೇತನ ಗೊಳಿಸುತ್ತಾರೆ. ನಂತರ (ಮೂರು ಕ್ಷೇತ್ರಗಳ) ಮೂವರನ್ನೂ ಸೇರಿಸಿ, ವಿಮಾನದಲ್ಲಿ ಕೂರಿಸಿಕೊಂಡು, ಮೇಲಿನ ಲೋಕಗಳ ದೃಶ್ಯವನ್ನು ತೋರಿಸುತ್ತಾರೆ. ಎಲ್ಲಿಯೂ ಇವರು ತಮ್ಮನ್ನು ಸರ್ವೇಸ್ವಾ ಎಂದು ತಿಳಿಯುವುದಿಲ್ಲ. ಗುಣ ಪ್ರಧಾನ ಕ್ಷೇತ್ರವನ್ನು, ತಿಳಿಯಲು ಒಂದು ಉದಾಹರಣೆ ಯಾವುದೋ ಮನೆಯಲ್ಲಿ ಕೊಠಡಿಗಳಿವೆ. ಒಂದು ಕೊಠಡಿಯಲ್ಲಿ ದೇಶಭಕ್ತ ಹುತಾತ್ಮರ ಫೋಟೋಗಳನ್ನು ಹಾಕಿದೆ.

ಯಾವಾಗ ವ್ಯಕ್ತಿಯು, ಆ ಕೊಠಡಿಯೊಳಗೆ ಪ್ರವೇಶಮಾಡುವನೋ, ಆಗ ಅವನ ವಿಚಾರಗಳು ದೇಶ ಭಕ್ತರಂತೆಯೇ ಆಗುತ್ತದೆ. ಎರಡನೆಯ ಕೊಠಡಿಯಲ್ಲಿ ಸಾಧು-ಸಂತರ ಋಷಿಗಳು ಮೊದಲಾವರ ಚಿತ್ರಗಳನ್ನು ಹಾಕಿದ್ದಾರೆ. ಆ ಕೊಠಡಿಯೊಳಗೆ ಪ್ರವೇಶ ಮಾಡುತ್ತಿದ್ದಂತೆ, ಮನಸ್ಸು ಶಾಂತ ಮತ್ತು ದೇವರ ಭಕ್ತಿಯಲ್ಲಿ ತೊಡಗಿಕೊಳ್ಳುತ್ತದೆ. ಮೂರನೆಯ ಕೊಠಡಿಯಲ್ಲಿ ಅಶ್ಲೀಲ, ಅರೆನಗ್ನ ಸ್ತ್ರೀಯರ ಫೋಟೋಗಳನ್ನು ಹಾಕಿದ್ದಾರೆ ಮನದಲ್ಲಿ ಸ್ವತಃ ಹೇಯ ವಿಚಾರಗಳು ಬಂದು ಮನೆಮಾಡುತ್ತವೆ. ಇದೇ ಪ್ರಕಾರ ಮೇಲಿನ ಬ್ರಹ್ಮಲೋಕದಲ್ಲಿ ಕಾಲರೂಪೀ ಬ್ರಹ್ಮನು, ಮೂರು ಸ್ಥಾನಗಳಲ್ಲಿ ಒಂದೊಂದು

ಗುಣ ಪ್ರಧಾನ ಮಾಡಿದ್ದಾರೆ. ಮೂರು ಪ್ರಭುಗಳು (ರಜೋಗುಣ ಬ್ರಹಾ, ಸತೋಗುಣ ವಿಷ್ಣು ಹಾಗೂ ತಮೋಗುಣ ಶೀವರು) ಅವರ ಗುಣಗಳ ಪ್ರಭಾವವನ್ನು ಹೇಗೆ ಬೀರುತ್ತಾರೆ.?

ಉದಾಹರಣೆಗೆ : ಅಡುಗೆಮನೆಯಲ್ಲಿ ಮೆಣಸಿನ ಕಾಯಿಯನ್ನು ಹುರಿದು, ತರಕಾರಿ ಜೊತೆ ಹಾಕಿದಾಗ ಅದರ ಘಾಟಿನಿಂದ ಎಲ್ಲಾ ಕೊಠಡಿಗಳ ಒಳಗಿರುವ ವ್ಯಕ್ತಿಗಳಿಗೂ ಸೀನು ಬರತೊಡಗುತ್ತದೆ. ಹೇಗೆ ಸಾಕಾರವಾದ ವಸ್ತು ಮೆಣಸಿನ ಕಾಯಿ, ಅಡುಗೆಯಲ್ಲಿತ್ತು. ಅದರ ನಿರಾಕಾರ ಶಕ್ತಿ ಅರ್ಥಾತ್ ಗುಣ, ದೂರ ಕುಳಿತಿರುವ ವ್ಯಕ್ತಿಗಳನ್ನೂ ಪ್ರಭಾವಿತಗೊಳಿಸಿತು. ಸರಿಯಾಗಿ ಇದೇ ರೀತಿ ಮೂರು ಪ್ರಭುಗಳು (ಶ್ರೀ ಬ್ರಹ್ಮಾ ರಜೋಗುಣ, ಶ್ರೀ ವಿಷ್ಣ ಸತೋಗುಣ ಹಾಗೂ ಶ್ರೀ ಶಿವ ತಮೋಗುಣ) ತಮ್ಮ ತಮ್ಮ ಲೋಕಗಳಲ್ಲಿ ಇದ್ದುಕೊಂಡು, ಮೂರು ಲೋಕ (ಪೃಥ್ವಿಲೋಕ, ಪಾತಾಳಲೋಕ, ಹಾಗೂ ಸ್ವರ್ಗಲೋಕ)ಗಳ ಪ್ರಾಣಿಗಳನ್ನು ಪ್ರಭಾವಿತಗೊಳಿಸುತ್ತಾರೆ. ಹೇಗೆ ಮೊಬೈಲ್ ಫೋನ್ ತರಂಗಗಳಲ್ಲಿ ಕಾರ್ಯ ನಿರ್ವಹಿಸುತ್ತದೆ. ಈ ರೀತಿ ಅದೃಶ್ಯ ಶಕ್ತಿ ರೂಪಿ ಗುಣಗಳಿಂದ, ಮೂರೂ ದೇವರುಗಳೂ, ತನ್ನ ತಂದೆ ಕಾಲನಿಗಾಗಿ ಸೃಷ್ಟಿಸಿದವು. ಅವನಿಗೆ ಆಹಾರವಾಗಿ ಹೋಗುತ್ತಿವೆ. ದುರ್ಗಾಳಿಗೆ ತನ್ನದೇ ಆದ ಅವಳ ಲೋಕವಿದೆ. ಪ್ರತ್ಯೇಕವಾಗಿದೆ. ಅಲ್ಲಿ ಇವಳು ತನ್ನ ವಾಸ್ತವಿಕ ರೂಪಿನಲ್ಲಿ ದರ್ಶನ ನೀಡುತ್ತಾಳೆ. ನಂತರ ಇವರ ವಿಮಾನವು ದುರ್ಗಾಳ ಲೋಕವನ್ನು ತಲುಪಿತು.

ಆಗ ಕಾಲ ರೂಪಿ ಬ್ರಹ್ಮನು / ಜ್ಯೋತಿ ನಿರಂಜನನು ವಿಷ್ಣುವಿಗೆ ಅವನ ಬಾಲ್ಯ ನೆನಪಿಗೆ ತಂದನು. ಆಗ ವಿಷ್ಣುವು ಹೇಳಿದನು, ಈ ದುರ್ಗಾ ನಾವು ಮೂವರಿಗೂ ತಾಯಿ. ನಾನು ಬಾಲಕ ರೂಪಿನಲ್ಲಿ ಜೋಲಿಯಲ್ಲಿ ಮಲಗಿದ್ದೆ. ಇವಳು ನನಗೆ ಲಾಲಿ ಹಾಡಿ ಮಲಗಿಸುತ್ತಿದ್ದಳು. ಆಗ ವಿಷ್ಣುವು ಹೇಳಿದನು ದುರ್ಗಾ ನೀವು ನಮ್ಮ ತಾಯಿಯಾಗಿರುವಿರಿ. ನಾನು ಬ್ರಹ್ಮಾ ಮತ್ತು ಶಂಕರ ಹುಟ್ಟುಗಳುಳ್ಳವರು. ನಮಗೆ ಅವಿರ್ಭಾವ ತಿರೋಭಾವಗಳಿವೆ ಅರ್ಥಾತ್ ಹುಟ್ಟು–ಸಾವುಗಳು ಇವೆ. ನಾವು ಅವಿನಾಶಿಗಳಲ್ಲ. ತಾವು ಪ್ರಕೃತಿದೇವಿ. ಈ ಮಾತನ್ನು ಶಂಕರನೂ ಸ್ವೀಕರಿಸಿದ. ಹಾಗೂ ಹೇಳಿದ ನಾನು ತಮೋಗುಣದ ಲೀಲೆಯನ್ನು ಮಾಡುವವನು ಶಂಕರನೂ ಸಹ ನಿಮ್ಮ ಮಗ. ಶ್ರೀ ವಿಷ್ಣು ಮತ್ತು ಶ್ರೀ ಬ್ರಹ್ಮಾನು ನಿಮ್ಮಿಂದಲೇ ಉತ್ಪನ್ನವಾಗಿದ್ದಾರೆ. ನಂತರ ಈ ಮೂರೂ ದೇವತೆಗಳಿಗೆ, ದುರ್ಗಾಳು ಮದುವೆ ಮಾಡಿದಳು. ಪ್ರಕೃತಿ ದೇವಿಯೂ (ದುರ್ಗಾ) ತನ್ನ ಶಬ್ದ ಶಕ್ತಿಯಿಂದ ತನ್ನದೇ, ಬೇರೆ ಮೂರು ರೂಪಗಳನ್ನು ಧಾರಣೆ ಮಾಡಿದಳು. ಶ್ರೀ ಬ್ರಹ್ಮಾರ ಮದುವೆ ಸಾವಿತ್ರಿಯೊಂದಿಗೆ, ಶ್ರೀ ವಿಷ್ಣುವಿನ ಮದುವೆ ಲಕ್ಷ್ಮೀಯೊಂದಿಗೆ, ಶ್ರೀಶಿವನ ಮದುವೆ ಉಮಾ ಅರ್ಥಾತ್ ಕಾಳಿಯೊಂದಿಗೆ ಮಾಡಿ, ವಿಮಾನದಲ್ಲಿ ಕೂರಿಸಿ ಇವರನ್ನು ಬೇರೆ ಬೇರೆ ದ್ವೀಪಗಳಿಗೆ ಕಳುಹಿಸಿದಳು. ಜ್ಯೋತಿನಿರಂಜನ (ಕಾಲ–ಬ್ರಹ್ಮ)ನು ತನ್ನ ಉಸಿರಿನ ಮೂಲಕ ಸಮುದ್ರದಲ್ಲಿ 4 ವೇದಗಳನ್ನು ಅಡಗಿಸಿಟ್ಟನು. ನಂತರ ಪ್ರಥಮ ಸಾಗರ ಮಂಥನದ ಸಮಯದಲ್ಲಿ ಮೇಲೆ ಕಾಣುವಂತೆ ಮಾಡಿದ. ಜ್ಯೋತಿ ನಿರಂಜನ (ಕಾಲ)ನ ಆದೇಶದಿಂದ ದುರ್ಗಾಳು 4 ವೇದಗಳನ್ನು ಬ್ರಹ್ಮಾನಿಗೆ ಕೊಟ್ಟಳು. ಬ್ರಹ್ಮಾನು ದುರ್ಗಾ (ತನ್ನ ತಾಯಿ) ಲೊಂದಿಗೆ ಕೇಳಿದ "ವೇದಗಳಲ್ಲಿ ಯಾರನ್ನು 'ಬ್ರಹ್ಮ' (ಪ್ರಭು) ಎಂದು ಹೇಳಲಾಗಿದೆ. ಅವರು ನೀವೇ ಆಗಿರುವಿರೋ? ಅಥವಾ ಬೇರೇ ಪುರುಷರೋ? ದುರ್ಗಾಳು ಕಾಲನ ಭಯದಿಂದ ವಾಸ್ತವಿಕತೆಯನ್ನು ಮುಚ್ಚಿಡುತ್ತಾ ಹೇಳಿದಳು –ನಾನು ಮತ್ತು ಬ್ರಹ್ಮ ಓರ್ವರೇ ಯಾವುದೇ ಬೇಧವಿರುವುದಿಲ್ಲ. ಆದರೂ ವಾಸ್ತವಿಕತೆ ಮುಚ್ಚಿಡಲಾಗಲಿಲ್ಲ. ದುರ್ಗಾಳು ಪುನಃ ಹೇಳಿದಳು ನೀವು ಮೂವರೂ ನನ್ನ ಹಾಗೂ ಬ್ರಹ್ಮನನ್ನು ಸದಾ ಸ್ಮರಣೆ ಮಾಡುತ್ತಿರಿ. ನಮ್ಮಿಬ್ಬರನ್ನು ಸ್ಮರಣೆ ಮಾಡುತ್ತಿರುವುದರಿಂದ ಏನಾದರೂ ಕಠಿಣ ಕಾರ್ಯವಿದ್ದರೆ ನಾನು ಕೂಡಲೆ ಎದುರಿಗೆ ಬರುವೆ.

ವಿಶೇಷ :– ಏಕೆಂದರೆ ಕಾಲನು ತನ್ನ ಬೇಧವನ್ನು ಯಾರಿಗೂ ಹೇಳಬೇಡವೆಂದು ದುರ್ಗಾಳಿಗೆ ಹೇಳಿದ್ದಾನೆ. ಈ ಭಯದಿಂದ ದುರ್ಗಾಳು ಸರ್ವ ಜಗತ್ತನ್ನೂ ವಾಸ್ತವಿಕತೆಯಿಂದ

ಅಪರಿಚಿತವಾಗಿರಿಸಿದ್ದಾಳೆ. ಇವರು ತಮ್ಮ ಪುತ್ರರನ್ನೂ ಮೋಸದಲ್ಲಿ ಇಟ್ಟಿರುವರು ಇದಕ್ಕೆ ಕಾರಣ ಕಾಲನಿಗೆ ಶಾಪವಿದೆ. ಒಂದು ಲಕ್ಷ ಮಾನವಶರೀರಧಾರಿ ಪ್ರಾಣಿಗಳನ್ನು ಆಹಾರವಾಗಿ ನಿತ್ಯ ಮಾಡಬೇಕಿದೆ. ಆದ್ದರಿಂದ ತನ್ನ ಮೂವರೂ ಪುತ್ರರಿಂದ ತನ್ನ ಆಹಾರವನ್ನು ಮಾಡಿಸಿಕೊಳ್ಳುತ್ತಾನೆ. ಶ್ರೀ ಬ್ರಹ್ಮಾ ಅವರನ್ನು ರಜೋಗುಣದಿಂದ ಪ್ರಭಾವಿತಗೊಳಿಸಿ, ಎಲ್ಲ ಪ್ರಾಣಿಗಳಿಂದ ಸಂತಾನ ಉತ್ಪತ್ತಿ ಮಾಡಿಸುತ್ತಾನೆ. ಶ್ರೀ ವಿಷ್ಣು ಅವರಿಗೆ ಸದ್ಗುಣದಿಂದ, ಒಬ್ಬರು ಮತ್ತೊಬ್ಬರಲ್ಲಿ ಮೋಹಗೊಳ್ಳುವಂತೆ ಮಾಡಿ. ಸ್ಥಿತಿ, ಅರ್ಥಾತ್ ಕಾಲನ ಜಾಲದಲ್ಲಿರಿಸಿರುತ್ತಾನೆ. ಹಾಗೂ ಶ್ರೀ ಶಂಕರನಿಂದ ಅವರನ್ನು ಸಂಹಾರ ಮಾಡಿಸಿ, ತನ್ನ ಆಹಾರವನ್ನು ಸಿದ್ಧ ಮಾಡಿಸಿ ಕೊಳ್ಳುತ್ತಾನೆ.ನಂತರ ಮೂರೂ ಪ್ರಭುಗಳನ್ನು ಕೊಂದು ತಿನ್ನುತ್ತಾನೆ. ಹಾಗೂ ಹೊಸ ಪುಣ್ಯ ಕರ್ಮಿ ಪ್ರಾಣಿಗಳಲ್ಲಿ, ಮೂವರು ಪುತ್ರರನ್ನು ಉತ್ಪನ್ನ ಮಾಡಿ, ತನ್ನ ಕಾರ್ಯವನ್ನು ಮುಂದುವರಿಸುತ್ತಿದ್ದಾನೆ. ಹಾಗೂ ಮೊದಲಿನ ಮೂರು, ಬ್ರಹ್ಮಾ, ವಿಷ್ಣು, ಹಾಗೂ ಶಿವ **84** ಲಕ್ಷ ಯೋನಿಗಳಲ್ಲಿ ಹಾಗೂ ಸ್ವರ್ಗ ನರಕಗಳಲ್ಲಿ ಕರ್ಮಾಧಾರದಿಂದ ಹುಟ್ಟು-ಸಾವಿನ ಚಕ್ರದಲ್ಲಿರುತ್ತಾರೆ. ಇದೇ ಪ್ರಮಾಣವು ಶಿವಮಹಾಪುರಾಣ, ರುದ್ರ ಸಂಹಿತೆಯ ಪ್ರಥಮ (ಸೃಷ್ಠಿ) ಖಂಡ, ಅಧ್ಯಾಯ **6, 7** ಹಾಗೂ **8, 9** ರಲ್ಲಿ ಸಹ ಇದೆ.

## "ಶ್ರೀ ಶಿವ ಮಹಾಪುರಾಣದಿಂದ ಸಾರ ವಿಚಾರ"

### 'ಶಿವ ಮಹಾ ಪುರಾಣ'

ಶ್ರೀ ಶಿವ ಮಹಾಪುರಾಣ, (ಸಂಪಾದಕರು: ಹನುಮಾನ್ ಪ್ರಸಾದ್ ಪೋದ್ದಾರ್, ಕನ್ನಡ ಅನುವಾದಕರು: ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್, ಪ್ರಕಾಶಕ : ಗೋವಿಂದ ಭವನ ಕಾರ್ಯಾಲಯ, ಗೀತಾಪ್ರೆಸ್ ಗೋರಖಪುರ) ದಪ್ಪ ಅಕ್ಷರಗಳಲ್ಲಿ ಮುದ್ರಣ. ಅಧ್ಯಾಯ **6**, ರುದ್ರ ಸಂಹಿತಾ, ಪ್ರಥಮ ಖಂಡ (ಸೃಷ್ಠಿ)ದಿಂದ ನಿಷ್ಕರ್ಷೆ :

ತನ್ನ (ಬ್ರಹ್ಮಾನ) ಮಗ ನಾರದರೊಂದಿಗೆ ಶ್ರೀ ಶಿವ ಹಾಗೂ ಶ್ರೀ ಶಿವೇ ಳ ಬಗ್ಗೆ ಕೇಳಲಾಗಿ, ಶ್ರೀ ಬ್ರಹ್ಮಾ ರವರು ಹೇಳಿದರು. ಪುಟ ಸಂಖ್ಯೆ **81-82** (ಹಿಂದಿಯಲ್ಲಿ ಪುಟ ಸಂಖ್ಯೆ **100-102**) ಯಾವ ಪರಬ್ರಹ್ಮನ, ವಿಷಯದಲ್ಲಿ ಜ್ಞಾನ ಮತ್ತು ಅಜ್ಞಾನದಿಂದ ಪೂರ್ಣ ಯುಕ್ತಿಯಿಂದ ಈ ರೀತಿ ವಿಕಲ್ಪ ಮಾಡಿದ್ದಾರೆ ಯಾರೂ ನಿರಾಕಾರ ಪರಬ್ರಹ್ಮ ನಿರುವನೋ, ಅವನೇ ಸಾಕಾರ ರೂಪದಲ್ಲಿ, ಸದಾಶಿವನ ರೂಪವನ್ನು ಧಾರಣೆ ಮಾಡಿ. ಮನುಷ್ಯರೂಪದಲ್ಲಿ ಪ್ರಕಟಗೊಂಡ. ಸದಾಶಿವನು ತನ್ನ ಶರೀರದಿಂದ, ಒಬ್ಬಳು ಸ್ತ್ರೀಯನ್ನು ಉತ್ಪನ್ನ ಮಾಡಿದ. ಅವಳನ್ನು ಪ್ರಧಾನ ಪ್ರಕೃತಿ, ಅಂಬಿಕಾ, ತ್ರಿದೇವ ಜನನೀ (ಬ್ರಹ್ಮಾ-ವಿಷ್ಣು, ಶಿವನ ತಾಯಿ) ಹೇಳುತ್ತಾರೆ ಅವಳಿಗೆ **8** ಭುಜಗಳಿವೆ.

## "ಶ್ರೀ ವಿಷ್ಣುವಿನ ಉತ್ಪತ್ತಿ"

ಯಾರು ಸದಾಶಿವರೋ ಅವರನ್ನೇ ಪರಮಪುರುಷ, ಈಶ್ವರ, ಶಿವ, ಶಂಭು ಮತ್ತು ಮಹೇಶ್ವರ ಎಂದು ಕರೆಯುತ್ತಾರೆ. ತನ್ನ ಎಲ್ಲಾ ಅಂಗಗಳಿಗೆ ಭಸ್ಮಲೇಪನ ಮಾಡಿಕೊಂಡಿರುತ್ತಾನೆ. ಆ ಕಾಲ ರೂಪಿ ಬ್ರಹ್ಮನು ಒಂದು ಶಿವಲೋಕ ಎಂಬ ಹೆಸರಿನ (ಬ್ರಹ್ಮಲೋಕ)ದಲ್ಲಿ ತಮೋಗುಣ, ಪ್ರಧಾನ ಕ್ಷೇತ್ರ) ಧಾಮ/ ಕ್ಷೇತ್ರವನ್ನು ಮಾಡಿದನು. ಅದನ್ನು ಕಾಶೀ ಎಂದು ಕರೆಯುತ್ತಾರೆ. ಶಿವ ಹಾಗೂ ಶಿವೇ ಪತಿ-ಪತ್ನಿ ರೂಪದಲ್ಲಿ ಇರುತ್ತಾ. ಒಬ್ಬ ಮಗನನ್ನು ಉತ್ಪತ್ತಿ ಮಾಡಿದರು. ಅವನ ಹೆಸರನ್ನು 'ವಿಷ್ಣು' ಎಂದಿಟ್ಟರು. ಅಧ್ಯಾಯ **6** ರುದ್ರ ಸಂಹಿತಾ ಶಿವ ಮಹಾಪುರಾಣ ಪುಟ ಸಂಖ್ಯೆ **81-83** (ಹಿಂದಿಯಲ್ಲಿ ಪುಟ ಸಂಖ್ಯೆ **103-104**)

## “ಶ್ರೀ ಬ್ರಹ್ಮಾ ಹಾಗೂ ಶಿವನ ಉತ್ಪತ್ತಿ”

ಅಧ್ಯಾಯ **7, 8, 9** ಪುಟ ಸಂಖ್ಯೆ **84–90** (ಹಿಂದಿಯಲ್ಲಿ ಪುಟ ಸಂಖ್ಯೆ **105–110**) ಶ್ರೀ ಬ್ರಹ್ಮಾರು ಹೇಳಿದರು– ಶ್ರೀ ಶಿವ ಹಾಗೂ ಶಿವೇ (ಕಾಲರೂಪೀ ಬ್ರಹ್ಮ ಹಾಗೂ ಪ್ರಕೃತಿ/ ದುರ್ಗಾ/ ಅಷ್ಟಂಗೀ)ಳು ಪತಿ–ಪತ್ನಿ ವ್ಯವಹಾರದಿಂದ, ನನ್ನನ್ನೂ ಉತ್ಪತ್ತಿ ಮಾಡಿದರು. ಇದೇ ಕಾಲನು ಮಹಾವಿಷ್ಣುವಿನ ರೂಪವನ್ನು ಧಾರಣೆ ಮಾಡಿ, ನಾಭಿಯಿಂದ ಒಂದು ಕಮಲವನ್ನು ಉತ್ಪನ್ನ ಮಾಡುತ್ತಾನೆ. ಬ್ರಹ್ಮಾ ಮುಂದೆ ಹೇಳುತ್ತಾನೆ ನಂತರ ಚೇತನಗೊಂಡೆನು. ಕಮಲದ ಮೂಲವನ್ನು ಹುಡುಕಬಯಸಿದೆ. ಆದರೆ ಸಫಲನಾಗಲಿಲ್ಲ. ನಂತರ ತಪಸ್ಸನ್ನು ಮಾಡಲು, ಆಕಾಶವಾಣಿಯಾಯಿತು. ತಪಸ್ಸು ಮಾಡಿದೆ. ನಂತರ ನನಗೂ, ವಿಷ್ಣುವಿಗೂ ಯಾವುದೋ ಮಾತಿಗೆ ಜಗಳವಾಯಿತು. (ವಿವರಣೆಯು ಇದೇ ಪುಸ್ತಕದಲ್ಲಿದೆ) ನಂತರ, ನಮ್ಮಿಬ್ಬರ ನಡುವೆ ಒಂದು ತೇಜೋಮಯ ಲಿಂಗ ಪ್ರಕಟವಾಯಿತು. ಹಾಗೂ ‘ಓಂ–ಓಂ” ಎಂಬ ನಾದ ಕೇಳಿಸಿತು. ಆ ಲಿಂಗದವನು, ಮಾನವ ರೂಪದಲ್ಲಿ ಪ್ರಕಟಗೊಂಡನು. ಅವನ ಜೊತೆಗೆ ಶಿವೇ (ದುರ್ಗಾ) ಸಹ ಇದ್ದಳು.

ನಂತರ ಶಂಕರನನ್ನು ಇದ್ದಕ್ಕಿದ್ದಂತೆ, ಪ್ರಕಟಗೊಳಿಸಲಾಯಿತು. (ಏಕೆಂದರೆ ಈ ಮೊದಲು ಅಚೇತನವಾಗಿದ್ದ ನಂತರ ಸಚೇತನಗೊಳಿಸಿ ಮೂವರನ್ನೂ ಒಗ್ಗೂಡಿಸಿದರು) ಹಾಗೂ ಹೇಳಿದನು ನೀವು ಮೂವರೂ ಸೃಷ್ಠಿ–ಸ್ಥಿತಿ ಹಾಗೂ ಸಂಹಾರದ ಕಾರ್ಯವನ್ನು ನಿರ್ವಹಿಸಿರಿ.

ರಜೋಗುಣ ಪ್ರಧಾನ ಬ್ರಹ್ಮಾ, ಸತೋಗುಣ ಪ್ರಧಾನ ವಿಷ್ಣು, ಹಾಗೂ ತಮೋಗುಣ ಪ್ರಧಾನ ಶಿವ, ಈ ಪ್ರಕಾರ ಮೂರು ದೇವರುಗಳ ಗುಣಗಳಿವೆ. ಆದರೆ ಶಿವ (ಕಾಲ ರೂಪಿ ಬ್ರಹ್ಮ) ಗುಣಾತೀತ ಎಂದು ತಿಳಿಯಲಾಗಿದೆ. ಪುಟ ಸಂಖ್ಯೆ **90** ರಲ್ಲಿ (ಹಿಂದಿಯಲ್ಲಿ ಪುಟ ಸಂಖ್ಯೆ **110**)

ಸಾರ ವಿಚಾರ :– ಮೇಲಿನ ವಿವರಣೆಯಿಂದ ಸ್ಪಷ್ಟವಾಗಿದೆ ಕಾಲರೂಪಿ ಬ್ರಹ್ಮ ಅರ್ಥಾತ್ ಸದಾಶಿವ ಹಾಗೂ ಪ್ರಕೃತಿ (ದುರ್ಗಾ) ಶ್ರೀ ಬ್ರಹ್ಮಾ, ಶ್ರೀ ವಿಷ್ಣು ಹಾಗೂ ಶ್ರೀ ಶಿವನ ತಾಯಿ ತಂದೆಯರಾಗಿದ್ದಾರೆ. ದುರ್ಗಾ ಇವಳನ್ನು ಪ್ರಕೃತಿ ಹಾಗೂ ಪ್ರಧಾನ ಎಂದೂ ಹೇಳುತ್ತಾರೆ. ಇವಳಿಗೆ **8** ಭುಜಗಳಿವೆ. ಈ ಸದಾಶಿವ ಅರ್ಥಾತ್ ಜ್ಯೋತಿ ನಿರಂಜನನ ಶರೀರ ಅರ್ಥಾತ್ ಹೊಟ್ಟೆಯಿಂದ ಹೊರಬಂದವಳು. ಬ್ರಹ್ಮ ಅರ್ಥಾತ್ ಕಾಲನು ಹಾಗೂ ಪ್ರಕೃತಿಯು (ದುರ್ಗಾ) ಎಲ್ಲ ಪ್ರಾಣಿಗಳನ್ನು ಭ್ರಮಿತ ಗೊಳಿಸುತ್ತಾರೆ. ತಮ್ಮ ಪುತ್ರರಿಗೂ ವಾಸ್ತವಿಕತೆಯನ್ನು ತಿಳಿಸುವುದಿಲ್ಲ. ಕಾರಣ ಕಾಲನು (ಬ್ರಹ್ಮನು) ಜ್ಯೋತಿ ನಿರಂಜನ **21** ಬ್ರಹ್ಮಾಂಡಗಳ ಪ್ರಾಣಿಗಳನ್ನು ತಪ್ತಶಿಲೆಯ ಮೇಲೆ ಕಾಯಿಸಿ (ನಮ್ಮನ್ನು) ತಿನ್ನವನೆಂದು ಗೊತ್ತಾಗಬಾರದೆಂದು. ಆದ್ದರಿಂದಲೇ ಹುಟ್ಟು ಸಾವು ಹಾಗೂ ಬೇರೆ ದುಃಖತರವಾದ ಯೋನಿಗಳಲ್ಲಿ, ಸಂಕಟಪಡಿಸುತ್ತಾನೆ. ಹಾಗೂ ತನ್ನ ಮೂರು ಪುತ್ರರಿಂದ, ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು ಹಾಗೂ ತಮೋಗುಣ ಶಿವ ಇವರಿಂದ ಉತ್ಪತ್ತಿ ಸ್ಥಿತಿ, ಪಾಲನೆ ಹಾಗೂ ಸಂಹಾರ ಮಾಡಿಸಿ, ತನ್ನ ಆಹಾರ ತಯಾರು ಮಾಡಿಸಿಕೊಳ್ಳುತ್ತಾನೆ. ಏಕೆಂದರೆ ಕಾಲನಿಗೆ ಒಂದು ಲಕ್ಷ ಮಾನವ ಶರೀರಧಾರಿ ಪ್ರಾಣಿಗಳನ್ನು ಆಹಾರ ಮಾಡಿಕೊಳ್ಳುವ ಶಾಪವಿದೆ. ದಯವಿಟ್ಟು ಶ್ರೀ ಮದ್ ಭಗವದ್ಗೀತೆಯಲ್ಲಿ ನೋಡಿರಿ ‘ಕಾಲ (ಬ್ರಹ್ಮ) ಹಾಗೂ ಪ್ರಕೃತಿ (ದುರ್ಗಾ)ಯ ಪತಿ–ಪತ್ನಿ ಕರ್ಮದಿಂದ ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು ಹಾಗೂ ತಮೋಗುಣ ಶಿವನ ಉತ್ಪತ್ತಿಯಾಯಿತು.

## “ಮೂರು ಗುಣಗಳು ಏನಾಗಿವೆ? ಪ್ರಮಾಣ ಸಹಿತ”

ಮೂರು ಗುಣಗಳು : ರಜೋಗುಣ ಬ್ರಹ್ಮಾ, ಸತೋಗುಣ–ವಿಷ್ಣು, ತಮೋಗುಣ ಶಿವನಾಗಿದ್ದಾನೆ.

ಬ್ರಹ್ಮ (ಕಾಲ) ಹಾಗೂ ಪ್ರಕೃತಿ (ದುರ್ಗಾ) ಯಿಂದ ಉತ್ಪನ್ನರಾಗಿದ್ದಾರೆ. ಮೂವರೂ ನಾಶವಾಗುತ್ತಾರೆ."

ಪ್ರಮಾಣ:– ಗೀತಾಪ್ರೆಸ್, ಗೋರಖಪುರದಿಂದ ಪ್ರಕಾಶಿತ ಗೊಂಡಿರುವ ಮಹಾ ಶಿವಪುರಾಣ, ಇದರ ಸಂಪಾದಕರು ಹನುಮಾನ ಪ್ರಸಾದ್ ಪೋದ್ದಾರ್. ಕನ್ನಡ ಅನುವಾದಕರು, ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್. ರುದ್ರ ಸಂಹಿತೆ ಅಧ್ಯಾಯ **9**, ಪುಟ ಸಂಖ್ಯೆ. **90**. (ಹಿಂದಿಯಲ್ಲಿ ಪುಟ ಸಂಖ್ಯೆ **110**) ರಲ್ಲಿ.

"ಈ ರೀತಿ ಬ್ರಹ್ಮಾ–ವಿಷ್ಣು ಹಾಗೂ ಶಿವ, ಮೂವರು ದೇವರುಗಳಲ್ಲಿ ಗುಣವಿದೆ". ಆದರೆ ಶಿವನಿಗೆ (ಬ್ರಹ್ಮ–ಕಾಲ) ಗಣಾತೀತ ಎಂದು ಹೇಳಲಾಗಿದೆ.

ಎರಡನೆಯ ಪ್ರಮಾಣ:– ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತಗೊಂಡಿರುವ "ಶ್ರೀಮದ್ ದೇವಿ ಭಾಗವತ ಪುರಾಣ" ಸಂಪಾದಕರು ಹನುಮಾನ ಪ್ರಸಾದ ಪೋದ್ದಾರ. ಅನುವಾದಕರು, ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್, ಮೂರನೆಯ ಸ್ಕಂದ, **4–5**ನೇ ಅಧ್ಯಾಯ, **105–106**ನೇ ಪುಟ (ಹಿಂದಿಯಲ್ಲಿ ಅಧ್ಯಾಯ **5**ರ ಪುಟ ಸಂಖ್ಯೆ. **123**) ಭಗವಾನ್ ವಿಷ್ಣುವು ದುರ್ಗಾಳ ಸ್ತುತಿ ಮಾಡಿದ. ಹೀಗೆ ಹೇಳಿದ –ನಾನು (ವಿಷ್ಣು) ಬ್ರಹ್ಮಾ ಹಾಗೂ ಶಂಕರ. ನಿಮ್ಮ ದಯೆಯಿಂದ ಇರುವವರಾಗಿದ್ದೇವೆ. ನಮಗೆ ಅವಿರ್ಭಾವ (ಹುಟ್ಟು) ಹಾಗೂ ತಿರೋಭಾವ (ಸಾವು) ಆಗುತ್ತದೆ. ನಾವು ನಿತ್ಯ (ಅವಿನಾಶಿ)ರಲ್ಲ. ನೀನೇ ನಿತ್ಯಳು ಜಗತ್ತಿನ ತಾಯಿ. ಪ್ರಕೃತಿ ಮತ್ತು ಸನಾತನಿ ದೇವಿಯಾಗಿರುವೆ.

ಭಗವಾನ್ ಶಂಕರ ಹೇಳಿದನು:– ಭಗವಾನ್ ಬ್ರಹ್ಮಾ ಹಾಗೂ ಭಗವಾನ್ ವಿಷ್ಣು ನಿಮ್ಮಿಂದಲೇ ಉತ್ಪನ್ನವಾಗಿದ್ದರೆ, ಅವರ ನಂತರ ಉತ್ಪನ್ನನಾದ ನಾನು, ತಮೋಗುಣಿ ಲೀಲೆ ಮಾಡುವ ಶಂಕರ ನಿಮ್ಮ ಸಂತಾನವಲ್ಲವೆ? ಅರ್ಥಾತ್ ನನ್ನನ್ನೂ ಉತ್ಪತ್ತಿಮಾಡಿದವರು ನೀನೇ ಆಗಿರುವೆ. ಈ ಪ್ರಪಂಚದ ಸೃಷ್ಠಿ–ಸ್ಥಿತಿ–ಲಯಗಳಲ್ಲಿ ನಿಮ್ಮ ಗುಣ ಎಂದಿಗೂ ಯಾವಾಗಲೂ ಇದೆ. ಈ ಮೂರು ಗುಣಗಳಿಂದ ಉತ್ಪನ್ನರಾದ ನಾವು, ಬ್ರಹ್ಮಾ–ವಿಷ್ಣು ಹಾಗೂ ಶಂಕರ, ನಿಯಾಮಾನುಸಾರವಾಗಿ ಕಾಯಕದಲ್ಲಿ ತತ್ಪರರಾಗಿರುತ್ತೇವೆ.

ಮೇಲಿನ ಈ ವಿವರಣೆ ಕೇವಲ ಕನ್ನಡದಲ್ಲಿ ಅನುವಾದಿತವಾಗಿರುವ " ಶ್ರೀ ದೇವೀ ಮಹಾಪುರಾಣ" ದಿಂದ ತೆಗೆದುಕೊಂಡಿದೆ. ಇದರಲ್ಲಿ ಕೆಲವು ತತ್ವಗಳನ್ನು ಅಡಗಿಸಿಡಲಾಗಿದೆ. ಆದ್ದರಿಂದ ಇದೇ ಪ್ರಮಾಣವನ್ನು ನೋಡಿ. "ಶ್ರೀಮದ್ ದೇವೀ ಭಾಗವತ ಮಹಾಪುರಾಣ" ಸಭಾಷಟಿಕಮ್, ಸಮಹಾತ್ಯಮ್, ಖೇಮರಾಜ ಶ್ರೀ ಕೃಷ್ಣದಾಸ್, ಪ್ರಕಾಶನ ಮುಂಬಯಿ ಇದರಲ್ಲಿ ಸಂಸ್ಕೃತ ಸಹಿತ ಹಿಂದಿ ಅನುವಾದ ಮಾಡಿದೆ. ಮೂರನೆಯ ಸ್ಕಂದ, **4ನೇ ಅಧ್ಯಾಯ, ಪುಟ 10, ಶ್ಲೋಕ 42.**

"ಬ್ರಹ್ಮಾ–ಅಹಂ ಮಹೇಶ್ವರಃ ಫಿಲತೇ ಪ್ರಭಾವತ್ಸರ್ವೇ ವಯಂ, ಜನಿಯುತಾ ನ ಯದಾ ತೂ ನಿತ್ಯಾಃ, ಕೆ ಅನ್ಯೆ ಸುರಾಃ ಶತಮಖ ಪ್ರಮುಖಾಃ ಚ ನಿತ್ಯಾ ನಿತ್ಯಾ ತ್ವಮೇವ ಜನನೀ ಪ್ರಕೃತಿಃ ಪುರಾಣಾ **(42)**

ಅನುವಾದ:– (ವಿಷ್ಣು ಹೇಳಿದನು)ಹೇ ಮಾತಾ! ಬ್ರಹ್ಮಾ, ನಾನು ಹಾಗೂ ಶಿವ ನಿನ್ನದೇ ಪ್ರಭಾವದಿಂದ ಜನನವಾನರಾಗಿದ್ದೇವೆ. ನಿತ್ಯರಲ್ಲ ಅಂದರೆ ಅವಿನಾಶಿಯಲ್ಲ. ಹಾಗಾದರೆ ಇಂದ್ರಾದಿ ಬೇರೆ ದೇವತೆಗಳು ಹೇಗೆ ನಿತ್ಯರಾಗಲು ಸಾಧ್ಯ? ನೀನೇ ಅವಿನಾಶಿಯಾಗಿರುವೆ. ನಮ್ಮೆಲ್ಲರ ಜನನಿ, ಅರ್ಥಾತ್ ಉತ್ಪನ್ನ ಮಾಡಿದ ಮಾತೆಯಾಗಿರುವೆ. ಪ್ರಕೃತಿ ಹಾಗೂ ಸನಾತನಿ ದೇವಿಯಾಗಿರುವೆ **(42)**

**ಪುಟ 11–12 ಅಧ್ಯಾಯ 5 ಶ್ಲೋಕ 8.**

ಯದಿ ದಯಾದ್ರಮನಾ ನ ಸದಾಂಬಿಕೆ ಕಥಮಹಂ ವಿಹಿತಃ
ಚ ತಮೋಗುಣಃ ಕಮಲಜಶ್ಚ ರಜೋಗುಣ ಸಂಭವಃ
ಸುವಿಹಿತಃ ಕಿಮು ಸತ್ವಗುಣೋ ಹರಿಃ (8)

**ಅನುವಾದ:– ಭಗವಾನ್ ಶಂಕರ ಹೇಳಿದ ಹೇ ಮಾತೆ! ನಿನಗೆ ನಮ್ಮ ಮೇಲೆ ದಯೆ ಇದ್ದರೆ, ನನ್ನನ್ನು ತಮೋಗುಣದವನಾಗಿ ಏಕೆ ಮಾಡಿದೆ? ಕಮಲದಿಂದ ಉತ್ಪನ್ನವಾದ ಬ್ರಹ್ಮಾನನ್ನು ರಜೋಗುಣದವನಾಗಿ ಏತಕ್ಕಾಗಿ ಮಾಡಿದೆ! ಹಾಗೂ ವಿಷ್ಣುವನ್ನು ಸತೋಗುಣದವನಾಗಿ ಏಕೆ ಮಾಡಿದೆ? ಅರ್ಥಾತ್ ಜೀವಗಳನ್ನು ಜನ್ಮ–ಮೃತ್ಯು ರೂಪದ ದುಷ್ಟಕರ್ಮದಲ್ಲಿ ನನಗೆ ಏಕೆ ತೊಡಗಿಸಿದೆ?**

**ಶ್ಲೋಕ 12:–**

"ರಮಯಸೆ ಸ್ವಪತಿಂ ಪುರುಷಂ ಸದಾ ತವ ಗತಿಂ ನ ಹಿ ವಿಹ ವಿದಮ್ ಶಿವೆ" **(12)**

**ಅನುವಾದ:– ನಿನ್ನ ಪತಿ ಪುರುಷ ಅರ್ಥಾತ್ ಕಾಲ ಭಗವಂತನೊಂದಿಗೆ ಯಾವಾಗಲೂ ಭೋಗ–ವಿಲಾಸ ಮಾಡುತ್ತಲಿರುವೆ ನಿನ್ನ ಗತಿಯನ್ನು ಯಾರೂ ತಿಳಿದಿಲ್ಲ.**

## 'ನಿಷ್ಕರ್ಷೆ'

**ಶ್ರೀ ಮದ್ಭಗವದ್ಗೀತೆಯ ಜ್ಞಾನವು ಸಹ, ಈ ಕಾಲರೂಪೀ ಬ್ರಹ್ಮನು, ಶ್ರೀ ಕೃಷ್ಣನ ಶರೀರದೊಳಗೆ ಪ್ರೇತವತ ಪ್ರವೇಶ ಮಾಡಿ. ಹೇಳಿದ್ದಾಗಿದೆ. ಮೇಲೆ ಹೇಳಿರುವ ಪವಿತ್ರ ಪುರಾಣಗಳೂ, ಪ್ರಮಾಣಗೊಳಿಸಿದೆ ಏನೆಂದರೆ, ಪ್ರಕೃತಿಯೆಂದು ದುರ್ಗಾಳನ್ನು ಕರೆಯುತ್ತಾರೆ. ಹಾಗೂ ಸದಾಶಿವನು ಅರ್ಥಾತ್ ಕಾಲ ರೂಪಿ ಬ್ರಹ್ಮನು ಪ್ರಕೃತಿಯೊಂದಿಗೆ, ಪತಿ–ಪತ್ನಿ ವ್ಯವಹಾರದಿಂದ ಉತ್ಪನ್ನರಾದವರೇ ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು ಹಾಗೂ ತಮೋಗುಣ ಶಿವನು. ಇದಕ್ಕೆ ಸಾಕ್ಷಿ ಶ್ರೀ ಮದ್ಭಗವದ್ಗೀತೆಯಲ್ಲಿಯೂ ಇದೆ. ಗೀತೆಯ ಸರ್ವಶಾಸ್ತ್ರಗಳ ಸಾರ, ಆದ್ದರಿಂದ ಇದರಲ್ಲಿ ಸಂಕ್ಷಿಪ್ತ ವಿವರಣೆಯು ಸಾಂಕೇತಿಕ (ಕೋಡ್ ವರ್ಡ್ಸ್) ಶಬ್ದಗಳಲ್ಲಿದೆ. ಇದನ್ನು ತತ್ವದರ್ಶಿ ಸಂತರು ಮಾತ್ರ ತಿಳಿಸಬಲ್ಲರು. ಈಗ ದಯವಿಟ್ಟು ಪವಿತ್ರ ಭಗವದ್ಗೀತೆಯಲ್ಲಿ ಪ್ರವೇಶ ಮಾಡಿರಿ.**

**ಅಧ್ಯಾಯ 14ರ 3ನೇ ಶ್ಲೋಕದಿಂದ 5ರಲ್ಲಿ ಶ್ರೀಮದ್ಭವದ್ಗೀತೆ ಹೇಳಿರುವ ಕಾಲ ಬ್ರಹ್ಮನು, ಶ್ರೀ ಕೃಷ್ಣನ ಶರೀರದಲ್ಲಿ ಪ್ರೇತವತ ಪ್ರವೇಶಮಾಡಿ ಹೇಳಿದ್ದಾನೆ ಪ್ರಕೃತಿ (ದುರ್ಗಾ)ಯು ನನ್ನ ಪತ್ನಿ ನಾನು ಬ್ರಹ್ಮ. ನಾನಿವಳ ಯೋನಿಯಲ್ಲಿ ಬೀಜಸ್ಥಾಪನೆ ಮಾಡುತ್ತೇನೆ. ಇದರಿಂದ ಸಕಲ ಪ್ರಾಣಿಗಳ ಉತ್ಪತ್ತಿಯಾಗುತ್ತದೆ. ನಾನು ಎಲ್ಲರ ತಂದೆ ಹಾಗೂ ಪ್ರಕೃತಿ (ದುರ್ಗಾ) ಎಲ್ಲರ ತಾಯಿ ಎಂದು ಹೇಳಲಾಗುತ್ತದೆ. ಪ್ರಕೃತಿ (ದುರ್ಗಾ)ಯಿಂದ ಉತ್ಪನ್ನವಾದ ಮೂರುಗುಣ (ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು, ತಮೋಗುಣ ಶಿವ)ಗಳ ಜೀವಾತ್ಮರನ್ನು, ಅವರವರ ಕರ್ಮಾಧಾರದಲ್ಲಿ ಶರೀರಗಳಲ್ಲಿ ಬಂಧಿಸಲಾಗುತ್ತದೆ. ಸ್ಥಿತಿ ಹಾಗೂ ಸಂಹಾರಗಳನ್ನು ಮಾಡಿ ಬಂಧಿಸಿಡುತ್ತಾರೆ.**

**ಅಧ್ಯಾಯ 11ರ 32ನೇ ಶ್ಲೋಕದಲ್ಲಿ ಹೇಳಲಾಗಿದೆ. "ನಾನು ಕಾಲನಾಗಿದ್ದೇನೆ. ಎಲ್ಲರನ್ನು ತಿನ್ನಲೆಂದೇ ಪ್ರಕಟವಾಗಿದ್ದೇನೆ." ಅಧ್ಯಾಯ 11ರ 21ನೇ ಶ್ಲೋಕದಲ್ಲಿ ಅರ್ಜುನ ಹೇಳುತ್ತಿದ್ದಾನೆ "ನೀವಂತೂ ಋಷಿಗಳನ್ನೂ ತಿನ್ನುತ್ತಿರುವಿರಿ. ದೇವತೆಗಳು ಹಾಗೂ ಸಿದ್ದರೂ ಸಹ, ನಿಮ್ಮಲ್ಲಿ ಮಂಗಳಕ್ಕಾಗಿ ಅರ್ಥಾತ್ ರಕ್ಷಣೆಗಾಗಿ, ಯಾಚನೆ ಮಾಡುತ್ತಿದ್ದಾರೆ ವೇದಗಳ ಸ್ತೋತ್ರಗಳಿಂದ ನಿಮ್ಮ ಸ್ತುತಿ ಮಾಡುತ್ತಿದ್ದಾರೆ. ಆದರೆ ನೀವು ಎಲ್ಲರನ್ನೂ ತಿನ್ನುತ್ತಿರುವಿರಿ. ಕೆಲವರು ನಿಮ್ಮ ಗಡ್ಡದಲ್ಲಿ**

ನೇತಾಡುತ್ತಿರುವಂತೆ, ಕಾಣುತ್ತಾರೆ. ಕೆಲವರು ತಮ್ಮಲ್ಲಿ ಪ್ರವೇಶ ಮಾಡುತ್ತಿದ್ದಾರೆ."

**"ರಜೋಗುಣ ಶ್ರೀ ಬ್ರಹ್ಮಾ, ಸತೋಗುಣ ಶ್ರೀ ವಿಷ್ಣು ಹಾಗೂ ತಮೋಗುಣ ಶ್ರೀ ಶಿವ ಮೂರೂ ದೇವರ ಪೂಜೆಯನ್ನು ವ್ಯರ್ಥವೆಂದು ಹೇಳಿದೆ."**

ಇದೇ ಗೀತೆಜ್ಞಾನದಾತ ಪ್ರಭು (ಶ್ರೀ ಮದ್ಭಗವದ್ಗೀತೆಯ 7ನೇ ಅಧ್ಯಾಯದ, 12ನೇ ರಿಂದ 15ನೇ ಶ್ಲೋಕಗಳವರೆಗೆ) ಹೇಳುತ್ತಿದ್ದಾನೆ ಮೂರು ಗುಣಗಳ (ರಜೋಗುಣ ಬ್ರಹ್ಮಾ, ಸತೋಗುಣ ವಿಷ್ಣು, ತಮೋಗುಣ ಶಿವ) ಪೂಜೆಯನ್ನು ಮಾಡುವವರ ಜ್ಞಾನವು ಕಳೆದು ಹೋಗಿದೆ. ಇವರು ಇವರುಗಳಿಗಿಂತ ಮೇಲಿನ ಭಕ್ತಿ ಪೂಜೆಯನ್ನು ಮಾಡುವುದಿಲ್ಲ. ಮೂರೂ ಪ್ರಭುಗಳು (ಬ್ರಹ್ಮಾ-ವಿಷ್ಣು-ಶಿವ) ವರೆಗೆ ಸಾಧನೆ ಮಾಡುವವರು. ರಾಕ್ಷಸ ಗುಣವನ್ನು ಧಾರಣೆ ಮಾಡಿ, ಮನುಷ್ಯರಲ್ಲಿ ನೀಚ, ದುಷ್ಕರ್ಮ ಮಾಡುವವ ಮೂರ್ಖ ಈ ಮೂರೂ ಗುಣಗಳ ಮೇಲಿನ ನನ್ನ ಅಂದರೆ ಬ್ರಹ್ಮನ ಪೂಜೆಯನ್ನು ಮಾಡುವುದಿಲ್ಲ.

ಶ್ರೀ ಮದ್ಭಗವದ್ಗೀತೆಯ ಜ್ಞಾನದಾತ ಪ್ರಭುವು, ಅಧ್ಯಾಯ 7ರ ಶ್ಲೋಕ 18ರಲ್ಲಿ, ತನ್ನ ಭಕ್ತಿಯನ್ನು ಸಹ ಅನುತ್ತಮ (ಕೆಳಸ್ತರದ್ದು) ಎಂದು ಹೇಳಿದ್ದಾನೆ.

ಆದ್ದರಿಂದ 15ನೇ ಅಧ್ಯಾಯದ 4ನೇ ಶ್ಲೋಕ ಹಾಗೂ 18ನೇ ಅಧ್ಯಾಯದ 62 ಮತ್ತು 66ನೇ ಶ್ಲೋಕಗಳಲ್ಲಿ, ಬೇರೆ ಯಾವುದೋ ಪರಮೇಶ್ವರನನ್ನು ಶರಣು ಹೋಗಲು ಹೇಳಿದ್ದಾನೆ.

ಯಾವಾಗ ಗೀತೆಯ ಜ್ಞಾನವನ್ನು ಬೋಧಿಸಲಾಗುತ್ತಿತ್ತೋ, ಅದಕ್ಕೆ ಮೊದಲು 18 ಪುರಾಣಗಳಾಗಲಿ, 11 ಉಪನಿಷತ್ತುಗಳಾಗಲೀ, 6 ಶಾಸ್ತ್ರಗಳಾಗಲೀ ಇರಲಿಲ್ಲ. ಅದನ್ನು ನಂತರ ತಮ್ಮ-ತಮ್ಮ ಅನುಭವಗಳಿಂದ ಋಷಿಗಳು ರಚಿಸಿ, ಪುಸ್ತಕ ಮಾಡಿದರು. ಆ ಸಮಯದಲ್ಲಿ ಕೇವಲ 4 ವೇದಗಳು ಶಾಸ್ತ್ರ ರೂಪದಲ್ಲಿ ಪ್ರಮಾಣಿತವಿದ್ದವು. ಹಾಗೂ ಈ 4 ವೇದಗಳ ಸಾರಾಂಶವನ್ನು ಪವಿತ್ರ ಗೀತೆಯಲ್ಲಿ ವರ್ಣಿಸಿದೆ.



# ೧೩. ಶಾಸ್ತ್ರಾರ್ಥ ವಿಷಯ

“ಶಾಸ್ತ್ರಾರ್ಥಗಳು, ಪರಮೇಶ್ವರನ ತತ್ವಜ್ಞಾನವನ್ನು ಭ್ರಮಿಸಿತು”

**ಶಾಸ್ತ್ರಾರ್ಥಗಳು ಹೇಗೆ ಆಗುತ್ತಿತ್ತು?**

ಇಬ್ಬರು ವಿದ್ವಾಂಸರು ಪ್ರಶ್ನೋತ್ತರ ಮಾಡುತ್ತಲಿದ್ದರು. ಹಾಗೂ ಕೇಳುವವರೂ ಸಹ, ಹೆಚ್ಚಿನ ಸಂಖ್ಯೆಯಲ್ಲಿ ಶಾಸ್ತ್ರಾರ್ಥ (ಪ್ರಶ್ನೋತ್ತರ) ಕೇಳಲು ಸೇರುತ್ತಿದ್ದರು. ಸೋಲು–ಗೆಲುವಿನ ನಿರ್ಧಾರ ಕೇಳುವವರ ಕೈಯಲ್ಲಿರುತ್ತಿತ್ತು. ಅವರಿಗೆ ಸ್ವಯಂ ಜ್ಞಾನವಿರುತ್ತಿರಲಿಲ್ಲ (ಕೇಳುಗರಿಗೆ) ಶಾಸ್ತ್ರಾರ್ಥಗಾರರು ಏನು ಹೇಳುತ್ತಿರುವರೆಂಬ ಅರಿವು ಇರುತ್ತಿರಲಿಲ್ಲ ಯಾರು ಹೆಚ್ಚಿನ ಸಂಸ್ಕೃತ ಭಾಷೆಯ ಶಬ್ದಗಳನ್ನು ಬಳಸಿ, ಉಚ್ಛಾರಣೆ ಮಾಡುತ್ತಾರೋ, ಅವರ ಪರವಾಗಿ ಕೇಳುಗರು ಚಪ್ಪಾಳೆ ಹಾಕಿ ವಿಜಯರಾದ ಪ್ರಮಾಣವನ್ನು ಕೊಡುತ್ತಿದ್ದರು. ಈ ರೀತಿಯಾಗಿ ವಿದ್ವಾನರ ಸೋಲು–ಗೆಲುವಿನ ತೀರ್ಮಾನ ಅವಿದ್ವಾನರ ಕೈಯಲ್ಲಿರುತ್ತಿತ್ತು.

ಪ್ರಮಾಣ :– ಪುಸ್ತಕ “ಶ್ರೀಮದ್ ದಯಾನಂದ ಪ್ರಕಾಶ” ಲೇಖಕರು ಶ್ರೀ ಸತ್ಯಾನಂದ ಮಹಾರಾಜರು. ಪ್ರಕಾಶಕರು : ಸಾರ್ವದೇಶಿಕ ಆರ್ಯ ಪ್ರತಿನಿಧಿ ಸಭಾ 3/ 5 ಮಹರ್ಷಿ ದಯಾನಂದ ಭವನ, ರಾಮಲೀಲಾ ಮೈದಾನ, ನವ ದೆಹಲಿ–2, ಗಂಗಾ ಕಾಂಡ, 8ನೇ ಸರ್ಗ, ಪುಟ 89 ರಲ್ಲಿರುವಂತೆಯೇ ಲೇಖನ : ಮೂರು ದಿನಗಳವರೆಗೆ, ಪ್ರತಿಸಾಯ ಕೃಷ್ಣಾನಂದರು ಮತ್ತು ಸ್ವಾಮೀಜೀ ಯವರೊಂದಿಗೆ, ಶಾಸ್ತ್ರಾರ್ಥ ನಡೆಯುತ್ತಿತ್ತು. ಒಂದು ಶಾಸ್ತ್ರಾರ್ಥದ ಸಮಯದಲ್ಲಿ ಯಾರೋ ಕೃಷ್ಣಾನಂದ ರವರೊಂದಿಗೆ ಸಾಕಾರವಾದದ ಅವಲಂಬನೆ ಮಾಡಿದರು. ಮತ್ತು ಇದರ ಮೇಲೆಯೇ ಶಾಸ್ತ್ರಾರ್ಥ ನಡೆಸಿದರು. ಸ್ವಾಮೀಜೀಗಳಿಗಂತೂ ಇದು ಮನಮೆಚ್ಚಿನ ವಿಷಯವಾಗಿತ್ತು. ಅವರು ಸಂಸ್ಕೃತದಲ್ಲಿ ಭಾಷಾಧಾರಾ ಪ್ರವಾಹವನ್ನೇ ಹರಿಸುತ್ತಾ (ಮಾತನಾಡುತ್ತಾ) ನಿರಾಕಾರದ ಸಿದ್ಧಾಂತದ ಮೇಲೆ, ವೇದಗಳ ಹಾಗೂ ಉಪನಿಷತ್ತುಗಳ ಪ್ರಮಾಣಗಳ ಮಾಲೆಯನ್ನೇ ಪೋಣಿಸಿದರು. ಕೃಷ್ಣಾನಂದ ರವರಿಗೆ, ಅದರ ಅರ್ಥವನ್ನು ತಿಳಿಸಲು ಭಾಧ್ಯರಾಗಿಸಿದರು. ಕೃಷ್ಣಾನಂದರು, ಯಾವುದೇ ಪ್ರಮಾಣವನ್ನು ಕೊಡಲು ಸಾಧ್ಯವಾಗಲಿಲ್ಲ. ಕೇವಲ ಗೀತೆಯ ಈ ಶ್ಲೋಕ “ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ”ವನ್ನು ಜನರತ್ತ ಮುಖಮಾಡಿ ಓದತೊಡಗಿದರು. ಸ್ವಾಮಿಜೀಯು ಗರ್ಜಿಸಿ ಹೇಳಿದರು. “ತಾವು ನನ್ನೊಂದಿಗೆ ವಾದ ಮಡುತ್ತಿರುವಿರಿ ಆದ್ದರಿಂದ ನನ್ನ ಅಭಿಮುಖದಲ್ಲಿ ವಾದ ಮಾಡಿರಿ.” ಆದರೆ ಅವರ ವಿಚಾರವೇ ಕಿತ್ತು ಹೋಗಿತ್ತು. ಅವರು ವಿಷಯ ಚೌಕಟ್ಟನ್ನೇ ಮರೆತಿದ್ದರು. ಬಾಯಿಯಲ್ಲಿ ಜೊಲ್ಲು ಬಂದಿತ್ತು. ಕೊರಳು ಕಟ್ಟಿಹೋಗಿತ್ತು. ಮುಖವು ಬಿಳಿಚಿಕೊಂಡಿತ್ತು. ಹೇಗಾದರೂ ಮರ್ಯಾದೆ ಉಳಿಯಬೇಕು, ಇದಕ್ಕಾಗಿ ಅವರು, ತರ್ಕಶಾಸ್ತ್ರದ ಶರಣು ಹೋಗಿ ಸ್ವಾಮಿಜೀಯವರೊಂದಿಗೆ ಹೇಳಿದರು ‘ಒಳ್ಳೆಯದು, ಲಕ್ಷಣದ ಲಕ್ಷಣವನ್ನು ತಿಳಿಸಿರಿ?” ಸ್ವಾಮೀ ಜೀ ಯವರು ಉತ್ತರ ಕೊಟ್ಟರು “ಹೇಗೆ ಕಾರಣಕ್ಕೆ ಕಾರಣವಿಲ್ಲವೋ, ಹಾಗೇ ಲಕ್ಷಣಕ್ಕೂ, ಲಕ್ಷಣವಿಲ್ಲ.” ಜನರು ತಮ್ಮ ನಗುವಿನಿಂದ ಕೃಷ್ಣಾನಂದರ ಸೋಲನ್ನು ಪ್ರಕಟಗೊಳಿಸಿದರು. ನಂತರ ಅವರು ಅಲ್ಲಿಂದ ಗಾಭರಿಯಿಂದ ಎದ್ದು ಹೋದರು.”

ಮೇಲಿನ ಲೇಖನದಿಂದ ಸ್ಪಷ್ಟವಾಗುತ್ತದೆ ವಿದ್ವಾಂಸರ ಸೋಲು ಗೆಲುವುಗಳ ನಿರ್ಣಯವನ್ನು ಅವಿದ್ವಾಂಸರು ಮಾಡುತ್ತಿದ್ದರು. ಸ್ವಾಮೀ ದಯಾನಂದರ ನಿರಂತರವಾಗಿ ಸಂಸ್ಕೃತದಲ್ಲಿ ಹೇಳುತ್ತಾ ಇದ್ದರು. ಕೇಳುಗರು ನಕ್ಕರು ಹಾಗೂ ದಯಾನಂದ ಅವರನ್ನು ಗೆದ್ದಿರುವರೆಂದು ಘೋಷಿಸಿದರು. ಹಾಗೂ ಪರಮಾತ್ಮನನ್ನು ನಿರಾಕಾರ ಎಂದು ಒಪ್ಪಿಕೊಂಡರು. ಯಜುರ್ವೇದದ ಅಧ್ಯಾಯ 1ರ

ಮಂತ್ರ 15 ಹಾಗೂ ಯಜುರ್ವೇದ 5ನೇ ಅಧ್ಯಾಯದ 1ನೇ ಮಂತ್ರದಲ್ಲಿ ಸ್ಪಷ್ಟವಾಗಿದೆ 'ಪರಮಾತ್ಮ ಸಶರೀರನಾಗಿದ್ದಾನೆ ಹಾಗೂ ಸಾಕಾರನಾಗಿದ್ದಾನೆ.'

ಸ್ವಾಮಿ ದಯಾನಂದರು ಸಂಸ್ಕೃತದಲ್ಲಿ ಪ್ರವಚನ ಮಾಡುತ್ತಿದ್ದರೆಂಬುದಕ್ಕೆ ಪ್ರಮಾಣ : 'ಸತ್ಯಾರ್ಥ ಪ್ರಕಾಶ' ದ ಪೀಠಿಕೆಯ ಪುಟ 8ರಲ್ಲಿ ಸ್ವಾಮಿ ದಯಾನಂದರು ಹೇಳಿದ್ದಾರೆ. ಮೊದಲ ಬಾರಿ, ಸತ್ಯಾರ್ಥ ಪ್ರಕಾಶವು ಮುದ್ರಣಗೊಂಡಿತ್ತು. ಆ ಸಮಯದಲ್ಲಿ ನನಗೆ ಹಿಂದಿಯು ಚೆನ್ನಾಗಿ ಬರುತ್ತಿರಲಿಲ್ಲ ಏಕೆಂದರೆ ಬಾಲ್ಯದಿಂದ ಸನ್ 1882ನೇ (ಸಂವತ 1939) ಇಸವಿಯ ವರೆಗೆ ಸಂಸ್ಕೃತದಲ್ಲೇ ಭಾಷಣ ಮಾಡುತ್ತಾ ಇದ್ದೆ. ಇದರಿಂದ ಸಿದ್ಧವಾಯಿತು. ಸ್ವಾಮಿ ದಯಾನಂದರು ಸಂಸ್ಕೃತ ಭಾಷೆಯಲ್ಲಿ ಶಾಸ್ತ್ರಾರ್ಥ ಮಾಡುತ್ತಿದ್ದರು. ಸಂವತ 1939 (ಸನ್ 1882) ರಲ್ಲಿ "ಸತ್ಯಾರ್ಥ ಪ್ರಕಾಶವು" ಎರಡು ಬಾರಿ ಮುದ್ರಣಗೊಂಡ ಒಂದು ವರ್ಷದ ನಂತರ, 1883ರಲ್ಲಿ ಸ್ವಾಮಿಜೀಯವರು ಸ್ವರ್ಗಸ್ಥರಾದರು. ಸ್ಪಷ್ಟವಾಯಿತು ಅವರು ಸ್ವರ್ಗಸ್ಥರಾಗುವ ಒಂದು ವರ್ಷದ ಮೊದಲು ದಯಾನಂದ ರವರು ಹಿಂದಿ ಭಾಷೆಯನ್ನು ಕಲಿತರು. ಇದಕ್ಕೆ ಮೊದಲು ಸಂಸ್ಕೃತದಲ್ಲಿ ಪ್ರವಚನ (ವ್ಯಾಖ್ಯಾನ) ಮಾಡುತ್ತಿದ್ದರು. ಕೇಳುಗರು ಸಂಸ್ಕೃತ ಭಾಷೆಯನ್ನು ತಿಳಿದವರಾಗಿರುತ್ತಿರಲಿಲ್ಲ. ಮತ್ತು ಅವರೇ ವಿದ್ವಾಂಸರ ಸೋಲು–ಗೆಲುವುಗಳ ನಿರ್ಧಾರ ಮಾಡುತ್ತಿದ್ದರು.

ಈಗ ಈ ದಾಸನಿಗೆ ದಾಸ (ರಾಮ್‌ಪಾಲ್ ದಾಸ್) ಬಯಸುತ್ತಾನೆ. ಪವಿತ್ರ ಧರ್ಮಗಳಲ್ಲಿ ಹೇಳಿರುವಂತಹ, ಪ್ರಭುವನ್ನು ಬಯಸುವ ಪುಣ್ಯಾತ್ಮರು, ತತ್ವಜ್ಞಾನವನ್ನು ತಿಳಿಯಿರಿ. ಆಗ ಸ್ವತಃ ರತ್ನ ಯಾವುದು? ರತ್ನದಂತೆ ಇರುವುದು ಯಾವುದು? ಎಂಬ ಪರೀಕ್ಷೆ (ಗುರುತಿಸುವುದು) ಮಾಡುವಿರಿ.

ಕಥೆ :– ಒಬ್ಬ ಸೇಠುವಿಗೆ ಇಬ್ಬರು ಪುತ್ರರಿದ್ದರು. ಒಬ್ಬ 16 ವರ್ಷದವನು. ಮತ್ತೊಬ್ಬ 18 ವರ್ಷದವನು ತಂದೆಯವರ ದೇಹಾಂತವಾಯಿತು. ಮಕ್ಕಳ ತಾಯಿಯು ಒಂದು ಬಟ್ಟೆಯಲ್ಲಿ ಸುತ್ತಿಟ್ಟಿದ್ದ ರತ್ನವನ್ನು ತನ್ನ ಮಕ್ಕಳ ಕೈಯೊಳಗಿಟ್ಟು ಹೇಳಿದರು "ಮಕ್ಕಳೇ ಈ ರತ್ನವನ್ನು ತೆಗೆದುಕೊಂಡು ಹೋಗಿ ನಿಮ್ಮ ದೊಡ್ಡಪ್ಪ (ತಂದೆಯ ಅಣ್ಣ) ನವರ ಕೈಗೆ ಕೊಟ್ಟು ಹೇಳಿರಿ ನಮ್ಮ ಹತ್ತಿರ ಹಣವಿಲ್ಲ ಈ ರತ್ನವನ್ನು ನಿಮ್ಮ ಹತ್ತಿರ ಇಟ್ಟುಕೊಳ್ಳಿರಿ. ಹಾಗೂ ವ್ಯಾಪಾರದಲ್ಲಿ ನಮ್ಮ ಪಾಲನ್ನು ಕೊಡಿರಿ. ನಾವು ಬಾಲಕರು ಒಬ್ಬರೇ ವ್ಯಾಪಾರ ಮಾಡಲು ಸಾಧ್ಯವಾಗುವುದಿಲ್ಲ" ಎಂದು ಹೇಳಿರಿ. ಮಕ್ಕಳು ತಾಯಿ ಹೇಳಿದಂತೆ ಪ್ರಾರ್ಥನೆ ಮಾಡಿದರು. ಹಾಗೂ ರತ್ನವನ್ನು ಕೊಟ್ಟರು. ಆ ಸೇಠುವು (ದೊಡ್ಡಪ್ಪ) ಮಕ್ಕಳನ್ನು ನೋಡಿದರು ಹಾಗೂ ಮಕ್ಕಳ ಪ್ರಾರ್ಥನೆಯನ್ನು ಸ್ವೀಕರಿಸಿ ಹೇಳಿದರು ಈ ರತ್ನವನ್ನು ನಿಮ್ಮ ತಾಯಿಯವರಿಗೆ ಕೊಟ್ಟು ಬನ್ನಿ, ಜೋಪಾನವಾಗಿ ಇರಿಸಿರುವಳು. ನೀವು ನನ್ನ ಜೊತೆ ಬೇರೆ ಪಟ್ಟಣಕ್ಕೆ ಬನ್ನಿರಿ. ನನಗೆ ಅಲ್ಲಿ ಸಾಲವಾಗಿ ಬಹಳ ಮಾಲು ದೊರೆಯುತ್ತದೆ. ವಾಪಸ್ ಬಂದು ಈ ರತ್ನಗಳನ್ನು ಉಪಯೋಗಿಸೋಣ.ಇಬ್ಬರೂ ಮಕ್ಕಳು ದೊಡ್ಡಪ್ಪನ ಜೊತೆ ಬೇರೆ ಪಟ್ಟಣಕ್ಕೆ ಹೋದರು. ಒಂದು ದಿನ ದೊಡ್ಡಪ್ಪನವರು, ಒಂದು ರತ್ನವನ್ನು ಮಕ್ಕಳಿಗೆ ಕೊಟ್ಟರು. ಹಾಗೂ ಹೇಳಿದರು. ಮಕ್ಕಳೇ ಇದು ರತ್ನ. ಇದನ್ನು ನಿನ್ನ ಸಾಲವಾಗಿ 50 ಸಾವಿರದ ಮಾಲನ್ನು ಕೊಂಡಿದ್ದೆನಲ್ಲ. ಆ ಸೇಠುವಿಗೆ ಕೊಟ್ಟು ಹೇಳಿರಿ ಈ ರತ್ನವನ್ನು ಇಟ್ಟುಕೊಂಡಿರಿ. ನಾವು ವಾಪಸ್ ಬಂದು ನಿಮ್ಮ ಸಾಲ ತೀರಿಸುತ್ತೇವೆ. ಹಾಗೂ ನಮ್ಮ ರತ್ನವನ್ನು ಹಿಂದಕ್ಕೆ ಪಡೆಯುತ್ತೇವೆ ಎಂದು.

ಇಬ್ಬರೂ ಮಕ್ಕಳು ಮೇಲೆ ಹೇಳಿರುವಂತೆ ಸೇಠುವಿನೊಂದಿಗೆ ವಿವರಿಸಿ ಹೇಳಿದರು. ಸೇಠು ಒಬ್ಬ ರತ್ನ ಪರೀಕ್ಷಕನನ್ನು ಕರೆಸಿದ. ಅವನು ರತ್ನವನ್ನು ಪರೀಕ್ಷಿಸಿ ಹೇಳಿದನು. ಇದು ರತ್ನವಲ್ಲ. ರತ್ನದಂತಹ ಕಲ್ಲು. ಇದರ ಬೆಲೆ 100 ರೂಪಾಯಿಗಳೂ ಇಲ್ಲ. ರತ್ನದ ಬೆಲೆ 9 ಲಕ್ಷ ರೂಪಾಯಿಗಳಾಗುತ್ತದೆ. ಸೇಠು ಕೆಟ್ಟದಾಗಿ ಮಾತನಾಡಿ, ಆ ಕಲ್ಲನ್ನು ಗಲ್ಲಿಯಲ್ಲಿ ಎಸೆದ. ಮಕ್ಕಳು ಆ

ಕಲ್ಲನ್ನು ತೆಗೆದುಕೊಂಡು, ತಮ್ಮ ದೊಡ್ಡಪ್ಪನರಲ್ಲಿ ಬಂದರು. ಕಣ್ಣಿನಲ್ಲಿ ನೀರು ತುಂಬಿಕೊಂಡು, ಎಲ್ಲಾ ವೃತ್ತಾಂತವನ್ನೂ ಹೇಳಿದರು. ಒಬ್ಬ ವ್ಯಕ್ತಿಯು ಇದನ್ನು ರತ್ನವಲ್ಲ ಕಲ್ಲು ಎಂದು ಹೇಳಿದ".

ದೊಡ್ಡಪ್ಪ ಹೇಳಿದರು, ಮಕ್ಕಳೇ ಅವನು ರತ್ನ ಪರೀಕ್ಷಕನಾಗಿದ್ದನು. ಅವನು ಸರಿಯಾಗಿಯೇ ಹೇಳಿರುತ್ತಾನೆ. ವಾಸ್ತವದಲ್ಲಿ ಇವು ರತ್ನವಲ್ಲ. ಕಲ್ಲು, ಇದರ ಬೆಲೆ 100 ರೂಗಳೂ ಇಲ್ಲ. ಮಕ್ಕಳೇ ನನ್ನಿಂದ ಮೋಸ ಆಗಿದೆ. ರತ್ನ ಎಂದು. ತಪ್ಪಾಗಿ ನಾನು, ನಿಮಗೆ ಕಲ್ಲುಗಳನ್ನು ಕೊಟ್ಟಿದ್ದೆ. ಈಗ ಹೋಗಿ ಸೇಠುವಿನಲ್ಲಿ ಹೇಳಿರಿ "ನಮ್ಮ ದೊಡ್ಡಪ್ಪನವರು ಮೋಸಗಾರರಲ್ಲ ರತ್ನವೆಂದು ತಪ್ಪಾಗಿ ತಿಳಿದು ಕಲ್ಲು ಕೊಟ್ಟಿದರು," ಇಬ್ಬರೂ ಪುನಃ ವ್ಯಾಪಾರಿಯ ಹತ್ತಿರ ಹೋದರು ಹಾಗೂ ಹೇಳಿದರು ದೊಡ್ಡಪ್ಪನವರು ಅಂತಹ ಮೋಸಗಾರ ವ್ಯಕ್ತಿಯಲ್ಲ. ತಪ್ಪಾಗಿ ರತ್ನದ ಜಾಗದಲ್ಲಿ ಕಲ್ಲು ಕೊಟ್ಟಿದ್ದರು. ಇದನ್ನು ತೆಗೆದುಕೊಳ್ಳಿರಿ. ಇದು ರತ್ನ, ರತ್ನ ಪರೀಕ್ಷಕ ಪರೀಕ್ಷಿಸಿ ಹೇಳಿದ ಇದು ರತ್ನವಾಗಿದೆ ಅದು ಕಲ್ಲಾಗಿತ್ತು.

ಸಾಮಾನನ್ನು ತೆಗೆದುಕೊಂಡು ವಾಪಸ್ ಪಟ್ಟಣಕ್ಕೆ ಬಂದರು ಆಗ ದೊಡ್ಡಪ್ಪ ಹೇಳಿದರು ಮಕ್ಕಳೆ ನಿಮ್ಮ ತಾಯಿಯ ಹತ್ತಿರವಿರುವ ರತ್ನವನ್ನು ತನ್ನಿರಿ. ಸಾಲ ಹೆಚ್ಚಾಗಿದೆ. ಇಬ್ಬರೂ ಮಕ್ಕಳು, ತಮ್ಮ ತಾಯಿಯಿಂದ ರತ್ನವನ್ನು ಪಡೆದು ಗುರುತಿಸಿದರು ಇಬ್ಬರೂ ತಮ್ಮ ತಾಯಿಯೊಂದಿಗೆ ಹೇಳಿದರು ಅಮ್ಮಾ! ಇದು ಕಲ್ಲಾಗಿದೆ ರತ್ನವಲ್ಲ. ಇಬ್ಬರೂ ಮಕ್ಕಳು ದೊಡ್ಡಪ್ಪನ ಬಳಿ ಬಂದು ಹೇಳಿದರು ನಮ್ಮ ತಾಯಿ ಬಹಳ ಮುಗ್ಧಳು. ಅವಳಿಗೆ ಕಲ್ಲು ಮತ್ತು ರತ್ನದ ಜ್ಞಾನವಿಲ್ಲ. ಅವು ರತ್ನಗಳಲ್ಲ. ಕಲ್ಲಾಗಿದೆ. ಸೇಠು ಹೇಳಿದರು ಮಕ್ಕಳೇ ನೀವು ಆ ದಿನ ತಂದಾಗಲೂ ಇದು ಕಲ್ಲೇ ಆಗಿತ್ತು. ಒಂದು ವೇಳೆ ನಾನು ಕಲ್ಲು ಎಂದು ಹೇಳಿದ್ದರೆ, ನಿಮ್ಮ ತಾಯಿ ಹೇಳುತ್ತಿದ್ದಳು. ನನ್ನ ಪತಿ ಇಲ್ಲದ ಕಾರಣ. ನನ್ನ ರತ್ನಗಳನ್ನು ಕಲ್ಲು ಎಂದು ಹೇಳುತ್ತಿರುವಿರಾ! ಮಕ್ಕಳೇ ನಿಮ್ಮನ್ನು ಈ ದಿನ ಕಲ್ಲು ಮತ್ತು ರತ್ನಗಳನ್ನು ಪರೀಕ್ಷಿಸುವಂತ ಯೋಗ್ಯರನ್ನಾಗಿ ಮಾಡಿರುವೆ.

ವಿಶೇಷ :- ಇದೇ ಪ್ರಕಾರ, ಈ ದಿನ ಈ ದಾಸ ಇದನ್ನೇ ಬಯಸುತ್ತಾನೆ. ಏನೆಂದರೆ ತತ್ವಜ್ಞಾನವನ್ನು ಜನ-ಜನಗಳವರೆಗೆ ತಲುಪಿಸಿರಿ. ಹಾಗೂ ಶಾಸ್ತ್ರಗಳ ಪ್ರಮಾಣ ನೋಡಿಕೊಂಡು, ಸ್ವಯಂ ಪರೀಕ್ಷಕರಾಗುವಂತಹ ಯೋಗ್ಯತೆಯನ್ನು ಪಡೆದು, ಸಂತ-ಅಸಂತರನ್ನು ಗುರುತಿಸಲು ಸಾಧ್ಯವಾಗುವುದು.

ಶಾಸ್ತ್ರಾರ್ಥ ವಿದ್ವಾಂಸರು ಮಾಡುತ್ತಿದ್ದರು. ಸೋಲು-ಗೆಲುವಿನ ನಿರ್ಣಯವು ಅವಿದ್ವಾಂಸರ ಕೈಯಲ್ಲಿತ್ತು. ಈ ದಾಸನು ಬಯಸುವುದೇನೆಂದರೆ ಪ್ರಭು ಪ್ರೇಮಿ ಪುಣ್ಯಾತ್ಮಗಳೇ, ಶಾಸ್ತ್ರವನ್ನು ಓದಿ ಸ್ವಯಂ ತಿಳಿಯುವಿರಿ.   ಸಂತ ಹಾಗೂ ಮಹರ್ಷಿಗಳು ಏನು ಓದಿ ಹೇಳುತ್ತಿದ್ದಾರೆ ಎಂದು.

## "ಮಹರ್ಷಿ ಸರ್ವಾನಂದ್ ಹಾಗೂ ಕಬೀರ್ ಪರಮೇಶ್ವರ (ಕವಿರ್ದೇವರು)ರ ಶಾಸ್ತ್ರಾರ್ಥ"

ಸರ್ವಾನಂದ ಎಂಬ ಹೆಸರಿನ ಒಬ್ಬ ಮಹರ್ಷಿ ಇದ್ದರು. ಅವರ ಪೂಜ್ಯ ಮಾತೆ ಶ್ರೀಮತಿ ಶಾರದಾ ದೇವಿ". ಅವರು ಪಾಪಕರ್ಮದಿಂದ ಪೀಡಿತರಾಗಿದ್ದರು. ವರ್ಷಗಟ್ಟಲೆ ಅನೇಕ ಪೂಜೆಗಳನ್ನು ಯಂತ್ರ-ಮಂತ್ರಗಳನ್ನು ಕಷ್ಟನಿವಾರಣಾರ್ಥ ಮಾಡಿದರು. ಶಾರೀರಿಕ ಪೀಡೆಯ ನಿವಾರಣೆಗಾಗಿ ವೈದ್ಯರು ನೀಡಿದ ಔಷಧಿಗಳನ್ನೂ ತೆಗೆದುಕೊಂಡರು. ಆದರೆ ಯಾವುದೇ ಪ್ರಯೋಜನವಾಗಲಿಲ್ಲ. ಆ ಸಮಯದಲ್ಲಿದ್ದ ಮಹರ್ಷಿಗಳಿಂದ ಉಪದೇಶವನ್ನೂ ಪಡೆದರು. ಆದರೆ ಎಲ್ಲ ಮಹರ್ಷಿಗಳು ಹೇಳಿದರು ಮಗಳೇ ಶಾರದ. ಇದು ನಿನ್ನ ಪಾಪ ಕರ್ಮಗಳ ಶಿಕ್ಷೆ. ಪ್ರಾರಬ್ಧಕರ್ಮದ್ದಾಗಿದೆ. ಇದನ್ನು

ಕ್ಷಮಿಸಲು ಸಾಧ್ಯವಿಲ್ಲ. ಇದನ್ನು ಅನುಭವಿಸಲೇಬೇಕಾಗುವುದು. ಭಗವಾನ್ ಶ್ರೀ ರಾಮನು, ವಾಲಿಯ ವಧೆಯನ್ನು ಮಾಡಿದ್ದ. ಆ ಪಾಪಕರ್ಮದ ಶಿಕ್ಷೆಯನ್ನು ಶ್ರೀರಾಮ (ವಿಷ್ಣು)ನ ಆತ್ಮವು ಕೃಷ್ಣನಾಗಿ ಅನುಭವಿಸಬೇಕಾಯಿತು. ಶ್ರೀ ವಾಲಿಯ ಅತ್ಮವು ಬೇಟೆಗಾರನಾಯಿತು. ಅವನು ಶ್ರೀ ಕೃಷ್ಣನ ಕಾಲಿಗೆ ವಿಷಯುಕ್ತ ಬಾಣದಿಂದ ಹೊಡೆದು ವಧೆ ಮಾಡಿದ. ಈ ರೀತಿ ಗುರುಗಳ, ಮಹಂತರ, ಸಂತರ ಹಾಗೂ ಋಷಿಗಳ ವಿಚಾರಗಳನ್ನು ಕೇಳಿ, ದುಃಖದಿಂದ ಭಕ್ತಿಮತಿ ಶಾರದೆಯು, ತನ್ನ ಪ್ರಾರಬ್ಧ ಕರ್ಮವನ್ನು ಕಷ್ಟದಿಂದ, ಅಳುತ್ತಲೇ ಅನುಭವಿಸುತ್ತಿದ್ದಳು. ಒಂದು ದಿನ ಅವಳ ಹತ್ತಿರದ ಸಂಬಂಧಿಕರು ಹೇಳಿದಂತೆ, ಕಾಶಿಯಲ್ಲಿ (ಸ್ವಯಂಭೂ) ಸ್ವಯಂ ಸಶರೀರ ಕಾಣಿಸಿಕೊಂಡ (ಕವಿರ್ದೇವ) ಕಬೀರ್ ಪರಮೇಶ್ವರ ಅರ್ಥಾತ್ ಕಬೀರ್ ಪ್ರಭುವಿನಿಂದ ಉಪದೇಶ ಪಡೆದಳು. ಹಾಗೂ ಅದೇ ದಿನ ಕಷ್ಟದಿಂದ ಮುಕ್ತಳಾದಳು. ಏಕೆಂದರೆ ಪವಿತ್ರ ಯಜುರ್ವೇದದ 5ನೇ ಅಧ್ಯಾಯದ 32ನೇ ಮಂತ್ರದಲ್ಲಿ ಬರೆಯಲಾಗಿದೆ "ಕವಿರಂಘಾರಿರಸಿ" ಅರ್ಥಾತ್ (ಕವೀರ) ಕಬೀರ್ (ಅಂಘಾರಿ) ಪಾಪಗಳ ಶತ್ರು (ಅಸಿ) ಆಗಿದ್ದಾರೆ. ಪುನಃ ಇದೇ ಪವಿತ್ರ ಯಜುರ್ವೇದದ 8ನೇ ಅಧ್ಯಾಯದ 13ನೇ ಮಂತ್ರದಲ್ಲಿ ಬರೆಯಲಾಗಿದೆ. ಪರಮಾತ್ಮ (ಏನಸಃ ಏನಸಃ) ಅಧರ್ಮಕ್ಕಿಂತ ಅಧರ್ಮ, ಅರ್ಥಾತ್ ಪಾಪಗಳಿಗಿಂತ ಪಾಪ, ಘೋರ ಪಾಪವನ್ನು ಸಹ ಇಲ್ಲವಾಗಿಸುತ್ತಾರೆ. ಪ್ರಭು ಕವಿರ್ದೇವ (ಕಬೀರ್ ಪರಮೇಶ್ವರ)ರು ಹೇಳಿದರು. ಮಗಳೇ ಶಾರದಾ, ಸುಖವು ನಿನ್ನ ಭಾಗ್ಯದಲ್ಲಿರಲಿಲ್ಲ. ನಾನು ನನ್ನ ಕೋಶದಿಂದ ಪ್ರಧಾನಮಾಡಿದೆ. ಹಾಗೂ ಪಾಪ ವಿನಾಶಕವಾಗುವ ಪ್ರಮಾಣವನ್ನು ಕೊಟ್ಟಿರುವೆನು.

ನಿನ್ನ ಮಗ ಸರ್ವಾನಂದನು ಹೇಳುತ್ತಿರುತ್ತಾನೆ. ಪ್ರಭು ಪಾಪಗಳನ್ನು ಕ್ಷಮಿಸುವುದು (ವಿನಾಶ) ಸಾಧ್ಯವಿಲ್ಲ. ಹಾಗೂ ನೀನು ನನ್ನಿಂದ ಉಪದೇಶವನ್ನು ಪಡೆದು (ಕವಿರ್ದೇವರಿಂದ) ಆತ್ಮಕಲ್ಯಾಣವನ್ನು ಮಾಡಿಕೋ. ಭಕ್ತಿಮತಿ ಶಾರದಾ ಅವರು, ಸ್ವಯಂ ಬಂದಳು. ಪರಮೇಶ್ವರ ಕಬೀರ್ ಪ್ರಭು (ಕವಿರ್ದೇವ) "ನಿಂದ ಉಪದೇಶ ಪಡೆದು, ತನ್ನ ಆತ್ಮ ಕಲ್ಯಾಣವನ್ನು ಮಾಡಿಸಿಕೊಂಡಳು. ಮಹರ್ಷಿ ಸರ್ವಾನಂದರು, ಭಕ್ತಿಮತಿ ಶಾರದಳ ಮಗನಾಗಿದ್ದ ಶಾಸ್ತ್ರಾರ್ಥದಲ್ಲಿ ಬಹಳ ಆಸಕ್ತಿ ಇತ್ತು. ಅವನು ತನ್ನ ಸಮಕಾಲೀನ ಸರ್ವ ವಿದ್ವಾಂಸರನ್ನೂ ಶಾಸ್ತ್ರಾರ್ಥ ಮಾಡಿ ಪರಾಜಯಗೊಳಿಸಿದ್ದ. ನಂತರ ಯೋಚಿಸಿದ ನಾನು ಎಲ್ಲ ವಿದ್ವಾಂಸರ ಮೇಲೂ ವಿಜಯವನ್ನು ಪಡೆದಿರುವೆ. ನಾನು ನನ್ನ ತಾಯಿಯವರಿಂದ ನನ್ನ ಹೆಸರನ್ನು 'ಸರ್ವಜಿತ್' ಎಂದು ಏಕೆ ಇಟ್ಟು ಕೊಳ್ಳಬಾರದೆಂದು ಯೋಚಿಸಿದ ಹೀಗೆ ಯೋಚಿಸಿದ ಮೇಲೆ ತನ್ನ ತಾಯಿ ಶಾರದಾರ ಬಳಿಗೆ ಹೋಗಿ ಪ್ರಾರ್ಥಿಸಿದನು. ಹೇ ಮಾತಾ ನನ್ನ ಹೆಸರನ್ನು ಬದಲಾಯಿಸಿ 'ಸರ್ವಜಿತ್' ಎಂದು ಇಡು. ತಾಯಿಯು ಮಗನನ್ನು ಕೇಳಿದಳು. ಮಗನೇ 'ಸರ್ವಾನಂದ' ಎಂಬ ಹೆಸರು ಕೆಟ್ಟದಾಗಿದೆಯೇ? ಆಗ ಮಹರ್ಷಿ ಸರ್ವಾನಂದರು ತಾಯಿಯೊಂದಿಗೆ ಹೇಳಿದರು. ನಾನು ಎಲ್ಲ ವಿದ್ವಾಂಸರನ್ನು ಶಾಸ್ತ್ರಾರ್ಥದಲ್ಲಿ ಸೋಲಿಸಿರುತ್ತೇನೆ. ಆದ್ದರಿಂದ ನನ್ನ ಹೆಸರನ್ನು "ಸರ್ವಜಿತ" ಎಂದು ಇಡು. ತಾಯಿ ಹೇಳಿದಳು. ಮಗನೇ ನನ್ನ ಗುರುದೇವ ಮಹಾರಾಜ ಕವಿರ್ದೇವ (ಕಬೀರ್ ಪ್ರಭು)ರನ್ನು ಸೋಲಿಸು. ನಂತರ ನಿನ್ನ ಹೆಸರನ್ನು 'ಸರ್ವಜಿತ್' ಎಂದು ಇಡುವೆ ತಾಯಿಯ ಮಾತುಗಳನ್ನು ಕೇಳಿ ಸರ್ವಾನಂದರು ಮೊದಲು ನಕ್ಕರು. ನಂತರ ಹೇಳಿದರು ಅಮ್ಮಾ ನೀನೂ ಒಬ್ಬಳು ಮುಗ್ಧೆಯಾಗಿರುವೆ. ಆ ನೇಕಾರ (ಧಾಣಕ) ಕಬೀರರಂತೂ ಅಶಿಕ್ಷಿತರು. ಅವರನ್ನೇನು ಸೋಲಿಸುವುದು? ಹೀಗೆ ಹೋಗಿ ಹಾಗೆ ಬರುವೆ.

ಮಹರ್ಷಿ ಸರ್ವಾನಂದರು ಎಲ್ಲ ಶಾಸ್ತ್ರಗಳ ಪುಸ್ತಕಗಳನ್ನೂ ಒಂದು ಎತ್ತಿನ ಮೇಲೆ ಹೇರಿಕೊಂಡು ಕವಿರ್ದೇವ (ಕಬೀರ್ ಪರಮೇಶ್ವರ)ರ ಗುಡಿಸಿಲಿನ ಮುಂದೆ ಹೋದರು. ಪರಮೇಶ್ವರ ಕಬೀರರ ಧರ್ಮ ಪುತ್ರಿ (ಸಾಕು ಮಗಳು) ಕಮಾಲಿಯು, ಮೊದಲು ಬಾವಿಯ ಬಳಿ ಕಂಡಳು. ನಂತರ

ಬಾಗಿಲ ಬಳಿ ಬಂದು ಮಹರ್ಷಿಗಳೊಂದಿಗೆ ಹೇಳಿದಳು 'ಬನ್ನಿರಿ ಇದೇ ಪರಮ ಪಿತ ಕಬೀರರ ಮನೆ' ಶ್ರೀ ಸರ್ವಾನಂದ ರವರು, ಹುಡುಗಿ ಕಮಾಲಿಯೊಂದಿಗೆ ಹೇಳಿದರು. 'ತನ್ನ ಲೋಟವನ್ನು ನೀರಿನಿಂದ ಹೀಗೆ ತುಂಬಿಸಿದರು. ಅದು ಒಂದು ವೇಳೆ ಸ್ವಲ್ಪನೇ ಹಾಕಿದರೂ ಕೆಳಗೆ ಬೀಳುವಂತೆ ಅಂದರೆ ಪೂರ್ಣವಾಗಿ ತುಂಬಿಸಿದರು. ಈ ಲೋಟವನ್ನು ಮೆಲ್ಲ–ಮೆಲ್ಲನೆ ತೆಗೆದುಕೊಂಡು ಹೋಗಿ ಕಬೀರರಿಗೆ ಕೊಡು ಹಾಗೂ ಅವರು ಏನು ಉತ್ತರ ಕೊಡುವರೋ, ಅದನ್ನು ಬಂದು ನನಗೆ ತಿಳಿಸು. ಹುಡುಗಿ ಕಮಾಲಿಯು ತಂದ ಲೋಟದಲ್ಲಿ ಪರಮೇಶ್ವರ ಕಬೀರ್ (ಕವಿರ್ದೇವ)ರು ಒಂದು ಬಟ್ಟೆ ಹೊಲಿಯುವ ದೊಡ್ಡ ಸೂಜಿಯನ್ನು ಹಾಕಿದರು. ಸ್ವಲ್ಪ ನೀರು ಲೋಟದಿಂದ ಹೊರ ಚೆಲ್ಲಿ ನೆಲದ ಮೇಲೆ ಬಿದ್ದಿತು. ಹಾಗೂ ಹೇಳಿದರು 'ಮಗಳೇ ಈ ಲೋಟವನ್ನು ಸರ್ವಾನಂದ ರವರಿಗೆ ಕೊಡು. ಲೋಟವನ್ನು ಹಿಂದಕ್ಕೆ ತೆಗೆದುಕೊಂಡು ಬಂದ ಹುಡುಗಿ ಕಮಾಲಿಯೊಡನೆ ಸರ್ವಾನಂದರು ಕೇಳಿದರು. ಕಬೀರರು ಕೊಟ್ಟ ಉತ್ತರವೇನು? ಕಮಾಲಿಯು ಪ್ರಭುವು ಲೋಟಾದಲ್ಲಿ ಸೂಜಿಯನ್ನು ಹಾಕಿದ ವೃತ್ತಾಂತವನ್ನು ಹೇಳಿದಳು. ಆಗ ಮಹರ್ಷಿ ಸರ್ವಾನಂದರು ಪರಮ ಪೂಜ್ಯ ಕಬೀರ್ ಪರಮೇಶ್ವರ (ಕವಿರ್ದೇವ)ರೊಂದಿಗೆ ಕೇಳಿದರು ತಾವು ನನ್ನ ಪ್ರಶ್ನೆಗೆ ಏನು ಉತ್ತರ ನೀಡಿದಿರಿ? ಪ್ರಭು ಕಬೀರರು ಕೇಳಿದರು. ನಿಮ್ಮ ಪ್ರಶ್ನೆ ಏನಾಗಿತ್ತು?

ಶ್ರೀ ಸರ್ವಾನಂದ ಮಹರ್ಷಿಗಳು ಹೇಳಿದರು ನಾನು ಎಲ್ಲ ವಿದ್ವಾಂಸರನ್ನೂ ಶಾಸ್ತ್ರಾರ್ಥದಲ್ಲಿ ಸೋಲಿಸಿದ್ದೇನೆ. ನಾನು ನನ್ನ ತಾಯಿಯವರೊಂದಿಗೆ ಪ್ರಾರ್ಥನೆ ಮಾಡಿದ್ದೆ ನನ್ನ ಹೆಸರನ್ನು 'ಸರ್ವಜಿತ್' ಎಂದು ಇಡು. ನನ್ನ ತಾಯಿಯವರು, ತಮ್ಮನ್ನು ಸೋಲಿಸಿದ ನಂತರ ನನ್ನ ಹೆಸರನ್ನು ಬದಲಾಯಿಸುವುದಾಗಿ ಹೇಳಿದ್ದಾರೆ. ತಮ್ಮ ಬಳಿಗೆ ಲೋಟದ ತುಂಬ ನೀರು ತುಂಬಿಸಿ ಕಳುಹಿಸಿದ ಅರ್ಥವೆಂದರೆ, ನಾನು ಜ್ಞಾನದಿಂದ ಪರಿಪೂರ್ಣನಾಗಿದ್ದೇನೆ ಎಂದು. ಹೇಗೆಂದರೆ ಲೋಟದಲ್ಲಿ ನೀರಿದ್ದಂತೆ ಅದರಲ್ಲಿ ಇನ್ನು ನೀರು ಹಿಡಿಸಲು ಸಾಧ್ಯವಾಗದು. ಅದು ಕೆಳಗೆ ಬೀಳುವುದು. ಅರ್ಥಾತ್ ನನ್ನೊಡನೆ ಜ್ಞಾನ ಚರ್ಚೆ ಮಾಡುವುದರಲ್ಲಿ ಯಾವ ಲಾಭವೂ ಇಲ್ಲ. ನಿಮ್ಮ ಜ್ಞಾನವು ನನಗೆ ಹಿಡಿಸದು. ವ್ಯರ್ಥವಾಗಿ ಉಗುಳಿದಂತಾಗುವುದು. ಬದಲಾಗಿ ಸೋಲನ್ನು ಒಪ್ಪಿಕೊಳ್ಳಿರಿ.

ಇದರಿಂದಲೇ ನಿಮಗೆ ಹಿತವಿದೆ.

ಪೂಜ್ಯ ಕಬೀರ್ ಪರಮೇಶ್ವರರು (ಕವಿರ್ದೇವ) ಹೇಳಿದರು ತಮ್ಮ ತುಂಬಿದ ನೀರಿನ ಲೋಟದಲ್ಲಿ, ಕಬ್ಬಿಣದ ಸೂಜಿಯನ್ನು ಹಾಕಿದ ಅಭಿಪ್ರಾಯವೆಂದರೆ, ನನ್ನ ಜ್ಞಾನ (ತತ್ವಜ್ಞಾನ) ಎಷ್ಟು ತೂಕವಾಗಿದೆ. (ಸತ್ಯ) ಎಂದರೆ, ಸೂಜಿಯು ಲೋಟದ ಒಳಗೆ ಹೋಗಿ ನಿಂತು. ನೀರನ್ನು ಹೊರಹಾಕಿದೆ. ಇದೇ ರೀತಿ ನನ್ನ ತತ್ವಜ್ಞಾನವು ತಮ್ಮ ಅಸತ್ಯ ಜ್ಞಾನವನ್ನು (ಲೋಕವೇದ) ತೆಗೆದು ಹಾಕಿ. ತಮ್ಮ ಹೃದಯದಲ್ಲಿ ನೆಲೆಯಾಗುತ್ತದೆ.

ಮಹರ್ಷಿ ಸರ್ವಾನಂದರು ಹೇಳಿದರು– ಪ್ರಶ್ನೆ ಹಾಕಿರಿ. ಒಬ್ಬ ಹೆಸರಾಂತ ವಿದ್ವಾಂಸನು. ನೇಯ್ಗೆಯವರ (ಧಾಣಕರ) ಬೀದಿಯಲ್ಲಿ (ಕಾಲೋನಿ) ಬಂದಿರುವುದನ್ನು ಕಂಡು, ಅಕ್ಕ–ಪಕ್ಕದ ಮುಗ್ಧ ಅಶಿಕ್ಷಿತ ನೇಯ್ಗೆಯವರು, ಶಾಸ್ತ್ರಾರ್ಥವನ್ನು ಕೇಳಲು ಸೇರಿಕೊಂಡರು.

ಪೂಜ್ಯ ಕವಿರ್ದೇವರು ಪ್ರಶ್ನಿಸಿದರು :–

"ಯಾರು ಬ್ರಹ್ಮಾನ ತಂದೆ? ವಿಷ್ಣುವಿನ ತಾಯಿ ಯಾರು? ಶಂಕರನ ತಾತ ಯಾರು ? ಸರ್ವಾನಂದರೇ ತಿಳಿಸಿರಿ.

ಸರ್ವಾನಂದ ಮಹರ್ಷಿಗಳ ಉತ್ತರ :– ಶ್ರೀ ಬ್ರಹಾ ರಜೋಗುಣರು, ವಿಷ್ಣು ಸತೋಗುಣರು.

ಹಾಗೂ ಶಿವ ತಮೋಗುಣಯುಕ್ತರು. ಈ ಮೂವರು ಅಜರ–ಅಮರ–ಅರ್ಥಾತ್ ಅವಿನಾಶಿಗಳಾಗಿದ್ದಾರೆ. ಸರ್ವೇಶ್ವರ, ಮಹೇಶ್ವರ–ಮೃತ್ಯುಂಜಯರು, ಇವರಿಗೆ ತಂದೆ–ತಾಯಿ ಯಾರೂ ಇಲ್ಲ. ನೀವು ಅಜ್ಞಾನಿಗಳು ನಿಮಗೆ ಶಾಸ್ತ್ರಗಳ ಜ್ಞಾನವಿಲ್ಲ ಹೀಗಾಗಿ ತಲೆ ಬುಡವಿಲ್ಲದ ಪ್ರಶ್ನೆ ಮಾಡಿರುವಿರಿ. ಅಲ್ಲಿಂದ ಕೇಳುಗರು ಚಪ್ಪಾಳೆ ತಟ್ಟಿದರು. ಹಾಗೂ ಮಹರ್ಷಿ ಸರ್ವಾನಂದ ರವರನ್ನು ಸಮರ್ಥನೆ ಮಾಡಿದರು.

ಪೂಜ್ಯ ಕಬೀರ್ ಪ್ರಭು (ಕವಿರ್ದೇವ)ವು ಹೇಳಿದರು ಮಹರ್ಷಿ ಯವರೆ ತಾವು ಶ್ರೀಮದ್ ದೇವಿಪುರಾಣದ ಮೂರನೆಯ ಸ್ಕಂದ ಹಾಗೂ ಶಿವಪುರಾಣದ 6ನೇಯ ಮತ್ತು 7ನೇಯ ರುದ್ರ ಸಂಹಿತಾ ಅಧ್ಯಾಯವನ್ನು ಪ್ರಭುವನ್ನು ಸಾಕ್ಷಿಮಾಡಿ, ಭಗವದ್ಗೀತೆಯ ಮೇಲೆ ಕೈ ಇಟ್ಟು ಓದಿರಿ. ಹಾಗೂ ಅನುವಾದವನ್ನು ಹೇಳಿರಿ. ಮಹರ್ಷಿ ಸರ್ವಾನಂದರು ಗೀತೆಯ ಮೇಲೆ ಕೈ ಇಟ್ಟು ಶಪಥ ಮಾಡಿ ಹೇಳಿದರು. ಸರಿಯಾಗಿ ಹೇಳುವೆನು. ಪವಿತ್ರ ಪುರಾಣಗಳನ್ನು ಪ್ರಭು ಕಬೀರ್ (ಕವಿರ್ದೇವರು)ರು ಹೇಳಿದ ನಂತರ, ಧ್ಯಾನ ಪೂರ್ವಕವಾಗಿ ಓದಿದರು. ಶ್ರೀ ಶಿವಪುರಾಣ (ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತನಾಗಿರುವುದು ಇದರ ಸಂಪಾದಕರು ಶ್ರೀ ಹನುಮಾನ ಪ್ರಸಾದ ಪೋದ್ದಾರ್, ಕನ್ನಡ ಅನುವಾದಕರು ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್) ದಲ್ಲಿ ಪುಟ ಸಂಖ್ಯೆ **82–83** (ಹಿಂದಿಯಲ್ಲಿ ಪುಟ ಸಂಖ್ಯೆ **100** ರಿಂದ **103**ರಲ್ಲಿ ಬರೆದಿದೆ ಸದಾಶಿವ ಅರ್ಥಾತ್ ಕಾಲರೂಪೀ ಬ್ರಹ್ಮ ಹಾಗೂ ಪ್ರಕೃತಿ (ದುರ್ಗಾ) ಯರ ಸಂಯೋಗದಿಂದ (ಪತಿ–ಪತ್ನಿ ವ್ಯವಹಾರ) ಸತೋಗುಣ ಶ್ರೀ ವಿಷ್ಣು, ರಜೋಗುಣ ಶೀ ಬ್ರಹ್ಮಾ, ಹಾಗೂ ತಮೋಗುಣ ಶ್ರೀ ಶಿವ ಇವರ ಜನ್ಮವಾಯಿತು. ಇದೇ ಪ್ರಕೃತಿ (ದುರ್ಗಾ) ಅವಳನ್ನು ಅಷ್ಟಂಗೀ ಎಂದು ಹೇಳುತಾರೆ. ತ್ರಿದೇವ ಜನನಿ, (ಮೂವರೂ ಬ್ರಹ್ಮಾ–ವಿಷ್ಣು–ಶಿವ) ಅಂದರೆ ತಾಯಿ ಎಂದು ಹೇಳುತ್ತಾರೆ.

ಪವಿತ್ರ ಶ್ರೀಮದ್ ದೇವೀಪುರಾಣ (ಗೀತಾಪ್ರೆಸ್ ಗೋರಖಪುರದಿಂದ ಪ್ರಕಾಶಿತ, ಸಂಪಾದಕರು: ಶ್ರೀ ಹನುಮಾನ್ ಪ್ರಸಾದ್ ಪೋದ್ದಾರ್ ಹಾಗೂ ಚಿಮನಲಾಲ್ ಗೋಸ್ವಾಮಿ, ಕನ್ನಡ ಅನುವಾದಕರು: ಶ್ರೀ ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್)ದ ಮೂರನೆಯ ಸ್ಕಂದದಲ್ಲಿ ಪುಟ ಸಂಖ್ಯೆ **102–105** (ಹಿಂದಿಯಲ್ಲಿ ಪುಟ ಸಂಖ್ಯೆ **114** ರಿಂದ **123**) ರವರೆಗೆ ಸ್ಪಷ್ಟ ವರ್ಣನೆ ಇದೆ. ಏನೆಂದರೆ ಭಗವಾನ್ ವಿಷ್ಣು ಹೇಳುತ್ತಿದ್ದಾರೆ ಈ ಪ್ರಕೃತಿ (ದುರ್ಗಾ) ನಾವು ಮೂವರಿಗೂ ಜನನಿಯಾಗಿದ್ದಾಳೆ. ನಾನು ಇವಳನ್ನು ಚಿಕ್ಕ ಮಗುವಿದ್ದಾಗ ನೋಡಿದ್ದೆ ತಾಯಿಯನ್ನು ಸ್ತುತಿ ಮಾಡುತ್ತಾ ಶ್ರೀ ವಿಷ್ಣು ಅವರು ಹೇಳಿದರು. ಹೇ ಮಾತಾ ! ನಾನು (ವಿಷ್ಣು) ಬ್ರಹ್ಮಾ ಹಾಗೂ ಶಿವರು ನಾಶವಾಗುವವರಾಗಿದ್ದೇವೆ. ನಮಗೆ ಅವಿರ್ಭಾವ (ಜನ್ಮ) ಹಾಗೂ ತಿರೋಭಾವ (ಮೃತ್ಯು) ಆಗುತ್ತದೆ. ನೀವು ಪ್ರಕೃತಿ ದೇವಿ ಯಾಗಿರುವಿರಿ. ಭಗವಾನ್ ಶಂಕರನು ಹೇಳಿದನು ಹೇ ಮಾತಾ ! ಬ್ರಹ್ಮಾ ಮತ್ತು ವಿಷ್ಣು ನಿಮ್ಮಿಂದ ಉತ್ಪನ್ನರಾಗಿದ್ದಾರೆಂದ ಮೇಲೆ ನಾನು ಶಿವನೂ ಸಹ ನಿಮ್ಮಿಂದಲೇ ಉತ್ಪನ್ನವಾಗಿರುವೆ ಅರ್ಥಾತ್ ತಾವು ನನಗೂ ಸಹ ತಾಯಿಯಾಗಿರುವಿರಿ.

ಮಹರ್ಷಿ ಸರ್ವಾನಂದರು ಮೊದಲು ಹೇಳಿ–ಕೇಳಿದ ಅರ್ಥಂಬರ್ಥ ಶಾಸ್ತ್ರ ವಿರುದ್ಧ ಜ್ಞಾನ (ಲೋಕವೇದ–ದಂತಕಥೆ)ದ ಆಧಾರದಲ್ಲಿ ಮೂವರೂ (ಬ್ರಹ್ಮಾ–ವಿಷ್ಣು–ಶಿವ) ಅವಿನಾಶಿ ಹಾಗೂ ಅಜನ್ಮರು ಎಂದು ಹೇಳುತ್ತಾ

ಬಂದಿದ್ದರು. ಪುರಾಣಗಳನ್ನು ಓದುತ್ತಿದ್ದರು. ಕೂಡ ಅಜ್ಞಾನಿಗಳಾಗಿದ್ದರು. ಏಕೆಂದರೆ ಬ್ರಹ್ಮ (ಕಾಲ) ಪವಿತ್ರ ಗೀತೆಯಲ್ಲಿ ಹೇಳುತ್ತಾನೆ ನಾನು ಎಲ್ಲ ಪ್ರಾಣಿಗಳ (ಯಾವುವು ನನ್ನ ಅಧೀನದಲ್ಲಿ **21** ಬ್ರಹ್ಮಾಂಡಗಳಲ್ಲಿವೆ) ಬುದ್ಧಿಯಾಗಿರುವೆ. ಯಾವಾಗ ಬಯಸಿದರೆ ಆಗ ಜ್ಞಾನ ತುಂಬುವೆ. ಯಾವಾಗ ಬಯಸಿದರೆ ಆಗ ಅಜ್ಞಾನ ತುಂಬುವೆ. ಆ ಸಮಯದಲ್ಲಿ ಪೂರ್ಣ ಪರಮಾತ್ಮರು

ಹೇಳಿದ ನಂತರ ಕಾಲ (ಬ್ರಹ್ಮ)ನ ಒತ್ತಡ ದೂರವಾಯಿತು. ಹಾಗೂ ಸರ್ವಾನಂದ ರವರಿಗೆ ಸ್ಪಷ್ಟ ಜ್ಞಾನವಾಯಿತು. ವಾಸ್ತವದಲ್ಲಿ ಹೀಗೇ ಬರೆದಿದೆ. ಆದರೆ ಮಾನ ಹಾನಿಯ ಭಯದಿಂದ ಹೇಳಿದರು "ನಾನು ಎಲ್ಲವನ್ನೂ ಓದಿರುವೆ ಹಾಗೆಲ್ಲೂ ಬರೆದಿಲ್ಲ" ಕವಿರ್ದೇವ (ಕಬೀರ್ ಪರಮೇಶ್ವರ)ರೊಂದಿಗೆ ಹೇಳಿದರು ನೀನು ಸುಳ್ಳನಿರುವೆ. ಶಾಸ್ತ್ರಗಳ ವಿಷಯದಲ್ಲಿ ನಿನಗೇನು ಗೊತ್ತು? ನಾವು ಪ್ರತಿದಿನ ಓದುತ್ತೇವೆ. ಮತ್ತೇನು ಹೇಳುವುದಿತ್ತು. ಸರ್ವಾನಂದ ರವರು ಧಾರಾಕಾರವಾಗಿ ಸಂಸ್ಕೃತದಲ್ಲಿ ಹೇಳಲಾರಂಭಿಸಿದರು. **20** ನಿಮಿಷಗಳವರೆಗೆ ಬಾಯಿಪಾಠ ಮಾಡಿದ ಬೇರೆ ಯಾವುದೋ, ವೇದವಾಣಿಯನ್ನು ಹೇಳುತ್ತಲಿದ್ದರು. ಪುರಾಣ (ಸತ್ಯಾಂಶ) ಹೇಳಲೇ ಇಲ್ಲ.

ಉಪಸ್ಥಿತರಿದ್ದ ಎಲ್ಲ ಕೇಳುಗರು. ಆ ಸಂಸ್ಕೃತವನ್ನು ಅರ್ಥ ಮಾಡಿಕೊಳ್ಳುತ್ತಲೂ ಇರಲಿಲ್ಲ. ಪ್ರಭಾವಿತರಾಗಿ ಸರ್ವಾನಂದ ಮಹರ್ಷಿಯವರನ್ನು ಸಮರ್ಥನೆ ಮಾಡುತ್ತಾ ವಾಹ್ ! ವಾಹ್ ! ಮಹಾಜ್ಞಾನಿ ಎಂದು ಹೇಳತೊಡಗಿದರು. ಭಾವಾರ್ಥ ಏನೆಂದರೆ, ಮಹರ್ಷಿ ಸರ್ವಾನಂದರನ್ನು ವಿಜಯಿ ಎಂದು ಘೋಷಿಸಿ, ಕಬೀರ್ ಪರಮೇಶ್ವರರು (ಕವಿರ್ದೇವ) ಪರಾಜಿತರಾದರೆಂದು ಘೋಷಿಸಿದರು ಪೂಜ್ಯ ಕಬೀರ್ ಪರಮೇಶ್ವರರು ಹೇಳಿದರು ಸರ್ವಾನಂದ್ ರವರೇ ತಾವು ಪವಿತ್ರ ಗೀತೆಯ ಮೇಲೆ ಶಪಥ ಮಾಡಿದ್ದೀರಿ. ಅದನ್ನೂ ಮರೆತಿರಿ ಯಾವಾಗ ನೀವು ಮುಂದಿರುವ ಬರೆದಿರುವ ಶಾಸ್ತ್ರದ ಸತ್ಯತೆಯನ್ನು ಸಹ ಒಪ್ಪುವುದಿಲ್ಲವೋ, ಆಗ ನಾನು ಸೋತೆ ನೀವೇ ಗೆದ್ದಿರಿ.

ಒಬ್ಬ ಜಮೀನ್ದಾರನ ಮಗ 7ನೇ ತರಗತಿಯಲ್ಲಿ ಓದುತ್ತಿದ್ದ. ಅವನು ಸ್ವಲ್ಪ ಇಂಗ್ಲೀಷ್ ಭಾಷೆಯನ್ನು ತಿಳಿದಿದ್ದ. ಒಂದು ದಿನ ತಂದೆ-ಮಗ ಇಬ್ಬರೂ ಗದ್ದೆಗೆ ಎತ್ತಿನಗಾಡಿಯನ್ನು ತೆಗೆದುಕೊಂಡು ಹೋಗುತ್ತಿದ್ದರು. ಎದುರಿಗೆ ಒಬ್ಬ ಆಂಗ್ಲನು ಬಂದನು. ಅವನು ಎತ್ತಿನಗಾಡಿಯವರೊಂದಿಗೆ. ಇಂಗ್ಲಿಷ್ ಭಾಷೆಯಲ್ಲಿ, ರಸ್ತೆಯನ್ನು ತಿಳಿಯಲು ಅಪೇಕ್ಷಿಸಿದ. ತಂದೆಯು ಮಗನಿಗೆ ಹೇಳಿದನು ಮಗು ಈ ಆಂಗ್ಲನು ತನ್ನನ್ನು ತಾನು ಹೆಚ್ಚಿನ ಶಿಕ್ಷಿತ ಎಂದು ಸಿದ್ಧ ಪಡಿಸಿಕೊಳ್ಳಲು ಅಪೇಕ್ಷಿಸುತ್ತಾನೆ. ನೀನು ಆಂಗ್ಲಭಾಷೆಯನ್ನು ತಿಳಿದಿರುವೆ. ಇವನ ಗರ್ವವನ್ನು ಕಿತ್ತುಹಾಕು. ಇಂಗ್ಲಿಷನಲ್ಲಿ ಮಾತಾಡಿ ಹೇಳು. ರೈತನ ಮಗನು ಇಂಗ್ಲಿಷ್ ಭಾಷೆಯಲ್ಲಿ, ಕಾಯಿಲೆಗಾಗಿ ರಜೆ ಬಯಸಿದ ಪತ್ರವನ್ನು (ರಜಾ ಅರ್ಜಿ) ಪೂರ್ಣವಾಗಿ ಹೇಳಿದ. ಆಂಗ್ಲನು ಆ ಅಜ್ಞಾನಿ ಮಗುವಿನ, ಅಜ್ಞಾನ ತಿಳಿದು ಹೇಳಿದ ನಾನು ಕೇಳುತ್ತಿರುವುದು ದಾರಿ ಬಗ್ಗೆ ನೀನು ಹೇಳಿದೆ ರಜಾ ಅರ್ಜಿಯನ್ನು ತನ್ನ ಕಾರನ್ನು ತೆಗೆದುಕೊಂಡು, ಕೈ ಯಿಂದ ತಲೆಗೆ ಹೊಡೆದು ಕೊಂಡು ಹೊರಟನು ರೈತನು ತನ್ನ ವಿಜೇತ ಪುತ್ರನ ಬೆನ್ನು ತಟ್ಟಿ ಹೇಳಿದನು ವಾಹ್! ಮಗ ನನ್ನ ಜೀವನ ಸಫಲ ಮಾಡಿದೆ. ಈ ದಿನ ನೀನು, ಆಂಗ್ಲನನ್ನು ಆಂಗ್ಲಭಾಷೆಯಲ್ಲೇ ಸೋಲಿಸಿದೆ. ಅಪ್ಪಾಜೀ, ನನ್ನ ಬೆಸ್ಟ್ ಫ್ರೆಂಡ್‌ನ (ನನ್ನ ಸ್ನೇಹಿತನ) ಪ್ರಸ್ತಾಪ ಸಹ ನನಗೆ ನೆನಪಿದೆ. ಅದನ್ನು ಕೇಳಿದ್ದರೆ, ಆಂಗ್ಲನು ಕಾರನ್ನೂ ಬಿಟ್ಟು ಓಡುತ್ತಿದ್ದನು. ಇದೇ ಪ್ರಕಾರ ಕವಿರ್ದೇವರು ಕೇಳುತ್ತಿರುವ ಪ್ರಶ್ನೆ ಏನೋ? ಸರ್ವಾನಂದರ ಉತ್ತರವೇ ಮತ್ತೇನೋ ಈ ಶಾಸ್ತ್ರಾರ್ಥವೂ ಮನೆಯನ್ನು ಕೆಡಿಸುವಂತಹದಿದೆ. ಪರಮ ಪೂಜ್ಯ ಕಬೀರ್ ಪರಮೇಶ್ವರ (ಕವಿರ್ದೇವ)ರು ಹೇಳಿದ್ದರು. "ಸರ್ವಾನಂದರೇ ತಾವೇ ಗೆದ್ದಿರಿ, ನಾನು ಸೋತೆ." ಮಹರ್ಷಿ ಸರ್ವಾನಂದರು ಕೇಳಿದರು ಅದನ್ನು ಬರೆದುಕೊಡಿ ನಾನು ಅರ್ಥ ಕಾರ್ಯ ಮಾಡುವುದಿಲ್ಲ. ಪರಮಾತ್ಮ ಕಬೀರರು (ಕವಿದೇವರು) ಹೇಳಿದರು ದಯಮಾಡಿ ಪತ್ರ ಬರೆಯುವುದನ್ನು ತಾವೇ ಮಾಡಿಬಿಡಿ. ಏನು ಬರೆಯಬೇಕಿದೆಯೋ ಅದನ್ನು ಬರೆದು ಬಿಡಿ. ನಾನು ಹೆಬ್ಬೆಟ್ಟು ಗುರುತು ಹಾಕುವೆನು. ಮಹರ್ಷಿ ಸರ್ವಾನಂದರು ಹೀಗೆ ಪತ್ರ ಬರೆದರು "ಶಾಸ್ತ್ರಾರ್ಥದಲ್ಲಿ ಸರ್ವಾನಂದರು ವಿಜಯಿಯಾಗಿದ್ದಾರೆ. ಹಾಗೂ ಕಬೀರ್ ಪರಮೇಶ್ವರರು ಪರಾಜಯಗೊಂಡಿದ್ದಾರೆ. ಇದರ ಮೇಲೆ ಕಬೀರ್ ಪರಮೇಶ್ವರರಿಂದ ಹೆಬ್ಬೆಟ್ಟು ಗುರುತು ಹಾಕಿಸಿಕೊಂಡರು. ತಮ್ಮ ತಾಯಿಯವರಲ್ಲಿಗೆ ಹೋಗಿ, ಸರ್ವಾನಂದರು ಈ ರೀತಿ

ಹೇಳುತ್ತಾರೆ. "ಅಮ್ಮಾ! ನಿಮ್ಮ ಗುರುದೇವರನ್ನು ಸೋಲಿಸಿದ ಪ್ರಮಾಣ ಪತ್ರವನ್ನು ತೆಗೆದುಕೊಳ್ಳಿ.

ಭಕ್ತಿಮತಿ ಶಾರದಾ ರವರು ಹೇಳಿದರು! "ಪುತ್ರನೇ ಇದನ್ನು ಓದಿ ಹೇಳು" ಯಾವಾಗ ಸರ್ವಾನಂದರು ಪತ್ರವನ್ನು ಓದಲು ಪ್ರಾರಂಭಿಸಿದರು, ಅದರಲ್ಲಿ ಈ ರೀತಿ ಬರೆದಿತ್ತು. "ಶಾಸ್ತ್ರಾರ್ಥದಲ್ಲಿ ಸರ್ವಾನಂದರು ಸೋತಿರುವರು. ಹಾಗೂ ಕಬೀರ್ ಪರಮೇಶ್ವರರು (ಕವಿರ್ದೇವ) ಗೆದ್ದಿರುತ್ತಾರೆ" ಸರ್ವಾನಂದರ ತಾಯಿ ಹೇಳಿದರು "ಪುತ್ರ! ನೀನು ಗೆದ್ದಿರುವುದಾಗಿ, ಹೇಳಿದ್ದೆ ಆದರೆ ಸೋತು ಬಂದಿರುವೆ" ಮಹರ್ಷಿ ಸರ್ವಾನಂದರು ಹೇಳಿದರು 'ಅಮ್ಮಾ! ನಾನು ಅನೇಕ ದಿನಗಳಿಂದ ನಿರಂತರವಾಗಿ ಶಾಸ್ತ್ರಾರ್ಥದಲ್ಲಿ ತಲ್ಲೀನನಾಗಿದ್ದೆ. ಆದ್ದರಿಂದ ನಿದ್ರಾವಶನಾಗಿ ನನ್ನ ಬರವಣಿಗೆಯಲ್ಲಿ ತಪ್ಪಾಗಿದೆ. ಪುನಃ ಹೋಗಿ ಸರಿಯಾಗಿ ಬರೆದುಕೊಂಡು ತರುವೆನು. ತಾಯಿಯವರು ಶರತ್ತು ಹಾಕಿರುತ್ತಾರೆ ಏನೆಂದರೆ ನೀನು ಗೆದ್ದಿರುವುದಕ್ಕೆ ಲಿಖಿತ ಪ್ರಮಾಣ ತಂದರೆ ನಾನು ಒಪ್ಪಿಕೊಳ್ಳುವೆ ಎಂದು ಬಾಯಿಯಲ್ಲಿ ಹೇಳಿದರೆ ಸಾಲದು. ಮಹರ್ಷಿ ಸರ್ವಾನಂದರು ಎರಡನೆಯ ಬಾರಿ ಬಂದರು. ಹಾಗೂ ಹೇಳಿದರು 'ಕಬೀರ್ ಪರಮೇಶ್ವರರೇ, ನನ್ನ ಬರವಣಿಗೆಯಲ್ಲಿ ಸ್ವಲ್ಪ ತಪ್ಪಾಗಿದೆ. ಈಗ ಎರಡನೆಬಾರಿ ಬರೆಯಬೇಕಾಗುವುದು' ಪರಮೇಶ್ವರ ಕಬೀರರು ಹೇಳಿದರು 'ಪುನಃ ಬರೆಯಿರಿ' ಸರ್ವಾನಂದರು ಪುನಃ ಬರೆದು, ಹೆಬ್ಬೆಟ್ಟು ಒತ್ತಿಸಿಕೊಂಡು, ತಾಯಿಯ ಬಳಿಗೆ ಬಂದರು. ಆದರೂ ಪರಿಸ್ಥಿತಿಯು ವಿರುದ್ಧವೇ ಆಗಿತ್ತು. ಮತ್ತೆ ಹೇಳಿದರು. ಅಮ್ಮಾ! ನಾನು ಪುನಃ ಹೋಗುತ್ತೇನೆ. ಮೂರನೆಯ ಬಾರಿ ಬರೆದು ತಂದರು. ಹಾಗೂ ಮನೆಯ ಒಳಗೆ ಪ್ರವೇಶಿಸುವ ಮುನ್ನ ಓದಿದರು. ಸರಿಯಾಗೇ ಬರೆದಿತ್ತು. ಸರ್ವಾನಂದರು ಆ ಬರವಣಿಗೆಯ ಮೇಲಿಂದ ದೃಷ್ಟಿಯನ್ನು ತೆಗೆಯಲಿಲ್ಲ. ಹಾಗೂ ನಡೆದು ಮನೆಯ ಒಳಗೆ ಪ್ರವೇಶ ಮಾಡುತ್ತಲೇ, ಹೇಳ ತೊಡಗಿದರು ಅಮ್ಮಾ! ಹೇಳಲೆ? ಹೀಗೆ ಹೇಳಿ ಓದ ತೊಡಗಿದರೆ, ಅವರ ಕಣ್ಣುಗಳ ಮುಂದೆಯೇ ಅಕ್ಷರಗಳು ಬದಲಾವಣೆಯಾಯಿತು. ಮೂರನೆ ಬಾರಿಯೂ ಪುನಃ ಅದೇ ಪ್ರಮಾಣವು ಬರೆಯಲಾಗಿತ್ತು. 'ಶಾಸ್ತ್ರಾರ್ಥದಲ್ಲಿ ಸರ್ವಾನಂದರು ಪರಾಜಯಗೊಂಡಿದ್ದಾರೆ. ಹಾಗೂ ಕಬೀರ್ ಪರಮೇಶ್ವರರು ವಿಜಯಿಗಳಾಗಿದ್ದಾರೆ.' ಸರ್ವಾನಂದರಿಗೆ ಮಾತನಾಡಲು ಅವಕಾಶವಾಗಲಿಲ್ಲ. ಆಗ ತಾಯಿಯವರು ಕೇಳಿದರು ಮಗು ಏಕೆ ಮಾತನಾಡುತ್ತಿಲ್ಲ? ಓದಿ ಹೇಳು ಏನು ಬರೆದಿದೆ? ತಾಯಿಗೆ ಗೊತ್ತಿತ್ತು. ಮೂರ್ಖ ಪುತ್ರನು, ಪರ್ವತಕ್ಕೆ ತಲೆ ಚಚ್ಚಿ ಕೊಳ್ಳುತ್ತಿರುವನು ಎಂದು. ತಾಯಿಯು ಸರ್ವಾನಂದರೊಡನೆ, ಹೇಳಿದಳು ಪುತ್ರ ಪರಮೇಶ್ವರರು ಬಂದಿದ್ದಾರೆ. ಹೋಗಿ ಚರಣಗಳಿಗೆ ವಂದಿಸಿ, ನಿನ್ನ ತಪ್ಪಿಗಾಗಿ ಕ್ಷಮೆಯನ್ನು ಯಾಚಿಸು, ಹಾಗೂ ಅವರಿಂದ ಉಪದೇಶವನ್ನು ಪಡೆದು, ನಿನ್ನ ಜೀವನವನ್ನು ಸಾರ್ಥಕ ಮಾಡಿಕೋ, ಸರ್ವಾನಂದರು ತಾಯಿಯ ಪಾದಗಳ ಮೇಲೆ ಬಿದ್ದು ಅಳತೊಡಗಿದರು. ಮತ್ತು ಹೇಳಿದರು ಅಮ್ಮಾ! ಪ್ರಭುವು ತಾವಾಗಿಯೇ ಬಂದಿರುತ್ತಾರೆ. ನೀವೂ ನನ್ನೊಡನೆ ಹೊರಡಿರಿ. ನನಗೆ ನಾಚಿಕೆಯಾಗುತ್ತದೆ. ಸರ್ವಾನಂದ ರವರ ತಾಯಿ ಪುತ್ರನನ್ನು ಕರೆದುಕೊಂಡು, ಪ್ರಭು ಕಬೀರರು ಇದ್ದಲ್ಲಿಗೆ ಹೋದಳು. ಹಾಗೂ ಸರ್ವಾನಂದರಿಗೆ ಕಬೀರ್ ಪರಮೇಶ್ವರರಿಂದ ಉಪದೇಶ ಕೊಡಿಸಿದಳು. ಆಗ ಮಹರ್ಷಿ ಎಂದು ಕರೆಸಿಕೊಳ್ಳುವ ಮೂರ್ಖ ಪ್ರಾಣಿಯು, ಪೂರ್ಣ ಪರಮಾತ್ಮನ ಚರಣಗಳಲ್ಲಿ ಶರಣು ಬಂದಾಗ ಉದ್ಧಾರವಾದನು. ಪೂರ್ಣ ಬ್ರಹ್ಮ ಕಬೀರ್ ಪರಮೇಶ್ವರ (ಕವಿರ್ದೇವರು)ರು ಹೇಳಿದರು ಸರ್ವಾನಂದರೆ, ತಾವು ಅಕ್ಷರ ಜ್ಞಾನವಿದ್ದ ಆಧಾರದಲ್ಲೂ, ಶಾಸ್ತ್ರಾರ್ಥವನ್ನು ತಿಳಿಯಲಿಲ್ಲ. ಏಕೆಂದರೆ ನನ್ನಲ್ಲಿ ಶರಣು ಬರದ ಹೊರತು ಬ್ರಹ್ಮನು (ಕಾಲ) ಯಾರ ಬುದ್ಧಿಯನ್ನೂ ಪೂರ್ಣ ವಿಕಾಸವಾಗಲು ಬಿಡುವುದಿಲ್ಲ. ಈಗ ನೀನು ಪವಿತ್ರ ವೇದಗಳು, ಪವಿತ್ರಗೀತೆ ಹಾಗೂ ಪವಿತ್ರ ಪುರಾಣಗಳನ್ನು ಓದು. ಈಗ ನೀನು ಬ್ರಾಹ್ಮಣನಾಗಿರುವೆ.

## 'ಬ್ರಹ್ಮನನ್ನು ಗುರುತಿಸಿದವನೇ ಬ್ರಾಹ್ಮಣ'

ಇದರ ಅರ್ಥ :- ಬ್ರಹ್ಮನನ್ನು ಗುರುತಿಸಿದವನೇ ಬ್ರಾಹ್ಮಣ. ಪೂರ್ಣ ಪರಮಾತ್ಮನನ್ನು ಗುರುತಿಸಿದವನೇ ವಿದ್ವಾಂಸ. ನಂತರ ನಿಮ್ಮ ಉದ್ಧಾರ (ಕಲ್ಯಾಣ) ಮಾಡಿಕೊಳ್ಳಿರಿ.

ವಿಶೇಷ :- ಈಗ 550 ವರ್ಷಗಳಿಗೆ ಮೊದಲು ಇದೇ ಪವಿತ್ರ ವೇದಗಳು, ಪವಿತ್ರ ಗೀತೆ ಹಾಗೂ ಪವಿತ್ರ ಪುರಾಣಗಳಲ್ಲಿ ಬರೆದಿರುವ ಜ್ಞಾನವನ್ನು ಕಬೀರ್ ಪರಮೇಶ್ವರ (ಕವಿರ್ದೇವ)ರು ತಮ್ಮ ಸಾಧಾರಣ ವಾಣಿಯಲ್ಲೇ ಕೊಟ್ಟಿದ್ದರು. ಅದನ್ನು ಆ ಸಮಯದಿಂದ ಈಗಿನವರೆಗೂ ಇರುವ ಮಹರ್ಷಿಗಳು "ವ್ಯಾಕರಣ ದೋಷಯುಕ್ತ ಭಾಷೆ" ಎಂದು ಹೇಳುತ್ತಾ ಓದುವ ಅವಶ್ಯಕತೆಯೇ ಇಲ್ಲ ಎಂದು ತಿಳಿದಿದ್ದಾರೆ. ಹಾಗೂ ಹೇಳಿದ್ದಾರೆ. ಕಬೀರ್ ರಂತೂ ಅಜ್ಞಾನಿಗಳು, ಇವರಿಗೆ ಅಕ್ಷರ ಜ್ಞಾನವಂತೂ ಇಲ್ಲವೇ ಇಲ್ಲ, ಇವರಿಗೇನು ಗೊತ್ತು? ಸಂಸ್ಕೃತ ಭಾಷೆಯಲ್ಲಿ ಬರೆದಿರುವ ಶಾಸ್ತ್ರಗಳಲ್ಲಿನ ಗೂಢ ರಹಸ್ಯ. ನಾವು ವಿದ್ವಾಂಸರಾಗಿದ್ದೇವೆ. ಏನನ್ನು ನಾವು ಹೇಳುತ್ತೇವೆಯೋ, ಅದೆಲ್ಲಾ ಶಾಸ್ತ್ರಗಳಲ್ಲಿ ಬರೆದಿದೆ. ಹಾಗೂ ಶ್ರೀ ಬ್ರಹ್ಮಾ, ಶ್ರೀ ವಿಷ್ಣು ಮತ್ತು ಶ್ರೀ ಶಿವ ಇವರಿಗೆ ಯಾರೂ ತಂದೆ-ತಾಯಿ ಇಲ್ಲ. ಇವರು. ಅಜನ್ಮರು, ಅಜರರು, ಅಮರರು, ಅವಿನಾಶಿ ಹಾಗೂ ಸರ್ವೇಶ್ವರ ಮಹೇಶ್ವರ, ಮೃತ್ಯುಂಜಯರಾಗಿದ್ದಾರೆ. ಸರ್ವ ಸೃಷ್ಠಿಯ ರಚನಕಾರರು, ಮೂರು ಗುಣಮುಕ್ತರು. ಇನ್ನೂ ಮುಂತಾದ ವ್ಯಾಖ್ಯೆಗಳನ್ನು ಎದೆ ತಟ್ಟಿಕೊಂಡು ಹೇಳುತ್ತಲೇ ಇದ್ದಾರೆ. ಈಗ, ಆ ಪವಿತ್ರ ಶಾಸ್ತ್ರಗಳೇ ನಮ್ಮ ಬಳಿ ಇದೆ. ಅದರಲ್ಲಿ ಮೂರು ಪ್ರಭುಗಳ (ಶ್ರೀ ಬ್ರಹ್ಮಾ-ರಜೋಗುಣ, ಶ್ರೀ ವಿಷ್ಣು-ಸತೋಗುಣ, ಶ್ರೀ ಶಿವ-ತಮೋಗುಣ) ತಂದೆ ತಾಯಿಯರ ಸ್ಪಷ್ಟ ವಿವರಣೆ ಇದೆ. ಆ ಸಮಯದಲ್ಲಿ ನಮ್ಮ ಪೂರ್ವಜರು ಅಶಿಕ್ಷಿತರಾಗಿದ್ದರು. ಹಾಗೂ ಶಿಕ್ಷಿತ ವರ್ಗಕ್ಕೆ ಶಾಸ್ತ್ರಗಳ ಪೂರ್ಣ ಜ್ಞಾನವಿರಲಿಲ್ಲ. ಆದರೂ ಕಬೀರ್ ಪರಮೇಶ್ವರ (ಕವಿರ್ದೇವ) ರ ಮೂಲಕ ತಿಳಿಸಿದ ಸತ್ಯಜ್ಞಾನವನ್ನು ತಿಳಿದೂ-ತಿಳಿದೂ ಸುಳ್ಳೆಂದರು ಹಾಗೂ ಹೇಳಿದರು. ಕಬೀರರು ಸುಳ್ಳು ಹೇಳುತ್ತಿದ್ದಾರೆ. ಯಾವುದೇ ಶಾಸ್ತ್ರದಲ್ಲಿ ಹೀಗೆ ಬರೆದಿಲ್ಲ ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಶ್ರೀ ಶಿವ ಇವರಿಗೆ ತಂದೆ-ತಾಯಿ ಇರುವರೆಂದು ಇದಕ್ಕೆ ಪವಿತ್ರ ಪುರಾಣವೇ ಸಾಕ್ಷಿಯಾಗಿದೆ. ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಶ್ರೀ ಶಿವ ಇವರಿಗೆ ಜನನ-ಮರಣಗಳಾಗುತ್ತದೆ. ಇವರು ಅವಿನಾಶಿಗಳಲ್ಲ. ಹಾಗೂ ಈ ಮೂರು ದೇವರುಗಳ ತಾಯಿ ಪ್ರಕೃತಿ (ದುರ್ಗಾ) ಹಾಗೂ ತಂದೆ ಜ್ಯೋತಿ ನಿರಂಜನ, ಕಾಲರೂಪೀ, ಬ್ರಹ್ಮರಾಗಿದ್ದಾರೆ.

ಈಗ ಎಲ್ಲ ಮಾನವ ಸಮಾಜದ ಸೋದರ-ಸೋದರಿಯರು, ಬಾಲಕರು, ಯುವಕರು-ಯುವತಿಯರು, ಹಿರಿಯರು ಹಾಗೂ ಮಗ-ಮಗಳು ಎಲ್ಲರೂ ಶಿಕ್ಷಿತರಾಗಿದ್ದಾರೆ. ಈಗ ಯಾರೂ ಹೀಗೆ ಹರಟುವುದಿಲ್ಲ "ಕಬೀರ್ ಪರಮೇಶ್ವರರು ಬರೆದಿರುವಂತೆ ಶಾಸ್ತ್ರಗಳಲ್ಲಿ ಬರೆದಿಲ್ಲ" ಎಂದು.

**ಪೂಜ್ಯ ಕಬೀರ್ ಪರಮೇಶ್ವರರ (ಕವಿರ್ದೇವ) ಅಮೃತವಾಣಿ :**

ಧರ್ಮ್‌ದಾಸ್ ಯಹ್ ಜಗ ಬೌರಾನಾ । ಕೋಯಿ ನ ಜಾನೇ ಪದ ನಿರವಾನಾ ॥
ಅಬ್ ಮೈ ತುಮಸೆ ಕಹೋಂ ಚಿತಾಯಿ । ತ್ರಿಯದೇವನ ಕೀ ಉತ್ಪತ್ತಿ ಭಾಯಿ ॥
ಜ್ಞಾನಿ ಸುನೇ ಸೋ ಹಿರದೈ ಲಗಾಯಿ । ಮೂರ್ಖ ಸುನೇ ಸೋ ಗಮ್ಯನ ಪಾಯಿ ॥
ಮಾ ಅಷ್ಟಂಗೀ ಪಿತಾ ನಿರಂಜನ । ವೇ ಜಮ ದಾರುಣ ವಂಶನ್ ಅಂಜನ ॥
ಪಹಿಲೇ ಕೀನ್ಹ ನಿರಂಜನ ರಾಯಿ । ಪೀಛೇ ಸೇ ಮಾಯಾ ಉಪಜಾಯಿ ॥
ಧರ್ಮ್‌ರಾಯ ಕಿನ್ಹಾ ಭೋಗ ವಿಲಾಸಾ । ಮಾಯಾ ಕೋ ರಹೀ ತಬ ಆಸಾ ॥
ತೀನ್ ಪುತ್ರ ಅಷ್ಟಂಗೀ ಜಾಯೇ । ಬ್ರಹ್ಮಾ, ವಿಷ್ಣು, ಶಿವ ನಾಮ ಧರಾಯೇ ॥
ತೀನ್ ದೇವ ವಿಸ್ತಾರ ಚಲಾಯೆ । ಇನಮೇ ಯಹ ಜಗ ದೋಖಾ ಖಾಯೆ ॥

ತೀನಲೋಕ ಅಪನೆ ಸುತ ದೀನ್ಹಾ । ಸುನ್ನ ನಿರಂಜನ ಬಾಷಾ ಲೀನ್ಹಾ ।
ಅಲಖ ನಿರಂಜನ ಸುನ್ನ ಠಿಕಾನಾ । ಬ್ರಹ್ಮಾ, ವಿಷ್ಣು, ಶಿವ ಭೇದ ನ ಜಾನಾ ॥
ಬ್ರಹ್ಮಾ, ವಿಷ್ಣು, ಶಿವ ನಹೀ ಬಚಾಯೆ । ಸಕಲ ಖಾಯ ಪುನ ಧೂರ ಉಡಾಯೆ ॥
ತಿನಕೆ ಸುತ ಹೈ ತೀನೋಂ ದೇವಾ । ಆಂಧರ ಜೀವ ಕರತ ಹೈ ಸೇವಾ ॥
ತೀನೋಂ ದೇವ ಔರ್ ಔತಾರಾ । ತಾಕೋ ಭಜೆ ಸಕಲ ಸಂಸಾರಾ ॥
ಗುಣ ತೀನೋಂ ಕೀ ಭಕ್ತಿ ಮೆ । ಭೂಲ ಪರೋ ಸಂಸಾರ ।
ಕಹೈ ಕಬೀರ್ ನಿಜ ನಾಮ ಬಿನ, ಕೈಸೆ ಉತರೇ ಪಾರ ॥"

**ಮೇಲಿನ ಅಮೃತವಾಣಿಯಲ್ಲಿ, ಕಬೀರ್ ಪರಮೇಶ್ವರರು ತಮ್ಮ ನಿಜ ಸೇವಕ, ಶ್ರೀ ಧರ್ಮದಾಸ್ ರವರಿಗೆ ಹೇಳುತ್ತಿದ್ದಾರೆ. ಧರ್ಮದಾಸ್! ಈ ಸರ್ವ ವಿಶ್ವವೂ ತತ್ವಜ್ಞಾನದ ಅಭಾವದಿಂದ ವಿಚಲಿತವಾಗಿದೆ. ಯಾರಿಗೂ, ಪೂರ್ಣ ಮೋಕ್ಷ ಮಾರ್ಗದ ಹಾಗೂ ಪೂರ್ಣ ಸೃಷ್ಟಿ ರಚನೆಯ ಜ್ಞಾನವಿಲ್ಲ. ಆದ್ದರಿಂದ ನಾನು ನಿನಗೆ, ನಾನು ರಚಿಸಿರುವ ಸೃಷ್ಠಿಯ ಕಥೆಯನ್ನು ಹೇಳುತ್ತೇನೆ. ವಿದ್ವಾನ್ ವ್ಯಕ್ತಿಗಳಂತೂ ಕೂಡಲೇ ತಿಳಿದುಕೊಳ್ಳುವರು. ಆದರೆ ಯಾರು ಎಲ್ಲ ಪ್ರಾಣಿಗಳನ್ನೂ ನೋಡಿಯೂ ತಿಳಿಯುವುದಿಲ್ಲವೋ, ಆ ಮೂರ್ಖ ಪ್ರಾಣಿಗಳು ಕಾಲನ ಪ್ರಭಾವದಿಂದ ಪ್ರಭಾವಿತವಾಗಿವೆ. ಅವು ಭಕ್ತಿಗೆ ಯೋಗ್ಯವಲ್ಲ. ಈಗ ನಾನು ತಿಳಿಸುತ್ತೇನೆ. ಮೂರುಪ್ರಭುಗಳು (ಬ್ರಹ್ಮಾ, ವಿಷ್ಣು, ಹಾಗೂ ಶಿವ ರವರ) ಉತ್ಪತ್ತಿ ಹೇಗೆ ಆಯಿತು? ಇವರ ತಾಯಿ ಅಷ್ಟಂಗೀ (ದುರ್ಗಾ) ಯಾಗಿರುವಳು. ಹಾಗೂ ತಂದೆ ಜ್ಯೋತಿ ನಿರಂಜನ (ಬ್ರಹ್ಮ,ಕಾಲ) ರಾಗಿದ್ದಾರೆ. ಮೊದಲು ಬ್ರಹ್ಮನ ಉತ್ಪತ್ತಿ ಮೊಟ್ಟೆಯಿಂದ ಆಯಿತು. ನಂತರ ದುರ್ಗಾಳ ಉತ್ಪತ್ತಿಯಾಯಿತು. ದುರ್ಗಾಳ ರೂಪಕ್ಕೆ ಆಸಕ್ತನಾಗಿ ಕಾಲ (ಬ್ರಹ್ಮ)ನು ಬಲಾತ್ಕರಿಸಲು ಪ್ರಯತ್ನಪಟ್ಟ, ಆಗ ದುರ್ಗಾಳು (ಪ್ರಕೃತಿ) ಸೂಕ್ಷ್ಮ ರೂಪದಿಂದ ಅವನ ಹೊಟ್ಟೆಯೊಳಗೆ ಹೋಗಿ ಸೇರಿಕೊಂಡು, ನನ್ನನ್ನು ಪ್ರಾರ್ಥಿಸಿದಳು ಆಗ ನಾನು ಯೋಗಜಿತನ ರೂಪಧರಿಸಿ, ಎಲ್ಲಿ ಜ್ಯೋತಿ ನಿರಂಜನ (ಕಾಲ) ನಿದ್ದನೋ ಅಲ್ಲಿಗೆ ಹೋದೆ. ಆಗ ಭವಾನಿಯನ್ನು, ಬ್ರಹ್ಮನ ಹೊಟ್ಟೆಯಿಂದ ಹೊರತೆಗೆದು, 21 ಬ್ರಹ್ಮಾಂಡಗಳ ಸಮೇತ 16 ಶಂಖ ಕೋಶಗಳ ದೂರಕ್ಕೆ ಕಳಿಸಿದೆ. ಜ್ಯೋತಿ ನಿರಂಜನನು ಪ್ರಕೃತಿದೇವಿ (ದುರ್ಗಾ) ಯೊಂದಿಗೆ ಭೋಗವಿಲಾಸ ಮಾಡಿದ. ಈ ಇಬ್ಬರ ಸಂಯೋಗದಿಂದ ಮೂರು ದೇವರುಗಳ (ಶ್ರೀ ಬ್ರಹ್ಮಾ, ಶ್ರೀ ವಿಷ್ಣು, ಶ್ರೀ ಶಿವ) ಉತ್ಪತ್ತಿಯಾಯಿತು. ಈ ಮೂರು ಗುಣಗಳ (ರಜೋಗುಣ ಶ್ರೀ ಬ್ರಹ್ಮಾ, ಸತೋಗುಣ ಶ್ರೀ ವಿಷ್ಣು, ತಮೋಗುಣ ಶ್ರೀ ಶಿವ) ಸಾಧನೆ ಮಾಡಿ ಸಕಲ ಪ್ರಾಣಿಗಳು ಕಾಲನ ಜಾಲದಲ್ಲಿ ಸಿಲುಕಿಕೊಂಡಿವೆ. ಎಲ್ಲಿಯವರೆಗೆ, ವಾಸ್ತವಿಕ ಮಂತ್ರ ದೊರೆಯುವುದಿಲ್ಲವೋ, ಅಲ್ಲಿಯವರೆಗೆ ಪೂರ್ಣ ಮೋಕ್ಷ ಹೇಗೆ ಆಗುವುದು?**

## ೧೪. ಅಲೆಮಾರಿಗಳಿಗೆ ಸನ್ಮಾರ್ಗ

### (ಸೋದರಿ ಈಶ್ವಂತೀಯ, ನೋವು ತುಂಬಿದ ಆತ್ಮಕಥೆ)

ನಾನು ಭಕ್ತಿಮತಿ, ಈಶ್ವಂತೀ ದೇವಿ, ಶ್ರೀ ಭಕ್ತ ಸುರೇಶದಾಸ್ ಅಹಲಾವತನ ಪತ್ನಿ, ಪುತ್ರ ಶ್ರೀ ಪ್ರತಾಪಸಿಂಹ ಅಹಲಾವತ. ಪಾನಾಗಂಜಾ ಡೀಘಲ–ಗ್ರಾಮ, ಝಜ್ಜರ ಜಿಲ್ಲೆಯಲ್ಲಿ ಇರುವೆನು. ಹೇ ಬಂದೀಛೋಡ್ ಸದ್ಗುರು ರಾಮ್‌ಪಾಲ್ ಮಹಾರಾಜರೇ! ನಾನು ಮತ್ತು ನನ್ನ ಪರಿವಾರ ತಮ್ಮ ಚರಣಗಳಲ್ಲಿನ ಧೂಳಾಗಿದ್ದೇವೆ. ತಾವು ನಮಗೆ ಎಂತಹ ಸುಖವನ್ನು ಕೊಟ್ಟಿರುವಿರೆಂದರೆ, ಅದನ್ನು ನಾವು ನಮ್ಮ ಈ ಜೀವನದಲ್ಲಿ ಕಲ್ಪನೆ ಮಾಡಿಕೊಳ್ಳಲೂ, ಸಾಧ್ಯವಾಗುತ್ತಿರಲಿಲ್ಲ. ಈ ದಿನ ನಮ್ಮ ಅನುಭವಗಳನ್ನು ಬರೆಯುತ್ತಿದ್ದೇನೆ. ತಾವು ನಮ್ಮ ಮೇಲೆ ಕೃಪೆ ದೋರಿರುವಿರಿ. ಈ ನಮ್ಮ ದುಃಖಪೂರ್ಣ ಕತೆಯನ್ನು ಓದಿ, ನಮ್ಮಂತೆಯೇ ದುಃಖದಿಂದ ಇರುವ ಪರಿವಾರವೂ ತಮ್ಮ ಆಶೀರ್ವಾದದಿಂದ, ತಮ್ಮ ಕಲ್ಯಾಣ ಮಾಡಿಕೊಳ್ಳಲಿ. ನಮ್ಮ ಜೀವನವು ಅಂಧಕಾರಮಯವಾಗಿತ್ತು ನಾನೇನಾದರು ತಮ್ಮ ಚರಣಗಳಲ್ಲಿ ಶರಣು ಬರದಿದ್ದರೆ, ಈ ದಿನ ನಾವು ಬದುಕಿರುತ್ತಿರಲಿಲ್ಲ.

ನಾನು ಅಸಾಧ್ಯವಾದ ರೋಗದಿಂದ ಪೀಡಿತಳಾಗಿದ್ದೆ. ನನ್ನ ಸೋದರ ಭಾಪಡೌದಾ ನಿವಾಸಿಯಾದ ಓಂ ಪ್ರಕಾಶನ ಪುತ್ರ ಶ್ರೀ ದಯಾನಂದ ರಾಠೀ, ಹರಿಯಾಣದಲ್ಲಿ ಪೋಲಿಸ್ ನೌಕರಿ ಮಾಡುತ್ತಿದ್ದ. ಅವನು ಇದೇ ರೋಗದಿಂದ ಮರಣಹೊಂದಿದ್ದು, ನಾನು ಸಹ ಈ ಹಂತಕ್ಕೆ ತಲುಪಿದ್ದೆ. ನನ್ನ ಕೈ–ಕಾಲುಗಳು ಲಕ್ವ ಹೊಡೆದಂತೆ ಆಗಿಬಿಟ್ಟಿದ್ದವು. ಕಂಠದಿಂದ ಸ್ವರ ಹೊರಡುವುದು ನಿಂತುಹೋಗಿತ್ತು. ಬೇರೆ ಬೇರೆ ಜಾಗಗಳಲ್ಲಿನ ಡಾಕ್ಟರ್‌ಗಳಿಗೆ ತೋರಿಸಿದ್ದಾಯಿತು. ಆದರೆ ಎಲ್ಲ ಜಾಗಗಳೆಲ್ಲವೂ ನಿರಾಶೆಯೇ ಆಗಿತ್ತು. ನನ್ನ ಪತಿ ಎಷ್ಟು ಸಾರಾಯಿ ಕುಡಿಯುತ್ತಿದ್ದರೆಂದರೆ, ಅವರು ಮನೆಗೆ ಬಂದರೆ ಮಕ್ಕಳು ಹೆದರಿ ಚಾಪೆಯ ಮರೆಯಲ್ಲಿ ಅಡಗಿಕೊಳ್ಳುತ್ತಿದ್ದರು. ಮನೆಯಲ್ಲಿನ ಪಾತ್ರೆಗಳನ್ನು ಸಾರಾಯಿ ಕುಡಿಯಲು ಮಾರಿದರು. ಸಾಲವು ಏರುತ್ತಿತ್ತು. ಅಕ್ಕಪಕ್ಕದವರೂ ತೊಂದರೆಗೆ ಒಳಗಾಗಿದ್ದರು. ಒಂದು ದಿನವಂತೂ, ನಶೆಯ ಸ್ಥಿತಿಯಲ್ಲಿ ನನ್ನನ್ನು ಎತ್ತಿಕೊಂಡು ಹೋಗಿ ಡಾಲಾಣ ಪಾನ್ನೆಯವರ ಬಾವಿಗೆ ಹಾಕಲು ಹೋಗಿದ್ದರು. ಆಗ ಪ್ರೇತಾತ್ಮ ಹೇಳಿತು. (ನಶೆಯಲ್ಲಿನ ವ್ಯಕ್ತಿಯ ಪಿಶಾಚ ಸದೃಶ್ಯ ವಾಣಿ) "ಯಾರು ಏನು ಮಾಡುತ್ತಾರೆ, ನಾನು ಈ ಮನೆಯನ್ನು ಸರ್ವನಾಶ ಮಾಡಿಬಿಡುವೆ". ನನ್ನ ಸೋದರರು ನನಗಾಗಿ ರಾಶಿ–ರಾಶಿ ಹಣವನ್ನು ಖರ್ಚು ಮಾಡಿದರು. ಡಾಕ್ಟರ್ ಗಳನ್ನು ಹುಡುಕಿ, ಔಷಧಿಗಾಗಿ ಸಾಕಷ್ಟು ಖರ್ಚು ಮಾಡಿದರು. ಆದರೆ ಏನೂ ಪ್ರಯೋಜನವಾಗಲಿಲ್ಲ. ನನ್ನ ಪತಿ ಸಾರಾಯಿ ಕುಡಿಯುತ್ತಿದ್ದ ಮಕ್ಕಳು ಚಿಕ್ಕವರು. ಮಾವನ ಮನೆಯಲ್ಲಿ ಯಾವುದೇ ಆಧಾರವಿರಲಿಲ್ಲ. ನನ್ನ ಸೋದರ ಅವನು ಡಿ.ಟಿ.ಸಿ ಯಲ್ಲಿ ಡ್ರೈವರ್ ಆಗಿದ್ದಾನೆ. ಅವನು ಪರಮಪೂಜ್ಯ ಸದ್ಗುರು ರಾಮ್‌ಪಾಲ್ ಮಹಾರಾಜರಲ್ಲಿ ಉಪದೇಶ ಪಡೆದಿದ್ದಾನೆ. ಅವನು ಹೇಳಿದ "ಸೋದರಿಯನ್ನು ಕರೆದುಕೊಂಡು ಹೋಗಿ, ಸಂತ ರಾಮ್‌ಪಾಲ್ ಮಹಾರಾಜರಲ್ಲಿ ಉಪದೇಶ ಕೊಡಿಸುವೆ. ಇವಳಂತೂ ಸಾಯುವವಳಿದ್ದಾಳೆ. ಈ ಕಡೇ ಪ್ರಯತ್ನ ಮಾಡುತ್ತೇನೆ." ಆಗ ನನ್ನ ತಂದೆ ಶ್ರೀ ದಯಾನಂದ ರಾಠಿಯು ಹೇಳಿದರು "ನಾಮೋಪದೇಶದಿಂದ ಯಾರಾದರೂ ಸರಿಯಾಗಿ ಗುಣವಾಗುತ್ತಾರೆಯೆ? ಇದಾದ ಮೇಲೆ ನನ್ನ ಸೋದರ ಎಲ್ಲರಿಗೂ ನಾಮೋಪದೇಶದ ಮಹಿಮೆಯ ಬಗ್ಗೆ ತಿಳಿಸಿದನು. ನಂತರ ಎಲ್ಲರೂ ನೋಡೋಣ ಎಂದರು. ಸಂತ ರಾಮ್‌ಪಾಲ್ ಮಹಾರಾಜರ ಚರಣಗಳ ಬಳಿಗೆ ನನ್ನನ್ನು ಕರೆದುಕೊಂಡು ಹೋದರು. ಆ ಸಮಯದಲ್ಲಿ

ಸದ್ಗುರುದೇವರು "ಗಾಂವ ಪಂಜಾಬಖೋಡ ದೆಹಲಿಯಲ್ಲಿ" ಪ್ರವಚನ ಮಾಡುತ್ತಿದ್ದರು. ನನ್ನನ್ನು ನಮ್ಮ ಪೂರಾ ಪರಿವಾರದವರು ರಾತ್ರಿ 10 ಗಂಟೆಗೆ ಮಹಾರಾಜ ರವರ ಚರಣಗಳ ಬಳಿ ಕರೆದುಕೊಂಡು ಹೋದರು. 25–12–1996 ರಲ್ಲಿ ನಡೆದ ಸಂಗತಿ ಇದು. ನನ್ನ ಸೋದರನು ಪೂಜ್ಯ ರಾಮ್‌ಪಾಲ್ ಮಹಾರಾಜರಲ್ಲಿ ನನ್ನ ದುಃಖದಾಯಿ ಕಥೆಯನ್ನು ತಿಳಿಸಿದನು. ಗುರುಗಳು ರಾತ್ರಿ 10 ಗಂಟೆಯ ಸತ್ಸಂಗದಲ್ಲಿಯೆ, ನಾಮೋಪದೇಶವನ್ನು ಮಾಡಿದರು. ಅದಕ್ಕೆ ಮೊದಲು ನನ್ನ ನಾಲಿಗೆಯಿಂದ ಸ್ವರ ಹೊರಡುತ್ತಿರಲಿಲ್ಲ. ಮಾತನಾಡಲು ನಾಲಿಗೆಯೇ ಏಳುತ್ತಿರಲಿಲ್ಲ. 26ನೇ ಡಿಸೆಂಬರ್ ಬೆಳಿಗ್ಗೆ ಯಾವಾಗ ನಾನು ಎದ್ದೆನೋ, ನಾನು ಉತ್ತಮ ರೀತಿಯಲ್ಲಿ ಮಾತನಾಡಲು ಅವಕಾಶವಾಯಿತು. ನನ್ನ ಸೋದರನಿಗೆ ಹೇಳಿದೆ–ಇಷ್ಟು ವರ್ಷಗಳ ನಂತರ, ನನಗೆನಿಸುತ್ತದೆ, ನನ್ನ ಶರೀರದಿಂದ, ಯಾವದೋ ಭಾರ ಇಳಿದು ಹೋದಂತೆ ಆಗಿದೆ. ನಾನು ಮಾತನಾಡುವುದನ್ನು ಕಂಡ ನನ್ನ ಸೋದರ ಸುಖವೀರ್ ಅಚ್ಚರಿ ಪಡುತ್ತಿದ್ದ ಹಾಗೂ ಹೇಳಿದ ರಾಮ್‌ಪಾಲ್ ಮಹಾರಾಜ ರಂತೂ ಸಾಕ್ಷಾತ್ ಕಬೀರ್ ಪರಮೇಶ್ವರರಾಗಿ ಬಂದಿದ್ದಾರೆ. ನಾನು ಬೀಡಿ ಸೇದುತ್ತಿದ್ದೆ. ಅದೇ ದಿನ ಬಿಟ್ಟುಬಿಟ್ಟೆ. ಮನೆಗೆ ಬಂದಾಗ ನನ್ನ ಪತಿ ಭಕ್ತ ಸುರೇಶನು ಹೇಳಿದ "ನೀನು ಅದೇನು ಉಪದೇಶ ಪಡೆದುಕೊಂಡು ಬಂದಿರುವೆ. ನಾನೂ ನೋಡುತ್ತೇನೆ ನಿನ್ನ ನಾಮದಲ್ಲಿ ಅದೆಷ್ಟು ಶಕ್ತಿ ಇದೆ ಎಂದು ತನ್ನ ತಾಯಿಯೊಂದಿಗೆ ಹೇಳಿದ. ಒಳ್ಳೆ ನಾಮ ತೆಗೆದುಕೊಂಡು ಬಂದಿರುವಳು. ಮಕ್ಕಳು ಬೆಳಿಗ್ಗೆ "ಗುಡ್ ಮಾರ್ನಿಂಗ್" ಬದಲು "ಸತ್ ಸಾಹೇಬ್" ಹೇಳತೊಡಗಿದ್ದಾರೆ. ಭಕ್ತ ಸುರೇಶ ಒಂದು ವರ್ಷದ ವರೆಗೆ ಹಾಗೆಯೇ ಸಾರಾಯಿ ಕುಡಿಯುತ್ತಾ ಇದ್ದ. ಮನೆಯಲ್ಲಿ ಜಗಳ ಮಾಡುತ್ತಾ ಇದ್ದ.

ಒಂದು ದಿನ ಇವರು ಮುಕ್ತಿದಾತ ಕಬೀರ್ ಪರಮೇಶ್ವರರ, ಶ್ರೀ ಗರೀಬ್‌ದಾಸರ, ಸದ್ಗುರು ಸಂತ ರಾಮ್‌ಪಾಲ್‌ರ ಚಿತ್ರಗಳ ಫೋಟೋಗಳನ್ನು ಒಡೆಯಲು ನಿಂತು ಕೊಂಡ. ಆಗ ನಾನು ಕೈ ಮುಗಿದು, ಮುಕ್ತಿದಾತನನ್ನು ಪ್ರಾರ್ಥಿಸಿದೆ. ನೀನೇ ಇವರ ಬುದ್ಧಿಯನ್ನು ನಿಯಂತ್ರಣದಲ್ಲಿ ಇರಿಸಬಲ್ಲಿರಿ. ಆಗ ಮುಕ್ತಿದಾತರು ನನ್ನ ಪತಿಗೆ ಉತ್ತಮ ಬುದ್ಧಿ ಕೊಡುವ ಮೂಲಕ ಚಮತ್ಕಾರ ತೋರಿಸಿದರು. ನನ್ನ ಪತಿಯು ಫೋಟೋಗಳನ್ನು ಪೂಜೆ ಸ್ಥಳದಲ್ಲಿರಿಸಿ ಬೆನ್ನು ತೋರದೆ ಹಿಂದಕ್ಕೆ ಬಂದು ದಂಡವತ ನಮಸ್ಕಾರ ಮಾಡಿದರು. ಆಗಿನಿಂದ ಈವರೆಗೂ ಅವರು ಸಾರಾಯಿ–ಬೀಡಿ ಮುಂತಾದವನ್ನು ಬಿಟ್ಟುಬಿಟ್ಟರು. ಇದಕ್ಕೆಲ್ಲಾ ಸಾಕ್ಷಿಯಾಗಿದ್ದಾರೆ ಗಂಜಾ ಹಾಗೂ ಡೀಗಲ್ ಗ್ರಾಮಸ್ಥರು ನನಗೆ ಪುನರ್ಜನ್ಮ ದೊರೆತಿರುವುದನ್ನು ಕಂಡು, ನನ್ನ ಸೋದರ ರಾಜೇಂದ್ರ ಸಿಂಹ ರಾಠಿ ಡಿ.ಎಸ್.ಪಿ (ಹರಿಯಾಣ) ಹಾಗೂ ಸೋದರ ಪ್ರೇಮ ಪ್ರಕಾಶ ರಾಠಿ ಅಡ್ವೋಕೇಟ್ (ದೆಹಲಿ) ಸಹಿತ, ಪೂರ್ಣ ಪರಿವಾರದವರು, ನಾಮೋಪದೇಶ ತೆಗೆದುಕೊಂಡರು. ನಾಮೋಪದೇಶ ಪಡೆದ ನಂತರ ಕಬೀರ್ ಪರಮೇಶ್ವರರು ಎಂತಹ ಸುಖಗಳನ್ನು ಕೊಟ್ಟರೆಂದರೆ, ಅದನ್ನು ಊಹಿಸಲೂ ಸಾಧ್ಯವಿರಲಿಲ್ಲ. ನಮ್ಮ ಎಮ್ಮೆಯು ಸರ್ಪವನ್ನು ತಿಂದಿತ್ತು. ಬಹಳ ಕೆಟ್ಟರೀತಿಯಲ್ಲಿ ಎಮ್ಮೆಯ ಪರಿಸ್ಥಿತಿ ಹದಗೆಟ್ಟಿತು. ಡಾಕ್ಟರಿಗೆ ತೋರಿಸಲಾಗಿ, ಅವರು ಈ ಎಮ್ಮೆ ವಿಷಪೂರಿತ ವಸ್ತುವನ್ನು ತಿಂದಿದೆ, ಎಂದು ಹೇಳಿ 10 ಇಂಜೆಕ್ಷನ್ ಹಾಕಿದರು. ಮರುದಿನ ಎಮ್ಮೆಯ ಕಣ್ಣುಗಳಿಂದ ನೀಲಿಯ ನೀರು ಹರಿಯತೊಡಗಿತು. ಹಾಗೂ ಎಮ್ಮೆ ಕುರುಡಾಯಿತು. ಡಾಕ್ಟರ್ ಸಹ ಕೈಚೆಲ್ಲಿದರು. ರಾತ್ರಿಯ ಕನಸಿನಲ್ಲಿ ಸದ್ಗುರು ದೇವ ರಾಮ್‌ಪಾಲ್ ಮಹಾರಾಜರು ಕಾಣಿಸಿಕೊಂಡು, ಅವರು ಎಮ್ಮೆಯ ಬೆನ್ನ ಮೇಲೆ ಕೈಯಾಡಿಸಿದರು. ಬೆಳಿಗ್ಗೆ ಎದ್ದು ನೋಡಿದರೆ, ನಾವು ಮತ್ತು ನೆರೆ ಹೊರೆಯರು ಎಮ್ಮೆಯ ಬಾಯಲ್ಲಿ ಹಾವನ್ನು ಕಂಡೆವು. ಹಾಗೂ ಅದನ್ನು ಹೊರತೆಗೆದೆವು. ಎಮ್ಮೆ ಆರೋಗ್ಯವಾಯಿತು. ಪೂರಾ ಹಾಲನ್ನು ಕೊಡತೊಡಗಿತು. ಹೀಗೇ ಅದೆಷ್ಟೋ ಸುಖಗಳನ್ನು ತಾವು ನಮಗೆ ಕೊಟ್ಟಿದ್ದೀರಿ. ನೆನ್ನೆಯವರೆಗೆ ನಮ್ಮ ಬಳಿ 10 ರೂ. ಸಹ ಇರಲಿಲ್ಲ. ಆದರೆ ಈಗ ಅದೇ ಗದ್ದೆಗಳಲ್ಲಿ ಹಣವೇ ಬೆಳೆಯುತ್ತಿದೆ. ಮತ್ತು ನಾವು ಯಾರ ಮುಂದೆಯೂ,

ಕೈಚಾಚುವ ಅಗತ್ಯತೆ ಇಲ್ಲ. ಅಕ್ಕ–ಪಕ್ಕದವರು ಹೇಳುತ್ತಾರೆ. "ನಿಮ್ಮ ಗುರುಗಳೇ ನಿಮಗೆ ರಾಮರಾಗಿದ್ದಾರೆ" ಅಜ್ಞಾನಿಗಳ ಮೂಲಕ, ಹಾದಿತಪ್ಪಿರುವ ಮುಗ್ಧವಾದ ಸಮಾಜವು, ನಿಮ್ಮ ಮಹಿಮೆಯನ್ನು ಏನು ತಿಳಿದೀತು? ಸಂತ ರಾಮ್‌ಪಾಲ್ ಮಹಾರಾಜರ ವಿರೋಧಿಗಳಾದರೊ, ಕೇವಲ ಕೆಸರು ಎರಚುವುದನ್ನು ಬಲ್ಲರು. ಅವರೊಂದಿಗೆ ಇರುವವರು ಹೇಳುತ್ತಾರೆ. ಅವರಿಗೆ ಏನೆಲ್ಲಾ ಸಿಕ್ಕಿದೆ ಎಂದು ನಾವು ತಮ್ಮಲ್ಲಿ ಪ್ರಾರ್ಥಿಸುವುದು ಏನೆಂದರೆ, ನಮ್ಮನ್ನು ತಮ್ಮ ಪಾದಗಳಲ್ಲೇ ಇರಿಸಿಕೊಳ್ಳಿ ಹಾಗೂ ಸಾವಿರಾರು ವರ್ಷಗಳವರೆಗೆ ದುಃಖಿಗಳ ಆಶ್ರಯದಾತರಾಗಿರಿ. ಸದ್ಗುರು ರಾಮ್‌ಪಾಲ್ ಮಹಾರಾಜರು, ಪೂರ್ಣ ಪರಮಾತ್ಮನ ಅವತಾರವಾಗಿ ಬಂದಿದ್ದಾರೆ.

ಅವರಿಂದ ನಾಮೋಪದೇಶ ಪಡೆದ ಮೇಲೆ, ನಮ್ಮ ಮನೆಯಲ್ಲಿ ಎಷ್ಟು ಸುಖ ಸಿಕ್ಕಿದೆ ಅಂದರೆ, ಅದನ್ನು ವರ್ಣಿಸಲು ಸಾಧ್ಯವಿಲ್ಲ. ಆದರೂ ವರ್ಣಿಸುವ ಪ್ರಯತ್ನ ಮಾಡುತ್ತಿದ್ದೇನೆ. ನಾನು ತಮ್ಮಿಂದ **1996** ರಲ್ಲಿ ನಾಮೋಪದೇಶ ಪಡೆದೆ. ಇದಾದ ಮೇಲೆ ಸುಮಾರು ಒಂದೂವರೆ ವರ್ಷಗಳ ನಂತರ ನಡೆದ ಘಟನೆ ಹೀಗಿದೆ:–

ಒಂದು ರಾತ್ರಿಯಲ್ಲಿ ನನಗೆ, ಸ್ಮಶಾನ ಎಲ್ಲಿ ಎಂದು ಕೇಳುತ್ತಿರುವಂತೆ ಕಾಣಿಸಿತು. "ನನಗೆ ತಿಳಿಸಿದರು ಮತ್ತು ತೋರಿಸಿದರು. ನಾಳೆ ನೀನು ಇಲ್ಲಿಗೆ ಬರಬೇಕಿದೆ" ಅದು ಮುಂಡಾಣ ಪಾನೇಯ' ಸ್ಮಶಾನವಾಗಿತ್ತು. ಬೆಳಗಾದಾಗ ನನಗೆ 'ಕಾಲರಾ' ರೋಗ ಅಂಟಿತ್ತು. ತಲೆಯಲ್ಲಿ ಬಹಳ ನೋವು ಕಾಣಿಸಿತು ತಲೆ ತಿರುಗಿ ಸಾಯುವಂತಹ ಸಂಕಟವಾಗುತ್ತಿತ್ತು. ಸಾವಿನ ಎಲ್ಲ ಕಾರಣಗಳು ಪೂರ್ಣವಾದವು. ಡಾಕ್ಟರನ್ನು ಕರೆಸಿದರು. ಅವರು ಇಂಜೆಕ್ಷನ್ ಕೊಟ್ಟರು. ಇದಾದ ನಂತರ ಡಾಕ್ಟರ್ ತಿಳಿಸಿದರು. "ಇವಳಂತೂ ಸತ್ತು ಹೋಗಿದ್ದಾಳೆ". ಇದಾದ ಮೇಲೆ ನಾಲ್ಕು ಧೂತರು ಕಾಣಿಸಿಕೊಂಡರು. ನಂತರ ಅವರು ನನ್ನನ್ನು ಎರಡೂ ಕಡೆ ಹಿಡಿದುಕೊಂಡು ಹೇಳಿದರು. ನಮ್ಮನ್ನು ದೇವರು ಕಳುಹಿಸಿದ್ದಾನೆ. ನಿಮ್ಮನ್ನು ಸಾಯಿಸುವೆವು. ಅದಾದ ನಂತರ ನನ್ನ ಎರಡೂ ಕೈಗಳು, ಕುತ್ತಿಗೆಯನ್ನು ಬಹಳ ಗಟ್ಟಿಯಾಗಿ ಅದುಮಿದವು. ಇದರಿಂದ ನನ್ನ ಪ್ರಾಣ ಕಣ್ಣುಗಳಿಗೆ ಬಂದಿತು. ನಾನು ಯಾರೊಂದಿಗೂ ಮಾತನಾಡಲು ಸಾಧ್ಯವಾಗಲಿಲ್ಲ. ಮುಕ್ತಿದಾತರು ಹೇಳುತ್ತಾರೆ. " ಆ ಜಮ್ ತೆರೇ ಘಟ ನೇ ಘೇರೆ, ತೂ ರಾಮ ಕಹನ್ ನಹಿ ಪಾವೆಗಾ" ಅಂದರೆ ಯಮಧೂತರು ಶರೀರವನ್ನು ಸುತ್ತುವರಿದು ನಿಂತಾಗ, ಯಾವ ರಾಮನಾಮವೂ ಹೇಳಲಾಗುವುದಿಲ್ಲ. ಅರ್ಥಾತ್ ಕಾಲನಧೂತರು ಬಂದಾಗ ಹೊರಡಲೇ ಬೇಕು. ಈ ಸ್ಥಿತಿ ನನ್ನದಾಯಿತು. ಅದಾದ ನಂತರ ಕಬೀರ್ ಪರಮೇಶ್ವರರು ಕಮಲದ ಹೂವಿನ ಮೇಲೆ ಕುಳಿತು ನನ್ನ ಹತ್ತಿರ ಪ್ರಕಟವಾದುದು (ಕಾಣಿಸಿಕೊಂಡರು) ಅದಾದ ನಂತರ ನನ್ನೊಳಗಿನಿಂದ ಸದ್ಗುರು ರಾಮ್‌ಪಾಲ್ ಮಹಾರಾಜರ ಧ್ವನಿ ಕೇಳಿ ಬಂತು. ಏನೆಂದರೆ "ಈ ಹುಡುಗಿಯನ್ನು ತಾವು ಹೇಗೆ ತೆಗೆದುಕೊಂಡು ಹೋಗುವಿರಿ? ಇವಳನ್ನು ನಾವು ಹೋಗಲು ಬಿಡುವುದಿಲ್ಲ. ಇವಳನ್ನು ನಾವು ಬಯಸಿದಾಗ, ತೆಗೆದುಕೊಂಡು ಹೋಗುತ್ತೇವೆ. ಇವಳ ಕಾಲನ್ನು ನೀವು ಮುರಿದರೂ ನಾವು ಅದನ್ನು ಜೋಡಿಸಬಲ್ಲೆವು ಅವರ ಜೊತೆಯಲ್ಲಿ ಗುರುಗಳು ಸಾಕಷ್ಟು ಮಾತುಗಳನ್ನಾಡಿದರು. ಅದನ್ನೆಲ್ಲಾ ಇಲ್ಲಿ ವರ್ಣಿಸಲು ಸಾಧ್ಯವಿಲ್ಲ. ಅದಾದ ನಂತರ ಯಮನ ಧೂತರು ಓಡಿ ಹೋದರು. ನಂತರ ಗುರುಗಳು ಹೇಳಿದರು– "ಮಗಳೇ ಹೆದರಬೇಡ ನಿನ್ನ ಸಾವನ್ನು ತಳ್ಳಿ ಹಾಕಿದ್ದೇನೆ. ಈಗ ನಾವು ಬಯಸಿದಲ್ಲಿ ತೆಗೆದುಕೊಂಡು ಹೋಗುತ್ತೇವೆ".

ನಮ್ಮ ಒಂದು ಎಮ್ಮೆಗೆ ಕರು ಹಾಕುವ ಸಮಯ ಹತ್ತಿರವಾಗಿತ್ತು. ಅದು ಬಹಳ ಸೋತಂತೆ ಕಾಣುತ್ತಿತ್ತು (ಮೂರ್ತಿಯಂತೆ ಒಂದೇ ಜಾಗದಲ್ಲಿ ನಿಂತಿತ್ತು) ಡಾಕ್ಟರನ್ನು ಕರೆದುಕೊಂಡು ಬಂದೆವು. ಡಾಕ್ಟರ್ ಸಮಯಕ್ಕೆ ಮೊದಲೇ ಕೈಗಳಿಂದ ಕರುವನ್ನು ಹೊರತೆಗೆದರು. ನಂತರ ಅದು 'ಕಸ' ಹಾಕಲಿಲ್ಲ. (ಗರ್ಭಚೀಲದಲ್ಲಿದ್ದ ತೆಳು ಪರದೆಯಂಥ ಭಾಗ) ಯಾರೋ ಹೇಳಿದರು ಎಂದು, ಸ್ವಲ್ಪ

ಹೊರಬಂದಿದ್ದ ಕಸದ ಭಾಗಕ್ಕೆ ಇಟ್ಟಿಗೆ ಕಟ್ಟಿದೆವು. ಆಗ ಆ ಕಸದ ಭಾಗ ಕತ್ತರಿಸಿ ಬಿತ್ತು. ಹಾಗಾದ ಮೇಲೆ ಎಮ್ಮೆಯ ಪರಿಸ್ಥಿತಿ ಬಹಳ ಕೆಟ್ಟದಾಯಿತು. ಈ ಎಮ್ಮೆ ಸಾಯುವುದರಿಂದ ಉಳಿಸಲು ಸಾಧ್ಯವಿಲ್ಲ ಎಂದು ಎಲ್ಲರೂ ಹೇಳತೊಡಗಿದರು. ನಾವು ಗಾಬರಿಗೊಂಡು ರಾತ್ರಿ ವೇಳೆಯಲ್ಲಿ 5 ಡಾಕ್ಟರ್‌ಗಳ ಬಳಿಗೆ ಹೋದೆವು. ಆದರೆ ಒಬ್ಬ ಡಾಕ್ಟರ್ ಸಹ ಬರಲಿಲ್ಲ. ಈ ಕೇಸನ್ನು ನಿರ್ವಹಿಸುವುದು ನಮ್ಮ ವಶದ ಮಾತಲ್ಲಿ ಎಂದು ಹೇಳುತ್ತಿದ್ದರು. ಈಗ ಪರಮಾತ್ಮನೇ ಕಾಪಾಡಲು ಸಾಧ್ಯ. ನಂತರ ನಾನು ಬಹಳ ದುಃಖದಿಂದ ಆಸೆಯನ್ನು ಬಿಟ್ಟು ಬಿಟ್ಟೆ ಈಗ ಎಮ್ಮೆಯನ್ನು ಯಾರೂ ಉಳಿಸಲು ಸಾಧ್ಯವಿಲ್ಲ. ಪುನಃ ನನಗೆ ನಾನೇ ಹೇಳಿಕೊಂಡೆ, “ಭಕ್ತ, ಆಸೆಯನ್ನು ಬಿಡಬೇಡ, ನಮ್ಮ ಮುಕ್ತಿದಾತರು ಎಲ್ಲವನ್ನು ಸರಿ ಮಾಡುವರು. ನಂತರ ನಾನು ಮುಕ್ತಿದಾತರ ಎದುರು ದಂಡವತ ಪ್ರಣಾಮ ಮಾಡಿ ಪ್ರಾರ್ಥಿಸಿದೆ. ಬೆಳಿಗ್ಗೆ ಒಬ್ಬ ಡಾಕ್ಟರ ಹತ್ತಿರ ಹೋದೆ, ಅವರು ಬಂದು ನೋಡಿದರು. ಇದು ಉಳಿಯುವುದಿಲ್ಲ ಎಂದು ಹೇಳಿದರು. ಹಾಗೂ ಹೇಳಿದರು ಹೀಗೆಯೇ ನಮ್ಮ ಎಮ್ಮೆಗೂ ಆಗಿತ್ತು ದೊಡ್ಡ ಡಾಕ್ಟರ್ ಸಾಕಷ್ಟು ಪ್ರಯತ್ನಪಟ್ಟರು ಆದರೆ ಉಳಿಸಿಕೊಳ್ಳಲು ಆಗಲಿಲ್ಲ. ನಂತರ ಹೇಳಿದರು ಪರಮೇಶ್ವರನ ದಯೆಯಿಂದ ಉಳಿದುಕೊಂಡರೂ ಹಾಲು ಕೊಡಲಾಗದು. ಅದಾದ 7 ದಿನಗಳ ನಂತರ ಗುರುಗಳು ಕಾಣಿಸಿಕೊಂಡರು ಅವರು ಎಮ್ಮೆಯ ಕರುಳಿನಿಂದ ಕಸವನ್ನು ಹೊರತೆಗೆಯುತ್ತಿದ್ದಾರೆ ಬೆಳಿಗ್ಗೆ ಎಮ್ಮೆಯು ಕಸಹಾಕಿತ್ತು ಹಾಗೂ ಆರೋಗ್ಯವಾಯಿತು ಮತ್ತು 15ಲೀ ಹಾಲು ಕೊಡುವಂತೆ ಆಯಿತು. ಇದು ನಮ್ಮ (ಬಂದೀಛೋಡ) ಮುಕ್ತಿದಾತರ ಕೃಪೆ. ಆಗಲೇ ಅಕ್ಕ-ಪಕ್ಕದವರ 4-5 ಎಮ್ಮೆಗಳು ಇದೇ ರೋಗದಿಂದ ಸತ್ತು ಹೋಗಿತ್ತು.

ನನ್ನ ಚಿಕ್ಕ ಮಗನಿಗೆ 14 ವರ್ಷ, ಅವನ ಹೆಸರು ನವನೀತ ಅವನಿಗೆ ಬಾಲ್ಯದಲ್ಲಿಯೇ (6 ತಿಂಗಳ ಮಗುವಿದ್ದಾಗ) ನಿಮೋನಿಯಾ ವಾಗಿತ್ತು ಹಾಗೂ 5 ವರ್ಷಗಳ ವರೆಗೆ ಇವನ ಕಾಯಿಲೆ ಗುಣವಾಗಲಿಲ್ಲ. ನಾನು ಅವನನ್ನು ಕಾಪಾಡಿಕೊಳ್ಳಲು ಸಾಕಷ್ಟು ಪ್ರಯಾಸ ಪಡುತ್ತಿದ್ದೆ. ಡಾಕ್ಟರ್‌ಗಳು ಸಹ ಸಾಧ್ಯವಿಲ್ಲವೆಂದು ಹೇಳಿದರು ನಾನು ಸೋಲನ್ನು ಒಪ್ಪಿಕೊಳ್ಳಲಿಲ್ಲ. ಒಂದು ದಿನ ನಾನು ಅವನನ್ನು ಸದ್ಗುರು ರಾಮ್‌ಪಾಲ್ ಮಹಾರಾಜರ ಬಳಿಗೆ ಕರೆದುಕೊಂಡು ಹೋಗಿ, ನಾಮೋಪದೇಶ ಕೊಡಿಸಿದೆ. ಅದೇ ದಿನದಿಂದ ನನ್ನ ಮಗುವಿಗೆ ಕಾಯಿಲೆಯೇ ಇರಲಿಲ್ಲವೋ, ಎಂಬಂತೆ ಗುಣವಾಯಿತು. ಈಗ ಆ ಮಗು ತನ್ನ ವಯಸ್ಸಿನ ಬೇರೆ ಎಲ್ಲ ಬಾಲಕರಿಗಿಂತಲೂ ಆರೋಗ್ಯವಾಗಿದ್ದಾನೆ. ಈ ಎಲ್ಲ ಚಮತ್ಕಾರಗಳು, ನಮ್ಮ ಸದ್ಗುಗುರುದೇವ ರಾಮ್‌ಪಾಲ್ ಮಹಾರಾಜರ ಆಸೀಮ ಕೃಪೆಯಿಂದಲೇ ಆಗಿದೆ.

ಒಂದು ಪೂರ್ಣಿಮೆಯ ದಿನ, 2004ನೇ ಇಸವಿಯಲ್ಲಿ ಮಳೆ ಬಾರದಿದ್ದ ಕಾರಣ,ನಮ್ಮ ಭತ್ತದ ಫಸಲು ಒಣಗಿ ಹೋಗಿತ್ತು. ನಾಲೆ ನೀರೂ ಬಂದು ಹೋಗಿತ್ತು. ಒಂದು ತಿಂಗಳ ನಂತರ ಎರಡನೆಯ ಬಾರಿ ನಾಲೆಯಲ್ಲಿ ನೀರು ಬರುವುದಿತ್ತು. ಅಲ್ಲಿ ಟ್ಯೂಬ್‌ನಿಂದ ನೀರನ್ನು ಎತ್ತಿಕೊಳ್ಳುವ ಸಾಧನವಿರಲಿಲ್ಲ. ನಾವು ಕೇವಲ ನಾಲೆಯನ್ನೇ ಅವಲಂಬಿಸಿದ್ದೆವು.

ಆದರೆ ಪೂರ್ಣಿಮೆಯ ದಿನ ನಾವು ಸತ್ಸಂಗ ಮುಗಿಸಿ, ಗದ್ದೆಯನ್ನು ನೋಡಲು ಹೋದಾಗ, ನಮ್ಮ ಎರಡುವರೆ ಎಕರೆ ಭೂಮಿಯ ಭತ್ತದ ಗದ್ದೆ ಮೊಳಕಾಲು ಮುಳುಗುವವರೆಗೆ (ಮಂಡಿಯವರೆಗೆ) ನೀರಿನಿಂದ ತುಂಬಿತ್ತು. ಅದು ಸ್ವಪ್ನದಲ್ಲಿ ಆಗುವುದೂ ಸಾಧ್ಯವಿಲ್ಲದ ಕೆಲಸ. ಆದರೆ ನಮ್ಮ ಸದ್ಗುರುದೇವರ ಕೃಪೆಯಿಂದ ಆಗಿತ್ತು. ಅಕ್ಕ-ಪಕ್ಕದ ಎಲ್ಲಾ ಗದ್ದೆಯವರೂ ಆಶ್ಚರ್ಯ ಪಟ್ಟರು. “ ಈ ನಾಲೆಯನ್ನು ನಿಮ್ಮ ಸದ್ಗುರುದೇವರು, ಕೇವಲ ನಿಮಗಾಗಿಯೇ ಕರೆಸಿದ್ದಾರೆ.” ಎಲ್ಲರ ಗದ್ದೆಗಳಲ್ಲಿ ಫಸಲು ಹೆಚ್ಚೆಂದರೆ 10 ಮಣ ಭತ್ತ ಮಾತ್ರ ಆಗಿತ್ತು. ಆಗ ನಮ್ಮ ಗದ್ದೆಯಲ್ಲಿ ಪ್ರತಿ ಎಕರೆಗೆ 40 ಮಣದಷ್ಟು ಆಗಿತ್ತು. ಇದು ಸದ್ಗುರುದೇವರ ಕೃಪೆಯಿಂದ ಆಗಿತ್ತು.

ಅನೇಕ ಸುಖಗಳನ್ನು ನಮ್ಮ ಮುಕ್ತಿದಾತ ಸದ್ಗುರು ರಾಮ್‌ಪಾಲ್ ರವರು ನಮಗೆ ನೀಡಿದ್ದಾರೆ. ನನ್ನ ಇಬ್ಬರು ಪುತ್ರ (ಭಕ್ತ ಅಯಿತ ಮತ್ತು ನವನೀತ)ರಿಗೂ 2010 ರಲ್ಲಿ ದಿಲ್ಲಿಯ ಪೋಲಿಸ್ ನಲ್ಲಿ ನೌಕರಿಯಾಯಿತು. ನಾನು ಹಾಗೂ ನನ್ನ ಪರಿವಾರದವರು ಎಲ್ಲ ವಾಚಕದಲ್ಲಿ ಪ್ರಾರ್ಥನೆ ಮಾಡುತ್ತೇವೆ. "ತಾವು ಶೀಘ್ರವೇ 'ಸತ್ಯಲೋಕ ಆಶ್ರಮ ಕರೌಂಥಾಗೆ (ಈಗ ಬರವಾಲಾದಲ್ಲಿ) ಬಂದು, ಸಂತ ರಾಮ್‌ಪಾಲ್ ಮಹಾರಾಜರಿಂದ ಉಚಿತವಾಗಿ ನಾಮೋಪದೇಶವನ್ನು ಪಡೆಯಿರಿ. ಮನುಷ್ಯ ಜೀವನವನ್ನು ವ್ಯರ್ಥ ಮಾಡಿಕೊಳ್ಳಬೇಡಿರಿ. ಕಬೀರ್ ಪರಮೇಶ್ವರರು ಹೇಳುತ್ತಾರೆ :

"ಕಲ್ ಕರೇ ಸೋ ಆಜ ಕರ್, ಆಜ ಕರೇ ಸೋ ಅಬ್ ।
ಪಲ್ ಮೇ ಪ್ರಲಯ ಹೋಯೆಗೀ, ಬಹೂರ್ ಕರೋಗೆ ಕಬ್ ॥"

ಸತ್ ಸಾಹೇಬ್ ! ಜಯ ಮುಕ್ತಿದಾತ ! ಸದ್ಗುರು ರಾಮ್‌ಪಾಲ್ ಮಹಾರಾಜ್ ಕೀ ಜೈ !

## "ಹಾಳಾಗಿ ಹೋಗಿದ್ದ ಪರಿವಾರವು ಸರಿಯಾಯಿತು"

ನಾನು ಶ್ರೀ ಉಮೇದ ಸಿಂಹರ ಪುತ್ರ, ಭಕ್ತ ರಮೇಶನಾಗಿರುವೆನು. ಹಿಸಾರ್ ಜಿಲ್ಲೆಯ, ಹಾಂಸಿ ತಾಲ್ಲೂಕಿನ ಪೆಟನಾಡ ಎಂಬ ಹಳ್ಳಿಯ ನಿವಾಸಿ. ಈಗ ಎಂಪ್ಲಾಯೀಸ್ ಕಾಲೋನಿಯ ಜೈಲಿನ ಎದುರು ಭಾಗದಲ್ಲಿರುವ ಜಿಂದ್ ನಲ್ಲಿ ಸಪರಿವಾರವಾಗಿ ವಾಸವಿದ್ದೇನೆ.

ನಾಮೋಪದೇಶವನ್ನು ಪಡೆಯುವ ಮೊದಲು ನಾವು ಭೂತಗಳ ಪೂಜೆಯನ್ನು ಮಾಡುತ್ತಿದ್ದೆವು. ನಮ್ಮ ಹಳ್ಳಿಯಲ್ಲಿ, 'ಬಾಬಾ ಸರಿಯಾ' ಗೆ ಮಾನ್ಯತೆ ಇತ್ತು. ಅಲ್ಲಿಗೆ ನಾವು ಪ್ರತಿ ತಿಂಗಳ ಪೂರ್ಣಿಮೆಯ ದಿನ, ದೀಪ ಹಚ್ಚಲು ಹೋಗುತ್ತಿದ್ದೆವು. ನಾವು, ಶುಕ್ರವಾರ, ಜನ್ಮಾಷ್ಟಮಿ, ಶಿವರಾತ್ರಿಯ ವ್ರತಗಳನ್ನೂ ಮಾಡುತ್ತಿದ್ದೇವು. ಪಿತೃಗಳಿಗೆ ಪಿಂಡದಾನ ಮತ್ತು ಶ್ರಾದ್ಧವನ್ನೂ ಮಾಡುತ್ತಿದ್ದೆವು. ಆದರೂ ಸಹ ನಮ್ಮ ಮನೆಯು ಹಾಳಾಗಿ ಹೋಗಿತ್ತು. ನಾನು ಹನ್ನೆರಡು ವರ್ಷದವನಿದ್ದಾಗ, ನಮ್ಮ ತಂದೆಯವರ ಮರಣವಾಗಿತ್ತು. ಮನೆಯಲ್ಲಿ ಮೂವರು ಸದಸ್ಯರಿದ್ದೆವು. ಮೂವರಲ್ಲೂ ಪರಸ್ಪರ ಜಗಳವಾಗುತ್ತಿತ್ತು. ಮೂವರಿಗೂ ಭೂತ–ಪ್ರೇತಗಳು ಬಹಳ ದುಃಖ ಕೊಡುತ್ತಿದ್ದವು ಮತ್ತು ಮೂವರಿಗೂ ಹೆಚ್ಚಾಗಿ ಖಾಯಿಲೆ ಇರುತ್ತಿತ್ತು. ಮೊದಲು ಡಾಕ್ಟರ್ ಬಳಿ ತೋರಿಸಿದೆವು ಏನೂ ಸುಖವಾಗಲಿಲ್ಲ. ನಂತರ ತಾಂತ್ರಿಕರ ಬಳಿಗೆ ಹೋದೆವು. ಅವರು ಹೇಳುತ್ತಿದ್ದರು 5000 ರೂ.ಗಳನ್ನು ಕೊಡು ನಾನು ಖಂಡಿತ ಸರಿ ಮಾಡುವೆನು ಮತ್ತೆ ಕೆಲವರು ಹೇಳುತ್ತಿದ್ದರು 10,000 ರೂ.ಗಳನ್ನು ಕೊಡು ಎಂದು. ಏನೂ ಪ್ರಯೊಜನ ವಾಗಲಿಲ್ಲ. ನಾವು ಹಾಳಾಗಿಯಾಗಿತ್ತು. ನನ್ನ ಸಂಬಂಧಿತ ಭಕ್ತ ರಘುವೀರ ಸಿಂಹರು ಕೌಂಥ ಕಲಾಂ ಹಳ್ಳಿಯವರು, ಪದೆ–ಪದೇ ಹೇಳಿದ್ದರಿಂದ, ನಮ್ಮ ತಾಯಿಯವರು 1996ನೇ ಇಸವಿಯಲ್ಲಿ ಸಂತ ರಾಮ್‌ಪಾಲ್ ಮಹಾರಾಜರಲ್ಲಿ ನಾಮೋಪದೇಶ ಪಡೆದರು. ನನ್ನ ಪತ್ನಿಗೆ ಮದುವೆಯಾದ 5 ವರ್ಷಗಳ ನಂತರವೂ ಮಕ್ಕಳಾಗಲಿಲ್ಲ. ನನ್ನ ತಾಯಿಯವರು ಹೇಳಿದ್ದರಿಂದ ನನ್ನ ಪತ್ನಿ ಸಹ ಸಂತ ರಾಮ್‌ಪಾಲ್ ಮಹಾರಾಜ್‌ರಿಂದ ನಾಮೋಪದೇಶವನ್ನು ಪಡೆದರು. ನಾಮೋಪದೇಶವನ್ನು ಪಡೆದ. ಒಂದು ವರ್ಷದ ಒಳಗೇ ನನ್ನ ಪತ್ನಿಯು ಒಂದು ಗಂಡುಮಗುವಿಗೆ ಜನ್ಮ ನೀಡಿದಳು. ನನಗೆ ದೇವರ ಮೇಲೆ ನಂಬಿಕೆ ಇರಲಿಲ್ಲ. ಅದೇ ಕಾರಣ ನಾನು ನಾಮೋಪದೇಶವನ್ನು ಪಡೆಯಲಿಲ್ಲ ಹಾಗೂ ನನ್ನ ತಾಯಿ ಮತ್ತು ಪತ್ನಿಯನ್ನು ಸಂತರ ಹತ್ತಿರ ಹೋಗಲು ತಡೆಯುತ್ತಿದ್ದೆ. ನನ್ನ ಮಗನಿಗೆ 15 ದಿನಗಳಾಗಿತ್ತು, ಬಹಳ ಖಾಯಿಲೆ ಯಾಯಿತು. ಮಗು ಬೆಳಗಾಗುವುದರ ಒಳಗೆ ಸತ್ತು ಹೋಗುತ್ತದೆ ಇವನನ್ನು ಕರೆದುಕೊಂಡು ಹೋಗಿ ಎಂದು ಡಾಕ್ಟರ್ ಹೇಳಿದರು. ಸಂಜೆ ವೇಳೆಯಲ್ಲಿ ಯೊರೋ ಭಕ್ತರೊಬ್ಬರು ಹೇಳಿದರು. "ಜೀಂದ್ ನ ಆಶ್ರಮಕ್ಕೆ ಮುಕ್ತಿದಾತ ಸದ್ಗುರು ರಾಮ್‌ಪಾಲ್ ಮಹಾರಾಜರು ಬಂದಿರುವರು. ಅವರು ಪೂರ್ಣ

ಸಂತರು ಮತ್ತು ಅವರೇ ಈ ಮಗುವಿಗೆ ಗುಣಪಡಿಸಲು ಸಾಧ್ಯ" ನಾವು ಡಾಕ್ಟರ್ ಹಾಗೂ ತಾಂತ್ರಿಕರ ಹತ್ತಿರ ಹೋಗಿ.. ಹೋಗಿ ಸೋತಿದ್ದೆವೆ. ನನಗೆ ದೇವರ ಮೇಲೆ ನಂಬಿಕೆ ಹಾರಿಹೋಗಿತ್ತು. ನಾನು ಭಕ್ತರ ಮಾತನ್ನು ಒಪ್ಪಲಿಲ್ಲ. ಆದರೆ ಅವರು ಎರಡನೆಯ ಬಾರಿ ಪ್ರಾರ್ಥನೆ ಮಾಡಿದರು. ಬಂಧನ ಮುಕ್ತ ಮಾಡುವ ದೇವರೆ! ಭೂಮಿಯ ಮೇಲೆ ಬಂದಿರುವರು. ಅವರೇನಾದರೂ ದಯೆ ಮಾಡಿದರೆ, ಈ ಮಗು ಗುಣವಾಗಬಲ್ಲದು. ಆ ಭಕ್ತನು ಇಷ್ಟೊಂದು ವಿಶ್ವಾಸದಿಂದ ಕೂಡಿದ ಮಾತುಗಳನ್ನು ಹೇಳಿದಾಗ, ನನ್ನ ತಾಯಿಗೆ ನಾನು ಅನುಮತಿ ನೀಡಿದೆ. ನನ್ನ ತಾಯಿಯು ಮಗುವನ್ನು ಕರೆದುಕೊಂಡು ಹೋಗಿ ಸಂತ ರಾಮ್‌ಪಾಲ್ ಮಹಾರಾಜರ ಚರಣಗಳಲ್ಲಿಟ್ಟರು ಮತ್ತು ಅಳುತ್ತಾ ಪ್ರಾರ್ಥಿಸಿದರು. ಮಹಾರಾಜರೆ, ಈ ಮಗು ಸತ್ತು ಹೋಗಲಿದೆ. ಈಗ ನೀವೇ ಇದನ್ನು ಸರಿಪಡಿಸಲು ಸಾಧ್ಯ. ಆಗ ಬಂಧನ ಮುಕ್ತಗೊಳಿಸುವ ಸದ್ಗುರು ರಾಮ್‌ಪಾಲ್ ಮಹಾರಾಜರು ಹೇಳಿದರು. "ಕಬೀರ್ ಪರಮೇಶ್ವರರ ಪಾದಧೂಳಿನಿಂದ ಈ ಮಗು ಸರಿಯಾಗುವುದು". ಮರುದಿನ ಸಾಯಲಿದ್ದ ಮಗು ಸರಿಯಾಯಿತು. ಹೇಳಿ"ಮುಕ್ತದಾತ ಸದ್ಗುರು ರಾಮ್‌ಪಾಲ್ ಮಹಾರಾಜರಿಗೆ ಜಯವಾಗಲಿ."

ಹಾಳಾಗಿ ಹೋಗಿದ್ದ ನಮ್ಮ ಮನೆ, ಮುಕ್ತಿದಾತ ಸದ್ಗುರು ರಾಮ್‌ಪಾಲ್ ಮಹಾರಾಜರ ಕೃಪೆಯಿಂದ ಎರಡನೆಯ ಬಾರಿ ಉಳಿದುಕೊಂಡಿತು. ಇಷ್ಟೆಲ್ಲಾ ಚಮತ್ಕಾರಗಳನ್ನು ನೋಡಿದಾಗಲೂ ಸಹ ನನ್ನ ಪಾಪ ಕರ್ಮಗಳ ಕಾರಣದಿಂದ ನಾನು, ನಮೋಪದೇಶವನ್ನು ಪಡೆಯಲಿಲ್ಲ. ಮತ್ತು ಮೊದಲಿನ ಪೂಜೆಗಳು ಭೂತಾರಾಧನೆಯನ್ನು ಮಾಡುತ್ತಲೇ ಇದ್ದೆ. ನಮ್ಮ ಮನೆಯಲ್ಲಿ ಮುಕ್ತಿದಾತ ಗರೀಬ್‌ದಾಸ್ ಮಹಾರಾಜರ ವಚನಗಳ ಅಖಂಡ ಪಾಠವನ್ನು ಸಂತ ರಾಮ್‌ಪಾಲ್ ಮಹಾರಾಜರು ಮಾಡುತ್ತಿದ್ದರು. ಮತ್ತು ನಾನು ಹೊರಗಡೆ ಹೋಗಿ, ಸಾರಾಯಿ ಕುಡಿಯುತ್ತಿದ್ದೆ, ಪುನಃ ಒಂದು ವರ್ಷದ ನಂತರ, ಒಂದು ದಿನ ನಮ್ಮ ಮನೆಯಲ್ಲಿ (ಅಖಂಡ ಪಾಠ) ವಾಚನವಾಗುತ್ತಿತ್ತು, ಆಗ ಸಂಜೆಗೆ ಮುಕ್ತಿದಾತ ರಾಮ್‌ಪಾಲ್ ಮಹಾರಾಜರು ಸತ್ಸಂಗ ಮಾಡಿದರು ಆಗ ನಾನು ಪ್ರವಚನವನ್ನು ಕೇಳದೆ ಮತ್ತು ನಾಮೋಪದೇಶವನ್ನೂ ಪಡೆದೆ. ನಂತರ ನಮ್ಮ ಮನೆಯಲ್ಲಿ ದುಃಖವೆಂಬ ಹೆಸರಿನ ವಸ್ತುವೇ ಇಲ್ಲವಾಗಿದೆ. ನಮ್ಮ ತಾಯಿಯವರು ಯಾರದೋ ಮಾತು ಕೇಳಿ, ನಾಮವನ್ನು (ನಿಯಮ) ಖಂಡನೆಮಾಡಿದರು. ಕೆಲ ಸಮಯದ ನಂತರ 2000ನೇ ಇಸವಿಯಲ್ಲಿ ಇದ್ದಕ್ಕಿದ್ದಂತೆ ನಮ್ಮ ತಾಯಿಯವರಿಗೆ ಕಾಲಿನಲ್ಲಿ ಉರಿಯಾಗತೊಡಗಿತು. ಡಾಕ್ಟರ್‌ಗಳಿಗೆ ತೋರಿಸಿದೆವು. ಅವರು ತಿಳಿಸಿದರು. "ಇವರಿಗೆ ಬ್ಲಡ್ ಕ್ಯಾನ್ಸರ್ ಆಗಿದೆ ಇವರು 10–15 ದಿನಗಳಲ್ಲಿ ಸಾಯುವರು ಎಂದು". ಕ.ಉ.ಖ ಚಂಡಿಗಢಕ್ಕೆ ಕರೆದುಕೊಂಡು ಹೋದರೆ, ಅಲ್ಲಿ ಒಂದೂವರೆ ಲಕ್ಷ ರೂಪಾಯಿಗಳು ಖರ್ಚಾಗಬಹುದು. ಹೆಚ್ಚೆಂದರೆ 1 ವರ್ಷ ಜೀವಿತವಿರಬಹುದು. ಆದರೆ ನೋವು ಕಡಿಮೆಯಾಗದು. ಬಂಧನ ಮುಕ್ತಗೊಳಿಸುವ ರಾಮ್‌ಪಾಲ್ ಮಹಾರಾಜರು ತಿಳಿಸಿದರು. ನಿಮ್ಮ ತಾಯಿಯವರು ನಿಯಮವನ್ನು ಖಂಡನೆಮಾಡಿದ್ದಾರೆ. ಹೇಗೆ ವಿದ್ಯುತ್ ಬಿಲ್ ಪಾವತಿ ಮಾಡದಿದ್ದರೆ ಕನೆಕ್ಷನ್ ಕಟ್ ಆಗುತ್ತದೋ, ವಿದ್ಯುತ್ತಿನಿಂದ ದೊರೆವ ಲಾಭಗಳು ಕಂಡುಕೊಳ್ಳಬೇಕಾಗುತ್ತದೆ. ನನ್ನ ತಾಯಿಯವರು ತಮ್ಮ ತಪ್ಪಿಗೆ ಕ್ಷಮೆ ಯಾಚಿಸಿದರು. ಮಹಾರಾಜ ರವರು ಎರಡನೆಯ ಬಾರಿ ನಾಮೋಪದೇಶವನ್ನು ನೀಡಿದರು ಹಾಗೂ ತಲೆಯಮೇಲೆ ಕೈ ಇಟ್ಟರು. ತಲೆಯ ಮೇಲೆ ಕೈ ಇಡುತ್ತಿದ್ದಂತೆಯೇ, ಕಾಲಿನ ಉರಿ ಮತ್ತು ನೋವು ನಿಂತು ಹೋಯಿತು. ಸುಮಾರು 2 ವರ್ಷಗಳ ನಂತರ ದವಡೆಯ ಹಲ್ಲು ಬೀಳುವ ಕಾರಣದಿಂದ ದವಡೆಯ ಹಲ್ಲಿನಿಂದ ರಕ್ತ ಬರತೊಡಗಿತು. ಡಾಕ್ಟರ್ ಔಷಧಿ ಕೊಟ್ಟರು ಮತ್ತು ಹೊಲಿಗೆಯನ್ನು ಹಾಕಿದರು. ಆದರೆ ರಕ್ತ ಬರುವುದಿಲ್ಲ ಅಲ್ಲಿ ನಂತರ ಡಾಕ್ಟರ್, ಇವರ ಖಾಯಿಲೆಯನ್ನು ಪರೀಕ್ಷಿಸಿದರು ಮತ್ತು ತಿಳಿಸಿದರು. "ಇವರಿಗೆ ಬ್ಲಡ್ ಕ್ಯಾನ್ಸರ್ ಆಗಿದೆ ಅದೀಗ ಒಡೆದಿದೆ. ಈಗದು ಸರಿಯಾಗಲು ಸಾಧ್ಯವಿಲ್ಲ. ಇವರನ್ನು ಮನೆಗೆ ಕರೆದುಕೊಂಡು ಹೋಗಿ ಇವರು ರಕ್ತ ಬರುತ್ತಿರುವ ಕಾರಣ 2 ದಿನಗಳಲ್ಲಿ ಸಾಯುವರು. ನಂತರ ಮರುದಿನ ಇವರ ಮಲ ಮತ್ತು ಮೂತ್ರಗಳಲ್ಲೂ ರಕ್ತ

ಬರಲು ಶುರುವಾಯಿತು. ಆಗ ನಾನು ಸದ್ಗುರು ರಾಮ್‌ಪಾಲ್ ಮಹಾರಾಜರಿಗೆ ಫೋನಿನಲ್ಲಿ ವಿಷಯ ತಿಳಿಸಿದೆ– "ಡಾಕ್ಟರ್ ಹೇಳಿದ್ದಾರೆ, ಇವರು 2 ದಿನಗಳಲ್ಲಿ ಸಾಯುವರು". ಮರುದಿನ ರಾತ್ರಿಯೇ 2 ಗಂಟೆಗೆ ಯಮಧೂತರು ಅವರನ್ನು ಕರೆದೊಯ್ಯಲು ಬಂದರು. ನನ್ನ ತಾಯಿ ಹೇಳಿದರು ನಮ್ಮ ತಂದೆ (ಅವರು 10 ವರ್ಷಗಳಿಗೆ ಮೊದಲು ಮರಣಿಸಿದ್ದರು) ಯವರು ನನ್ನನ್ನು ಕರೆದೊಯ್ಯಲು ಬಂದಿರುವರು. ಇಷ್ಟನ್ನು ಹೇಳುತ್ತಾ ಹೇಳುತ್ತಾ, ಆ ಯಮಧೂತರು ನನ್ನ ತಾಯಿಯ ಒಳಗೆ ಪ್ರವೇಶ ಮಾಡಿದರು ಮತ್ತು ಹೇಳತೊಡಗಿದರು. ನಾನು ಇವರನ್ನು ಕರೆದುಕೊಂಡು ಹೋಗುವೆ ಇವರ ಸಮಯವು ಪೂರ್ಣವಾಗಿದೆ. ನನಗೆ ಚಹ ಕುಡಿಸಿರಿ. ಆಗ ನಾವು ಅವರಿಗೆ ಚಹ ಕುಡಿಯಲು ಇಟ್ಟಿದ್ದೆವು. ಇಷ್ಟರಲ್ಲಿ ಆ ಯಮಧೂತ ಹೇಳತೊಡಗಿದ. ನನಗೆ ಗೊತ್ತಿಲ್ಲ. ನಿಮ್ಮ ಮನೆಯಲ್ಲಿ ಎಷ್ಟು ದೊಡ್ಡ ಶಕ್ತಿ ಇದೆ. ಅದು ನನಗೆ ಹೊಡೆಯುತ್ತಿದೆ. ನಾನು ಇನ್ನು ಇಲ್ಲಿ ಉಳಿಯಲು ಸಾಧ್ಯವಿಲ್ಲ. ನನಗೆ ಬೇಗನೆ ಚಹ ಕುಡಿಸಿರಿ. ನಾನು ಹೋಗುತ್ತಿದ್ದೇನೆ ಮತ್ತು ಬಿಸಿಯಾದ ಚಹ ಕುಡಿಯಿತು. ಹೋಗುತ್ತಾ ಹೇಳಿತು. ನಿಮ್ಮ ಮನೆಯಲ್ಲಿ ಪೂರ್ಣ ಪರಮಾತ್ಮರು ನಿಂತಿದ್ದಾರೆ. ನಾನು ಇವರನ್ನು ಕರೆದುಕೊಂಡು ಹೋಗಲು ಸಾಧ್ಯವಿಲ್ಲ. ಎಂದು ಹೇಳುತ್ತಲೇ ಹೊರಟು ಹೋಯಿತು. ಒಂದು ನಿಮಿಷದ ನಂತರ ರಕ್ತ ಬರುವುದು ನಿಂತಿತು. ನಾಲಿಗೆ ಮತ್ತು ಹಲ್ಲುಗಳು ಕಪ್ಪಾಗಿದ್ದವು. ಅವು ಶುಭ್ರವಾದವು. ಮುಕ್ತಿದಾತ ಸದ್ಗುರು ರಾಮ್‌ಪಾಲ್ ಮಹಾರಾಜರ ಕೃಪೆಯಿಂದ ಅವರು ಪೂರ್ಣ ರೀತಿಯಲ್ಲಿ ಮೊದಲಿಗಿಂತಲೂ ಆರೋಗ್ಯವಾದರು. ಪರಮಾತ್ಮ ಕಬೀರ್ ಪರಮೇಶ್ವರರು ನನ್ನ ತಾಯಿಯವರ ಆಯುಷ್ಸನ್ನು 5 ವರ್ಷಗಳ ಕಾಲ ಹೆಚ್ಚಿಸಿದರು. ಅವರು 24–7–2005 ರಲ್ಲಿ ಸತ್ಯ ಭಕ್ತಿ ಮಾಡಿ, ಸತ್ಯಲೋಕಕ್ಕೆ ಹೋದರು.. "ಹೇಳಿ ಮುಕ್ತಿದಾತ ಸದ್ಗುರು ರಾಮಪಾಲ್ ಮಹಾರಾಜ್ ಕೀ ಜೈ". ॥ಸತ್ ಸಾಹೇಬ್॥

## "ಮೂತ್ರ ಪಿಂಡಗಳನ್ನು ಸರಿ ಮಾಡಿದ್ದು ಮತ್ತು ಪಿಶಾಚಿಯನ್ನು ಮನುಷ್ಯನನ್ನಾಗಿ ಮಾಡಿದ್ದು."

ನಾನು, ಶ್ರೀ ಪ್ರಭುರಾಮರ ಪುತ್ರ ಭಕ್ತ ಜಗದೀಶನಾಗಿರುವೆ. ಪಂಜಾಬಖೋಡ ಹಳ್ಳಿಯ, ದೆಹಲಿ–81 D.T.C (ದೆಹಲಿ ಟ್ರಾನ್ಸ್‌ಪೋರ್ಟ್ ಕಾರ್ಪೋರೇಶನ್)ಯಲ್ಲಿ ಮೆಕಾನಿಕ್ ಆಗಿರುವೆ. ಸಾರಾಯಿ ನನ್ನನ್ನು ರಾಕ್ಷಸ ಪ್ರವೃತ್ತಿಯ ಮನುಷ್ಯನನ್ನಾಗಿ ಮಾಡಿತ್ತು. ಸಾರಾಯಿ ಕುಡಿಯುವುದು, ಕೋಳಿ ತಿನ್ನುವುದು, ಸಿಗರೇಟು, ಹುಕ್ಕಾ ಸೇದುವುದು ಅಭ್ಯಾಸವಾಗಿತ್ತು.

ನಾನು ನೌಕರಿಯಿಂದ ಸಂಜೆಗೆ ಸುಮಾರು 7 ಅಥವಾ 8 ಗಂಟೆಗೆ ಬರುತ್ತಿದ್ದೆ. ಅನೇಕ ವೇಳೆ ಮನೆಗೆ ಬರುವಾಗ ಸಾರಾಯಿ ಹೆಚ್ಚಾಗಿ ಕುಡಿದು, 9 ಅಥವಾ 10 ಗಂಟೆಯೂ ಆಗಿರುತ್ತಿತ್ತು. ಸಾರಾಯಿಯ ಕಾರಣ ಹುಚ್ಚನಾಗಿ ಒಮ್ಮೆ ಈ ಕಡೆ, ಒಮ್ಮೆ ಆ ಕಡೆ ತೂರಾಡುತ್ತಾ ಹೆಜ್ಜೆ ಹಾಕಿ ಮನೆಯೊಳಗೆ ನುಗುತ್ತಿದ್ದೆ. ಬಂದವನೇ ಹೆಂಡತಿ ಹಾಗೂ ಮಕ್ಕಳನ್ನು ಹೊಡೆಯಲು ಶುರುಮಾಡುವುದು. ಪ್ರತಿ ದಿನ ಮನೆಯಲ್ಲಿ ಗಲಾಟೆಯಾಗುತ್ತಿತ್ತು. ಯಾವ ಮಕ್ಕಳನ್ನು ಪ್ರೀತಿಯಿಂದ ತಬ್ಬಿಕೊಳ್ಳಬೇಕಿತ್ತೋ, ಆ ಮುಗ್ಧವಾದ ಮಕ್ಕಳು ನನ್ನನ್ನು ನೋಡಿ, ಚಾಪೆಯ ಕೆಳಗೆ ನುಸುಳಿಕೊಳ್ಳುತ್ತಿದ್ದರು. ಮಕ್ಕಳು, ಅಪ್ಪಾ ಬರುವರು, ತಿನ್ನುವುದಕ್ಕೆ ತರುವರು ಎಂದು ತಂದೆಯ ದಾರಿಯನ್ನೇ ಕಾಯುತ್ತಾರೆ. ಆದರೆ ನಾನು ತಿನ್ನುವ ವಸ್ತುವಿಗೆ ಬದಲಾಗಿ, ಸಾರಾಯಿಯಲ್ಲಿ ಹುಚ್ಚನಾಗಿ, ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ಅವರನ್ನು ಹೊಡೆಯ ತೊಡಗುತ್ತಿದ್ದೆ.

ಮತ್ತೊಂದು ಕಡೆ, ನನ್ನ ಧರ್ಮ ಪತ್ನಿ ಸುಮಿತ್ರಾದೇವಿಯೂ, ತನ್ನ ದುಃಖದ ಜೀವನದ ಜೊತೆಗೆ, ಅಪಾಯಕರ ರೋಗದಿಂದ, ನಿಟ್ಟುಸಿರು ಬಿಡುತ್ತಾ ಇದ್ದಳು. ಅವಳ ಎರಡೂ ಕಿಡ್ನಿಗಳು

ಕೆಟ್ಟು ಹೋಗಿದ್ದವು. ಔಷಧಿ ತೆಗೆದುಕೊಳ್ಳುತ್ತಿರುವಂತೆ ಡಾಕ್ಟರ್ ಹೇಳಿದ್ದರು. ಆದರೆ 6 ತಿಂಗಳಿಗಿಂತ ಹೆಚ್ಚಾಗಿ ಇವರು ಬದುಕಿರಲು ಸಾಧ್ಯವಿಲ್ಲ ಎಂದಿದ್ದರು. ಆಲ್ ಇಂಡಿಯಾ ಮೆಡಿಕಲ್ ಮತ್ತು ಡಾ॥ ರಾಮಮೋಹರ ಲೋಹಿಯಾ ಆಸ್ಪತ್ರೆ ದೆಹಲಿಯಿಂದಲೂ ರಿಪೋರ್ಟ್ ಸಿಕ್ಕಿತ್ತು ಕಿಡ್ನಿಗಳು ಕೆಟ್ಟುಹೋಗಿವೆ ಮತ್ತು ಇವಳು 6 ತಿಂಗಳುಗಿಂತ ಹೆಚ್ಚು ಬದುಕಿರುವುದಿಲ್ಲ ಮತ್ತು ಔಷಧಿಯನ್ನು ಅಂತಿಮ ಸಮಯದವರೆಗೆ ತೆಗೆದುಕೊಳ್ಳುತ್ತಿರಬೇಕಾಗುವುದು. ಯಾವ ತಂದೆ ಸಾರಾಯಿ ಕುಡಿಯುತ್ತಿದ್ದು, ತಾಯಿ ಮರಣ ಶಯ್ಯೆಯಲ್ಲಿರುವಳೋ, ಅವರ ಮುಗ್ಧ ಮಕ್ಕಳ ಪಾಡೇನಾಗಬಹುದು! ಯಾವುದೇ ಭಾರ ಎತ್ತುವ ಕೆಲಸವನ್ನು ಮಾಡಲು ಸಾಧ್ಯವಿಲ್ಲ. ಯಾವಾಗ ಆ ಮುಗ್ಧ ಮಕ್ಕಳಿಗೆ, ಅವರ ತಾಯಿ 6 ತಿಂಗಳುಗಳಿಗಿಂತ ಹೆಚ್ಚಾಗಿ ಬದುಕಲಾರದು ಎಂದು ಗೊತ್ತಾಯಿತು, ಅವರ ಕಣ್ಣುಗಳಿಂದ ನೀರು ಹರಿಯತೊಡಗಿತ್ತು. ಒಂದೋ ತಂದೆ ಕುಡುಕ ಮತ್ತು ಮತ್ತೊಂದೆಡೆ ನಮ್ಮ ತಾಯಿಯವರು ಪ್ರಾಣ ತೆಗೆವ ಖಾಯಿಲೆಯಿಂದ ಪೀಡಿತರು, ನಮ್ಮ ಪಾಡೇನಾಗುವುದು. ಮೂರು ಗಂಡು ಮಕ್ಕಳು, ಒಬ್ಬಳು ಹೆಣ್ಣು ಮಗಳು. ತಮ್ಮ ತಾಯಿಯ ಹತ್ತಿರ ಬಿದ್ದು ಅಳ ತೊಡಗಿದರು ಹಾಗೂ ಹೇಳಿದರು– "ಹೇ ಭಗವಂತ! ನಮ್ಮೆಲ್ಲರನ್ನೂ ಸಹ ನಮ್ಮ ತಾಯಿಯವರ ಸಂಗಡ ನಿನ್ನ ಹತ್ತಿರಕ್ಕೆ ಕರೆಸಿಕೊ. ಇಲ್ಲಿ ಯಾರ ಆಶ್ರಯದಲ್ಲಿ ಬದುಕೋಣ.

ಪರಮಾತ್ಮನು ಆ ಮಕ್ಕಳ ಕರೆಯನ್ನು ಕೇಳಿದ ಮತ್ತು ನಮ್ಮ ಶುಭ ಕರ್ಮಗಳೂ ಉದಯವಾದವು. ನಮ್ಮ ಪಕ್ಕದಲ್ಲಿನ ಭಕ್ತಿಮತಿ ನಿಹಾಲೀ ದೇವಿಯು ತನ್ನ ಗುರುದೇವ ಸಂತ ರಾಮ್‌ಪಾಲ್ ಮಹಾರಾಜರ ಆಜ್ಞಾನುಸಾರ 30, 31, 1 ಜನವರಿ 1997ರಂದು ಸದ್ಗುರು ಗರೀಬ್‌ದಾಸ್ ಮಹಾರಾಜರ ಅಮೃತಮಯ ವಾಣಿಯ, ಮೂರು ದಿನಗಳ ಅಖಂಡ ಪಾಠವನ್ನು ತಮ್ಮ ಮನೆಯಲ್ಲಿ ಮಾಡಿಸಿದರು. ಅದರಲ್ಲಿ ಸಂತ ರಾಮ್‌ಪಾಲ್ ಮಹಾರಾಜರು 31 ಡಿಸೆಂಬರ್ 1996ರ ರಾತ್ರಿ 9ರಿಂದ 11 ಗಂಟೆಯವರೆಗೆ ಪ್ರವಚನ ಮಾಡಿದರು. ನನ್ನ ಧರ್ಮಪತ್ನಿ, ಸುಮಿತ್ರಾ ದೇವಿಯು ಪಕ್ಕದ ಮನೆಗೆ ಪ್ರವಚನ ಕೇಳಲು ಹೋದಳು. ಸ್ವಲ್ಪ ಹೊತ್ತಿನ ನಂತರ ನಾನು (ಜಗದೀಶ) ಸಹ. ನನ್ನ ನೌಕರಿಯಿಂದ ಮನೆಗೆ ಬಂದೆ. ಮನೆಗೆ ಬಂದ ನಂತರ, ನನ್ನ ತಾಯಿ ನಿಹಾಲೀ ದೇವಿಯ ಮನೆಗೆ, ಪ್ರವಚನ ಕೇಳಲು ಹೋಗಿದ್ದಾರೆಂದು, ಮಕ್ಕಳಿಂದ ತಿಳಿಯಿತು. ಇದನ್ನು ಕೇಳಿ ನನಗೆ ಬಹಳ ಕೋಪ ಬಂತು. ಆಗ ಹೇಳಿದೆ–ಎಲ್ಲಿ ಅವಳು ಪಾಖಂಡಿಗಳ ಹತ್ತಿರ ಹೋಗಿರುವಳಾ? ನಾನಿಗಲೆ ಅವಳನ್ನು ಹೊಡೆಯುತ್ತಾ ಮೆನಗೆ ಕರೆತರುವೆ. ಹೀಗೆ ಯೋಚಿಸಿ ನಾನು ಭಕ್ತಿಮತಿ ನಿಹಾಲೀ ದೇವಿಯ ಮನೆಗೆ ಹೋದೆ. ನಾನು ಸಾರಾಯಿ ಕುಡಿದಿದ್ದೆ. ನಾನು ನಿಹಾಲೀ ದೇವಿಯವರ ಮನೆಗೆ ಹೋದಾಗ, ಸಂತ ರಾಮ್‌ಪಾಲ್ ಮಹಾರಾಜರು ಸತ್ಸಂಗ ಮಾಡುತ್ತಿದ್ದರು. ಬಹಳ ಸಂಖ್ಯೆಯಲ್ಲಿ ಭಕ್ತಜನರು ಪ್ರವಚನ ಕೇಳುತ್ತಿದ್ದರು. ಅವರನ್ನೆಲ್ಲಾ ನೋಡಿ, ನಾನು ಏನನ್ನೂ ಹೇಳಲಿಲ್ಲ ಸುಮ್ಮನೆ ಎಲ್ಲರಿಗಿಂತ ಹಿಂದೆ ಕುಳಿತೆ. ನಾನು ಪ್ರವಚನ ಕೇಳಿದೆ. ಪ್ರವಚನದಲ್ಲಿ ಮಹಾರಾಜ ರವರು ತಿಳಿಸಿದರು.

ಮದೀರಾ(ಸಾರಾಯಿ) ಪೀವೈ ಕಡದಾ ಪಾನೀ, ಸತ್ತರ ಜನ್ಮ ಶ್ವಾನ ಕೆ ಜಾನೀ ।
ಗರೀಬ್, ಸೋ ನಾರೀ ಜಾರೀ ಕರೈ, ಸುರಾಪಾನ ಸೊ ಬಾರ ।
ಏಕ ಚಿಲಮ್ ಹುಕ್ಕಾ ಭರೆ, ಡೂಬೈ ಕಾಲೀ ಧಾರ ॥
ಕಬೀರ್, ಮಾನುಷ ಜನ್ಮ ಪಾಯ ಕರ, ನಹೀ ಭಜೈ ಹರಿನಾಮ್ ।
ಜೈಸೆ ಕುವಾ ಜಲ ಬಿನಾ, ಖುದವಾಯಾ ಕಿಸ್ ಕಾಮ ॥

ಮಾಹಾರಾಜರು ಪ್ರವಚನದಲ್ಲಿ ತಿಳಿಸಿದರು– ಯಾವ ಮಕ್ಕಳನ್ನು ತಂದೆ ಎದೆಗಪ್ಪಿಕೊಳ್ಳಬೇಕೋ, ಆ ಮಕ್ಕಳೆ ಕುಡುಕ ವ್ಯಕ್ತಿಯನ್ನು ಕಂಡು ಚಾಪೆಯ ಕೆಳಗೆ ಅಡಗಿಕೊಳ್ಳುತ್ತಾರೆ. ಕುಡಕ ವ್ಯಕ್ತಿಯು

ತಾನು ದುಃಖಿತನಾಗಿದ್ದು, ಧನಹಾನಿ ಮಾಡಿಕೊಂಡು, ಸಮಾಜದಲ್ಲಿ ಮರ್ಯಾದೆ ಇಲ್ಲದೆ. ಕುಟುಂಬ ಹಾಗೂ ನೆಂಟರಿಷ್ಟರನ್ನು, ಚಿಂತೆಗೊಳಪಡಿಸಿ, ಶಾಪವನ್ನು ಪಡೆಯುತ್ತಾನೆ. ಕುಡುಕನ ಪತ್ನಿ ಮತ್ತು ಮಕ್ಕಳು ಅಮಲಿನ ಶಿಕಾರಿಗಳಾಗುತ್ತಾರೆ. ಆದರೆ ಪತ್ನಿಯ ತಾಯಿ–ತಂದೆ, ಸೋದರ–ಸೋದರಿ ಮೊದಲಾದವರು ಹಗಲು–ರಾತ್ರಿ ಚಿಂತಿಸುತ್ತಿರುತ್ತಾರೆ. ಈ ಎಲ್ಲಾ ಪಾಪದ ಭಾರವು ಆ ಮೂರ್ಖ ಕುಡುಕನ ತಲೆಯ ಮೇಲೆ ಬರುತ್ತದೆ. ಪ್ರಭುವು ಮನುಷ್ಯ ಜನ್ಮವನ್ನು ಭಕ್ತಿ ಮಾಡಿ, ಆತ್ಮ ಕಲ್ಯಾಣ ಮಾಡಿಕೊಳ್ಳಲೆಂದು ಕೊಟ್ಟಿರುತ್ತಾರೆ. ಇದನ್ನು ಸಾರಾಯಿ ಮೊದಲಾದುವುಗಳಲ್ಲಿ ನಷ್ಟ ಮಾಡಿ ಕೊಳ್ಳಬಾರದು. ಹೇಗೆ ಮಕ್ಕಳು ಶಾಲೆಯಲ್ಲಿ ಶಿಕ್ಷಣವನ್ನು ಗ್ರಹಿಸದೆ ಇದ್ದರೆ, ಅಲೆಮಾರಿಯಾಗಿ ರಸ್ತೆಯಲ್ಲಿ ಸುತ್ತುತ್ತಾರೆ. ಹಾಗು ಅವರು ಶಿಕ್ಷಣದಿಂದ ವಂಚಿತರಾಗುತ್ತಾರೆ. ಜೀವನ ಪೂರ್ತಿ ಕೂಲಿ ಮಾಡಿ ಜೀವನ ನಿರ್ವಹಿಸುತ್ತಾರೆ ನಂತರ ಅವರಿಗೆ ನೆನಪಿಗೆ ಬರುತ್ತದೆ. ನಾನು ಅಲೆಮಾರಿಯಾಗಿರದೆ, ಇದ್ದಿದರೆ, ಈಗ ಬೇರೆ ಸಹಪಾಠಿಗಳಂತೆಯೇ ಅಧಿಕಾರಿಯಾಗಿರುತ್ತಿದ್ದೆ. ಆದರೆ ಈಗ ಏನು ಮಾಡಿಕೊಳ್ಳಲು ಸಾಧ್ಯ. ಇದನ್ನು ಆ ಸಮಯದಲ್ಲೇ ಯೋಚಿಸಬೇಕಿತ್ತು.

ಕಬೀರ್ ಪರಮೇಶ್ವರರು ಹೇಳುತ್ತಾರೆ :–

ಅಚ್ಛೆ ದಿನ್ ಪೀಛೆ ಗಯೆ, ಗುರು ಸೆ ಕಿಯಾ ನ ಹೇತ್ ।
ಅಬ್ ಪಛತಾವಾ ಕ್ಯಾ ಕರೇ, ಜಬ್ ಚಿಡಿಯಾ ಚುಗ್ ಗು ಖೇತ್ ॥

ಇದೇ ರೀತಿ ಮನುಷ್ಯ ಜನ್ಮದಲ್ಲಿ, ಯಾರು ಪ್ರಭು ಭಕ್ತಿಯನ್ನು ಮಾಡುವುದಿಲ್ಲವೋ, ಪಶು–ಪಕ್ಷಿಗಳ ಯೋನಿಗಳನ್ನು ಪಡೆಯುತ್ತಾನೆ. ಯಾವ ವ್ಯಕ್ತಿ ಸಾರಾಯಿ ಕುಡಿಯುತ್ತಾನೋ, ಅವನು ಸಾರಾಯಿಯ ಅಮಲಿನಲ್ಲಿ ಊಟದ ತಟ್ಟೆಯನ್ನು ಒದೆಯುತ್ತಾನೆ. ಭಕ್ತಿ ಮಾಡದಿರುವುದರಿಂದ ಬೇರೆ ಬೇರೆ ಪ್ರಾಣಿಗಳ ಯೋನಿಗಳಲ್ಲಿ ಕಷ್ಟ ಪಡುತ್ತಾನೆ. ನಾಯಿಯ ಜನ್ಮವನ್ನು ಧಾರಣೆ ಮಾಡುತ್ತಾನೆ. ನಾಯಿಯು ಇಡೀ ರಾತ್ರಿ, ಚಳಿಯಲ್ಲಿಯೂ ಬೀದಿಯಲ್ಲೇ ಇರುತ್ತದೆ. ಮೇಲಿನಿಂದ ಮಳೆ, ಚಳಿಯ ರಾತ್ರಿಗಳಲ್ಲಿ ಮಹಾಕಷ್ಟವನ್ನು ಅನುಭವಿಸುತ್ತದೆ. ಬೆಳಿಗ್ಗೆ ಹಸಿವು ಕಾಡುತ್ತದೆ. ಯಾರದ್ದಾದರೂ ಅಡುಗೆ ಮನೆಯೊಳಗೆ ನುಗ್ಗುವುದಕ್ಕೆ ಹೋಗುತ್ತದೆ. ಮನೆಯವರು ದೊಣ್ಣೆ ಅಥವಾ ಕಲ್ಲಿನಿಂದ ಹೊಡೆಯುತ್ತಾರೆ. ನಾಯಿ ಬಹಳ ಹೊತ್ತಿನವರೆಗೆ ಕಿರುಚುತ್ತಲೇ ಇರುತ್ತದೆ. ನಂತರ ಬೇರೆ ಮನೆಗೆ ನುಗ್ಗುತ್ತದೆ. ಅಲ್ಲಿ ಯಾರಿಗೆ ಗೊತ್ತು ರೊಟ್ಟಿ ಸಿಗುವುದೋ ಅಥವಾ ಸೋಟಿ (ದೊಣ್ಣೆ)ಸಿಗುವುದೋ, ಅಲ್ಲಿಯೂ ಅದರ ನಸೀಬಿನಲ್ಲಿ ದೊಣ್ಣೆ ಏಟು ಸಿಕ್ಕಿದೆ, ಆ ಕುಡುಕನು ಈಗ ನಾಯಿಯಾಗಿದ್ದಾನೆ. ಹಳ್ಳಿಯಿಂದ ಹೊರಗೆ ಹೋಗುತ್ತದೆ. ಹಸಿವಿನಿಂದ ದುಃಖಿತನಾದ ಮನುಷ್ಯರ ಮಲ ತಿನ್ನುತ್ತದೆ. ಒಂದು ವೇಳೆ ಆ ಮೂರ್ಖ ಪ್ರಾಣಿ ಯಾವಾಗ ಮನುಷ್ಯ ಶರೀರದಲ್ಲಿತ್ತೋ, ಸತ್ಸಂಗಕ್ಕೆ ಬಂದಿದ್ದರೆ, ಒಳ್ಳೆಯ ವಿಚಾರಗಳನ್ನು ಕೇಳುತ್ತಿತ್ತು. ಕೆಟ್ಟದ್ದನ್ನು ಬಿಟ್ಟು, ತನ್ನ ಕಲ್ಯಾಣವನ್ನು ಮಾಡಿಕೊಳ್ಳುತ್ತಿತ್ತು. ಹಾಗೂ ಮಕ್ಕಳಿಗೆ ಉತ್ತಮ ಶಿಕ್ಷಣ ಮತ್ತು ಪ್ರಭುವಿನ ದೀಕ್ಷೆ ಕೊಡಿಸುತ್ತಿದ್ದ. ಸದಾ ಸುಖವಾಗಿರುತ್ತಿದ್ದ. ಸಾರಾಯಿಯ ಅಮಲು ಕೆಲವು ಸಮಯ ಇರುತ್ತದೆ. ಪರಮಾತ್ಮನ ನಾಮವನ್ನು ಭಜಿಸುವುದರಿಂದ ಸುಖದ ಆನಂದವು ಸದಾ ಜೊತೆಯಲ್ಲಿರುತ್ತದೆ.

ಮೇಲಿನ ಪ್ರವಚನವನ್ನು ಪೂಜ್ಯನೀಯ ಸಂತ ರಾಮ್‌ಪಾಲ್ ಮಹಾರಾಜರಿಂದ ಕೇಳಿ ನನ್ನ ಸಾರಾಯಿ ಛು ಮಂತ್ರವಾಯಿತು. ಕಣ್ಣುಗಳಿಂದ ಕಣ್ಣೀರು ಹರಿಯಿತು. ಮನೆಗೆ ಬಂದೆ, ನಿದ್ರೆ ಬರಲಿಲ್ಲ. ಜನವರಿ **1997**ರ ಮಧ್ಯಾಹ್ನ **1.30** ಗಂಟೆಯಲ್ಲಿ ನನ್ನ ಪತ್ನಿಯನ್ನು ಜೊತೆಯಲ್ಲಿ ಕರೆದುಕೊಂಡು, ಸಂತ ರಾಮ್‌ಪಾಲ್ ಮಹಾರಾಜರ ಬಳಿ ಹೋದೆ. ಅವರಿಂದ ಆತ್ಮ ಕಲ್ಯಾಣಕ್ಕಾಗಿ ಉಪದೇಶವನ್ನು ಪಡೆದೆ. ಅದಾದ ನಂತರ ಈವರೆಗೆ **(2005)**ಸಾರಾಯಿ, ತಂಬಾಕು ಹಾಗೂ ಮಾಂಸವನ್ನು ಮುಟ್ಟಿಯೂ ಇಲ್ಲ. ನನ್ನ ಪತ್ನಿ ಸಹ ಸದ್ಗುರು ರಾಮ್‌ಪಾಲ್ ಮಹಾರಾಜ ರವರಿಂದ

ಉಪದೇಶ ಪಡೆದಳು. ಆ ದಿನದಿಂದ ಅವಳು ಆರೋಗ್ಯವಂತಳಾದಳು. ಡಾಕ್ಟರ್‌ಗಳ ಚಿಕಿತ್ಸೆ ಹಾಗೂ ರೋಗದ ಎಕ್ಸರೆ ಮೊದಲಾದ ರಿಪೋರ್ಟ್‌ಗಳು ಇಂದಿಗೂ ನಮ್ಮ ಮನೆಯಲ್ಲಿಟ್ಟಿದ್ದೇನೆ ಜನ ಜನರಿಗೆ ತೋರಿಸುತ್ತೇನೆ.

ನಾನು ಎಲ್ಲರನ್ನೂ ಪ್ರಾರ್ಥಿಸುತ್ತೇನೆ. "ನೀವೂ ಸಹ ಪ್ರಭುವಿನಲ್ಲಿ ಶರಣು ಬನ್ನಿರಿ, ಸಂತ ರೂಪದಲ್ಲಿ ಬಂದಿರುವ ಪರಮೇಶ್ವರನ ಸಂದೇಶ ವಾಹಕ ಸಂತ ರಾಮ್‌ಪಾಲ್‌ರನ್ನು ಗುರುತಿಸಿರಿ. ಉಚಿತವಾಗಿ ನಾಮೋಪದೇಶವನ್ನು ಪಡೆದು, ದಯಮಾಡಿ ತಮ್ಮ ಕಲ್ಯಾಣವನ್ನು ಮಾಡಿಕೊಳ್ಳಿರಿ. ॥ಸತ್ ಸಾಹೇಬ್॥

ಭಕ್ತ ಜಗದೀಶ್.

## "ಭೂತಗಳಿಂದ ಮತ್ತು ರೋಗಗಳಿಂದ ನೊಂದಂತಹ ಪರಿವಾರವನ್ನು ಸುಧಾರಿಸಿದ್ದು"

ಶ್ರೀ ಮಾಂಗೆರಾಮರ ಪುತ್ರ ಶ್ರೀ ರಾಮೇಹರ, ರಾಮೇಹರನ ಪತ್ನಿ ಭಕ್ತಿಮತಿ ಅಪಲೇಶ ದೇವಿ, ಹರಿಯಾಣ ರಾಜ್ಯದ ಭಿವಾನಿ ಜಿಲ್ಲೆಯ, ಚರಖೀ ದಾದರೀ ತಾಲ್ಲೂಕಿನ, ಮಿರಚಹಳ್ಳಿಯವರು.

ನಾನು ಅಪಲೇಶ ದೇವಿ, ನನ್ನ ಜೀವನದ ಒಂದು ದುಃಖದ ಘಳಿಗೆಯನ್ನು ತಮ್ಮಲ್ಲಿ ತಿಳಿಸುತ್ತಿದ್ದೇನೆ. ನಾನು ಮತ್ತು ನನ್ನ ಮಕ್ಕಳು ರಾಹುಲ್ ಮತ್ತು ಜ್ಯೋತಿ. ತಮ್ಮ ಕಳೆದ ದುಃಖದ ಸ್ಥಿತಿಯನ್ನು ನೆನೆದು ನಡುಗುತ್ತಾರೆ. ಅವುಗಳ ವರ್ಣನೆ ಮಾಡುವ ಸಮಯದಲ್ಲಿ ಹೃದಯವೇ ಬಾಯಿಗೆ ಬರುತ್ತದೆ.

**6–12–1995**ರ ರಾತ್ರಿ ದುರಾತ್ಮರು ನನ್ನ ಪತಿಯನ್ನು ಡ್ಯೂಟಿಯಲ್ಲಿರುವಾಗಲೇ, ಪ್ರಾಣಾಂತಕವಾಗಿ ಹೊಡೆದಿದ್ದರು. ಆದರೆ ಈ ಪೂರ್ಣ ಪರಮಾತ್ಮ (ಕಬೀರ್ ಪರಮೇಶ್ವರರು)ರು ನಮ್ಮನ್ನು ಗಮನಸಿದರು ಮತ್ತು ನನ್ನ ಪತಿಗೆ ಜೀವನ ದಾನ ಮಾಡಿದರು. ಈಗ ನಮಗೆ ಪರಿವಾರ ಸಹಿತವಾಗಿ, ಮುಕ್ತಿದಾತ ಗುರು ರಾಮ್‌ಪಾಲ್ ಮಹಾರಾಜರ ದಯೆಯಿಂದ ಪೂರ್ಣ ಪರಮಾತ್ಮರ ಚರಣಗಳಲ್ಲಿ ಸ್ಥಾನ ಸಿಕ್ಕಿದೆ. ನಮ್ಮ ಪರಿವಾರದಲ್ಲಿ ನನ್ನ ಪತಿಯು ಶುಭ್ರವಾದ ಬಟ್ಟೆ ಧರಿಸಿದ ಕೆಲ ಹೊತ್ತಿನ ನಂತರ ಅಂಡರ್ ವೇರ್‌ನ ಮೇಲಿನ ಭಾಗದಲ್ಲಿ ಅಲ್ಲಿ ನಾಡಿ ಅಥವಾ ನರವಿರುತ್ತದೆ. ಅಲ್ಲಿ ನಾಲ್ಕೂ ಕಡೆ ರಕ್ತದಿಂದ ಬಟ್ಟೆ ಬಣ್ಣವಾಗುತ್ತಿತ್ತು. ಹಾಗೂ ಮಕ್ಕಳಿಗೆ ಸಿಂಬಳದೊಂದಿಗೆ ರಕ್ತ ಬರುತ್ತಿತ್ತು. ನಾನೂ ಸಹ ಒಂದು ವರ್ಷದಿಂದ ಹೃದಯದ ಖಾಯಿಲೆಯಿಂದ ಬಹಳ ಚಿಂತೆಗೆ ಒಳಗಾಗಿದ್ದೆ. ಅದಕ್ಕಾಗಿ ಕೆಲವು ವರ್ಷಗಳಿಂದ ಔಷಧಿ ತೆಗೆದುಕೊಳ್ಳುತ್ತಿದ್ದೆ. ನನ್ನ ಪತಿಯು ದಿಲ್ಲಿಯ ಪೋಲೀಸ್ ನಲ್ಲಿ ಇದ್ದಾರೆ. ನನ್ನ ಶರೀರದಲ್ಲೆಲ್ಲಾ ಹುಣ್ಣೂ–ಕೀವು ಆಗುತ್ತಿತ್ತು. ಮನೆಯಲ್ಲಿನ ಚಿಂತೆಗಳ ಕಾರಣದಿಂದಾಗಿ, ನನ್ನ ಪತಿ ರಾಮೇಹರರಿಗೆ ಮಾನಸಿಕ ಅಸಮತೋಲನವೂ ಉಂಟಾಗಿತ್ತು. ನಾವು ಈ ಚಿಂತೆಗಳಿಂದಾಗಿ **1995** ರಿಂದ **2000** ದ ವರೆಗೆ ಒಂದು ಡಜನ್ ಗಿಂತ ಹೆಚ್ಚು ಲೋಭಿ ಹಾಗು ದುರಾಸೆಯ ಗುರುಗಳ ಬಾಗಿಲಿಗೆ ಹೋಗಿ ಕದ ತಟ್ಟಿದೆವು. ಭಾರತದೇಶದಲ್ಲಿನ ತೀರ್ಥ ಕ್ಷೇತ್ರಗಳಿಗೆ, ಯಮುನಾ, ಗಂಗಾ, ಹರಿದ್ವಾರ, ಜ್ವಾಲಾಜೀ, ಚಾಮುಂಡಿ ಚಿಂತಪೂರನಿ, ನಗರಕೋಟ, ಬಾಲಾಜೀ, ಮೆಹಂದೀಪುರ, ಗುಡಗಾಂವದ ತಾಯಿ ಹಾಗೂ ಗೋರಖ ದಿಣ್ಣೆ, ರಾಜಸ್ಥಾನದ ಪ್ರತಿಯೊಂದು ಕ್ಷೇತ್ರಗಳಿಗೂ ಮಕ್ಕಳ ಸಹಿತವಾಗಿ ಸಾಕಷ್ಟು ಬಾರಿ, ತಿರುಗಾಡುತ್ತಿದ್ದೆ. ಆದರೆ ನಮಗೆ ಯಾವುದೇ ಪ್ರಯೋಜನ ಸಿಗಲಿಲ್ಲ.

ಈ ರೀತಿಯಾಗಿ ನಮ್ಮ ಪರಿವಾರದ ಸ್ಥಿತಿಯು ಎಲ್ಲಿಯವರೆಗೆ ಬಂದಿತೆಂದರೆ ನಾವು ಹೋಳಿ

ಹಾಗೂ ದೀಪಾವಳಿಯನ್ನು ಸಹ ಯಾವುದೋ, ಮಸೀದಿಯಲ್ಲಿ ಕುಳಿತುಕೊಂಡು ಕಳೆಯತೊಡಗಿದೆವು.

ನಾವು ಬಹಳ ಅದೃಷ್ಟವಂತರು ನಮಗೆ ಸಂತ ರಾಮ್‌ಪಾಲ್ ಮಹಾರಾಜರ ಮೂಲಕ ಕಬೀರ್ ಪರಮೇಶ್ವರರಲ್ಲಿ ಶರಣಾಗುವ ಅವಕಾಶ ಸಿಕ್ಕಿತು. ಈಗ ಕಾಲನ ಧೂತರು, ನಮ್ಮ ಖಾಯಿಲೆಗಳು ಅದರ ಚಿಕಿತ್ಸೆಗಳು, ಆಲ್ ಇಂಡಿಯಾ ಹಾಸ್ಪಿಟಲ್‌ನಲ್ಲಿ ನಡೆಯುತ್ತಿದ್ದಂತವು, ಎಲ್ಲಾ ಎಲ್ಲಿಗೆ ಹೋಯಿತು? ಅವು ಸದ್ಗುರುದೇವರ ಚರಣಗಳ ಧೂಳಿನ ಮುಂದೆ ನಿಲ್ಲಲು ಅವಕಾಶವಾಗಲಿಲ್ಲ.

**25–2–2001** ರಲ್ಲಿ ಕಾಲನ ಪೂಜೆ ಮಾಡುವವ ಧೂರ್ತನು ಫೋನ್ ಮಾಡಿ ಕೇಳಿದ. ನಿಮ್ಮ ಹೆಸರು ಅಪಲೇಶ ಅಲ್ಲವೇ ನಾನು ಹೇಳಿದೆ ಹೌದು ನೀವು ತಮ್ಮ ಹೆಸರು ತಿಳಿಸಿರಿ. ಆಗ ಧೂರ್ತನು ಕೇಳಿದ ಈ ಬಲವಾನ ಯಾರು!

ನಿಮಗೂ ಇವನಿಗೂ ಏನು ಸಂಬಂಧ? ನಾನು ಕೇಳಿದೆ–ನೀವು ಯಾರು? ನಿಮ್ಮ ಹೆಸರೇನು? ಹಾಗೂ ನೀವು ಇದನ್ನೆಲ್ಲಾ ಏಕೆ ಕೇಳಬಯಸುವಿರಿ? ಆಗ ಆ ಧೂರ್ತನು ಹೇಳಿದನು ಮಗಳೆ,

ನೀನು ನನ್ನ ಹೆಸರನ್ನು ಕೇಳಬೇಡ. ನಾನು ತಿಳಿಸಲು ಇಚ್ಛಿಸುವುದಿಲ್ಲ ಹಾಗೂ ಇವನೊಂದಿಗೆ ಒಬ್ಬ ವ್ಯಕ್ತಿ ಬಂದರು ಮತ್ತು ಆ ಇಬ್ಬರೂ ನನಗೆ **3700** ರೂ.ಗಳನ್ನು ಕೊಟ್ಟರು. ಕಾರಣ ನಿಮ್ಮ ಮೇಲೆ ಮಾಟ ಮಾಡಿಸಬೇಕೆಂದು ನಾನು ನಿಮ್ಮ ಫೋನ್ ನಂಬರನ್ನು ಆ ಬಲವಾನನಿಂದಲೇ ಪಡೆದೆ. ಈಗ ನಾನು ಕೇಳುವೆ ಅವನಿಗೆ ಕೆಡಕಾಗಿದೆಯೊ ಇಲ್ಲವೋ? ನನ್ನ ಹತ್ತಿರ ತಮ್ಮ ಫೋನ್ ನಂಬರ್ ಇರಲಿಲ್ಲ. ಆ ಬಲವಾನನೆ ಕೊಟ್ಟಿದ್ದ. ಆ ಕೆಟ್ಟ ಕೆಲಸವನ್ನು ನಾನು ರಾತ್ರಿಯೇ ಮಾಡಿದೆ. ಆದರೆ ನಾನು ಮಲಗಿದೊಡನೆ ಬಿಳಿಯ ಬಟ್ಟೆಗಳನ್ನು ಧರಿಸಿದ ಗುರುವು ಕಾಣಿಸಕೊಂಡರು. ನೀನು ಯಾರನನ್ನು ಪೂಜಿಸುವೆಯೋ ಅವರು. ಅವರು ನನಗೆ ಹೇಳಿದರು ನೀನು ಇದರ ಪರಿಣಾಮವನ್ನು ಸ್ವಯಂ ಅನುಭವಿಸುವೆ. ಈ ಪರಿವಾರವು ಸರ್ವಶಕ್ತ, ಸಕಲ ಕಷ್ಟ ನಿವಾರಕ, ಪರಮಪೂಜ್ಯ ಕಬೀರ್ ಪರಮೇಶ್ವರರಲ್ಲಿ ಶರಣಾಗಿದ್ದಾರೆ. ನಿನ್ನ ಹೆಗ್ಗಳಿಕೆಯಾದರೂ ಏನು? ಇಲ್ಲಿನ ಧರ್ಮರಾಜನೂ, ಅವರಿಗೆ ಏನೂ ತೊಂದರೆ ಕೊಡಲು ಸಾಧ್ಯವಿಲ್ಲ.

ಗರೀಬ್, ಜಮ ಜೌರಾ ಜಾಸ್ಯೆ ಡರ್ಯೆ, ಮಿಟೆ ಕರ್ಮ ಕೇ ಲೇಖ ।
ಅದಲೀ ಅದಲ್ ಕಬೀರ್ ಹೈ, ಕುಲ ಕೆ ಸದ್ಗುರು ಏಕ ॥

ಪರಮ ಪೂಜ್ಯ ಕಬೀರ್ ಪರಮೇಶ್ವರರಿಗೆ ಯಮ (ಕಾಲ ಹಾಗೂ ಕಾಲನ ಧೂತರು) ಹಾಗೂ ಸಾವೂ ಸಹ ಹೆದರುತ್ತಾರೆ. ಆ ಪೂರ್ಣ ಪ್ರಭುವು ಪಾಪ ಕರ್ಮದ ಶಿಕ್ಷೆಯ ಬರಹವನ್ನೂ ಸಹ ಇಲ್ಲವಾಗಿಸುತ್ತಾರೆ. ಇದಾದ ನಂತರ ಆ ಧೂರ್ತನು ಹೇಳಿದ "ಮಗಳೆ, ಬಹಳ ಪ್ರಬಲ ಶಕ್ತಿಯುತನಾಗಿದ್ದಾನೆ. ನಾನು **25** ವರ್ಷಗಳಿಂದ ಮಾಟ ಮಾಡಿಸುವ ಕೆಲಸ ಮಾಡುತ್ತಿರುವೆ. ಅದೆಷ್ಟು ಪರಿವಾರಗಳನ್ನು ಹಾಳು ಮಾಡಿರುವೆನೋ ಗೊತ್ತಿಲ್ಲ. ಆದರೆ ಈಗ ಇದೇ ಮೊದಲು ಸೋಲಾಗಿರುವುದು. ಮಗಳೆ ಈ ಶಕ್ತಿಯನ್ನು ಬಿಡಬೇಡ ಇಲ್ಲವಾದರೆ ಹೊಡೆತ ತಿನ್ನುವೆ. ನಿಮ್ಮ ವಿನಾಶಕ್ಕಾಗಿ, ಆ ಬಲವಾನ ಮೊದಲಾದವರು ಸುತ್ತಾಡುತ್ತಿದ್ದಾರೆ. ನಾನು ಹೇಳಿದೆ–ನಾವು ಪೂರ್ಣಪರಮಾತ್ಮನ ಪೂಜೆ ಮಾಡುತ್ತೇನೆ. ಆ ಬಲವಾನ ನನ್ನ ಪತಿಯ ಅಣ್ಣ. ನಮ್ಮ ಪರಿಚಿತನೇ ಶತ್ರುವಾಗಿದ್ದಾನೆ.

ನಾವು ಈಗ ಅದೃಷ್ಟವಂತರಾಗಿದ್ದೇವೆ. ನಮ್ಮ ಮನದಲ್ಲಿ ಯಾವುದೇ ವಸ್ತು ಅಥವಾ ಕಾರ್ಯದ ಅವಶ್ಯಕತೆ ಇದೆ ಎನಿಸಿದರೆ, ಅದನ್ನು ಸದ್ಗುರುದೇವ, ಸತ್ಯ ಕಬೀರ್ ಪರಮೇಶ್ವರರು ಪೂರ್ಣಗೊಳಿಸುತ್ತಾರೆ.

"ಗುರು ಗೋವಿಂದ ದೋನೋ ಖಡೆ, ಹಮ್ ಕಿಸಕೆ ಲಾಗೆ ಪಾಯ್ ।

ಹಮ್ ಬಲಿಹಾರಿ ಸದ್ಗುರುದೇವ ರಾಮ್‌ಪಾಲ್‌ಜೀ ಕೆ ಚರಣೋ ಮೆ ಜಿನ್ಹೆ ಪರಮೇಶ್ವರ ದಿಯಾ ಮಿಲಾಯ" ॥

ಸೋದರರೇ–ಸೋದರಿಯರೇ, ನಮ್ಮ ಪರಿವಾರದವರೆಲ್ಲ ಸೇರಿ ನಿಮ್ಮಲ್ಲಿ ಪ್ರಾರ್ಥನೆ ಮಾಡುತ್ತೇವೆ. "ನೀವು ಸತ್ಯಲೋಕದ ಮಾರ್ಗ, ಪೂರ್ಣ ಮೋಕ್ಷ ಹಾಗೂ ಸರ್ವ ಸುಖವನ್ನು ಪಡೆಯಬೇಕಿದ್ದರೆ ಮತ್ತು ಸಂಸಾರಿಕ ದುಃಖಗಳಿಂದ ಬಿಡುಗಡೆ ಹೊಂದ ಬೇಕಾಗಿದ್ದರೆ, ಮುಕ್ತಿದಾತ ಸಂತ ರಾಮ್‌ಪಾಲ್ ಮಹಾರಾಜರಿಂದ ಉಪದೇಶವನ್ನು ಪಡೆದುಕೊಳ್ಳಿರಿ ಮತ್ತು ನಿಮ್ಮ ಅಮೂಲ್ಯ ಮಾನವ ಜನ್ಮವನ್ನು ಸಫಲಮಾಡಿಕೊಳ್ಳಿರಿ.

ಸತ್ ಸಾಹೀಬ್ ಭಕ್ತಿಮತಿ ಅಪಲೇಶದೇವಿ.

## "ಭಕ್ತ ಸತೀಶನ ಆತ್ಮಕಥೆ."

ನಾನು ಭಕ್ತ ಸತೀಶದಾಸ್ 193 ಸೆಕ್ಟರ್ 7, ಆರ್, ಕೆ. ಪುರಮ್ ನವ ದೆಹಲಿಯ ನಿವಾಸಿಯಾಗಿರುವೆ. ಮೇಲಿನ ಸಾಲುಗಳು ನಮ್ಮ ಜೀವನದಲ್ಲಿ ಉಲ್ಲೇಖನೀಯವಾಗಿವೆ. 1997ರ ಡಿಸೆಂಬರ್ ನಲ್ಲಿ, ದೆಹಲಿಯ ಪ್ರೀತಮಪುರದಲ್ಲಿ ಪ್ರವಚನ ನಡೆದಿತ್ತು. ನಾವು ನಮ್ಮ ಮಿತ್ರನು ಹೇಳಿದನೆಂದು, ಪ್ರವಚನ ಕೇಳಲು ಹೋಗಿದ್ದೆವು. ಆದರೆ ಪರಂಪರಾಗತವಾಗಿ ನಡೆದು ಬಂದಿರುವ ಪೂಜೆಯನ್ನು ಬಿಡಬೇಕೆಂಬ ಮಾತನ್ನು ಕೇಳಿದ ನಂತರ, ಪ್ರವಚನದಲ್ಲಿ ಮನಸ್ಸು ನಿಲ್ಲಲಿಲ್ಲ. ಸದ್ಗುರುಗಳು ಶಾಸ್ತ್ರಗಳನ್ನು ಓದಿ–ಓದಿ ನಮಗೆ ತಿಳಿಸುತ್ತಿದ್ದರು. ನಮ್ಮ ಮನಸ್ಸಿಗೆ ಬಂತು, ನಾನಂತೂ ಪುಸ್ತಕಗಳನ್ನು ಮನೆಯಲ್ಲೇ ಓದಬಹುದಲ್ಲ ಈ ರೀತಿ ಜ್ಯೋತಿ ನಿರಂಜನ (ಕಾಲ)ನು ನಮ್ಮ ಬುದ್ದಿಯನ್ನು ಸ್ಥಿರಗೊಳಿಸಿರುವನು ಹಾಗೂ ಭಕ್ತಿಯ ಚಾನಲ್ ಬಂದ್ (ಮುಚ್ಚು) ಮಾಡಿರುವನು.

ಸದ್ಗುರುವು ನಮಗೆ ತಿಳಿಸುತ್ತಾರೆ :–

ಗುರು ಬಿನ ಕಿನ್ಹೆ ನ ಪಾಯಾ ಜ್ಞಾನಾ, ಜ್ಯೋ ಥೋಥಾ ಭೂಸ ಛಡೇ ಕಿಸಾನಾ ।
ಗುರು ಬಿನ ಭರಮ ನಾ ಛೂಟೆ ಭಾಯಿ, ಕೋಟಿ ಉಪಾಯ ಕರೋ ಚತುರಾಯಿ ॥

ಈ ರೀತಿಯಾಗಿ ನಮ್ಮ ಬುದ್ಧಿಯು ಸ್ಥಿರ ವಾಗಲಿ ಎಂಬ ಕಾರಣದಿಂದ ನಾವು ಆ ಕಡೆ–ಈ ಕಡೆಯ ಮಾತುಗಳನ್ನಾಡುತ್ತಾ ಮನೆಗೆ ವಾಪಸ್ ಬಂದೆವು. 1999 ರಲ್ಲಿ ನನ್ನ ಪತ್ನಿ ಶ್ರೀಮತಿ ಮಂಜುವಿಗೆ ಬ್ರೈನ್ ಟ್ಯೂಮರ್ (ಮೆದುಳಿನ ಕ್ಯಾನ್ಸರ್) ಆಯಿತು. ಇದು ನಮಗೆ ಗೊತ್ತಾಗಿದ್ದು, ನಾವು ಸಫದರಜಂಗ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸುವ ಸಂದರ್ಭದಲ್ಲಿ, ಇದಾದ ನಂತರ, ನಾನು ಅವಳನ್ನು ಪಂತ ಆಸ್ಪತ್ರೆ ಹಾಗೂ A.I.I.M.S ನವ ದೇಹಲಿ ಮತ್ತು ಇದಾದ ನಂತರ ಅಪೋಲೋ ಆಸ್ಪತ್ರೆ ನವ ದೇಹಲಿಯಲ್ಲಿನ ಡಾಕ್ಟರಿಗೂ ತೋರಿಸಿದೆ. ಎಲ್ಲ ಡಾಕ್ಟರಗಳು ಕೂಡಲೆ ಅಪರೇಷನ್ ಮಾಡಿಸಬೇಕೆಂದು ಸಲಹೆ ಕೊಡುತ್ತಾ ಹೇಳಿದರು. ಆಪರೇಷನ್ನಿನ ಕಾರಣ ಇವರಿಗೆ ಒಂದು ಕೈಗೆ ಲಕ್ವ (ಪೈರಾಲೈಸಿಸ್) ಹೊಡಯುವ ಸಾಧ್ಯತೆ ಇದೆ. ಆಪೋಲೋ ಆಸ್ಪತ್ರೆಯ ಡಾಕ್ಟರಂತೂ ರಿಪೋರ್ಟ್ ನೋಡಿದ ನಂತರ ಹೇಳಿದರು. ಇವರ ಎರಡೂ ಕಣ್ಣುಗಳು ಈವರೆಗೆ ಸರಿಯಾರಿಗಿಲು ಹೇಗೆ ಸಾಧ್ಯ? ಮತ್ತು ಅದೇ ಸಮಯದಲ್ಲಿ ಕಣ್ಣಿನ ಡಾಕ್ಟರಲ್ಲಿ ಪರೀಕ್ಷೆ ಮಾಡಿಸಿಕೊಳ್ಳಲು ತಿಳಿಸಿದರು. ನಾನು ಆಗಲೇ ಪರೀಕ್ಷೆ ಮಾಡಿಸಿದೆ. ನಂತರ ಕಣ್ಣಿನ ವಿಶೇಷ ಡಾಕ್ಟರ್ (ಐ ಸ್ಪೆಷಲಿಸ್ಟ್) ಹಾಗೂ ನ್ಯೂರೋ ಸರ್ಜನ್ (ನರ ಶಸ್ತ್ರ ಚಿಕಿತ್ಸಕ) ಸಲಹೆ ನೀಡಿದರು. ಪ್ರತಿ 15 ದಿನಗಳಿಗೊಮ್ಮೆ ಇವರ ಕಣ್ಣುಗಳನ್ನು ಪರೀಕ್ಷೆ ಮಾಡಿಸುತ್ತಿರಬೇಕು. ಯಾವಾಗ ಬೇಕಾದರೂ ಕಣ್ಣು ಕಾಣದಾಗಬಹುದು.

ಏಕೆಂದರೆ ಬ್ರೈನ್ ಟ್ಯೂಮರ್, ಅಂತಹ ಜಾಗದಲ್ಲಿದೆ. ನಾನು ಮತ್ತು ನನ್ನ ಪತ್ನಿ ಇಬ್ಬರೂ ಕಾಲಿಲ್ಲದ ಅಂಗವಿಕಲರು. ಕೈ ಮತ್ತು ಕಣ್ಣುಗಳೂ ಹೋಗುತ್ತವೆ ಎಂಬ ಮಾತನ್ನು ಕೇಳಿ, ಮೇಲಿನ ಉಸಿರು ಮೇಲೆ, ಕೆಳಗಿನ ಉಸಿರು ಕೆಳಗೆ ನಿಂತು ಹೋಗಿತ್ತು. ಆದರೆ ಬೇರೆ ಏನೂ ಮಾಡಲಾಗದೆ, ಕಡೆಗೆ ಪಂತ ಆಸ್ಪತ್ರೆ ನವ ದೆಹಲಿಯಲ್ಲಿ ಆಪರೇಷನ್ ಮಾಡಿಸುವುದೆಂದು ಯೋಚಿಸಿದೆವು ಮತ್ತು ಡಾಕ್ಟರ್ ಹೇಳಿದ ನಂತರ **INMAS** ಆಸ್ಪತ್ರೆ ತಿಮಾರಪುರ ದೆಹಲಿಯಲ್ಲಿ **M.R.I** ಮಾಡಿಸಿದೆ ಬೇರೆ ಕೆಲವು ಪರೀಕ್ಷೆ ಗಳನ್ನು ಮಾಡಿಸಿದೆ. ಆಪರೇಷನ್ನಿನ ದಿನಾಂಕ ತಿಳಿದುಕೊಳ್ಳುವುದು ಮಾತ್ರ ಬಾಕಿ ಇತ್ತು ನಮಗೆ, ಪೂರ್ಣ ಪರಮಾತ್ಮ ತತ್ವದರ್ಶಿ ಸಂತ ರಾಮ್‌ಪಾಲ್ ಮಹಾರಾಜ ರವರಿಂದ ಮೊದಲು ನಾವು ಕೇಳಿದ್ದ ಪ್ರವಚನದ ಸಾಲುಗಳು ನೆನಪಾಯಿತು.

ಜಿನ ಮಿಲತೆ ಸುಖ ಉಪಜೆ, ಮಿಟೆ ಕೋಟಿ ಉಪಾಧ ।
ಭುವನ ಚತುರ್ದಶ ಢೂಂಢಿಯೋ, ಪರಮ ಸ್ನೇಹೀ ಸಾಧ ॥

ನಮ್ಮ ಭಕ್ತಿ ಚಾನಲ್ ನನ್ನು ಪರಮೇಶ್ವರ ಆನ್ ಮಾಡಿದ. ಮನದಲ್ಲಿ ಭಾವನೆಗಳು ಉತ್ಪನ್ನವಾದವು. ಅದೇನೆಂದರೆ, ಆಪರೇಷನ್ನಿಗೆ ಮೊದಲು ನಾಮೋಪದೇಶ ಪಡೆದು ನೋಡೋಣ ಎಂದು ನಂತರ ನನ್ನ ಗೆಳೆಯನೊಡನೆ ಪ್ರೀತಮಪುರಾ ದೆಹಲಿಗೆ ಹೋಗಿ **4–2–2001** ರಂದು ಪೂರ್ಣ ಪರಮಾತ್ಮ ತತ್ವದರ್ಶಿ ಸಂತ ರಾಮ್‌ಪಾಲ್ ಮಹಾರಾಜರಿಂದ ನಾಮೋಪದೇಶವನ್ನು ಪಡೆದೆವು. ಮೊದಲಿನ ಎಲ್ಲಾ ಪೂಜೆಗಳನ್ನೂ ಬಿಟ್ಟೆವು. ಸದ್ಗುರುಗಳು ಅಖಂಡ ಪಾಠ ಮಾಡಿಸಿರಿ. ಎಂದು ಸಲಹೆ ಕೊಡುತ್ತಾ ಹೇಳಿದರು. "ಪರಮಾತ್ಮನು ಇಚ್ಛಿಸಿದಲ್ಲಿ ಆಪರೇಷನ್ ಮುಂದೂಡಬಹುದು. ಮತ್ತು ಎಲ್ಲವೂ ಸರಿಯಾಗಬಹುದು. ನಾವು ಸದ್ಗುರುವಿನ ಆದೇಶದಂತೆ, ಮನೆಯಲ್ಲಿ ಮೂರು ದಿನಗಳ ಕಾಲ ಅಖಂಡ ಪಾಠ ಮಾಡಿಸಿದೆವು. ಇದಾದ ನಂತರ ಆಪರೇಷನ್ ದಿನಾಂಕ ತಿಳಿಯಲು ಹೊಸ ದೆಹಲಿಯ ಪಂತ ಆಸ್ಪತ್ರೆಗೆ ಹೋದೆವು. ಯಾವ ಡಾಕ್ಟರ್ ಮೊದಲು ಆಪರೇಷನ್ ಮಾಡಿಸಿರಿ ಎಂದು ಸಲಹೆ ನೀಡಿದ್ದರೊ, ಅದೇ ಡಾಕ್ಟರ್ ಎರಡನೆಯ **M.R.I** ನೋಡಿ ಹೇಳತೊಡಗಿದರು. "ಆಪರೇಷನ್ನಿನ ಯಾವ ಅವಶ್ಯಕತೆಯೂ ಇಲ್ಲ. ಆಗ ಸದ್ಗುರುವಿನ ವಾಣಿಯು ನೆನಪಿಗೆ ಬಂದಿತು"–

ಸತ್‌ಗುರು ದಾತಾ ಹೈ ಕಲಿ ಮಾಹಿ, ಪ್ರಾಣ ಉಧಾರಣ ಉತರೆ ಸಾಯಿ ।
ಸತ್‌ಗುರು ದಾತಾ ದೀನ ದಯಾಲಂ, ಜಮ ಕಿಂಕರ ಕೆ ತೋಡೇ ಜಾಲಂ ॥

ನಾವು ಸದ್ಗುರುವನ್ನು ನೆನೆದು, ಬಿದ್ದು ಬಿದ್ದು ಅಳತೊಡಗಿದೆವು. ಹೇ ಪರಮೇಶ್ವರ ನಾವು ನಿನ್ನ ಮಹಿಮೆಯನ್ನು ಯಾವ ಶಬ್ದಗಳಿಂದ ವರ್ಣನೆ ಮಾಡಲಿ. ಈ ರೀತಿ ಪೂರ್ಣ ಪರಮೇಶ್ವರನ ಅವತಾರ ತತ್ವದರ್ಶಿ ಸಂತ ರಾಮ್‌ಪಾಲ್ ಮಹಾರಾಜ ರವರ ಕೃಪೆಯಿಂದ ನಮ್ಮ ಆಪರೇಶನ್ ಮುಂದೂಡಲಾಯಿತು. ಅದಾದ ನಂತರ ನಾವು ಒಂದು ಪೈಸೆಯ ಮಾತ್ರೆ ಔಷಧಿಗಳನ್ನು ಸೇವಿಸಲಿಲ್ಲ. ಮತ್ತು ಸುಖಮಯ ಜೀವನ ಮಾಡುತ್ತಿರುವೆವು.

**20–11–2004**ರ ರಾತ್ರಿ ಕಾಲನ ಹೊಡೆತದ ಕಾರಣ ನನ್ನ ಪತ್ನಿ ಸತ್ತವಳಂತೆ ಆಗಿದ್ದಳು. ಪರಮೇಶ್ವರರ ಅಮೃತ ಜಲವನ್ನು ಕುಡಿಸಿದ ನಂತರ ಪ್ರಜ್ಞೆ ಬಂದಿತು. ನಂತರ ನಾವು ಅವಳನ್ನು ಸದ್ಗುರುವಿನ ಬಳಿಗೆ ಕರೆದುಕೊಂಡು ಬಂದೆವು. ಸದ್ಗುರುಗಳು ತಿಳಿಸಿದರು. " ಈ ದಿನ ಇವಳ ಸಾವು ಆಗುತ್ತಿತ್ತು. ಕಬೀರ್ ಪರಮೇಶ್ವರರು ಇವಳ ಆಯಸ್ಸನ್ನು ಹೆಚ್ಚಿಸಿದ್ದಾರೆ. ಈಗ ಅವರು ಭಕ್ತಿಮಾಡಬೇಕು.

ಪುನಃ **22–11–2004** ರಂದು ನನ್ನ ಪತ್ನಿಗೆ ಸೋನೀಪತದ ಸತ್ಸಂಗದ ಸಮಯದಲ್ಲಿ ಲಕ್ವಾದ ಹೊಡೆತ ಬಿತ್ತು (ಪೈರಾಲೈಸಿಸ್) ಅದರ ಕಾರಣ ಅವಳ ಕೈಯಿನ ಶಕ್ತಿ ಮುಗಿದು

ಹೋಗತೊಡಗಿತು. ಮತ್ತು ಅದೇ ಸಮಯದಲ್ಲಿ, ಸದ್ಗುರುವಿನ ಕೈ ನಮ್ಮ ಕೈಯಲ್ಲಿ ಕಾಣತೊಡಗಿತು. ಯಾವಾಗ ಸುಮಾರು 5 ನಿಮಿಷಗಳ ವರೆಗೆ ಕಾಣಿಸತೊಡಗಿತು. ಯಾವಾಗ ಲಕ್ವದ ಪ್ರಭಾವ (ಪೈರಾಲೈಸಿಸ್)ವು ಮುಗಿಯಿತೋ ಆಗ ಸದ್ಗುರುವಿನ ಕೈ ಅದೃಶ್ಯವಾಯಿತು. ಈ ದಿನದ ವರೆಗೆ ಅವಳು ಸರಿಯಾಗಿದ್ದಾಳೆ.

ಸದ್ಗುರು ತತ್ವದರ್ಶಿ ಸಂತ ರಾಮ್‌ಪಾಲ್ ಮಹಾರಾಜರು, ಕಬೀರ್ ಪರಮೇಶ್ವರರ ಯಥಾವತ್ ಅವತಾರವಾಗಿ ಬಂದಿರುವರು. ಅವರು ಈ ಅಂಶವನ್ನು ನಮಗೆ ದೃಢಪಡಿಸಿರುವರು:–

"ಗರೀಬ್, ಜಮ ಜೌರಾ ಜಾಸೇ ಡರೇ, ಮಿಟೆ ಕರ್ಮ ಕೆ ಅಂಕ್ ।
ಕಾಗದ ಕೀರೆ ದರಗಹ ದಯಿ, ಚೌದಹ ಕೋಟಿ ನ ಚಂಪ ॥

ಭಕ್ತಿ ಸತೀಶ ಮೆಹರಾ,
ಮೊ. 9718184704

## "ಭಕ್ತ ರಾಮ್‌ಸ್ವರೂಪ ದಾಸನ ಆತ್ಮಕಥೆ"
## ಮುಕ್ತಿದಾತ ಕಬೀರ್ ಸಾಹೇಬ್ ಕೀ ಜೈ

ನಾನು ಭಕ್ತ ರಾಮ್‌ಸ್ವರೂಪ ನಮ್ಮ ತಂದೆ ಶ್ರೀ ಮಂಗತ ರಾಮ. ಅಂಬಾಲಾ ಜಿಲ್ಲೆಯ ಬಡೌಲೀ ಗ್ರಾಮದ ನಿವಾಸಿ. ನಾನು 13 ವರ್ಷಗಳ ಹಿಂದೆ ಧನ್–ಧನ್ ಸದ್ಗುರುವಿನಿಂದ ನಾಮೋಪದೇಶ ಪಡೆದಿದ್ದೆ. 6 ವರ್ಷಕ್ಕೆ ಮೊದಲು, ನನ್ನ ಕೈ ಕಾಲುಗಳ ಕೆಲಸ ಮಾಡುವುದನ್ನು ನಿಲ್ಲಿಸಿದ್ದವು. ಸೊಂಟದಿಂದ ಕೆಳಗಿನ ನನ್ನ ಶರೀರವು ಮೃತಪ್ರಾಯವಾಗಿತ್ತು. ನನ್ನ ಇಬ್ಬರೂ ಮಕ್ಕಳು, ಅಂಬಾಲಾದ ಸರ್ಕಾರೀ ಆಸ್ಪತ್ರೆಗೆ ನನ್ನನ್ನು ಕರೆದುಕೊಂಡು ಹೋದರು. ನಂತರ ಖಾಸಗೀ ವೈದ್ಯರಿಗೂ ತೋರಿಸಿದರು. ಇದಾದ ನಂತರ ನನ್ನನ್ನು 2 ವರ್ಷಗಳವರೆಗೆ ಈ ಕಡೆ ಆ ಕಡೆ ಕರೆದುಕೊಂಡು ಹೋಗಿ, ನಂತರ P.G.I ಚಂಡೀಗಢಕ್ಕೂ ಕರೆದುಕೊಂಡು ಹೋದರು. ಅಲ್ಲಿ ಒಂದು ವರ್ಷದಲ್ಲಿ 2 ಬಾರಿ ನನ್ನನ್ನು ಪರೀಕ್ಷಿಸಿದರು. ಏಕೆಂದರೆ ನನ್ನನ್ನು ಪರೀಕ್ಷೆ ಮಾಡುವ ಯಂತ್ರದಲ್ಲಿ ನನ್ನ ಸರದಿ ಒಂದು ತಿಂಗಳಾದ ಮೇಲೆ ಬರುತ್ತಿತ್ತು. ಪರೀಕ್ಷೆಗೆ 6000/– ರೂ ಆಗುತ್ತಿತ್ತು. ಅಲ್ಲಿ ಪರೀಕ್ಷೆ ಮಾಡಿದ ಎರಡು ಬಾರಿಯಲ್ಲೂ ನನ್ನ ಖಾಯಿಲೆಯ ಕಾರಣ ಗೊತ್ತಾಗಲಿಲ್ಲವಾದ್ದರಿಂದ, ಎರಡೂ ಬಾರಿಯೂ ನನ್ನ ತಲೆಯನ್ನು ಆಪರೇಷ್‌ನ ಮಾಡಬೇಕೆಂದು ಹೇಳಿದರು. ಅದರಲ್ಲಿ ನನ್ನ ಪ್ರಾಣಕ್ಕೆ ಅಪಾಯವಿದೆ, ಪೂರ್ಣ ಗುಣಮುಖವಾಗುವುದರಲ್ಲಿ ಸಂದೇಹವಿರುವುದಾಗಿ ತಿಳಿಸಿದರು. ಅದಾದನಂತರ ಮನೆಯವರು, ನನ್ನನ್ನು ಬಾಬಾ ರಾಮ್‌ದೇವರ ಯೋಗಾಶ್ರಮಕ್ಕೂ ಸಹ ಕರೆದುಕೊಂಡು ಹೋದರು. ಅಲ್ಲಿ ಕೆಲವು ದಿನಗಳು ಚಿಕಿತ್ಸೆ ಯಾಗುತ್ತಲಿತ್ತು, ಯಾವುದೇ ಗುಣ ಕಾಣಲಿಲ್ಲ. ಅದಕ್ಕಾಗಿ ಮನೆಗೆ ಕರೆದುಕೊಂಡು ಬಂದರು. ನಂತರ ನನ್ನನ್ನು ಹೊಡೆದು ಗಾಳಿ ಬಿಡಿಸುವ (ಮಂತ್ರವಾದಿಗಳು) ರಲ್ಲಿಗೆ ಕರದುಕೊಂಡು ಹೋದರು. ಅಲ್ಲಿಯೂ ಯಾವುದೇ ಗುಣವಾಗಲಿಲ್ಲ, ನಾನು ಯೋಚಿಸಿದೆ ಇನ್ನು ಜೀವನವೇ ಕೆಲದಿನಗಳು ಮಾತ್ರ ಉಳಿದಿದೆ. ಯಾವಾಗ ನಾನು ಎಲ್ಲ ಕಡೆಯಿಂದಲೂ ನಿರಾಸೆಗೊಂಡನೋ, ಆಗ ನನ್ನ ಮಗಳು ಅವಳನ್ನು ಮದುವೆ ಅಂಬಾಲಾ ಜಿಲ್ಲೆಯ ಶಾಹಾಪುರದಲ್ಲಿ ಆಗಿತ್ತು. ಅವಳು ನನ್ನನ್ನು ಅಲ್ಲಿಗೆ ಕರೆಸಿಕೊಂಡಳು. ನನ್ನ ಅಳಿಯ 'ಸಂಜುವು ಕುಕೂ ಭಗತರ ಬಗ್ಗೆ ತಿಳಿಸಿದ. ಅವನು 15–8–2008 ರಲ್ಲಿ ನನ್ನನ್ನು ಬರವಾಲಾ ಆಶ್ರಮದಲ್ಲಿ ಸದ್ಗುರು ಮುಕ್ತಿದಾತ ರಾಮ್‌ಪಾಲ್ ಮಹಾರಾಜರ ಬಳಿ ಕರೆದುಕೊಂಡು ಹೋದ. 16ನೇ ಆಗಸ್ಟ್‌ನಲ್ಲಿ ನಾನು ನಾಮೋಪದೇಶ ಪಡೆದೆ. ಅದಾದನಂತರ ನಾನು ಗುಣಮುಖನಾಗತೊಡಗಿದೆ. ಗುರುಗಳ ಕೃಪೆಯಿಂದ ಈಗ ನಾನು ನನ್ನ ಗದ್ದೆಯಲ್ಲಿ ನಾನೇ ಟ್ರ್ಯಾಕ್ಟರ್

ಓಡಿಸುವೆ. ನನ್ನ ಎಲ್ಲ ಜಮೀನನ್ನು ನಾನೇ ಉಳುಮೆ ಮಾಡುವೆ. ಮಾಹಾರಾಜರ ಕೃಪೆಯಿಂದ ನನಗೆ 2 ಬಾರಿ ಜೀವನದಾನ ದೊರೆತಿದೆ. ಮಹಾರಾಜ ಮುಕ್ತಿದಾತರು ನೀಡಿರುವ ಕೃಪೆಯನ್ನು ನಾಲಿಗೆಯಿಂದ ವರ್ಣಿಸಲು ಸಾಧ್ಯವಿಲ್ಲ. ಗುರುಗಳೇ, ಸತ್ಯಲೋಕದಿಂದ ನನಗೆ ಜೀವನದಾನ ಮಾಡಲೆಂದು ಬಂದಿರುವಿರಿ. ನಿಮಗೆ ನನ್ನ ಕೋಟಿ ಕೋಟಿ ನಮಸ್ಕಾರಗಳು

ಜಯ ಮುಕ್ತಿದಾತ

ತಮ್ಮ ದಾಸ್ ಭಕ್ತ ರಾಮ್‌ಸ್ವರೂಪ ದಾಸ್
ಬಡೌಲೀ ಗ್ರಾಮ. ಅಂಬಾಲಾ ಜಿಲ್ಲೆ.

## "ಭಕ್ತ ಬಹೀದ್ ಖಾನನ ಆತ್ಮಕಥೆ"

(ಮುಕ್ತಿದಾತ ಕಬೀರ್ ಸಾಹೇಬರಿಗೆ ಜಯವಾಗಲಿ)

ಮುಕ್ತಿದಾತ ಸದ್ಗುರು, ರಾಮ್‌ಪಾಲ್ ಮಹಾರಾಜ್‌ರ ಚರಣಗಳಲ್ಲಿ ಕೋಟಿ ಕೋಟಿ ದಂಡವತ ನಮಸ್ಕಾರಗಳು. ನಾನು ಬಹೀದ್ ಖಾ ತಂದೆ ಮುನ್ನೀ ಖಾ, ಮಧ್ಯಪ್ರದೇಶದ ಭಿಂಡ ಜಿಲ್ಲೆಯ ಮೆಹಗಾನ ತಾಲ್ಲೂಕು ಹಾಗೂ ಹಳ್ಳಿಯ ನಿವಾಸಿಯಾಗಿದ್ದೇನೆ. ನನಗೆ 3 ವರ್ಷ ಗಳಿಂದ ಬಹಳ ಖಾಯಿಲೆ ಇತ್ತು. ನನ್ನ ಎರಡೂ ಕಿಡ್ನಿಗಳು ಕೆಟ್ಟುಹೋಗಿದ್ದವು. ನಾನು 2 ವರ್ಷಗಳ ಕಾಲ, ಗ್ವಾಲಿಯರ್‌ನಲ್ಲಿನ, ದೊಡ್ಡ ದೊಡ್ಡ M.B.B.S ಡಾಕ್ಟರ್‌ಗಳಲ್ಲಿ ಚಿಕಿತ್ಸೆ ಮಾಡಿಸಿದೆ. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಅದಾದ ನಂತರ, ಗ್ವಾಲಿಯರ್‌ನ ಡಾಕ್ಟರ್‌ಗಳು ನನ್ನನ್ನು ದೇಹಲಿಯ A.I.M.S (ಆಲ್ ಇಂಡಿಯಾ ಮೆಡಿಕಲ್)ಗೆ ತೋರಿಸಲು ತಿಳಿಸದರು. ಅಲ್ಲಿನ ಡಾಕ್ಟರ್‌ಗಳು ಎಲ್ಲ ಪರೀಕ್ಷೆಗಳ ನಂತರ ತಿಳಿಸಿದರು. 3 ಬಾಟಲ್ ರಕ್ತ ಬೇಕಾಗುವುದು ಮೊದಲೆ ನಿಮ್ಮ ರಕ್ತವನ್ನು ಫಿಲ್ಟರ್ ಮಾಡಲಾಗುವುದು. ನಂತರ ನಿಮ್ಮ ಪರಿವಾರದ ಯಾರದ್ದಾದರೂ ಕಿಡ್ನಿಯನ್ನು ತೆಗೆದು ನಿಮಗೆ ಆಪರೇಷನ್ ಮೂಲಕ ಸೇರಿಸಲಾಗುವುದು. ಆಪರೇಷನ್ನಿನ ಖರ್ಚು 4 ಲಕ್ಷ ರೂಪಾಯಿ ಆಗುವುದು. ನಾನು ಹಣ ಕೊಡಲು ಅಸಮರ್ಥನಾಗಿದ್ದೆ. ಆದ್ದರಿಂದ ದೆಹಲಿಯಿಂದ ನಾನು ಮನೆಗೆ ವಾಪಸ ಬಂದೆ. ನಾನು ಅಸಹಾಯಕನಾಗಿ ಮೃತ್ಯುವನ್ನು ನಿರೀಕ್ಷಿಸತೊಡಗಿದೆ. ಏಕೆಂದರೆ ಊಟ, ಓಡಾಟ, ಕೂರುವ ನಿಲ್ಲುವ. ಕೆಲಸಗಳಲ್ಲಿ ನಾನು ಅಸಮರ್ಥನಾಗಿ ಹೋಗಿದ್ದೆ.

ನಂತರ ಯಾರೋ ಒಬ್ಬ ವ್ಯಕ್ತಿಯಿಂದ ಗೊತ್ತಾಯಿತು. ಹರಿಯಾಣದಲ್ಲಿನ ಹಿಸಾರ್ ಜಿಲ್ಲೆಯ ಬರವಾಲಾದಲ್ಲಿ ಪರಮಾತ್ಮನು ಬಂದಿರುವರೆಂದು ಹಾಗೂ ಅವರು ಗುಣಪಡಿಸಲು ಅಸಾಧ್ಯವಾದ ರೋಗವನ್ನು ಪರಮಾತ್ಮನ ಭಕ್ತಿಯಿಂದ ಗುಣಪಡಿಸುತ್ತಾರೆ. ಈ ಶಬ್ದವನ್ನು ಕೇಳಿ 24–07–09 ರಂದು, ಅವರ ಚರಣಗಳಲ್ಲಿ ಶರಣಾಗಿ, ನಾಮೋಪದೇಶವನ್ನು ಪಡೆದುಕೊಂಡೆ. ನಾಮೋಪದೇಶವನ್ನು ಪಡೆದ ನಂತರ ನಾನು ಗುಣಮುಖನಾದೆ. ನನ್ನ ಸದ್ಗುರುವಿನ ಪ್ರಮಾಣಕ್ಕಾಗಿ ನನ್ನ ಖಾಯಿಲೆಯ ಎಲ್ಲ ಪರೀಕ್ಷೆಗಳ ರಿಪೋರ್ಟ್‌ನ ಕಾಗದಗಳು ನನ್ನ ಹತ್ತಿರವೇ ಇವೆ. ಪರಮ ಪಿತಾ ಪರಮೇಶ್ವರರು, ನನಗೆ ಜೀವನವನ್ನು ದಯಮಾಡಿರುವರು ಅದರ ಋಣವನ್ನು ನಾನು ಎಂದಿಗೂ ತೀರಿಸಲಾರೆ. ನನ್ನ ಸದ್ಗುರು ತಮ್ಮ ದಾಸನ ಮೇಲೆ ಕೃಪೆಮಾಡಿ. ಹಾಗೆಯೇ ತಮ್ಮ ಚರಣಗಳಲ್ಲಿರುವಂತೆ ನನ್ನನ್ನು ಸದಾ ಇರಿಸಿರಿ.

ತಮ್ಮ ದಾಸ
ಭಕ್ತ ಬಹೀದ್ ಖಾ

## "ಭಕ್ತಿಮತಿ ತಾರಾ ಕಟ್ಟಾ ಮೇಲೆ ವಿಶೇಷ ಕೃಪೆಯಾಯಿತು."

ಮುಕ್ತಿದಾತ ಸದ್ಗುರು ರಾಮ್‌ಪಾಲ್ ಮಹಾರಾಜರ ಚರಣಗಳಲ್ಲಿ ಕೋಟಿ-ಕೋಟಿ ದಂಡವತ್ ನಮಸ್ಕಾರಗಳು. ನಾನು ತಾರಾ ಕಟ್ಟಾ ಜಯಪುರದ ನಿವಾಸಿ. ಸಂಸ್ಕೃತದಲ್ಲಿ M.A ಮಾಡಿರುವೆ. ರಾಜಸ್ಥಾನ ಯೂನಿವರ್ಸಿಟಿಯಿಂದ B.A ಹಾಗೂ ಸಂಸ್ಕೃತದಲ್ಲಿ ಸ್ವರ್ಣ ಪದಕ ಪ್ರಾಪ್ತವಾಗಿದೆ. ನಾನು 6ಲೇಖಕರು ಬರೆದಿರುವ ಭಗವದ್ಗೀತೆ, ಉಪನಿಷತ್‌ಗಳು, ಪುರಾಣಗಳು, ಎಲ್ಲ ದರ್ಶನ ಶಾಸ್ತ್ರಗಳು ಹಾಗೂ ಎಲ್ಲ ಗುರುಗಳ ಪ್ರವಚಗಳನ್ನು ಕೇಳಿದೆ. ಆದರೆ ಸಂತೃಪ್ತಳಾಗಲಿಲ್ಲ. ಒಮ್ಮೆ ಜಯಪುರದಲ್ಲಿ ಭಾಸ್ಕರ ಭಕ್ತಿ ಚಾನಲ್ಲಿನಲ್ಲಿ. ಸದ್ಗುರು ರಾಮ್‌ಪಾಲ್ ಮಹಾರಾಜ ರವರ ಕಾರ್ಯಕ್ರಮ ನೋಡಿದೆ ಹಾಗೂ 30-11-2003 ರಲ್ಲಿ ನಾಮೋಪದೇಶ ಪಡೆದೆ. ಆ ಸಮಯದಲ್ಲಿ ನಾನು ಬಹಳ ಖಾಯಿಲೆಯಿಂದ ಪೀಡಿತಳಾಗಿದ್ದೆ. 1991ರ ಮೇ ತಿಂಗಳನಲ್ಲಿ ನಾನು ಬಾಯೊಪಸಿ ಟೆಸ್ಟ್ ಮಾಡಿಸಿದಾಗ ಗೊತ್ತಾಯಿತು. ನನಗೆ ಅಲ್ಸರೇಟಿವ್ ಕೊಲಾಯಟಿಸ್ (Ulcerative Colitis) ಎಂಬ ಹೆಸರಿನ ಖಾಯಿಲೆ ಇದೆ ಎಂದು. ಈ ಖಾಯಿಲೆಯವರಿಗೆ, ದೊಡ್ಡ ಕರಳಿನಲ್ಲಿ ಒರಟಾದ ಗಟ್ಟಿ ಮೇಲ್ಪದರ ಉಂಟಾಗುತ್ತದೆ. ಹಾಗೂ ಮಲದೊಂದಿಗೆ ರಕ್ತ ಬರುತ್ತದೆ. ಡಾಕ್ಟರ್ ತಿಳಿಸಿದರು. ಇದಕ್ಕೆ ಎಲ್ಲಿಯೂ ಚಿಕಿತ್ಸೆಯೇ ಇಲ್ಲ ಎಂದು. ನನಗೆ 3-6-2002ರಲ್ಲಿ ದೊಡ್ಡ ಕರುಳಿನಲ್ಲಿ, ಅಲ್ಸರ್ 75 ಸೆಂ.ಮೀ.ವರೆಗೆ ಬೆಳೆದಿತ್ತು. 10.4.2008ರಲ್ಲಿ ಗುರುದೇವರು ಹೇಳಿದ ಮೇಲೆ, ಔಷಧವನ್ನು ನಿಲ್ಲಿಸಿದೆ. ಅದರಲ್ಲಿ 4 ಮಾತ್ರೆಗಳು ಹೀಗಿತ್ತು. ಅವುಗಳ ಬಗ್ಗೆ ಡಾಕ್ಟರ್ ಹೇಳಿದ್ದರು. ನೀವು ಬದುಕಲು ಬಯಸಿದ್ದಲ್ಲಿ. ಈ ಮಾತ್ರೆಗಳನ್ನು ಜೀವನಪರ್ಯಂತ ತೆಗೆದುಕೊಳ್ಳಬೇಕಾಗುವುದು. 23-04-2004 ರಲ್ಲಿ ನನ್ನ (lungs) ಶ್ವಾಸಕೋಶದಲ್ಲಿ ಇನ್ಫೆಕ್ಷನ್ (Infection) ಆಯಿತು.

ಆಗ ನಾನು ಡಾಕ್ಟರ ಹತ್ತಿರ ಚಿಕಿತ್ಸೆಗಾಗಿ ಹೋದಾಗ, ಡಾಕ್ಟರ್ ನನ್ನ ಎಕ್ಸರೇ ನೋಡಿ ಹೇಳಿದರು. ನೀವು ಅನುಭವಿಸುತ್ತಿರುವ ಖಾಯಿಲೆಯ ಕಾರಣ ನಿಮಗೆ ಜ್ವರ ಬರಬೇಕಿತ್ತು. ತೂಕ ಕಡಿಮೆಯಾಗಬೇಕಿತ್ತು. ಹಾಗೂ ರಕ್ತದ ಕೊರತೆಯಾಗಬೇಕಿತ್ತು. ಅದರೆ ನೀವು ಖಂಡಿತವಾಗಿಯೂ ಆರೋಗ್ಯವಾಗಿರುವಿರಿ. ನಾನಾಗ ಹೇಳಿದೆ ಇದೆಲ್ಲ ನಮ್ಮ ಸದ್ಗುರು ರಾಮ್‌ಪಾಲ್ ಮಹಾರಾಜರ ಕೃಪೆಯೆಂದು ಕರ್ಮದ ಹೊಡೆತ ನನಗೆ ಆಗಬೇಕಿತ್ತು. ಆದರೆ ನನ್ನ ಗುರುದೇವರು ಕರ್ಮದ ಆ ಹೊಡೆತವನ್ನು ನನ್ನ ಮೇಲೆ ಪ್ರಭಾವಗೊಳ್ಳದಂತೆ ಮಾಡಿರುವರು. ತನ್ನ ಭಕ್ತರನ್ನು ಪರಮಾತ್ಮ ರಕ್ಷಿಸುವ ರೀತಿಯನ್ನು ಕಂಡು ಡಾಕ್ಟರ್ ಸಾಕಷ್ಟು ಪ್ರಭಾವಿತರಾದರು. ಒಮ್ಮೆ 2009ರ ಜನವರಿಯಲ್ಲಿ ಪ್ರಚಾರಕ್ಕಾಗಿ ಹೋಗಬೇಕಿತ್ತು. ರಾತ್ರೆಯಲ್ಲಾ ರಕ್ತದ ಬೇದಿ ಆಗುತಿತ್ತು. ಬೆಳಗ್ಗೆ ಯೋಚಿಸಿದೆ, ಸಾಯುವುದೇ ಆದ ಮೇಲೆ ಪ್ರಚಾರ ಮಾಡು ಮಾಡುತ್ತಲೇ ಸಾಯೋಣ ಎಂದು ಮೂರನೆಯ ದಿನ ಔಷಧವೇ ಇಲ್ಲದೆ ಸರಿಯಾಯಿತು.

ಡಾಕ್ಟರ್ ಒಮ್ಮೆ ಹೇಳಿದರು ಕೊರಟಿಸೂನ್ ಸ್ಟೆರಾಯಿಡ್ (Cortisone Steroid)ನ್ನು ಶರೀರದ ಚಲನೆಗಾಗಿ ಪ್ರತಿದಿನ ತೆಗೆದುಕೊಳ್ಳಬೇಕಾಗುವುದು. ಆದರೆ ಸದ್ಗುರು ರಾಮ್‌ಪಾಲ್ ಮಾಹಾರಜರು ಹೇಳಿದ ಮೇಲೆ ನಾನು ಎಲ್ಲ ಔಷಧಿಗಳನ್ನು ಬಿಟ್ಟುಬಿಟ್ಟಿದ್ದೆ. ನಾನು ಒಂದು ಔಷಧ ವನ್ನೂ ತೆಗೆದುಕೊಳ್ಳಲಿಲ್ಲ. ಈಗ ನಾನು ಸದ್ಗುರು ರಾಮ್‌ಪಾಲ್ ಮಹಾರಾಜರ ದಯೆಯಿಂದ ಪೂರ್ಣವಾಗಿ ಆರೋಗ್ಯದಿಂದಿದ್ದೇನೆ. ಇಷ್ಟೊಂದು ವರ್ಷಗಳ ದೀರ್ಘ ಖಾಯಿಲೆಯು ಗುರುದೇವರ ಶರಣು ಹೋದಮೇಲೆ ಪೂರ್ಣವಾಗಿ ಗುಣವಾಯಿತು. ನಾನು ಹೇಳುವುದಿಷ್ಟೆ ಇಂತಹ ಸತ್ಯಜ್ಞಾನ,

